

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಎಚ್.ಡಿ. ಅಧ್ಯಯನದ ಮಹಾಪ್ರಬಂಧ

# "ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ"

## (ಕ್ರಿ.ಶ.೪೫೦ ರಿಂದ ಕ್ರಿ.ಶ.೧೯೦೦ರ ವರೆಗೆ)

ಸಂಶೋಧನ ವಿದ್ಯಾರ್ಥಿ

ಕೆ.ವಿ.ಅನಂತಪದ್ಮನಾಭ

ಮಾರ್ಗದರ್ಶಕರು

ಡಾ॥ ಕೆ.ವಿ.ರಮೇಶ್



ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೧೦



ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ

ಪಿಎಚ್.ಡಿ. ಅಧ್ಯಯನದ ಮಹಾಪ್ರಬಂಧ

# "ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ"

## (ಕ್ರಿ.ಶ.೪೫೦ ರಿಂದ ಕ್ರಿ.ಶ.೧೬೦೦ರವರೆಗೆ)


ಸಂಶೋಧನ ವಿದ್ಯಾರ್ಥಿ

ಕೆ.ವಿ.ಅನಂತಪದ್ಮನಾಭ

ಮಾರ್ಗದರ್ಶಕರು

ಡಾ॥ ಕೆ.ವಿ.ರಮೇಶ್





ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ

ಬೆಂಗಳೂರು

೨೦೧೦

# ಅಭ್ಯರ್ಥಿಯ ಪ್ರಮಾಣಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ೨೦೦೯-೨೦೧೦ನೇ ಸಾಲಿನ ಪಿಎಚ್.ಡಿ. ಪದವಿಗಾಗಿ **"ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ"(ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ವರೆಗೆ)** ಎಂಬ ಮಹಾಪ್ರಬಂಧವನ್ನು ಡಾ.ಕೆ.ವಿ.ರಮೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಲ್ಲಿಸುತ್ತಿದ್ದೇನೆ.

ಈ ಸಂಪ್ರಬಂಧ ನನ್ನ ಸ್ವಂತ ಬರವಣಿಗೆ ಆಗಿದ್ದು ಇದರ ಯಾವುದೇ ಭಾಗವನ್ನು ಈವರೆಗೆ ಬೇರೆಲ್ಲೂ ಪ್ರಕಟಪಡಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸಹಿ.

ಕೆ.ವಿ. ಅನಂತ ಪದ್ಮನಾಭ

(ಕೆ.ವಿ.ಅನಂತಪದ್ಮನಾಭ)
ಸಂಶೋಧನ ವಿದ್ಯಾರ್ಥಿ

ದಿನಾಂಕ : ೨೪-೨-೨೦೧೦
ಸ್ಥಳ : ಬೆಂಗಳೂರು

## ಮಾರ್ಗದರ್ಶಕರ ದೃಢೀಕರಣಪತ್ರ

ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರಿನ ಎಂ.ವಿ.ಸೀ.ಸ್ನಾತಕೋತ್ತರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯-೨೦೧೦ನೇ ಸಾಲಿನ ಪಿಎಚ್.ಡಿ. ಪದವಿಗಾಗಿ **"ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ"**(ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗೆ) ಎಂಬ ಮಹಾಪ್ರಬಂಧವನ್ನು ಕೆ.ವಿ.ಅನಂತಪದ್ಮನಾಭ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಈ ಸಂಪ್ರಬಂಧ ವಿದ್ಯಾರ್ಥಿಯ ಸ್ವಂತ ಬರವಣಿಗೆಯಾಗಿದ್ದು ಇದರ ಯಾವುದೇ ಭಾಗವನ್ನು ಬೇರೆಲ್ಲೂ ಪ್ರಕಟಿಸಿಲ್ಲ ಮತ್ತು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿಲ್ಲ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಸಹಿ

(ಡಾ|| ಕೆ.ವಿ.ರಮೇಶ್)
ಮಾರ್ಗದರ್ಶಕರು

ದಿನಾಂಕ : ೨೪-೨-೨೦೧೦
ಸ್ಥಳ : ಮೈಸೂರು

**ಪರಿವಿಡಿ** **ಪುಟಸಂಖ್ಯೆ**

# ಸಂಕ್ಷಿಪ್ತ ಸೂಚಿ

ಶಾಸನ ಸಂಖ್ಯೆಗಳನ್ನು ನಮೂದಿಸುವಾಗ ಈ ಕೆಳಗಿನ ಸಂಕೇತಗಳನ್ನು ಬಳಸಲಾಗಿದೆ.

| | |
|---|---|
| E.C. | ಎಪಿಗ್ರಾಫಿಯ ಕರ್ನಾಟಿಕ (ಬಿ.ಎಲ್.ರೈಸ್ ಆವೃತ್ತಿಗಳು) |
| E.C.(R) | ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ ಆವೃತ್ತಿಗಳು) |

ಅಡಿಟಿಪ್ಪಣಿಯಲ್ಲಿ ಶಾಸನ ಸಂಖ್ಯೆಯನ್ನು ನೀಡುವಾಗ ಮೊದಲಿಗೆ ಶಾಸನ ಸಂಪುಟ ಸಂಖ್ಯೆ, ತಾಲ್ಲೂಕು, ಶಾಸನಸಂಖ್ಯೆ, ದೊರೆತಿರುವ ಸ್ಥಳ ಮತ್ತು ಇಸವಿಯನ್ನು ನಮೂದಿಸಲಾಗಿದೆ.

ಉದಾ: ೧. E.C.VIII ಸೊರಬ೧೦ಮಾವಳಿಕ್ರಿ.ಶ.ಸು.೮೦೦

| | |
|---|---|
| ಶಾಸನ ಸಂಪುಟ | E.C.VIII (ಬಿ.ಎಲ್.ರೈಸ್ ಆವೃತ್ತಿ) |
| ತಾಲ್ಲೂಕು | ಸೊರಬ |
| ಶಾಸನ ಸಂಖ್ಯೆ | ೧೦ |
| ದೊರೆತಿರುವ ಸ್ಥಳ | ಮಾವಳಿ |
| ಇಸವಿ | ಕ್ರಿ.ಶ.ಸು.೮೦೦ |

೨. E.C.(R)Xಅರಸೀಕೆರೆ೨೪೧(Vಅಕೆ ೧೪೧) ಕರುಗುಂದ ಕ್ರಿ.ಶ.೧೧೭೮

| | |
|---|---|
| ಶಾಸನ ಸಂಪುಟ | E.C.(R)X (ಪರಿಷ್ಕೃತ ಆವೃತ್ತಿ) |
| ತಾಲ್ಲೂಕು | ಅರಸೀಕೆರೆ |
| ಶಾಸನಸಂಖ್ಯೆ | ೨೪೧(Vಅಕೆ ೧೪೧) |
| ದೊರೆತಿರುವ ಸ್ಥಳ | ಕರುಗುಂದ |
| ಇಸವಿ | ಕ್ರಿ.ಶ.೧೧೭೮ |

ಪರಿಷ್ಕೃತ ಆವೃತ್ತಿಯಲ್ಲಿ ಕಂಸದಲ್ಲಿ ಶಾಸನದ ಹಳೆಯ ಸಂಖ್ಯೆಯನ್ನು ಸಹ ನಮೂದಿಸಿದೆ

ಉದಾ : (Vಅಕೆ ೧೪೧)

# ಅಧ್ಯಾಯ – ೧

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

### ೧.೧ : ಪೀಠಿಕೆ :-

"ಬ್ರಿಟಾನಿಕಾ ವಿಶ್ವಕೋಶದಲ್ಲಿ ಶಾಸನಗಳನ್ನು ಹೀಗೆ ವಿವರಿಸಿದೆ :

Documents incised on some hard or permanent material in the form of letters or other conventional signs, for the purpose of conveying some information or preserving a record. They are, therefore, to be distinguished on the one hand from manuscripts or documents written on papyrus, parchment, paper or other more or less smooth surfaces by means of a brush, reed or pen and some coloured fluid" ಎಂದರೆ, ತಾಳೆಗರಿ ಭೂರ್ಜಪತ್ರ, ಕಾಗದ ಮುಂತಾದವುಗಳ ಮೇಲೆ ಕಂಡುಬರುವ ಬರಹಗಳನ್ನು ಬಿಟ್ಟು, ಬಹುಕಾಲ ಉಳಿಯುವ ಸಾಮಗ್ರಿಯ ಮೇಲೆ ಬರೆದಿರುವ ಬರಹಗಳನ್ನು ಶಾಸನಗಳೆಂದು ಸ್ಥೂಲವಾಗಿ ಕರೆಯಬಹುದು."[೧] ಮೇಲಿನ ಅಭಿಪ್ರಾಯವನ್ನು ಗಮನಿಸಿದಾಗ ಶಾಸನಗಳೆಂದರೆ ಸುದೀರ್ಘ ಕಾಲ ಉಳಿಯುವ ಸಾಮಗ್ರಿಗಳಾದ ಕಲ್ಲಿನ ಮೇಲೆ, ತಾಮ್ರ ಮೊದಲಾದ ಲೋಹಪಟ್ಟಿಕೆಗಳ ಮೇಲೆ ಕೊರೆಯಲ್ಪಟ್ಟ ಬರಹಗಳೆಂದು ಹೇಳಬಹುದಾಗಿದೆ. ಈ ಅಭಿಪ್ರಾಯವು ಶಾಸನಗಳ ಹೊರರೂಪವನ್ನಷ್ಟೇ ಬಣ್ಣಿಸಿದೆ. ಆದರೆ ನಿಜವಾದ ಅರ್ಥದಲ್ಲಿ ಶಾಸನವೆಂದರೆ ಆಜ್ಞೆ ಎಂಬುದಾಗಿದೆ. ಶಾಸನ ಎಂಬ ಪದದ ಧಾತುವಾದ 'ಶಾಸ್' ಎಂಬುದಕ್ಕೆ ಆಜ್ಞೆ ಮಾಡು, ಶಿಕ್ಷಿಸು, ನಿಯಂತ್ರಿಸು ಮೊದಲಾದ ಅರ್ಥಗಳಿವೆ." ಪ್ರಾಚೀನ ಭಾರತದ ಆಡಳಿತ ಪದ್ಧತಿಯ ಬಗ್ಗೆ ತಿಳಿಸುವ ಗ್ರಂಥಗಳಾದ ಶುಕ್ರನೀತಿಸಾರ, ಕೌಟಿಲ್ಯನ ಅರ್ಥಶಾಸ್ತ್ರ ಮುಂತಾದ ಗ್ರಂಥಗಳು 'ಶಾಸನ' ಎಂಬ ಪದವನ್ನು ರಾಜಾಜ್ಞೆ ಎಂಬ ಅರ್ಥದಲ್ಲಿ ಪ್ರಯೋಗ ಮಾಡಿವೆ."[೨]

ರಾಜನ ಆಸ್ಥಾನದಿಂದ ಹೊರಟ ಆಜ್ಞೆಗಳನ್ನು ಡಂಗೂರ ಸಾರಿಸುವ ಮೂಲಕ ತಿಳಿಸುತ್ತಿದ್ದು, ರಾಜಾಜ್ಞೆಗಳನ್ನು ಮುಂದಿನ ತಲೆಮಾರಿಗೆ ತಿಳಿಸುವ ಉದ್ದೇಶದಿಂದ ವೈಯಕ್ತಿಕ ದಾಖಲೆಯಾಗಿ ತಾಮ್ರಫಲಕಗಳ ಮೇಲೆ, ಸಾರ್ವಜನಿಕ ದಾಖಲೆಯಾಗಿ ಕಲ್ಲಿನ ಮೇಲೆ ನಿರ್ಮಿಸುತ್ತಿದ್ದರು. ಹೀಗೆ ರಚಿತವಾದ ಬರಹಗಳನ್ನೇ ಶಾಸನಗಳೆನ್ನಬಹುದು. ಕಲ್ಲು ಬಹಳ ಸುಲಭವಾಗಿ ದೊರೆಯುವ ಲೇಖನ ಸಾಮಗ್ರಿಯಾಗಿದ್ದ ಕಾರಣದಿಂದ ಜನಸಾಮಾನ್ಯರ ಕಣ್ಣಿಗೆ ಸುಲಭವಾಗಿ ಬೀಳುತ್ತಿದ್ದ ಕಾರಣದಿಂದ ಮತ್ತು ಬಹುಕಾಲ ಉಳಿಯುವ ಸಾಮಗ್ರಿಯಾಗಿದ್ದ ಕಾರಣದಿಂದ ಶಾಸನಗಳನ್ನು ರಚಿಸುವಾಗ ವ್ಯಾಪಕವಾಗಿ ಕಲ್ಲನ್ನು ಬಳಸಲಾಯಿತು. ವೈಯಕ್ತಿಕ

ದಾಖಲೆಯಾಗಿ ನೀಡಬೇಕಾದ ಸಂದರ್ಭದಲ್ಲಿ ತಾಮ್ರಫಲಕಗಳನ್ನು ಬಳಸಲಾಗುತ್ತಿತ್ತು. ಹೀಗಾಗಿ ಶಿಲಾಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ, ತಾಮ್ರಶಾಸನಗಳು ಸಾಕಷ್ಟು ಪ್ರಮಾಣದಲ್ಲಿ ದೊರೆಯುತ್ತವೆ. ಆರಂಭದ ಕಾಲದಲ್ಲಿ ಕೇವಲ ರಾಜಾಜ್ಞೆಗಳನ್ನು ದಾಖಲಿಸುವುದಕ್ಕೆ ಸೀಮಿತವಾಗಿದ್ದ ಶಾಸನಗಳು ಮುಂದೆ ರಾಜರುಗಳಷ್ಟೇ ಅಲ್ಲದೆ ಸಾಮಂತರು, ಅಧಿಕಾರಿಗಳು, ಸಾರ್ವಜನಿಕರು ನೀಡಿದ ದಾನ, ದತ್ತಿ, ಪ್ರಶಸ್ತಿ, ಸ್ಮಾರಕಶಿಲೆಗಳಲ್ಲೂ ಕಂಡುಬರತೊಡಗಿದವು.

ದೊರೆತಿರುವ ಶಾಸನಗಳ ಅಧ್ಯಯನವು ಪ್ರದೇಶ, ಭಾಷೆ, ವಸ್ತು, ರಾಜವಂಶ ಮತ್ತು ವಿಷಯ ಇವುಗಳ ಹಿನ್ನೆಲೆಯಲ್ಲಿ ನಡೆಯುತ್ತಿರುತ್ತವೆ. ಒಂದು ನಿರ್ದಿಷ್ಟ ಪ್ರದೇಶದಲ್ಲಿರುವ ಶಾಸನಗಳನ್ನು ಅಧ್ಯಯನಕ್ಕೆ ಒಳಪಡಿಸಿದರೆ ಅದು ಶಾಸನಗಳ ಪ್ರಾದೇಶಿಕ ಅಧ್ಯಯನವಾಗುತ್ತದೆ. ಒಂದು ನಿರ್ದಿಷ್ಟ ಭಾಷೆಯಲ್ಲಿರುವ ಶಾಸನಗಳನ್ನು ಅಧ್ಯಯನ ಮಾಡಿದರೆ ಅದನ್ನು ಭಾಷಾಧಾರಿತ ಶಾಸನಗಳ ಅಧ್ಯಯನವೆನ್ನಬಹುದು. ಈ ರೀತಿಯಾದ ಅಧ್ಯಯನವು ಆ ಭಾಷೆಯ ಇತಿಹಾಸವನ್ನು ತಿಳಿಯುವಲ್ಲಿ ಸಹಕಾರಿಯಾಗುತ್ತದೆ. ನಿರ್ದಿಷ್ಟವಾದ ರಾಜಮನೆತನ ಅಥವಾ ವಂಶಕ್ಕೆ ಸೇರಿದ ಶಾಸನಗಳನ್ನು ಕಾಲಾನುಕ್ರಮದಲ್ಲಿ ಮತ್ತು ವಂಶಾನುಕ್ರಮದಲ್ಲಿ ಅಧ್ಯಯನ ನಡೆಸಿದಾಗ ಆಯಾ ರಾಜವಂಶಗಳ ಇತಿಹಾಸವನ್ನು ತಿಳಿಯಲು ಸಾಧ್ಯವಾಗುತ್ತದೆ. ಶಾಸನಗಳನ್ನು ರಚಿಸಲು ಬಳಸುತ್ತಿದ್ದ ವಸ್ತುಗಳನ್ನು ಆಧರಿಸಿ ಅಂದರೆ ಶಿಲಾಶಾಸನಗಳು, ತಾಮ್ರಶಾಸನಗಳು ಎಂದು ಮುಂತಾಗಿ ವರ್ಗೀಕರಿಸಿ ಅಧ್ಯಯನವನ್ನು ನಡೆಸಿದರೆ ಅದನ್ನು ವಸ್ತು ಆಧಾರಿತ ಅಧ್ಯಯನವೆನ್ನಬಹುದು. ಈ ರೀತಿಯಾದ ಅಧ್ಯಯನದಲ್ಲಿ ಕೇವಲ ಬರವಣಿಗೆಗಾಗಿ ಉಪಯೋಗಿಸುತ್ತಿದ್ದ ಸಾಮಗ್ರಿಗಳ ಬಗ್ಗೆ ಮಾತ್ರ ತಿಳಿಯಲು ಸಾಧ್ಯವಾಗುತ್ತದೆ. ಈ ಮೇಲೆ ಪ್ರಸ್ತಾಪಿಸಿದ ಪ್ರಾದೇಶಿಕ, ಭಾಷೆ, ವಸ್ತು ಮತ್ತು ರಾಜವಂಶಗಳನ್ನು ಆಧರಿಸಿ ನಡೆಸುವ ಶಾಸನಗಳ ಅಧ್ಯಯನಕ್ಕಿಂತ ಹೆಚ್ಚು ಪರಿಪೂರ್ಣವೂ, ಸಮಗ್ರವೂ ಆದ ಅಧ್ಯಯನದ ಕ್ರಮವೆಂದರೆ ಶಾಸನಗಳಲ್ಲಿ ನಿರೂಪಿತವಾಗಿರುವ ವಿಷಯಗಳನ್ನು ಆಧಾರವಾಗಿಟ್ಟುಕೊಂಡು ನಡೆಸುವ ವಿಷಯಾಧಾರಿತ ಅಧ್ಯಯನವೆನ್ನಬಹುದು. ಏಕೆಂದರೆ ವಿಷಯಾಧಾರಿತ ಅಧ್ಯಯನದಲ್ಲಿ ಪ್ರಾದೇಶಿಕ, ಭಾಷಿಕ, ವಸ್ತು ಹಾಗೂ ರಾಜವಂಶಿಕ ಅಧ್ಯಯನಗಳೂ ಸಹ ಸೇರಿಕೊಳ್ಳುವ ಸಾಧ್ಯತೆಗಳು ಹೆಚ್ಚಾಗಿರುತ್ತವೆ. ಶಾಸನಗಳಲ್ಲಿನ ವಿಷಯಗಳನ್ನು ಆಧರಿಸಿ ಅಧ್ಯಯನ ನಡೆಸುವಾಗ ಶಾಸನಗಳನ್ನು ಸ್ಥೂಲವಾಗಿ ದಾನಶಾಸನಗಳು, ಪ್ರಶಸ್ತಿಶಾಸನಗಳು, ವೀರಗಲ್ಲು, ಮಾಸ್ತಿ ಅಥವಾ ಮಹಾಸತಿಗಲ್ಲುಗಳು, ರಾಜಾಜ್ಞೆಗಳು ಅಥವಾ ಆಡಳಿತ ವ್ಯವಸ್ಥೆಯು ಹೊರಡಿಸಿರುವ ಆಜ್ಞೆಗಳು, ಧಾರ್ಮಿಕ ಆತ್ಮಹತ್ಯೆಯನ್ನು ಮಾಡಿಕೊಂಡ ವೀರರ ಸ್ಮಾರಕಗಳು, ಯಂತ್ರದ ಕಲ್ಲುಗಳು, ಗಡಿಕಲ್ಲುಗಳು, ಜಯಪತ್ರಗಳು, ವಣಿಕ್ ಸಂಘಗಳಿಗೆ ಸಂಬಂಧಿಸಿದ ಶಾಸನಗಳು ಮತ್ತು ಇತರೇ ಶಾಸನಗಳು ಎಂಬುದಾಗಿ ವರ್ಗೀಕರಿಸಬಹುದು.

## ೧.೨ : ಶಾಸನಗಳ ಅಧ್ಯಯನ- ಕರ್ನಾಟಕದಲ್ಲಿ ನಡೆದು ಬಂದ ರೀತಿ :-

ಶಾಸನಗಳ ಅಧ್ಯಯನದ ಇತಿಹಾಸದಲ್ಲಿ ಶಾಸನಗಳ ಸಂಗ್ರಹಣೆ, ಪ್ರಕಟಣೆ, ವಿಶ್ಲೇಷಣೆ, ಅಧ್ಯಯನ – ಹೀಗೆ ಹಂತಗಳನ್ನು ಕಾಣಬಹುದಾಗಿದ್ದು, 'ಕರ್ನಾಟಕ ಶಾಸನ ಪಿತಾಮಹ'ರೆನಿಸಿದ ಬಿ.ಎಲ್.ರೈಸ್‌ರವರು ಅಂದಿನ ಹಳೆಯ ಮೈಸೂರು ಪ್ರಾಂತ್ಯದ ಜಿಲ್ಲೆಗಳನ್ನು ಆಧಾರವಾಗಿಟ್ಟುಕೊಂಡು, ಅಲ್ಲಿನ ಶಾಸನಗಳನ್ನು ಸಂಗ್ರಹಿಸಿ, ಜಿಲ್ಲಾವಾರು ಶಾಸನ ಸಂಪುಟಗಳನ್ನು ಪ್ರಕಟಿಸಿದರು. ಅವರು ಬರೆದ ಪೀಠಿಕೆಗಳು ಪ್ರಮುಖವಾಗಿ ರಾಜಕೀಯ ಇತಿಹಾಸವನ್ನು ಮತ್ತು ಸ್ಥೂಲವಾಗಿ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿದ್ದವು. ಅಂತೆಯೇ ಉತ್ತರ ಕರ್ನಾಟಕ, ಮುಂಬಯಿ ಕರ್ನಾಟಕ ಪ್ರಾಂತ್ಯದ ಶಾಸನಗಳನ್ನು ಸಂಗ್ರಹಿಸಿ ಕ್ರಿ.ಶ.೧೮೭೮ರಲ್ಲಿ ಜೆ.ಎಫ್.ಫ್ಲೀಟ್‌ರವರು ಪಾಲಿ, ಸ್ಯಾನ್ಸ್ಕ್ರೀಟ್ ಅಂಡ್ ಓಲ್ಡ್ ಕ್ಯಾನರೀಸ್ ಇನ್‌ಸ್ಕ್ರಿಪ್‌ಷನ್ಸ್ ಫ್ರಮ್ ಬಾಂಬೆ ಪ್ರೆಸಿಡೆನ್ಸಿ ಅಂಡ್ ಪಾರ್ಟ್ಸ್ ಆಫ್ ಮದ್ರಾಸ್ ಪ್ರೆಸಿಡೆನ್ಸಿ ಅಂಡ್ ಮೈಸೂರ್ ಎಂಬ ಶಾಸನ ಸಂಪುಟವನ್ನು ಪ್ರಕಟಿಸಿದರು. ರೈಸ್‌ರವರಂತೆಯೇ ಫ್ಲೀಟ್‌ರವರೂ ಸಹ ರಾಜಕೀಯ ಇತಿಹಾಸ ನಿರೂಪಣೆಯತ್ತಲೇ ವಿಶೇಷವಾದ ಒಲವನ್ನು ತೋರಿದರು. ಹಾಗೆಯೇ ಕ್ರಿ.ಶ.೧೯೨೩ರಿಂದ ೧೯೬೪ರ ಅವಧಿಯಲ್ಲಿ ಆರ್ಕಿಯೊಲಾಜಿಕಲ್ ಸರ್ವೆ ಆಫ್ ಇಂಡಿಯಾದವರು ಪ್ರಕಟಿಸಿದ ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ ಎಂಬ ೨೦ ಸಂಪುಟಗಳು, ಧಾರವಾಡದ ಕನ್ನಡ ಸಂಶೋಧನಾ ಸಂಸ್ಥೆಯವರು ಪ್ರಕಟಿಸಿರುವ ಕರ್ನಾಟಕ ಇನ್‌ಸ್ಕ್ರಿಪ್‌ಷನ್ಸ್ ಎಂಬ ಆರು ಸಂಪುಟಗಳು ಕರ್ನಾಟಕದ ಉತ್ತರ ಭಾಗದ ತಾಲ್ಲೂಕುಗಳ ಶಾಸನಗಳನ್ನು ಒಳಗೊಂಡಿದ್ದು ಈ ಸಂಪುಟಗಳ ಪೀಠಿಕೆಗಳಲ್ಲಿ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಅಂಶಗಳ ಬಗ್ಗೆ ಚರ್ಚೆ ನಡೆದಿರುತ್ತದೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಬಿ.ಎಲ್.ರೈಸ್‌ರವರು ಪ್ರಕಟಿಸಿದ್ದ ಹಳೆಯ ಮೈಸೂರು ಪ್ರಾಂತ್ಯದ ಶಾಸನ ಸಂಪುಟಗಳ ಪರಿಷ್ಕರಣ ಕಾರ್ಯವನ್ನು ಕೈಗೆತ್ತಿಕೊಂಡಿದ್ದು, ಈವರೆಗೆ ಕೊಡಗು, ಶ್ರವಣಬೆಳಗೊಳ, ಹಾಸನ, ಮೈಸೂರು, ಮಂಡ್ಯ, ಚಿಕ್ಕಮಗಳೂರು, ಶಿವಮೊಗ್ಗ ಜಿಲ್ಲೆಯ ಶಾಸನ ಸಂಪುಟಗಳು ಪ್ರಕಟವಾಗಿವೆ. ಹಂಪಿ ಕನ್ನಡ ವಿಶ್ವವಿದ್ಯಾನಿಲಯವು ಉತ್ತರ ಕರ್ನಾಟಕದ ಶಾಸನ ಸಂಪುಟಗಳನ್ನು ಪ್ರಕಟಿಸುತ್ತಿದ್ದು ಹಂಪೆಯ ಶಾಸನಗಳು, ಬಳ್ಳಾರಿ, ಕೊಪ್ಪಳ, ಬೀದರ್, ಬಾಗಲಕೋಟೆ, ರಾಯಚೂರು ಜಿಲ್ಲೆಯ ಶಾಸನ ಸಂಪುಟಗಳು ಪ್ರಕಟವಾಗಿವೆ. ಈ ಸಂಪುಟಗಳ ಪೀಠಿಕೆಯಲ್ಲಿ ಎಂದಿನಂತೆ ರಾಜಕೀಯ ಇತಿಹಾಸ, ಸಾಂಸ್ಕೃತಿಕ ವಿಚಾರಗಳು ಹಾಗೂ ಛಂದಸ್ಸಿಗೆ ಸಂಬಂಧಿಸಿದ ವಿಷಯಗಳನ್ನು ವಿಶ್ಲೇಷಿಸಲಾಗಿದೆ. ಇವಲ್ಲದೆ ವೈಯಕ್ತಿಕ ನೆಲೆಯಲ್ಲಿ, ಆಸಕ್ತಿಯಲ್ಲಿ ಪ್ರಕಟವಾಗಿರುವ ಕೆಳದಿ ಗುಂಡಾಜೋಯಿಸ್ ಮತ್ತು ಕೆ.ಜಿ.ವೆಂಕಟೇಶಜೋಯಿಸ್‌ರವರು ಸಂಪಾದಿಸಿರುವ ಕೆಳದಿ ಶಾಸನ ಸಂಪುಟಗಳು, ಡಾ.ಕೆ.ವಿ.ರಮೇಶ್

ಮತ್ತು ಎಂ.ಜಯರಾಮಶರ್ಮ ಸಂಪಾದಿಸಿರುವ ತುಳುನಾಡಿನ ಶಾಸನಗಳು, ಶ್ರೀ.ವಸಂತಶೆಟ್ಟಿ ಸಂಪಾದಿಸಿರುವ ಉಡುಪಿ ತಾಲ್ಲೂಕಿನ ಶಾಸನಗಳು, ಜಿ.ಬ್ರಹ್ಮಪ್ಪನವರು ಸಂಪಾದಿಸಿರುವ ಶ್ರವಣಬೆಳಗೊಳದ ಶಾಸನಗಳು ಮೊದಲಾದವನ್ನು ಶಾಸನಗಳ ಸಂಗ್ರಹಣೆ, ಪ್ರಕಟಣೆ, ವಿಶ್ಲೇಷಣೆಯ ಹಂತಗಳಲ್ಲಿ ಗುರುತಿಸಬಹುದಾಗಿದೆ.

ಈವರೆಗೆ ಸಂಗ್ರಹವಾಗಿರುವ, ಪ್ರಕಟವಾಗಿರುವ ಶಾಸನಗಳನ್ನು ಆಧಾರವಾಗಿಟ್ಟುಕೊಂಡು ನಡೆದಿರುವ ಅಧ್ಯಯನ, ಸಂಶೋಧನೆಗಳೆಲ್ಲಾ ಕೇವಲ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ವಿಷಯಗಳಿಗೆ ಹೆಚ್ಚು ಒತ್ತುಕೊಟ್ಟಿರುವುದು ಕಂಡುಬರುತ್ತದೆ. ಶಾಸನಗಳಲ್ಲಿ ಪ್ರಸ್ತಾಪಿತವಾಗಿರುವ ಸಾಂಸ್ಕೃತಿಕ ಅಂಶಗಳನ್ನು ಆಧರಿಸಿ ನಡೆದ ಅಧ್ಯಯನಗಳನ್ನು ಡಾ.ಎಂ.ಚಿದಾನಂದಮೂರ್ತಿಯವರ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಕೆ.ಜಿ.ವೆಂಕಟೇಶ ಜೋಯಿಸ್‌ರವರ ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ.ಸಿ.ಯು.ಮಂಜುನಾಥರವರ ಕರ್ನಾಟಕ ಶಾಸನಗಳು ಮತ್ತು ಸಂಸ್ಕೃತಿ ಮೊದಲಾದ ಕೃತಿಗಳಲ್ಲಿ ಕಾಣಬಹುದಾಗಿದೆ. ಶಾಸನಗಳಲ್ಲಿನ ನಿರ್ದಿಷ್ಟವಾದ ವಿಷಯಗಳನ್ನು ಆಧರಿಸಿ ನಡೆದಿರುವ ಅಧ್ಯಯನವನ್ನು ಡಾ.ಆರ್.ಶೇಷಶಾಸ್ತ್ರಿಯವರ ಕರ್ನಾಟಕದ ವೀರಗಲ್ಲುಗಳು ಡಾ.ಎಲಿಗಾರ ಚನ್ನಕ್ಕರವರ ಕರ್ನಾಟಕದ ಸ್ತ್ರೀ ಸಮಾಜ, ಡಾ.ಬಿ.ಆರ್.ಹಿರೇಮಠರವರ ಶಾಸನಗಳಲ್ಲಿ ಕರ್ನಾಟಕದ ವರ್ತಕರು ಮೊದಲಾದ ಕೃತಿಗಳಲ್ಲಿ ಕಾಣಬಹುದಾಗಿದೆ. ಪ್ರಾದೇಶಿಕವಾಗಿ ಶಾಸನಗಳನ್ನು ಕುರಿತು ಅಧ್ಯಯನಗಳು ವ್ಯಾಪಕವಾಗಿ ನಡೆದಿದ್ದು ಕೆ.ಜಿ.ಕುಂದಣಗಾರರ ಇನ್‌ಸ್ಕ್ರಿಪ್‌ಷನ್ಸ್ ಆಫ್ ನಾರ್ದರ್ನ್ ಕರ್ನಾಟಕ ಅಂಡ್ ಕೊಲ್ಲಾಪುರ ಸ್ಟೇಟ್, ಡಾ.ರಿತ್ತಿಯವರ ನಾಂದೇಡ್ ಅಂಡ್ ಸೊಲ್ಲಾಪುರ್ ಇನ್‌ಸ್ಕ್ರಿಪ್‌ಷನ್ಸ್, ಡಾ.ಶ್ರೀನಿವಾಸರಿತ್ತಿ ಮತ್ತು ಡಾ.ಬಿ.ಆರ್.ಗೋಪಾಲ್‌ರವರು ಸಂಪಾದಿಸಿರುವ 'ಇನ್‌ಸ್ಕ್ರಿಪ್‌ಷನ್ಸ್ ಆಫ್ ದ ವಿಜಯನಗರ ರೂಲರ್ಸ್ ಸಂಪುಟ- ೧ ಮತ್ತು ೨, ಕೆ.ಆರ್.ಗಣೇಶ್‌ರವರ ಆಂಧ್ರಪ್ರದೇಶದ ಕನ್ನಡ ಶಾಸನಗಳು, ಪಿ.ವಿ.ಕೃಷ್ಣಮೂರ್ತಿಯವರ ತಮಿಳುನಾಡಿನ ಕನ್ನಡ ಶಾಸನಗಳು, ಡಾ.ಎಂ.ಎಂ.ಕಲಬುರ್ಗಿಯವರ ಮಹಾರಾಷ್ಟ್ರದ ಕನ್ನಡ ಶಾಸನಗಳು ಮೊದಲಾದವುಗಳನ್ನು ಹೆಸರಿಸಬಹುದಾಗಿದೆ. ಪ್ರಾದೇಶಿಕವಾದ ಅಧ್ಯಯನವು ವ್ಯಾಪಕವಾಗಿ ನಡೆಯುತ್ತಿದ್ದು ಅದು ಪ್ರಾಚೀನ ನಾಡು ಸೀಮೆ, ಇಂದಿನ ಆಡಳಿತ ಘಟಕಗಳಾದ ಜಿಲ್ಲೆ, ತಾಲ್ಲೂಕು, ಗ್ರಾಮ, ಊರುಗಳ ಮಟ್ಟದವರೆಗೂ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದೆ. ಎಸ್.ಕೆ.ಕೊಪ್ಪ ಅವರ ತರ್ದವಾಡಿ ನಾಡು ಒಂದು ಅಧ್ಯಯನ, ಭೋಜರಾಜ ಪಾಟೀಲ್‌ರವರ 'ನಾಗರಖಂಡ ೭೦' ಒಂದು ಅಧ್ಯಯನ, ಎಸ್.ಎಲ್.ಶಾಂತಕುಮಾರಿ ಅವರ ಕುಕ್ಕನೂರು ಒಂದು ಅಧ್ಯಯನ, ಹೆಚ್.ಎಂ. ಶಂಕರನಾರಾಯಣರಾವ್‌ರವರ ಶ್ರೀಹರಿಹರ ದೇವಾಲಯ, ಸೀತಾರಾಮ ಜಾಗೀರದಾರರ ಕಂಬದಹಳ್ಳಿ ಒಂದು ಜೈನಕೇಂದ್ರ ಮೊದಲಾದವುಗಳನ್ನು ಹೆಸರಿಸಬಹುದು ಹಾಗೂ

ಶಾಸನಗಳ ಶಿಲ್ಪವನ್ನು ಆಧರಿಸಿ ಡಾ.ಡಿ.ವಿ. ಪರಮಶಿವಮೂರ್ತಿಯವರು 'ಕನ್ನಡ ಶಾಸನ ಶಿಲ್ಪ' ಎಂಬ ಕೃತಿಯನ್ನು ರಚಿಸಿದ್ದಾರೆ.

**೧.೩ ಶಾಸನ ಸಾಹಿತ್ಯ ಕುರಿತು ನಡೆದಿರುವ ಅಧ್ಯಯನಗಳು:-**

ಇಷ್ಟಾದರೂ ಸಹ ಶಾಸನಗಳಲ್ಲಿ ಪ್ರಧಾನವಾಗಿ ವಿಷಯ ನಿರೂಪಣೆಯ ಸಂದರ್ಭದಲ್ಲಿಯೇ ಹಲವಾರು ಜನ ಶಾಸನಕವಿಗಳು ತಮಗಿರುವ ಪರಿಮಿತ ಅವಕಾಶದಲ್ಲಿಯೇ ತಮ್ಮಲ್ಲಿದ್ದ ಸಾಹಿತ್ಯಾಭಿರುಚಿ, ಕತೃತ್ವ ಶಕ್ತಿ, ಪ್ರತಿಭೆಯನ್ನು ಸಮರ್ಥವಾಗಿ ಬಳಸಿ ಹಲವಾರು ಸಾಹಿತ್ಯಕ ಮೌಲ್ಯಗಳನ್ನು ಒಳಗೊಂಡ ಶಾಸನಗಳನ್ನು ರಚಿಸಿದ್ದಾರೆ. ಪರಿಮಿತ ಅವಕಾಶದಲ್ಲಿಯೇ ತಮ್ಮ ಕಾವ್ಯ ಪ್ರತಿಭೆಯನ್ನು ಮೆರೆದಿದ್ದಾರೆ. ಆದರೆ ಶಾಸನಗಳಲ್ಲಿರುವ ಸಾಹಿತ್ಯವನ್ನು ಗುರುತಿಸುವ ಒಂದು ವ್ಯವಸ್ಥಿತ ಅಧ್ಯಯನವು ಈವರೆಗೆ ನಡೆದಿರುವುದಿಲ್ಲ.

"ಶಾಸನಗಳು ಕನ್ನಡ ಸಾಹಿತ್ಯದ ತಲಕಾವೇರಿ"[೩] "ಸಾಮಾನ್ಯರ ಸಹಜಭಾಷೆ, ಕವಿಗಳ ಕಾವ್ಯಭಾಷೆಯನ್ನು ಪ್ರತಿನಿಧಿಸುತ್ತ ಸಾಗಿಬಂದ ಇವನ್ನು (ಶಾಸನಗಳನ್ನು) ಹೊರತು ಪಡಿಸಿ ಬರೆದ ಭಾಷಾಚರಿತ್ರೆ, ಸಾಹಿತ್ಯ ಚರಿತ್ರೆಗಳು ಯಾವ ಕಾಲಕ್ಕೂ ಅಪೂರ್ಣ"[೪] ಎಂಬ ಅಭಿಪ್ರಾಯಗಳು ಶಾಸನಗಳಲ್ಲಿರುವ ಸಾಹಿತ್ಯದ ಮಹತ್ವವನ್ನು ಮನವರಿಕೆ ಮಾಡಿಕೊಡುತ್ತವೆ. ಕನ್ನಡ ಭಾಷೆ ಮತ್ತು ಸಾಹಿತ್ಯದ ಪ್ರಾಚೀನತೆಯನ್ನು ಅರಿಯಲು ಶಾಸನಗಳೇ ಪ್ರಮುಖವಾದ ಆಧಾರಗಳಾಗಿವೆ. ಕಾವ್ಯಗುಣಗಳಿಂದ ಕೂಡಿದ ಶಾಸನಗಳು ಕನ್ನಡಭಾಷೆಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿವೆ. ಕನ್ನಡದ ಪ್ರಸಿದ್ಧ ಕವಿಗಳಾದ ರನ್ನ, ಜನ್ನ, ನಾಗಚಂದ್ರ, ಶಾಂತಿನಾಥ, ಪಾರ್ಶ್ವನಾಥ, ಮಧುರ ಮೊದಲಾದವರು ಶಾಸನಗಳನ್ನು ರಚಿಸಿದ್ದಾರೆ. ಶಾಸನಗಳಿಂದಲೇ ತಿಳಿದು ಬರುವ ಅನೇಕ ಕವಿಗಳು, ಹೆಸರು ಹೇಳಿಕೊಳ್ಳದ ಅಜ್ಞಾತ ಕವಿಗಳು ಬಹುದೊಡ್ಡ ಸಂಖ್ಯೆಯಲ್ಲಿದ್ದು, ಕನ್ನಡ ಸಾಹಿತ್ಯದ ಬೆಳವಣಿಗೆಯಲ್ಲಿ ಇವರುಗಳ ಕೊಡುಗೆಯೂ ಗಮನಾರ್ಹವಾಗಿದೆ.

ಸಾಹಿತ್ಯ ದೃಷ್ಟಿಯಿಂದ, ಭಾಷಾದೃಷ್ಟಿಯಿಂದ ವಿಶಿಷ್ಟವಾದ ಸ್ಥಾನವನ್ನು ಪಡೆದಿರುವ ಕನ್ನಡ ಶಾಸನಗಳಲ್ಲಿನ ಸಾಹಿತ್ಯವನ್ನು ಗುರುತಿಸುವಲ್ಲಿ ನಡೆದಿರುವ ಪ್ರಯತ್ನಗಳು ವಿರಳವಾದವುಗಳು. ಅವುಗಳಲ್ಲಿ ಮೊದಲಿಗೆ ಆರ್.ನರಸಿಂಹಾಚಾರ್ಯರ 'ಶಾಸನಪದ್ಯಮಂಜರಿ'ಯನ್ನು ಗಮನಿಸಬೇಕಾಗುತ್ತದೆ. ಆರ್.ನರಸಿಂಹಾಚಾರ್ಯರು ಈ ಕೃತಿಯಲ್ಲಿ ಮೈಸೂರು ಸಂಸ್ಥಾನ ಮತ್ತು ಬಾಂಬೆ ಪ್ರಾಂತ್ಯದಲ್ಲಿರುವ ಸುಮಾರು ೨೮೩ ಶಾಸನಗಳನ್ನು ಆರಿಸಿಕೊಂಡಿದ್ದಾರೆ. ಈ ಸಂಕಲನದಲ್ಲಿ ೧೮೬೫ ಶಾಸನ ಪದ್ಯಗಳಿವೆ. ಕ್ರಿ.ಶ. ಸುಮಾರು ೭೦೦ರಿಂದ ಕ್ರಿ.ಶ. ೧೪೬೫ರ ಅವಧಿಯ ಶಾಸನಗಳಾಗಿವೆ. ಈ ಅವಧಿಯಲ್ಲಿ ಆಳ್ವಿಕೆ ನಡೆಸಿದ ಹಲವಾರು ರಾಜವಂಶಗಳ ಶಾಸನಗಳಲ್ಲಿ

ಬಂದಿರುವ ಕಾವ್ಯಾತ್ಮಕವಾದ ಪದ್ಯಗಳನ್ನು ಸಂಗ್ರಹಿಸಿದ್ದಾರೆ. ಹೆಸರೇ ಸೂಚಿಸುವಂತೆ ಶಾಸನಗಳಲ್ಲಿರುವ ಪದ್ಯಗಳನ್ನಷ್ಟೇ ಸಂಗ್ರಹಿಸುವುದರ ಕಡೆಗೆ ಶ್ರೀಯುತರು ಗಮನಕೊಟ್ಟಿದ್ದರಿಂದ 'ಕಾವ್ಯ'ವೆನಿಸಿಕೊಳ್ಳಲು ಅರ್ಹವಾದ ಗದ್ಯಭಾಗಗಳು ಈ ಸಂಕಲನದಿಂದ ಹೊರಗುಳಿದವು. ಮುಂದೆ ಅವರು ಅನುಬಂಧವಾಗಿ ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯಲ್ಲಿ ಪ್ರಕಟಿಸಿದ ಭಾಗದಲ್ಲಿ ಮಾತ್ರ ಒಂದು ಗದ್ಯದ ಭಾಗವಿದೆ.[೫] "ಶಾಸನ ಪದ್ಯಮಂಜರಿಯು ಸಾವಿರಾರು ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಶಾಸನಗಳ ಪರಿಚಯವನ್ನು ಸಮರ್ಥವಾಗಿ ಮಾಡಿಕೊಡುತ್ತ ಬಂದಿದೆ. ಆಕರ ಗ್ರಂಥವಾಗಿ ಪರಿಣಮಿಸಿದೆ. ಶಾಸನಾಭ್ಯಾಸಿಗಳಿಗೆ ಇದೊಂದು ಕೈದೀವಿಗೆಯಾಗಿ ದಾರಿ ತೋರಿಸುತ್ತದೆಯೆಂಬುದರಲ್ಲಿ ಅನುಮಾನವಿಲ್ಲ"[೬]ವೆಂದು ಡಾ.ಎಂ.ಚಿದಾನಂದಮೂರ್ತಿಯವರು ಅಭಿಪ್ರಾಯಪಟ್ಟಿರುವುದು ಸಮಂಜಸವಾಗಿದೆ.

ಈ ದಿಸೆಯಲ್ಲಿ ನಡೆದಿರುವ ಪ್ರಯತ್ನಗಳಲ್ಲಿ ಹೆಸರಿಸಬೇಕಾದ ಮತ್ತೊಂದು ಕೃತಿಯೆಂದರೆ "ಶಾಸನ ಸಾಹಿತ್ಯ ಸಂಚಯ" ಎ.ಎಂ.ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿಯವರು ಈ ಗ್ರಂಥದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದ ಶಾಸನ ಭಾಗಗಳನ್ನು ಆರಿಸಿ ಕೊಟ್ಟಿದ್ದಾರೆ. ಜೊತೆಗೆ ಹುರುಳುಳ್ಳ ಒಳ್ಳೆಯ ಶಾಸನ ಗದ್ಯಭಾಗಗಳನ್ನೂ ಆಯ್ದುಕೊಟ್ಟಿದ್ದಾರೆ. ಅಗತ್ಯವಿರುವ ಕಡೆ ಶಾಸನ ಭಾಗಗಳಿಗೆ ಟಿಪ್ಪಣಿಯನ್ನು ಸಹ ಬರೆದಿದ್ದಾರೆ. ಡಾ.ಎಂ.ಎಂ.ಕಲಬುರ್ಗಿಯವರ "ಶಾಸನ ಸೂಕ್ತಿ ಸುಧಾರ್ಣವ" ಕೃತಿಯೂ ಸಹ ಶಾಸನಗಳಲ್ಲಿನ ಸಾಹಿತ್ಯಕ ಭಾಗಗಳನ್ನು ವ್ಯವಸ್ಥಿತವಾಗಿ ನೀಡಿರುವ ಮತ್ತೊಂದು ಕೃತಿಯಾಗಿದೆ. "ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ" ಎಂಬ ಡಾ.ಎಂ.ಬಿ.ನೇಗಿನಹಾಳ ಅವರ ಕೃತಿಯು ಆಡುಭಾಷೆಯಾಗಿದ್ದ ಕನ್ನಡವು ಸಾಹಿತ್ಯಕ ಭಾಷೆಯಾಗಿ ಕದಂಬರ ಕಾಲದಲ್ಲಿ ರಾಜಭಾಷೆಯಾಗಿ ಬೆಳೆದ ರೀತಿಯನ್ನು ಬಾದಾಮಿ ಚಲುಕ್ಯರು ಮತ್ತು ರಾಷ್ಟ್ರಕೂಟ ದೊರೆಗಳ ಆಶ್ರಯದಲ್ಲಿ ಬೆಳೆದ ಪರಿಯನ್ನು ನಿರೂಪಿಸಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳಲ್ಲಿ ಹಾಗೂ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಕನ್ನಡ ಸಾಹಿತ್ಯ ಚರಿತ್ರೆಯ ಸಂಪುಟಗಳಲ್ಲಿ ಶಾಸನ ಸಾಹಿತ್ಯವನ್ನು ಕುರಿತಂತೆ ಪ್ರತ್ಯೇಕ ಅಧ್ಯಾಯಗಳಲ್ಲಿ ಸುದೀರ್ಘವಾಗಿ ಚರ್ಚಿಸಲಾಗಿದೆ. ಮೇವುಂಡಿ ಮಲ್ಲಾರಿಯವರು "ಕನ್ನಡ ನಾಡಿನ ಕೆಲವು ಶಾಸನ ಕವಿಗಳು" ಎಂಬ ಪುಸ್ತಕದಲ್ಲಿ ಐವತ್ತೊಂದು ಶಾಸನ ಕವಿಗಳ ಪರಿಚಯ ಮಾಡಿಕೊಟ್ಟಿದ್ದಾರೆ. ತಿ.ತಾ.ಶರ್ಮ, ಡಾ.ಪಾಂಡುರಂಗ ದೇಸಾಯಿ ಮತ್ತು ಡಾ.ಶ್ರೀನಿವಾಸ ರಿತ್ತಿಯವರು ಶಾಸನ ಕವಿಗಳ ಬಗ್ಗೆ ಪರಿಚಯಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಡಾ.ಎಂ.ಎಂ.ಕಲಬುರ್ಗಿಯವರ "ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ" ಗ್ರಂಥದಲ್ಲಿ ಶಾಸನ ಸಾಹಿತ್ಯದ ಬಗ್ಗೆ ಒಂದು ಪ್ರತ್ಯೇಕ ಅಧ್ಯಾಯವಿದೆ.

ಡಾ.ಎಂ.ಚಿದಾನಂದಮೂರ್ತಿಯವರ ಸಂಶೋಧನ ತರಂಗ, ಸಂಪುಟ-೨ರಲ್ಲಿರುವ "ಶಾಸನಗಳು ಮತ್ತು ಕನ್ನಡ ಸಾಹಿತ್ಯ" ಎಂಬ ಲೇಖನವು ಶಾಸನ ಸಾಹಿತ್ಯ ಸಂಬಂಧಿಯಾಗಿದೆ. ಡಾ.ಹು.ಕಾ.ಜಯದೇವ್‌ರವರ 'ಶಾಸನ ಮತ್ತು ಗದ್ಯ' ಎಂಬ ಕೃತಿಯು ಶಾಸನಗಳಲ್ಲಿನ ಗದ್ಯ ಭಾಗದಲ್ಲಿರುವ ಸಾಹಿತ್ಯದತ್ತ ಗಮನಸೆಳೆಯುತ್ತದೆ. ಡಾ.ಜಿ.ಎನ್.ಉಪಾಧ್ಯರವರು "ಗೋದಾವರಿವರಂ ಇರ್ದ ಕನ್ನಡ ನಾಡು" ಕೃತಿಯಲ್ಲಿ ಮಹಾರಾಷ್ಟ್ರದ ಕನ್ನಡ ಶಾಸನಗಳಲ್ಲಿನ ಸಾಹಿತ್ಯಕ ಮಹತ್ವವನ್ನು ಅಧ್ಯಾಯ-೮ರಲ್ಲಿ ನಿರೂಪಿಸಿದ್ದಾರೆ. "ಶ್ರವಣಬೆಳಗೊಳ; ಒಂದು ಸಮೀಕ್ಷೆ" ಕೃತಿಯಲ್ಲಿ ಡಾ.ಜಿ.ಎಸ್.ಶಿವರುದ್ರಪ್ಪನವರು 'ಶ್ರವಣಬೆಳಗೊಳದ ಕನ್ನಡ ಶಾಸನಗಳಲ್ಲಿ ಕಾವ್ಯಗುಣ' ಎಂಬ ಲೇಖನದಲ್ಲಿ ಅಲ್ಲಿಯ ಶಾಸನಗಳಲ್ಲಿನ ಸಾಹಿತ್ಯದ ಕಡೆಗೆ ಗಮನಸೆಳೆದಿದ್ದಾರೆ. "ತುಳುನಾಡಿನ ಜೈನಶಾಸನಗಳು" ಎಂಬ ಕೃತಿಯಲ್ಲಿ ಡಾ.ಕೆ.ಆರ್.ಗಣೇಶ್‌ರವರು 'ತುಳುನಾಡಿನ ಜೈನ ಶಾಸನ ಸಾಹಿತ್ಯ' ಎಂಬ ಲೇಖನದಲ್ಲಿ ಆ ಪ್ರದೇಶದ ಶಾಸನಗಳಲ್ಲಿಯ ಸಾಹಿತ್ಯದ ಬಗೆಗೆ ಚರ್ಚಿಸಿದ್ದಾರೆ. ಇಷ್ಟಾದರೂ ಶಾಸನ ಸಾಹಿತ್ಯ ಸಂಬಂಧಿಯಾದ ಸವಿಸ್ತಾರವಾದ ವಿವೇಚನೆ, ಬಂದಿರುವ ಬರಹಗಳು ಕಡಿಮೆಯೆಂದರೆ ತಪ್ಪಾಗಲಾರದು.

### ೧.೪ ಶಿಷ್ಟ ಸಾಹಿತ್ಯ ಮತ್ತು ಶಾಸನ ಸಾಹಿತ್ಯಗಳ ವ್ಯಾಪಕತೆ ಮತ್ತು ಮಿತಿ:-

"ಅಪಾರವಾದ ಕಾವ್ಯ ಜಗತ್ತಿನಲ್ಲಿ ಕವಿಯೇ ಸೃಷ್ಟಿಕರ್ತ. ತನಗೆ ಹೇಗೆ ರುಚಿಸುವುದೋ ಹಾಗೆ ವಿಶ್ವವನ್ನು ರೂಪಾಂತರಗೊಳಿಸುತ್ತಾನೆ. ಅಚೇತನವಾದ ವಸ್ತುಗಳನ್ನು ಸಚೇತನವಾಗಿಯೂ, ಸಚೇತವಾದವುಗಳನ್ನು ಅಚೇತನವಾಗಿಯೂ ತನಗೆ ಇಷ್ಟ ಬಂದಂತೆ ಸ್ವತಂತ್ರತೆಯಿಂದ ವ್ಯವಹಾರಗೊಳಿಸುತ್ತಾನೆ"[2] ಎಂಬ ಆನಂದವರ್ಧನನ ಮಾತು ಕಾವ್ಯರಚನೆಯ ಸಂದರ್ಭದಲ್ಲಿ ಕವಿಗಳಿಗೆ ಇರುವ ಸ್ವಾತಂತ್ರ್ಯವನ್ನು ವಿಶದಪಡಿಸುತ್ತದೆ. ಪ್ರತಿಭಾವಂತನಾದ ಕವಿಯು ತನ್ನ ಕಲ್ಪನಾವಿಲಾಸ, ಪ್ರೌಢಿಮೆ, ಪ್ರತಿಭೆಯ ಮೂಲಕ ಸದಾ ಕಾಲಕ್ಕೂ ಸಲ್ಲುವ, ಸರ್ವರೂ ಮೆಚ್ಚುವ ಕೃತಿಯನ್ನು ನೀಡುವಲ್ಲಿ ಯಶಸ್ವಿಯಾಗುತ್ತಾನೆ. ಪ್ರತಿಭಾಶಾಲಿಯಾದ ಕವಿಯು ಕವಿತಾಸಾಮರ್ಥ್ಯದ ಮೂಲಕ ಏನೆಲ್ಲವನ್ನು ಮಾಡಬಲ್ಲನೆಂಬುದನ್ನು ಕವಿ ನೇಮಿಚಂದ್ರನು ಹೇಳಿರುವ

**"ಕಟ್ಟುಗೆ ಕಟ್ಟದಿರ್ಕೆ ಕಡಲಂ ಕಪಿಸಂತತಿ ವಾಮನಕ್ರಮಂ**
**ಮುಟ್ಟುಗೆ ಮುಟ್ಟದಿರ್ಕೆ ನಭಮಂ ಹರನಂ ನರನೊತ್ತಿ ಗಂಟಲಂ**
**ಮೆಟ್ಟುಗೆ ಮೆಟ್ಟದಿರ್ಕೆ ಕವಿಗಳ್ ಕೃತಿ ಬಂಧದೊಳಲ್ತೆ**
**ಕಟ್ಟಿದರ್ ಮುಟ್ಟಿದರಿಕ್ಕಿ ಮೆಟ್ಟಿದರಿದೇನಳವಗ್ಗಳಮೋ ಕವೀಂದ್ರರಾ"[3]**

ಎಂಬ ಪದ್ಯವು ಸ್ಪಷ್ಟಪಡಿಸುತ್ತದೆ. ಆದ್ದರಿಂದ ಸ್ಥೂಲವಾಗಿ ಹೇಳುವುದಾದರೆ, "ರಸಾನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ" ಎನ್ನಬಹುದು.

ಪ್ರತಿಭಾಶಾಲಿಯೂ, ಪಂಡಿತನೂ, ಬಹುಶ್ರುತನೂ ಆದ ಕವಿಯು ತನ್ನ ವಿಸ್ತಾರವಾದ ಲೋಕಾನುಭವವನ್ನು ಬರವಣಿಗೆಯ ಮೂಲಕ ಕಾವ್ಯರೂಪದಲ್ಲಿ ನೀಡುತ್ತಾನೆ. ಈ ರೀತಿಯಾದ ಸಾಹಿತ್ಯವನ್ನು ಸ್ಥೂಲವಾಗಿ 'ಶಿಷ್ಟಸಾಹಿತ್ಯ'ವೆಂದು ಕರೆಯಬಹುದು. ಕನ್ನಡದ ಆದಿಕವಿ ಪಂಪನಿಂದ ಆರಂಭಿಸಿ ಅಸಂಖ್ಯಾತ ಕನ್ನಡ ಕವಿಗಳು ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಯಲ್ಲಿ ಉತ್ಕೃಷ್ಟವಾದ ಸಾಹಿತ್ಯ ಕೃತಿಗಳನ್ನು ನೀಡಿ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ. ಹಾಗೆಯೇ **"ಕುಱಿತೋದದೆಯುಂ ಕಾವ್ಯ ಪ್ರಯೋಗ ಪರಿಣತಮತಿಗಳ್"** ಎಂಬ ಉಕ್ತಿಯಂತೆ ಪಾಂಡಿತ್ಯವೇನೂ ಇಲ್ಲದಿದ್ದರೂ ಸಹ ತಮ್ಮ ಸಹಜವಾದ ಲೋಕಾನುಭವವನ್ನು ಸಾಹಿತ್ಯದ ರೂಪದಲ್ಲಿ ಅಭಿವ್ಯಕ್ತಿಗೊಳಿಸಿರುವ ಜಾನಪದ ಕವಿಗಳು ಕನ್ನಡ ನಾಡಿನ ಜಾನಪದ ಸಾಹಿತ್ಯವನ್ನು ಶ್ರೀಮಂತಗೊಳಿಸಿದ್ದಾರೆ.

ಶಿಷ್ಟಸಾಹಿತ್ಯ, ಜಾನಪದಸಾಹಿತ್ಯಗಳ ಜೊತೆಗೆ ಪರಿಗಣಿಸಬೇಕಾದ ಮತ್ತೊಂದು ಸಾಹಿತ್ಯವೆಂದರೆ ಶಾಸನಸಾಹಿತ್ಯ. ಹಾಗೆ ನೋಡಿದರೆ ಕನ್ನಡ ಸಾಹಿತ್ಯದ ಆರಂಭಿಕ ದಾಖಲೆಗಳೆಲ್ಲಾ ಶಾಸನಗಳೇ ಆಗಿವೆ. ತಮಟುಕಲ್ಲಿನ ಗುಣಮಧುರನ ಶಾಸನ, ಬಾದಾಮಿಯ ಕಪ್ಪೆ ಅರಭಟ್ಟನ ಶಾಸನ, ಮಾವಳಿಯ ಶಾಸನ, ಜೈನಮುನಿಗಳ ಜೀವನದರ್ಶನವನ್ನು ಕಲಾತ್ಮಕವಾಗಿ ಚಿತ್ರಿಸಿರುವ ಶ್ರವಣಬೆಳಗೊಳದ ಕೆಲವು ಶಾಸನಗಳು ಕನ್ನಡ ಸಾಹಿತ್ಯದ ಆರಂಭಿಕ ಕಾಲದಲ್ಲಿ ನಡೆದಿರಬಹುದಾದ ಸಾಹಿತ್ಯಕ ಚಟುವಟಿಕೆಗಳ ಪ್ರತಿನಿಧಿಗಳಾಗಿವೆ. ಕ್ರಿ.ಶ.೯೦೦ ನಂತರದಿಂದ ದೀರ್ಘವೂ ಪದ್ಯಾತ್ಮಕವೂ, ಕಾವ್ಯಮಯವೂ ಆದ ಶಾಸನಗಳು ಹೆಚ್ಚಿನ ಸಂಖ್ಯೆಯಲ್ಲಿ ದೊರೆಯುತ್ತವೆ. ಕಾವ್ಯಶೈಲಿಯ ದೃಷ್ಟಿಯಿಂದ ಇಡೀ ಭಾರತದಲ್ಲಿ ಸಂಸ್ಕೃತವನ್ನು ಬಿಟ್ಟರೆ ಕನ್ನಡ ಶಾಸನಗಳು ಅದ್ವಿತೀಯವಾದವುಗಳು. ದೇಶೀಯ ಭಾಷೆಗಳಲ್ಲೆಲ್ಲಾ ವಿಷಯ ವೈವಿಧ್ಯ, ಶಿಲ್ಪ, ಕಾವ್ಯಶೈಲಿಗಳ ದೃಷ್ಟಿಯಿಂದ ಕನ್ನಡ ಶಾಸನಗಳಿಗೆ ಅಗ್ರಸ್ಥಾನ ದೊರಕುತ್ತದೆ. ಕರ್ನಾಟಕದಲ್ಲಿ ದೊರೆತಿರುವ ಅಸಂಖ್ಯಾತ ಶಾಸನಗಳು ಸಾಹಿತ್ಯಕ ಗುಣಗಳನ್ನು ಒಳಗೊಂಡ ಸಣ್ಣ ಸಣ್ಣ ಮುಕ್ತಕಗಳು, ವಿಸ್ತಾರವಾದ ಬಣ್ಣನೆಗಳು, ಗದ್ಯಭಾಗಗಳನ್ನು ಒಳಗೊಂಡು ಮನಸೆಳೆಯುತ್ತವೆ. ಕೆಲವು ಶಾಸನಗಳು ಪುಟ್ಟ ಚಂಪೂಕಾವ್ಯಗಳಂತಿವೆ. ಇಲ್ಲಿ ಶ್ರವಣಬೆಳಗೊಳದ ಪಟ್ಟಮಹಾದೇವಿ ಶಾಂತಲದೇವಿ ಶಾಸನ, ಹಳೇಬೀಡಿನ ಕುವರಲಕ್ಷ್ಮನ ಶಾಸನ, ಜನ್ನಕವಿಯ ಅಮೃತಾಪುರದ ಶಾಸನ ಮೊದಲಾದವುಗಳನ್ನು ಹೆಸರಿಸಬಹುದು. ಇಷ್ಟಾದರೂ ಸಹ ಶಾಸನಗಳಿಗೆ ತಮ್ಮದೇ ಆದ ಇತಿಮಿತಿಗಳಿವೆ ಎಂಬುದನ್ನು ಗಮನಿಸಬೇಕಾಗುತ್ತದೆ.

"ಸಾಹಿತ್ಯ ನಿರ್ಮಾಣ ಶಾಸನಗಳ ಮೂಲೋದ್ದೇಶವಲ್ಲ. ಅವು ಪ್ರಧಾನವಾಗಿ ಅಧಿಕೃತ ಸ್ವರೂಪದ ದಾಖಲೆಗಳು. ಆದರೆ ನಡೆದ ಘಟನೆಯೊಂದನ್ನು ವರ್ಣಿಸುವಾಗ ಕಾವ್ಯಗಳ ಪ್ರಭಾವದಿಂದ ಅಥವಾ ವರ್ಣಿಸುವವನ ಭಾವಪೂರ್ಣತೆಯಿಂದ ಶಾಸನಗಳಲ್ಲಿ ಕಾವ್ಯಾಂಶ ಕಾಣಿಸಿಕೊಳ್ಳಬಹುದು"[೧೦] ಶಾಸನ ಕವಿಗಳಲ್ಲಿ ಸಾಮಾನ್ಯವಾಗಿ ಪ್ರತಿಭೆಗಿಂತ ಪಾಂಡಿತ್ಯ ಹಾಗೂ ಅನುಕರಣಪ್ರವೃತ್ತಿ ಅಧಿಕವಾಗಿರುವ ಕಾರಣದಿಂದ[೧೧] ಪ್ರತಿಭಾವಂತ ಕವಿಯಿಂದ ರಚಿತವಾದ ಕಾವ್ಯಗಳಿಗೆ ಸಮನಾಗಲಾರವು. ಆದರೂ ಸಹ ಶಾಸನಗಳಲ್ಲಿ ಉದಾತ್ತ ಕವಿತೆಯನ್ನಲ್ಲದಿದ್ದರೂ, ಉತ್ಕೃಷ್ಟ ಕವಿತೆಯನ್ನು ಆಸ್ವಾದಿಸಬಹುದು. ಶಾಸನಗಳು ಮುಖ್ಯವಾಗಿ ವ್ಯವಹಾರಿಕ ದಾಖಲೆಗಳಾದುದರಿಂದ ಅವುಗಳನ್ನು ರಚಿಸುವ ಶಾಸನರಚನಾಕಾರರು ಘಟನೆಯ ನಿರೂಪಣೆಗೆ ಹೆಚ್ಚಿನ ಗಮನವನ್ನು ನೀಡಬೇಕಾದುದು ಅನಿವಾರ್ಯ. ಶಾಸನಗಳನ್ನು ಹೆಚ್ಚಿನ ಪ್ರಮಾಣದಲ್ಲಿ ರಾಜಮಹಾರಾಜರು ಅಧಿಕಾರಸ್ಥರೇ ಹಾಕಿಸುತ್ತಿದ್ದ ಕಾರಣದಿಂದ ಶಾಸನರಚನಾಕಾರರು ಅವರುಗಳ ಗುಣಗಾನ, ವಂಶಾವಳಿ ನಿರೂಪಣೆ, ಪರಾಕ್ರಮ ಬಣ್ಣನೆ ಮಾಡುವುದು ಅನಿವಾರ್ಯವಾಗಿ ಬಿಡುತ್ತಿತ್ತು. ಇದು ಎಲ್ಲಾ ಶಾಸನಗಳಲ್ಲಿ ಸಿದ್ಧ ಮಾದರಿಯಾಗಿ ಪರಿಣಮಿಸಿತು. ಶಾಸನಪಾಠವನ್ನು ರಚಿಸುವಾಗ ಶಾಸನಕವಿಗಳು ಸಹಜವಾಗಿ ಅನೇಕ ಮಿತಿಗಳಿಗೆ ಒಳಪಡಬೇಕು. ವಾಸ್ತವ ಸಂಗತಿ ನಿರೂಪಣೆ, ದಾನಿಯ ಮತ್ತು ಪ್ರತಿಗೃಹೀತನ ಬಣ್ಣನೆ, ಶಾಪಾಶಯಗಳ ನಿರೂಪಣೆ– ಹೀಗೆ ಸಿದ್ಧ ಮಾದರಿಯಲ್ಲೇ ಶಾಸನ ರಚಿಸಬೇಕಾದ ಅನಿವಾರ್ಯತೆ ಇರುತ್ತಿತ್ತು. ಇಷ್ಟೆಲ್ಲಾ ಇತಿಮಿತಿಗಳ ನಡುವೆಯೂ ಶಾಸನ ರಚನಾಕಾರರು ತಮ್ಮಲ್ಲಿನ ಸಾಹಿತ್ಯ ಪ್ರೌಢಿಮೆಯನ್ನು ಮೆರೆದಿದ್ದಾರೆ. "ಶಾಸನ ರಚಿಸುವುದನ್ನೇ ನೆಪವಾಗಿಟ್ಟುಕೊಂಡು ಸಜ್ಜನ ತಿಲಕನೆಂಬ ಕವಿಯು ರಿಷ್ಯಶೃಂಗ ಮುನಿಯ ಮಹೋನ್ನತಿಯನ್ನು ಬಣ್ಣಿಸಿದ್ದಾನೆ"[೧೨] ಈ ರೀತಿಯಾಗಿ ಶಾಸನ ಕವಿಗಳು ತಮ್ಮ ಪರಿಮಿತಿಯಲ್ಲೇ ಔಚಿತ್ಯಪೂರ್ಣವಾದ ಮತ್ತು ಸಂದರ್ಭೋಚಿತವಾದ ವರ್ಣನೆಗಳಿಗೆ ಅವಕಾಶ ಮಾಡಿಕೊಂಡು ಕಾವ್ಯಗಳಂತೆ ಚಂಪೂಶೈಲಿಗೆ, ಅಷ್ಟಾದಶ ವರ್ಣನೆಗಳ ಕಡೆಗೆ ಹೊರಳಿದರು.

"ಕನ್ನಡ ಕಾವ್ಯಗಳು ಮೂಲತಃ ಸಾಹಿತ್ಯ ಕ್ಷೇತ್ರಕ್ಕೆ ಸೇರಿದವುಗಳಾದರೂ ಆನುಷಂಗಿಕವಾಗಿ ಅವು ಆಯಾ ಕಾಲದ ಚರಿತ್ರೆಗೂ ಸಲ್ಲುವಂತೆ, ಶಾಸನಗಳು ಮೂಲತಃ ಚರಿತ್ರೆಯ ಕ್ಷೇತ್ರಕ್ಕೆ ಸೇರಿದವುಗಳಾದರೂ, ಆನುಷಂಗಿಕವಾಗಿ ಕಾವ್ಯ ಅಥವಾ ಸಾಹಿತ್ಯಕ್ಕೂ ಕೊಂಚ ಮಟ್ಟಿಗೆ ಸಲ್ಲುವ ಲಕ್ಷಣಗಳನ್ನು ಪಡೆದುಕೊಂಡಿವೆ"[೧೩] ಶಾಸನಗಳ ರಚನೆಯು ಸಾಂದರ್ಭಿಕವಾಗಿರುತ್ತದೆ. ಅಂದರೆ ದೇವಾಲಯ ನಿರ್ಮಾಣ, ದಾನ–ದತ್ತಿಗಳನ್ನು ಬಿಡುವುದು, ವೀರಗಲ್ಲುಗಳ ಸ್ಥಾಪನೆ ಹೀಗೆ ಮುಂತಾದವುಗಳನ್ನು ದಾಖಲಿಸಬೇಕಾಗುತ್ತದೆ. ಆದ್ದರಿಂದ ಶಾಸನಗಳನ್ನು 'ಪೂರ್ವನಿರ್ಧಾರಿತ' ರಚನೆಗಳೆನ್ನಬಹುದು. ಶಾಸನವನ್ನು ಕಡೆಯಿಸಬೇಕೆಂಬ ಅಥವಾ ನಿಲ್ಲಿಸಬೇಕೆಂಬ ಅಧಿಕಾರಸ್ಥರ

ಅಭೀಪ್ಸೆ, ಅದರಂತೆ ಶಾಸನಪಾಠಗಳನ್ನು ರಚಿಸಬೇಕಾದ ಅನಿವಾರ್ಯತೆ ಮತ್ತು ಶಾಸನ ಪಾಠವನ್ನು ಕಲ್ಲಿನ ಮೇಲೆ ಕಂಡರಿಸುವ ಹಂತ ಹೀಗೆ ಮೂರು ಹಂತಗಳಲ್ಲಿ ಈ ಪ್ರಕ್ರಿಯೆಯು ನಡೆಯುತ್ತದೆ. ಇಂತಹ ಸಂದರ್ಭದಲ್ಲಿ ಶಾಸನಕವಿಗಳು ಅಥವಾ ರಚನಾಕಾರರಿಗೆ ಸ್ವತಂತ್ರ ಕವಿಯು ಏಕಾಂತದಲ್ಲಿ ಕುಳಿತು ಕಾವ್ಯರಚನೆ ಮಾಡುವಂತಹ ಅವಕಾಶವಿರುವುದಿಲ್ಲ. ಹಾಗೆಯೇ ಶಾಸನಕವಿಗಳು ಶಾಸನ ಮಾಧ್ಯಮದ (ಕಲ್ಲು, ತಾಮ್ರಪಟ ಇತ್ಯಾದಿ) ಪರಿಮಿತಿಯಿಂದಲೂ ನಿರ್ಬಂಧಿತರಾಗಿರುತ್ತಾರೆ. ಈ ಎಲ್ಲಾ ಮಿತಿಗಳ ನಡುವೆಯೂ ಶಾಸನ ಕವಿಗಳು ತಮ್ಮಲ್ಲಿಯ ರಚನಾಸಾಮರ್ಥ್ಯ, ಮನೋಧರ್ಮ, ಕಾವ್ಯಸಂಸ್ಕಾರ, ಭಾಷಾ ಕಲೆಗಾರಿಕೆಯಿಂದ ವಿಷಯವನ್ನು ಆಹ್ಲಾದಕರವಾಗಿ ನಿರೂಪಿಸಿರುವುದು ಗಮನಾರ್ಹ.

ಕನ್ನಡ ಭಾಷೆಯ ಶಾಸನ ಕವಿಗಳು ಘಟನೆಯ ನಿರೂಪಣೆಯನ್ನು ಕಾವ್ಯಾತ್ಮಕವಾಗಿ ನಿರೂಪಿಸಬೇಕೆಂಬ ಒಲವನ್ನು ಹೊಂದಿದ್ದರೆಂಬುದು ಶಾಸನಗಳ ಅಧ್ಯಯನದಿಂದ ಮನವರಿಕೆಯಾಗುತ್ತದೆ. ಒಂದು ಸಣ್ಣ ಪದ್ಯ, ಮುಕ್ತಕಗಳು, ವಿಸ್ತಾರವಾದ ಸುದೀರ್ಘವಾದ ಶಾಸನ ಪಾಠಗಳು, ಗದ್ಯಭಾಗಗಳು ಹೀಗೆ ಯಾವುದನ್ನೇ ಗಮನಿಸಿದರೂ ಸಹ ಅಲ್ಲಿ ಸಾಹಿತ್ಯದ ಒಲವು ಗೋಚರವಾಗುತ್ತದೆ. ತಮಟುಕಲ್ಲಿನ ಗುಣಮಧುರನ ಶಾಸನ, ಶ್ರವಣಬೆಳಗೊಳದ ನಿಸಿದಿಗಲ್ಲಿನ ಶಾಸನಗಳು, ಬಾದಾಮಿಯ ಕಪ್ಪೆ ಅರಭಟ್ಟನ ಶಾಸನ ಮುಂತಾದವುಗಳು ಚಿಕ್ಕದಾಗಿ ಚೊಕ್ಕವಾಗಿ ಸಾಹಿತ್ಯಿಕವಾಗಿ ವ್ಯಕ್ತಿತ್ವ ನಿರೂಪಣೆ ಮಾಡಿವೆ. ಹಾಗೆಯೇ ಬೊಪ್ಪಣ ಕವಿಯ ಗೊಮ್ಮಟಸ್ತುತಿ ಒಂದು ಪುಟ್ಟ ಖಂಡಕಾವ್ಯದಂತಿದೆ. ದೇಕಬ್ಬೆಯ ಶಾಸನ, ಕುವರಲಕ್ಷ್ಮನ ವೀರಗಲ್ಲು ಐತಿಹಾಸಿಕ ಮಹತ್ವವನ್ನು ಹೊಂದಿರುವುದರ ಜೊತೆಜೊತೆಗೆ ಕ್ರಮವಾಗಿ ದೇಕಬ್ಬೆ ಮತ್ತು ಕುವರಲಕ್ಷ್ಮನ ವ್ಯಕ್ತಿತ್ವವನ್ನು ಕಾವ್ಯಾತ್ಮಕವಾಗಿ ನಿರೂಪಿಸಿ ಮನಸೆಳೆಯುತ್ತವೆ. ಶ್ರವಣಬೆಳಗೊಳದ ಬುಕ್ಕರಾಯನ ಶಾಸನವು ಗದ್ಯದ ದೃಷ್ಟಿಯಿಂದ ಪ್ರಮುಖವೆನಿಸುತ್ತದೆ. ಹೀಗೆ ಕರ್ನಾಟಕದ ತುಂಬ ಹರಡಿರುವ ಅಸಂಖ್ಯಾತ ಶಾಸನಗಳು ಸಾಹಿತ್ಯಕವಾಗಿಯೂ ಮನಸೆಳೆಯುತ್ತವೆ.

### ೧.೫ : ಅಧ್ಯಯನದ ಉದ್ದೇಶ :-

ಕರ್ನಾಟಕದ ತುಂಬಾ ಹರಡಿರುವ ಕನ್ನಡ ಶಾಸನಗಳನ್ನು ಈವರೆಗೆ ವಿಷಯಾಧಾರಿತವಾಗಿ, ಪ್ರಾದೇಶಿಕವಾಗಿ, ಭಾಷಿಕವಾಗಿ ಅಧ್ಯಯನ ಮಾಡಲಾಗಿದೆ. ಆದರೆ ಶಾಸನಗಳಲ್ಲಿನ ಮತ್ತೊಂದು ಪ್ರಮುಖ ಭಾಗವಾದ ಸಾಹಿತ್ಯದ ಅಧ್ಯಯನವು ವ್ಯವಸ್ಥಿತವಾಗಿ ಸಂಶೋಧನೆಯ ವಿಧಿವಿಧಾನಗಳಿಗೆ ಅನುಗುಣವಾಗಿ ನಡೆದಿಲ್ಲವೆನ್ನಬಹುದು. ಈಗಾಗಲೇ ಕರ್ನಾಟಕದಲ್ಲಿ ಶಾಸನಗಳ ಸಂಗ್ರಹ, ಪ್ರಕಟಣೆ, ವಿಶ್ಲೇಷಣೆ, ವಿವಿಧ ಹಿನ್ನೆಲೆಯಲ್ಲಿ ಅಧ್ಯಯನಗಳು

ನಡೆದಿರುವುದನ್ನು ಈ ಹಿಂದೆ ವಿವರಿಸಲಾಗಿದೆ. ಶಾಸನಗಳಿಗೆ ಐತಿಹಾಸಿಕವಾಗಿ ಮಹತ್ವವಿರುವಂತೆಯೇ ಸಾಹಿತ್ಯಕವಾಗಿ ಸಹ ಮಹತ್ವವಿದೆ. ಅಂತಹ ಶಾಸನ ಸಾಹಿತ್ಯದ ಅಧ್ಯಯನದ ಅಗತ್ಯತೆಯಿದೆ. ಶಾಸನ ಕ್ಷೇತ್ರದ ಹಿರಿಯ ವಿದ್ವಾಂಸರಾದ ಡಾ.ಎಂ.ಚಿದಾನಂದಮೂರ್ತಿಯವರು 'ಶಾಸನ ಪದ್ಯಮಂಜರಿ' ಕೃತಿಗೆ ಬರೆದಿರುವ ಪ್ರಸ್ತಾವನೆಯಲ್ಲಿ "ಶಾಸನಗಳನ್ನು ಕಾವ್ಯವೆಂದು ಓದಬೇಕೆಂದು (ನಾನು) ಸೂಚಿಸುತ್ತಿಲ್ಲ. ಹಾಗೆ ಸೂಚಿಸುವುದು ಒಂದೇ, ಪಂಪಭಾರತದಂತಹ ಕೃತಿಗಳನ್ನು ಇತಿಹಾಸವೆಂದು ಓದಬೇಕೆಂದು ಸೂಚಿಸುವುದೂ ಒಂದೇ ಶಾಸನಗಳನ್ನು ಶಾಸನಗಳಾಗಿಯೇ ಅಭ್ಯಾಸ ಮಾಡಬೇಕು. ಪಂಪಭಾರತವನ್ನು ಕಾವ್ಯವಾಗಿಯೇ ಅಭ್ಯಾಸ ಮಾಡಬೇಕು. ಆದರೆ, ಶಾಸನಗಳನ್ನು ಓದಿದಾಗ ಆಗುವ ಅನುಭವವನ್ನೂ, ಅವುಗಳಲ್ಲಿಯ ಕಾವ್ಯತ್ವವನ್ನೂ ಗುರುತಿಸುವ ಅಗತ್ಯದ ಕಡೆ ಗಮನ ಸೆಳೆಯುವುದು (ನನ್ನ) ಮುಖ್ಯ ಉದ್ದೇಶ"[೧೪] ಎಂದು ಹೇಳಿರುವ ಮಾತು ಶಾಸನಗಳ ಸಾಹಿತ್ಯಕ ಅಧ್ಯಯನದ ಮಹತ್ವವನ್ನು ಸ್ಪಷ್ಟಪಡಿಸುತ್ತದೆ ಹಾಗೂ ಅಗತ್ಯತೆಯನ್ನು ಪ್ರತಿಪಾದಿಸುತ್ತದೆ ಎನ್ನಬಹುದು.

## ೧.೬ : ಸ್ವರೂಪ :-

ಕರ್ನಾಟಕದಲ್ಲಿ ದೊರೆತಿರುವ ಶಾಸನಗಳನ್ನು ಅಧ್ಯಯನದ ಸೌಕರ್ಯಕ್ಕಾಗಿ ಹಲವಾರು ರೀತಿಯಲ್ಲಿ ವಿಭಾಗಕ್ರಮ ಮಾಡಿರುವುದು ಕಂಡುಬರುತ್ತದೆ. ಶಾಸನತಜ್ಞರಾದ ಡಾ.ಕೆ.ವಿ.ರಮೇಶ್‌ರವರು "ಕ್ರಿ.ಪೂ.೩ನೆಯ ಶತಮಾನದಲ್ಲಿ ಪ್ರಾರಂಭವಾಗುವ ಕರ್ನಾಟಕದ ಶಾಸನ ಸಾಮಗ್ರಿಯ ಇತಿಹಾಸವನ್ನು ಐತಿಹಾಸಿಕ ಮಹತ್ತ್ವವನ್ನು (ಕ್ರಿ.ಶ.೧೦ನೆಯ ಶತಮಾನವರೆಗಿನ) ಪ್ರಾಚೀನ, (ಕ್ರಿ.ಶ.೧೧-೧೪ನೆಯ ಶತಮಾನಗಳ) ಮಧ್ಯ ಮತ್ತು (ಕ್ರಿ.ಶ.೧೪-೧೬ನೆಯ ಶತಮಾನಗಳ) ವಿಜಯನಗರ ಯುಗವೆಂಬುದಾಗಿ"[೧೫] ವಿಭಾಗಿಸಿದ್ದಾರೆ. ಮತ್ತೊಬ್ಬ ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿಯವರು "ಕ್ರಿ.ಶ.೪೫೦ರಿಂದ ೮೫೦ರವರೆಗಿನ ಅವಧಿಯನ್ನು ನೃಪತುಂಗ ಪೂರ್ವಯುಗ, ಕ್ರಿ.ಶ.೮೫೦ರಿಂದ ೧೩೫೦ರವರೆಗಿನ ಅವಧಿಯನ್ನು ನೃಪತುಂಗೋತ್ತರ ಯುಗ ಮತ್ತು ಕ್ರಿ.ಶ.೧೩೫೦ರ ನಂತರದ ಅವಧಿಯನ್ನು ವಿಜಯನಗರ ಯುಗ"[೧೬]ವೆಂದು ವಿಭಾಗಿಸಿದ್ದಾರೆ.

ಶಾಸನದ ಸಾಹಿತ್ಯವನ್ನು ಅಧ್ಯಯನ ಮಾಡುವ ಸಂದರ್ಭದಲ್ಲಿಯೂ ಸಹ ಕ್ರಿ.ಶ.೪೫೦ರಿಂದ ೮೫೦ರವರೆಗಿನ ಅವಧಿಯನ್ನು ಆರಂಭಕಾಲವೆಂದೂ, ಕ್ರಿ.ಶ.೮೫೦ರಿಂದ ೧೩೫೦ರವರೆಗಿನ ಅವಧಿಯನ್ನು ಶಾಸನ ಸಾಹಿತ್ಯದ ಸಮೃದ್ಧಿಯ ಕಾಲವೆಂದೂ ಹಾಗೂ ಕ್ರಿ.ಶ.೧೩೫೦ರ ನಂತರ ವಿಜಯನಗರದ ಅರಸರ ಕಾಲವನ್ನು ಶಾಸನ ಸಾಹಿತ್ಯ ದೃಷ್ಟಿಯಿಂದ ಅವನತಿಯ ಕಾಲವೆಂದು ಹೇಳಬಹುದು. ಸಮೃದ್ಧವಾದ ಶಾಸನ ಸಾಹಿತ್ಯವು ಕಂಡು ಬಂದಿರುವುದು

ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರ ಅವಧಿಯಲ್ಲೇ. ಆರಂಭದ ಕಾಲದಿಂದ ಕ್ರಿ.ಶ.೧೬೦೦ರ ಅವಧಿಯ ಶಾಸನ ಸಾಹಿತ್ಯದ ಏಳು–ಬೀಳನ್ನು ಗಮನಿಸುವುದು ಈ ಅಧ್ಯಯನದ ಉದ್ದೇಶವಾಗಿದೆ. ಸಮರ್ಪಕವಾದ ಮತ್ತು ವ್ಯವಸ್ಥಿತವಾದ ಅಧ್ಯಯನದ ದೃಷ್ಟಿಯಿಂದ ಒಟ್ಟು ಎಂಟು ಅಧ್ಯಾಯಗಳಲ್ಲಿ ವಿಷಯವನ್ನು ವಿವರಣಾತ್ಮಕವಾಗಿ ಮತ್ತು ವಿಶ್ಲೇಷಣಾತ್ಮಕವಾಗಿ ಮಂಡಿಸಲಾಗಿದೆ.

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಎಂಬ ಮೊದಲನೆಯ ಅಧ್ಯಾಯದಲ್ಲಿ ಈಗಾಗಲೇ ಶಾಸನಗಳ ಅರ್ಥ, ಕರ್ನಾಟಕದಲ್ಲಿ ಶಾಸನಗಳ ಅಧ್ಯಯನ ನಡೆದು ಬಂದ ಬಗೆ, ಶಾಸನ ಸಾಹಿತ್ಯ ಕುರಿತಂತೆ ನಡೆದಿರುವ ಅಧ್ಯಯನಗಳ ವಿವರಗಳು, ಶಾಸನಸಾಹಿತ್ಯದ ವ್ಯಾಪಕತೆ ಮತ್ತು ಮಿತಿ, ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿಯನ್ನು ವಿವರಿಸಲಾಗಿದೆ.

'ರಾಜಕೀಯ ಇತಿಹಾಸ'ವೆಂಬ ಎರಡನೆಯ ಅಧ್ಯಾಯದಲ್ಲಿ ಕರ್ನಾಟಕವನ್ನು ಆಳಿದ ವಿವಿಧ ರಾಜಮನೆತನ ಇತಿಹಾಸವನ್ನು ನಿರೂಪಿಸುವುದರ ಜೊತೆಗೆ ಆ ರಾಜವಂಶಗಳ ಆಳ್ವಿಕೆಯ ಕಾಲದಲ್ಲಿ ಕನ್ನಡ ಶಾಸನ ಸಾಹಿತ್ಯದ ಬೆಳವಣಿಗೆಗೆ ಇದ್ದ ಪೂರಕ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯಲ್ಲಿ ಕನ್ನಡ ಶಾಸನ ಸಾಹಿತ್ಯವು ಹಂತ ಹಂತವಾಗಿ ಬೆಳೆದು ಬಂದ ಬಗೆ ಹಾಗೂ ಶಾಸನ ರಚನೆಯಲ್ಲಿ ತೊಡಗಿಕೊಂಡಿದ್ದ ಶಾಸನಕವಿಗಳ ಇತಿಹಾಸವನ್ನು ಮೂರನೆಯ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ವರ್ಣನೆಗಳು ಎಂಬ ನಾಲ್ಕನೆಯ ಅಧ್ಯಾಯದಲ್ಲಿ ವಿವಿಧ ವಿಷಯಗಳನ್ನು ಕುರಿತಂತೆ ಬಂದಿರುವ ವರ್ಣನೆಯ ಭಾಗಗಳು, ಪದ್ಯಗದ್ಯಭಾಗಗಳನ್ನು ಗಮನಿಸಲಾಗುವುದು. ಸೂಕ್ತ ಉದಾಹರಣೆಗಳೊಂದಿಗೆ ಶಾಸನಗಳಲ್ಲಿನ ಕಾವ್ಯಸತ್ವವನ್ನು ವಿಶ್ಲೇಷಿಸಲಾಗಿದೆ.

ಅಲಂಕಾರ ಮತ್ತು ಛಂದಸ್ಸು ಎಂಬ ಐದನೆಯ ಅಧ್ಯಾಯದಲ್ಲಿ ಪ್ರಸಿದ್ಧವಾದ ಮತ್ತು ಅಪ್ರಸಿದ್ಧವಾದ ಅಲಂಕಾರಗಳು ಬಳಕೆಯಾಗಿರುವುದನ್ನು ಸೂಕ್ತ ನಿದರ್ಶನಗಳಿಂದ ನಿರೂಪಿಸಲಾಗುವುದು. ಶಾಸನಗಳಲ್ಲಿನ ಛಂದೋವೈವಿಧ್ಯಗಳು, ಶಾಸನಕವಿಗಳು ಛಂದೋ ಪ್ರಕಾರಗಳನ್ನು ಬಳಸಿದ ಬಗೆ, ನಿಯಮಪಾಲನೆ, ನಿಯಮೋಲ್ಲಂಘನೆಯನ್ನು ಸೂಕ್ತ ಉದಾಹರಣೆಗಳಿಂದ ಗಮನಿಸಲಾಗಿದೆ.

ಆರನೆಯ ಅಧ್ಯಾಯವಾದ ಭಾಷೆ ಮತ್ತು ಶೈಲಿಯಲ್ಲಿ ಆರಂಭದ ಕಾಲದ ಶಾಸನಗಳಿಗೆ ಸಂಸ್ಕೃತ ಮತ್ತು ತಮಿಳು ಭಾಷೆಯ ಸಾಹಚರ್ಯವಿದ್ದುದನ್ನು ಪರಿಶೀಲಿಸಿ ಶಾಸನದ ಭಾಷೆಯಲ್ಲಿನ ಪ್ರಮುಖ ಅಂಶಗಳನ್ನು ಸೂಕ್ತ ಉದಾಹರಣೆಗಳೊಂದಿಗೆ ಗುರುತಿಸಲಾಗಿದೆ. ಹಾಗೂ ಶೈಲಿಯ ದೃಷ್ಟಿಯಿಂದ ಶಾಸನಗಳ ಯಶಸ್ಸನ್ನು ಗಮನಿಸಲಾಗಿದೆ. ಶಾಸನ ಗದ್ಯದ ಬೆಳವಣಿಗೆಯನ್ನು ನಿರೂಪಿಸಲಾಗಿದೆ.

ಕಾವ್ಯಗಳ ಪ್ರಭಾವ ಎಂಬ ಏಳನೆಯ ಅಧ್ಯಾಯದಲ್ಲಿ ಆರಂಭದ ಕಾಲದ ಶಾಸನಗಳು ಸಾಹಿತ್ಯದ ಮೇಲೆ ಬೀರಿರಬಹುದಾದ ಪ್ರಭಾವವನ್ನು, ಆ ನಂತರದಲ್ಲಿ ಪಂಪ, ರನ್ನ ಮೊದಲಾದ ಪ್ರಮುಖ ಕವಿಗಳ ಕಾವ್ಯಗಳ ಪ್ರಭಾವವು ಶಾಸನಗಳ ರಚನೆಯ ಮೇಲೆ ಉಂಟಾಗಿರುವುದನ್ನು ವಿಶ್ಲೇಷಿಸಲಾಗಿದೆ.

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಅವಧಿಯಲ್ಲಿನ ಕನ್ನಡ ಶಾಸನಗಳಲ್ಲಿನ ಸಾಹಿತ್ಯಕ ಅಧ್ಯಯನದಿಂದ ಹೊರಹೊಮ್ಮಿದ ಫಲಿತಗಳು ಮತ್ತು ಪ್ರಮುಖ ಅಂಶಗಳನ್ನು 'ಸಮಾರೋಪ' ಎಂಬ ಎಂಟನೆಯ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

### ೧.೭ : ವ್ಯಾಪ್ತಿ :-

"ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ" ಎಂಬ ಶೀರ್ಷಿಕೆಯಲ್ಲಿ ಶಾಸನಗಳಲ್ಲಿನ ಸಾಹಿತ್ಯದ ಅಧ್ಯಯನವನ್ನು ಕೈಗೊಳ್ಳುವಾಗ ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯ ಶಾಸನಗಳನ್ನು ಪರಿಗಣಿಸಲಾಗಿದೆ. ಈ ಅಧ್ಯಯನವು ಕನ್ನಡ ಭಾಷೆಯ ಶಾಸನಗಳಿಗೆ ಮಾತ್ರ ಸೀಮಿತವಾಗಿರುತ್ತದೆ.

ಕರ್ನಾಟಕ ರಾಜ್ಯದಾದ್ಯಂತ ದೊರೆತಿರುವ ಶಾಸನಗಳ ಸಂಖ್ಯೆ ಸರಿಸುಮಾರು ೩೦,೦೦೦ ಆಗಿರುತ್ತದೆ.[೧೭] ಅಧ್ಯಯನದ ಸಂದರ್ಭದಲ್ಲಿ ಕರ್ನಾಟಕ ರಾಜ್ಯದ ಹಳೆಯ ಮೈಸೂರು ಪ್ರಾಂತ್ಯದ ಮತ್ತು ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳ ಸುಮಾರು ೭,೦೦೦ ಶಾಸನಗಳನ್ನು ಪರಿಶೀಲಿಸಲಾಗಿದೆ. ಅವುಗಳಲ್ಲಿ ಪ್ರಬಂಧದ ವಿಷಯಕ್ಕೆ ಅನುಗುಣವಾಗಿ ಕಾವ್ಯಸತ್ವ, ಸಾಹಿತ್ಯಕ ಮೌಲ್ಯಗಳು ಪ್ರಮುಖವಾಗಿರುವ ಶಾಸನಗಳನ್ನು ವಿಶೇಷವಾಗಿ ಗಮನಿಸಲಾಗಿದೆ. ಅಂದರೆ ಈ ವಿಷಯ ವ್ಯಾಪ್ತಿಯಲ್ಲಿ ಮೈಸೂರು ಪ್ರಾಂತ್ಯದ ಜಿಲ್ಲೆಗಳಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ತುಮಕೂರು, ಕೋಲಾರ, ಮೈಸೂರು, ಚಾಮರಾಜನಗರ, ಚಿತ್ರದುರ್ಗ, ದಾವಣಗೆರೆ, ಶಿವಮೊಗ್ಗ, ಚಿಕ್ಕಮಗಳೂರು, ಹಾಸನ, ಮಂಡ್ಯ, ಕೊಡಗು, ದಕ್ಷಿಣಕನ್ನಡ ಮತ್ತು ಉಡುಪಿ ಜಿಲ್ಲೆಯಲ್ಲಿ ದೊರೆತಿರುವ ಕನ್ನಡ ಶಾಸನಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಕರ್ನಾಟಕ ಶಾಸನ ಪಿತಾಮಹರೆನಿಸಿದ ಬಿ.ಎಲ್.ರೈಸ್‌ರವರು ಅಂದಿನ ಹಳೆಯ ಮೈಸೂರು ಪ್ರಾಂತ್ಯದ ಜಿಲ್ಲೆಗಳಲ್ಲಿ ದೊರೆತಿರುವ ಶಾಸನಗಳನ್ನು ಸಂಗ್ರಹಿಸಿ Epigraphia Carnatica ದ ಶಾಸನ ಸಂಪುಟಗಳನ್ನು ಪ್ರಕಟಿಸಿದರು. ಈ ಎಲ್ಲಾ ಸಂಪುಟಗಳ ಪರಿಷ್ಕೃತ ಆವೃತ್ತಿಗಳನ್ನು ಸದ್ಯ ಮೈಸೂರು ವಿಶ್ವವಿದ್ಯಾನಿಲಯವು ಪ್ರಕಟಿಸುತ್ತಿದೆ. ಅವುಗಳಲ್ಲಿ ಈಗಾಗಲೇ ಕೊಡಗು, ಶ್ರವಣಬೆಳಗೊಳ, ಮೈಸೂರು, ಮಂಡ್ಯ, ಹಾಸನ, ಚಿಕ್ಕಮಗಳೂರು ಶಾಸನಗಳು ೧೩

ಸಂಪುಟಗಳಲ್ಲಿ ಪ್ರಕಟವಾಗಿವೆ. ಈ ಜಿಲ್ಲೆಗಳಿಗೆ ಸಂಬಂಧಿಸಿದಂತೆ ಪರಿಷ್ಕೃತ ಆವೃತ್ತಿಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಹೊಸದಾಗಿ ರಚಿತವಾದ ಚಾಮರಾಜನಗರ ಜಿಲ್ಲೆಯ ಶಾಸನಗಳು ಮೈಸೂರು ಜಿಲ್ಲೆಯ ಸಂಪುಟಗಳಲ್ಲಿ ಅಡಕವಾಗಿದೆ. ಹಾಗೆಯೇ ಉಳಿದ ಜಿಲ್ಲೆಗಳಾದ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ತುಮಕೂರು, ಕೋಲಾರ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಿಗೆ ಸಂಬಂಧಿಸಿದ ಶಾಸನಗಳನ್ನು ಅವಲೋಕಿಸುವಾಗ ಬಿ.ಎಲ್.ರೈಸ್‌ರವರ ಶಾಸನಸಂಪುಟಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಹೊಸದಾಗಿ ಅಸ್ತಿತ್ವಕ್ಕೆ ಬಂದ ದಾವಣಗೆರೆ ಜಿಲ್ಲೆಯ ಶಾಸನಗಳು ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಯ ಶಾಸನ ಸಂಪುಟಗಳಲ್ಲಿ ಅಡಕವಾಗಿವೆ.[೧೮] ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಯ ಶಾಸನಗಳಿಗೆ ಸಂಬಂಧಿಸಿದಂತೆ ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್‌ನ ಸಂಪುಟಗಳನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ.

## ಅಡಿ ಟಿಪ್ಪಣಿಗಳು

೧. ಡಾ.ಎಂ.ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ದ್ವಿತೀಯ ಮುದ್ರಣ- ೧೯೭೯ ಪುಟ-೧೩

೨. ಡಾ. ಆರ್.ಶೇಷಶಾಸ್ತ್ರಿ : ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨, ಪುಟ-೨

೩. ಡಾ.ಎಂ.ಚಿದಾನಂದಮೂರ್ತಿ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ದ್ವಿತೀಯ ಮುದ್ರಣ- ೧೯೭೯ ಪುಟ-೩೧

೪. ಡಾ.ಎಂ.ಎಂ.ಕಲಬುರ್ಗಿ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೪, ಪುಟ-೧೨೭,

೫. ಆರ್.ನರಸಿಂಹಾಚಾರ್ಯ : ಶಾಸನ ಪದ್ಯ ಮಂಜರಿ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ದ್ವಿತೀಯ ಮುದ್ರಣ, (ವಿಸ್ತೃತ) ೧೯೭೫ ಪುಸ್ತಕದ ೩೨೨ನೇ ಶಾಸನ, ೧೭೯೫ನೇ ಗದ್ಯ, ಪುಟ-೩೦೦

೬. ಆರ್.ನರಸಿಂಹಾಚಾರ್ಯ : ಶಾಸನ ಪದ್ಯ ಮಂಜರಿ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ದ್ವಿತೀಯ ಮುದ್ರಣ, (ವಿಸ್ತೃತ) ೧೯೭೫ : ಪ್ರಸ್ತಾವನೆ, ಪುಟ- xxix

೭. ತೀ.ನಂ.ಶ್ರೀಕಂಠಯ್ಯ : ಭಾರತೀಯ ಕಾವ್ಯ ಮೀಮಾಂಸೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಐದನೆಯ ಮುದ್ರಣ, ೧೯೯೦ ಪುಟ-೧೨೩

ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ

ಯಥಾಸ್ಮೈ ರೋಚತೇ ವಿಶ್ವಂ ತಥೇದಂ ಪರಿವರ್ತತೇ

೮. ತೀ.ನಂ.ಶ್ರೀಕಂಠಯ್ಯ : ಭಾರತೀಯ ಕಾವ್ಯಮೀಮಾಸೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೫ನೆಯ ಮುದ್ರಣ, ೧೯೯೦, ಪುಟ-೧೪೯

೯. ರಂ.ಶ್ರೀ.ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ : ಉಷಾ ಸಾಹಿತ್ಯ ಮಾಲೆ, ಮೈಸೂರು, ಪರಿಷ್ಕೃತ ಏಳನೆಯ ಮುದ್ರಣ, ೧೯೮೪, ಪುಟ-೧

೧೦. ಕನ್ನಡ ಅಧ್ಯಯನ ಸಂಸ್ಥೆ : ಕನ್ನಡ ಸಾಹಿತ್ಯ ಚರಿತ್ರೆ : ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೫, ಎರಡನೇ ಸಂಪುಟ, ಪುಟ-೪೫೮

೧೧. ಈ ಮಾತು ರನ್ನ, ಜನ್ನ, ಬೊಪ್ಪಣಪಂಡಿತ ಮೊದಲಾದ ಪ್ರತಿಭಾವಂತ ಕವಿಗಳಿಗೆ ಅನ್ವಯಿಸುವುದಿಲ್ಲ.

೧೨. ಡಾ.ಆರ್.ಶೇಷಶಾಸ್ತ್ರೀ: ಶಾಸನ ಪರಿಚಯ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೨, ಪುಟ-೯೬

ಶಾಸನ ಮನುಸಿರ್ವ ನೆವದಿಂ।
ಲೇಸೆನಿಸಿದ ರಿಷ್ಯಶೃಂಗ ಮಹೋನ್ನತಿಯಂ ।
ಭಾಸುರಮತಿ ಬಣ್ಣಿಸಿದಂ ।
ಶ್ರೀ ಸಜ್ಜನ ತಿಲಕನೊಸೆದು ಪೊಸಗನ್ನಡದಿಂ॥

೧೩. ಡಾ.ಜಿ.ಎಸ್.ಶಿವರುದ್ರಪ್ಪ : ಶ್ರವಣಬೆಳಗೊಳ- ಒಂದು ಸಮೀಕ್ಷೆ : ಶ್ರವಣಬೆಳಗೊಳದ ಕನ್ನಡ ಶಾಸನಗಳಲ್ಲಿ ಕಾವ್ಯಗುಣ (ಲೇಖನ), ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ದ್ವಿತೀಯ ಮುದ್ರಣ, ೨೦೦೪

೧೪. ಆರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪ್ರಸ್ತಾವನೆ, ೧೯೭೫, ಪುಟ-xxxix

೧೫. ಡಾ.ಕೆ.ವಿ.ರಮೇಶ್ : ಕರ್ನಾಟಕ ಶಾಸನ ಸಮೀಕ್ಷೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧, ಪುಟ-೨೮

೧೬. ಡಾ.ಆರ್.ಶೇಷಶಾಸ್ತ್ರೀ : ಶಾಸನ ಪರಿಚಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೮೨, ಪುಟ-೯೩

೧೭. ಡಾ.ಎಂ.ಚಿದಾನಂದಮೂರ್ತಿಯವರು ಸುಮಾರು ೨೨,೦೦೦ ಶಾಸನಗಳು ದೊರೆತಿವೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. (ಡಾ.ಎಂ.ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೯, ಪುಟ-೨೫) ಹಾಗೆಯೇ ಡಾ.ಎಂ.ಎಂ.ಕಲಬುರ್ಗಿಯವರು ದೊರೆತಿರುವ ಶಾಸನಗಳ ಸಂಖ್ಯೆ ೨೫,೦೦೦ ಎನ್ನುತ್ತಾರೆ. (ಡಾ.ಎಂ.ಎಂ.ಕಲಬುರ್ಗಿ : ಶಾಸನ ಸೂಕ್ತಿಸುಧಾರ್ಣವ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೭, ಪುಟ-೧೧) ಆದರೆ ಅನಂತರದ ಕಾಲದಲ್ಲಿ ನಡೆದಿರುವ ಸಂಶೋಧನೆ, ಉತ್ಖನನ ಮೊದಲಾದವುಗಳನ್ನು ಆಧರಿಸಿ ಸುಮಾರು ೩೦,೦೦೦ ಶಾಸನಗಳು ಎಂದು ಹೇಳಬಹುದಾಗಿದೆ.

೧೮. ದಾವಣಗೆರೆ ಜಿಲ್ಲೆಯ ಹರಪನಹಳ್ಳಿ ತಾಲ್ಲೂಕಿನ ಶಾಸನಗಳನ್ನು ಅಧ್ಯಯನಕ್ಕೆ ಬಳಸಿಕೊಂಡಿಲ್ಲ. ಈ ತಾಲ್ಲೂಕು ದಾವಣಗೆರೆ ಜಿಲ್ಲೆಗೆ ಇತ್ತೀಚೆಗಷ್ಟೇ ಸೇರ್ಪಡೆಯಾಗಿದ್ದು, ಹಳೆ ಮೈಸೂರು ಪ್ರಾಂತ್ಯದ ವ್ಯಾಪ್ತಿಗೆ ಬರದಿರುವ ಕಾರಣದಿಂದ ಅಧ್ಯಯನಕ್ಕೆ ಬಳಸಿಕೊಂಡಿಲ್ಲ.

# ಅಧ್ಯಾಯ – ೨

## ರಾಜಕೀಯ ಇತಿಹಾಸ

"ಕರ್ನಾಟಕದ ರಾಜಕೀಯ ಚರಿತ್ರೆ ಏನಿಲ್ಲವೆಂದರೂ, ಕ್ರಿ.ಪೂ. ನಾಲ್ಕನೆಯ ಶತಮಾನದಿಂದ ಅಂದರೆ ಮೌರ್ಯರ ಕಾಲದಿಂದ ಆರಂಭವಾಯಿತೆಂದು ಹೇಳಲು ಸ್ಪಷ್ಟ ಆಧಾರಗಳಿದ್ದರೂ, ಅದಕ್ಕೂ ಮುಂಚೆಯೇ ಈ ಪ್ರದೇಶಕ್ಕೆ ರಾಜಕೀಯ ಸ್ಥಾನಮಾನಗಳಿದ್ದುವೆಂದು ಹೇಳಲು ಅವಕಾಶವಿದೆ. ಆದರೆ ಕರ್ನಾಟಕದಲ್ಲಿ ಮೊಟ್ಟಮೊದಲು ರಾಜ್ಯಗಳು ಸ್ಥಾಪಿತವಾದುದು. ಕ್ರಿ.ಶ.ನಾಲ್ಕನೆಯ ಶತಮಾನದಲ್ಲಿ. "ಈ ಕಾಲಕ್ಕೆ ಕರ್ನಾಟಕದ ಈ ಪ್ರದೇಶದಲ್ಲಿ ಎರಡು ರಾಜ್ಯಗಳು ಸ್ಥಾಪಿತವಾದವು. ಒಂದು ಉತ್ತರಕನ್ನಡ ಜಿಲ್ಲೆಯಲ್ಲಿಯ ಸಿರಸಿ ತಾಲ್ಲೂಕಿನ ಬನವಾಸಿಯನ್ನು ರಾಜಧಾನಿಯನ್ನಾಗಿಸಿಕೊಂಡು ಸ್ಥಾಪಿತವಾದ ಕದಂಬರಾಜ್ಯ. ಇದು ಕರ್ನಾಟಕದ ಉತ್ತರಭಾಗದ ಬಹಳಷ್ಟು ಪ್ರದೇಶವನ್ನೊಳಗೊಂಡಿದ್ದಿತು. ಇನ್ನೊಂದು ಕೋಲಾರ, ಮುಂದೆ ತಲಕಾಡು ಇವುಗಳನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸ್ಥಾಪಿತವಾದ ಗಂಗರಾಜ್ಯ. ಈ ರಾಜ್ಯ ಕರ್ನಾಟಕದ ದಕ್ಷಿಣಭಾಗವನ್ನು ಒಳಗೊಂಡಿದ್ದಿತು. ಹೀಗೆ ರಾಜ್ಯಗಳು ಎರಡಾದರೂ ಇವು ಸಮಗ್ರ ಕನ್ನಡ ಸಂಸ್ಕೃತಿಯು ಬೆಳೆಯಲು ಭದ್ರವಾದ ತಳಹದಿಯನ್ನು ಹಾಕಿದವು. ಮುಂದೆ ಆರನೆಯ ಶತಮಾನದಲ್ಲಿ ಇವೆರಡೂ ರಾಜ್ಯಗಳು ಒಂದಾಗಿ ಚಾಲುಕ್ಯ ಅರಸರಿಂದ ವಿಸ್ತರಿಸಲ್ಪಟ್ಟು ಮುಂದೆ ರಾಷ್ಟ್ರಕೂಟ ನೃಪತುಂಗ ಹೇಳಿದ "ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದು ಕನ್ನಡ"ಎಂದು ಪ್ರಸಿದ್ಧವಾಗಿ ದಖನ್ ಪ್ರಸ್ತರದ ವಿಶಾಲ ಭೂಪ್ರದೇಶದಲ್ಲಿ ವಿಸ್ತಾರವಾಗಿ ಹಬ್ಬಿ ಮುಂದೆ ಏಳೆಂಟು ನೂರು ವರ್ಷಗಳವರೆಗೆ ಒಂದೇ ಆಳ್ವಿಕೆಗೆ ಒಳಪಟ್ಟು ಭಾಷೆ, ಸಾಹಿತ್ಯ, ಕಲೆ, ಧರ್ಮ ಮುಂತಾಗಿ ಕರ್ನಾಟಕಕ್ಕೆ ವಿಶಿಷ್ಟವಾದ ಸಂಸ್ಕೃತಿ ಸಮೃದ್ಧವಾಗಿ ಬೆಳೆಯಿತು. ಇಂಥ ಬೆಳವಣಿಗೆಗೆ ಮೊದಲ ಹಂತದಲ್ಲಿ ನೀರೆರದವರು ಗಂಗರು ಮತ್ತು ಕದಂಬರು."[೧]

### ೨.೧ : ಸಾತವಾಹನ ಪೂರ್ವಾವಧಿ:–

ಕ್ರಿ.ಪೂ. ೪ – ೩ನೆಯ ಶತಮಾನದ ವೇಳೆಗೆ ಕರ್ನಾಟಕ ಒಂದು ರಾಜಕೀಯ ಘಟಕವಾಗಿತ್ತು. ಮಗಧ ರಾಜ್ಯದ ನಂದರು ಕರ್ನಾಟಕದ ಮೇಲೆ ಆಧಿಪತ್ಯ ಹೊಂದಿದ್ದರೆಂಬುದು ೧೨ನೆಯ ಶತಮಾನದ ಕರ್ನಾಟಕದ ಕೆಲವು ಶಾಸನಗಳಲ್ಲಿ ಉಕ್ತವಾಗಿದೆ. ಮೌರ್ಯರ ಚಂದ್ರಗುಪ್ತನು ಭದ್ರಬಾಹುವಿನೊಂದಿಗೆ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದನು. ಸಾಮ್ರಾಟ

ಅಶೋಕನು ತನ್ನ ಸಾಮ್ರಾಜ್ಯದ ಪ್ರಾಂತ್ಯಗಳಲ್ಲಿ ಒಂದಾದ ಕರ್ನಾಟಕದಲ್ಲೂ ತನ್ನ ಅಧಿಕಾರಿಗಳನ್ನು ನೇಮಿಸಿದ್ದನು. ಅಶೋಕನ ಶಾಸನಗಳು ಕರ್ನಾಟಕದಲ್ಲಿ ಹಲವಾರು ಕಡೆ ದೊರೆತಿವೆ.

ನಂದರು ಕರ್ನಾಟಕದಲ್ಲೂ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ್ದರೆಂಬುದು ಮೈಸೂರು ದೇಶದ ಕೆಲವು ಶಾಸನಗಳಿಂದ ತಿಳಿದುಬರುತ್ತದೆ.[೨] ಕ್ರಿ.ಪೂ.೩೨೨ರಲ್ಲಿ ಕೌಟಿಲ್ಯನ ಸಹಾಯದಿಂದ ಚಂದ್ರಗುಪ್ತಮೌರ್ಯ ನಂದರನ್ನು ಪದಚ್ಯುತಗೊಳಿಸಿ ತನ್ನ ಆಧಿಪತ್ಯವನ್ನು ಸ್ಥಾಪಿಸಿದನು. ಕರ್ನಾಟಕದ ಕೆಲವು ಭಾಗಗಳು ಮೌರ್ಯರ ವಶದಲ್ಲಿದ್ದವು. ಮೌರ್ಯ ವಂಶದ ಸ್ಥಾಪಕನಾದ ಚಂದ್ರಗುಪ್ತನು ಭದ್ರಬಾಹುಮುನಿಯ ಸಂಗಡ ಶ್ರವಣಬೆಳಗೊಳಕ್ಕೆ ಬಂದಿದ್ದನು. ಶ್ರವಣಬೆಳಗೊಳದಲ್ಲಿರುವ ಚಿಕ್ಕಬೆಟ್ಟಕ್ಕೆ ಚಂದ್ರಗಿರಿ ಎಂಬ ಹೆಸರಿದೆ. ಇದು ಚಂದ್ರಗುಪ್ತಮೌರ್ಯ ಮತ್ತು ಭದ್ರಬಾಹುಮುನಿ ಇಲ್ಲಿ ತಂಗಿದ್ದರೆಂಬುದಕ್ಕೆ ಸಾಕ್ಷಿಯಾಗಿವೆ. ಚಂದ್ರಗುಪ್ತ ಬಸದಿಯನ್ನೂ ಶ್ರವಣಬೆಳಗೊಳದಲ್ಲಿ ಕಾಣಬಹುದು. ಚಂದ್ರಗುಪ್ತಮೌರ್ಯನ ಮೊಮ್ಮಗನಾದ ಅಶೋಕ ಚಕ್ರವರ್ತಿಯ ಶಾಸನಗಳು ಕರ್ನಾಟಕದ ಮಸ್ಕಿ, ಸಿದ್ಧಾಪುರ, ಕೊಪ್ಪಳ ಮುಂತಾದ ಕಡೆಗಳಲ್ಲಿ ದೊರೆತಿದ್ದು, ಆತನ ಆಳ್ವಿಕೆಯ ಭಾಗವಾಗಿ ಕರ್ನಾಟಕವಿತ್ತು ಎಂಬುದಕ್ಕೆ ಸಾಕ್ಷಿಯಾಗಿವೆ.

**೨.೨ : ಸಾತವಾಹನರು (ಕ್ರಿ.ಪೂ.೧ನೆಯ ಶತಮಾನದಿಂದ ಕ್ರಿ.ಶ.೩ನೆಯ ಶತಮಾನ) :-**

ಮೌರ್ಯರ ಉತ್ತರಾಧಿಕಾರಿಗಳಾಗಿ ಸಾತವಾಹನರು ಕರ್ನಾಟಕವನ್ನು ಆಳಿದರು. ಈ ವಂಶದ ಕುಂತಲ ಶಾತಕರ್ಣಿ, 'ಗಾಥಾಸಪ್ತಶತಿ'ಯ ಕರ್ತೃ ಹಾಲರಾಜ ಮೊದಲಾದವರು ಕರ್ನಾಟಕವನ್ನು ಆಳಿದರು. ಸಾತವಾಹನರ ಆಳ್ವಿಕೆಯ ಕಾಲ ಕ್ರಿ.ಶ.ಸು ೨ನೆಯ ಶತಮಾನ. ಕನ್ನಡಭಾಷೆಯು ಈ ವೇಳೆಗಾಗಲೇ ಸ್ವತಂತ್ರಭಾಷೆಯಾಗಿ ಬೆಳೆದಿತ್ತು. ಹಾಲನ 'ಗಾಥಾಸಪ್ತಶತಿ'ಯಲ್ಲಿ ಕೆಲವು ಕನ್ನಡ ಪದಗಳಿವೆ. 'ಹೇರಾನಿಕ' ಎಂಬ ಕೋಶಾಧಿಕಾರಿಯ ಹೆಸರಿನ ಕನ್ನಡ ರೂಪ 'ಏರಣಿಗ' 'ಇಸಿಲ' ಎಂಬುದು ಕನ್ನಡದ ಅತಿಪ್ರಾಚೀನ ಪದ. ಇವುಗಳಿಂದ ಕನ್ನಡಭಾಷೆ ರೂಪುಗೊಳ್ಳುತ್ತಿತ್ತು ಎನ್ನಬಹುದು. ಸಾತವಾಹನ ಅರಸರ ಆಶ್ರಯಪಡೆದಿದ್ದ ಶರ್ವವರ್ಮ 'ಕಾತಂತ್ರ' ವ್ಯಾಕರಣದ ಕರ್ತೃವಾಗಿದ್ದು, ಅದು ದ್ರಾವಿಡಭಾಷೆಗಳ ವ್ಯಾಕರಣಕ್ಕೆ ಮಾದರಿಯಾಗಿತ್ತು ಎನ್ನಲಾಗಿದೆ.

**೨.೩ : ಗಂಗರು :-**

ಗಂಗರು ಆಳುತ್ತಿದ್ದ ಪ್ರದೇಶವೇ ಗಂಗವಾಡಿ. ಕುವಲಾಲಪುರ, ತಲಕಾಡು ಮತ್ತು ಮಾನ್ಯಪುರ (ಮಣ್ಣೆ) ಇವರ ರಾಜಧಾನಿಗಳಾಗಿದ್ದವು. ೧೦ನೆಯ ಶತಮಾನ ಮತ್ತು ನಂತರದ ಕೆಲವು ಶಾಸನಗಳಲ್ಲಿ ಈ ವಂಶದ ಮೂಲಪುರುಷರು ಮೊದಲು ಉತ್ತರಭಾರತದ ಅಯೋಧ್ಯಾಪುರ,

ನಂತರ ಅಹಿಚ್ಛತ್ರಪುರಗಳಿಂದ ಆಳುತ್ತಿದ್ದು ಇವರಲ್ಲಿ ದಡಿಗ ಮತ್ತು ಮಾಧವರೆಂಬಿಬ್ಬರು ಸೋದರರು ದಕ್ಷಿಣಕ್ಕೆ ವಲಸೆಬಂದಂತೆಯೂ ಆಂಧ್ರಪ್ರದೇಶದ ಕಡಪ ಜಿಲ್ಲೆಯ ಗಂಗಪೇರೂರಿನಲ್ಲಿ ನೆಲೆಸಿದ್ದು ತೊಂಬತ್ತಾರು ಸಾವಿರದ ವಿಶಾಲರಾಜ್ಯವನ್ನು ವಶಪಡಿಸಿಕೊಂಡಂತೆಯೂ ಹೇಳಿದೆ. ಆದರೆ ಇವರ ಆರಂಭದ ಶಾಸನಗಳಲ್ಲಿ ಈ ವಿವರಗಳು ಇಲ್ಲ.

ಗಂಗರನ್ನು ಜಾಹ್ನವಿಯ ಕುಲಸಂಭೂತರೆಂದು ಗಂಗಾನದಿಯ ಸಂಪರ್ಕದಿಂದ ಇವರಿಗೆ ಆ ಹೆಸರು ಬಂದಿತೆಂದು ಊಹಿಸಲಾಗಿದೆ. ಕೆಲವು ಶಾಸನಗಳು 'ದಡಿಗ, ಮಾಧವರನ್ನು ಹರಿಶ್ಚಂದ್ರನ ಮಕ್ಕಳೆಂದರೆ, ಮತ್ತೆ ಕೆಲವು ಪದ್ಮನಾಭನ ಮಕ್ಕಳೆನ್ನುತ್ತವೆ. ಹರಿಶ್ಚಂದ್ರನ ಸೊಸೆ ವಿಜಯ ಮಹಾದೇವಿ ಗರ್ಭಿಣಿಯಾಗಿದ್ದಾಗ, ಗಂಗಾನದಿಯಲ್ಲಿ ಸ್ನಾನ ಮಾಡಿದಳೆಂದೂ ಹುಟ್ಟಿದ ಮಗುವಿಗೆ ಗಂಗಾದತ್ತನೆಂದು ಹೆಸರಿಡಲಾಯಿತೆಂದೂ, ಈ ವಂಶಜರಿಗೆ ಗಂಗರೆಂದು ಹೆಸರಾಯಿತೆಂದು ತಿಳಿದುಬರುತ್ತದೆ. ಇದೇ ವಂಶದ ಪದ್ಮನಾಭನ ಮೇಲೆ ಉಜ್ಜಯಿನಿಯ ರಾಜನಾದ 'ಮಹೀಪಾಲ'ನು ದಂಡೆತ್ತಿ ಬಂದು ಇಂದ್ರದತ್ತವಾದ ಐದು ಚಿಹ್ನೆಗಳನ್ನು ತನಗೆ ಒಪ್ಪಿಸಬೇಕೆಂದು ಆಗ್ರಹ ಮಾಡಿದಾಗ ಒಪ್ಪದ ಪದ್ಮನಾಭನು ತನ್ನಿಬ್ಬರು ಮಕ್ಕಳು ಹಾಗೂ ಆಲಬ್ಬೆ ಎಂಬ ಮಗಳನ್ನು ದಕ್ಷಿಣ ದೇಶಕ್ಕೆ ಕಳುಹಿಸಿದನೆಂದು ತಿಳಿದುಬರುತ್ತದೆ. ಅವರಿಬ್ಬರೂ ಗಂಗಪೇರೂರಿಗೆ ಬಂದು ಸಿಂಹನಂದಿಯೆಂಬ ಜೈನ ಆಚಾರ್ಯನ ಮಾರ್ಗದರ್ಶನದಲ್ಲಿ ಗಂಗರಾಜ್ಯವನ್ನು ಸ್ಥಾಪಿಸಿದರು ಎಂದು ಶಾಸನೋಕ್ತ ಕಥೆಯಲ್ಲಿದೆ. ಉತ್ತರಕ್ಕೆ ಮರಂದಲೆ, ಪೂರ್ವಕ್ಕೆ ತೊಂಡೆನಾಡು, ಪಶ್ಚಿಮಕ್ಕೆ ಸಮುದ್ರ, ದಕ್ಷಿಣಕ್ಕೆ ಕೊಂಗುದೇಶ ಗಡಿಯಾಗುಳ್ಳ ರಾಜ್ಯವೇ ಗಂಗವಾಡಿ ೯೬೦೦೦.

ಗಂಗವಂಶದ ಆಳ್ವಿಕೆಯು ಕೊಂಗುಣಿವರ್ಮನಿಂದ ಕ್ರಿ.ಶ.ಸು ೩೨೫ರಲ್ಲಿ ಆರಂಭವಾಯಿತು. ಗಂಗರಾಜ್ಯ ಸ್ಥಾಪನೆಯಲ್ಲಿ ಜೈನಗುರು ಸಿಂಹನಂದಿ ಮಾರ್ಗದರ್ಶನ ನೀಡಿದರು. ಕೊಂಗುಣಿವರ್ಮನ ಮಗ ಮೊದಲನೆಯ ಮಾಧವ. ಈತನಿಗೆ ಹರಿವರ್ಮ, ಆರ್ಯವರ್ಮ ಮತ್ತು ಕೃಷ್ಣವರ್ಮರೆಂಬ ಮಕ್ಕಳಿದ್ದರು ಎಂಬ ಅಭಿಪ್ರಾಯವಿದ್ದರೂ ಸಹ ಈ ಮೂರು ಹೆಸರುಗಳು ಸಹ ಒಬ್ಬನದೇ ಎಂಬುದಾಗಿ ಡಾ.ಕೆ.ವಿ.ರಮೇಶ್ ಅಭಿಪ್ರಾಯಪಡುತ್ತಾರೆ.[೩] ಒಂದನೆಯ ಮಾಧವನ ನಂತರ ಈತನ ಮಗ ಹರಿವರ್ಮನು ಕ್ರಿ.ಶ.೩೭೫ರಿಂದ ೪೦೦ರವರೆಗೆ ಆಳ್ವಿಕೆ ನಡೆಸಿದನು. ಹರಿವರ್ಮನ ನಂತರ ಪಟ್ಟಕ್ಕೆ ಬಂದವನು ಇಮ್ಮಡಿ ಮಾಧವ. ಇವನಿಗೆ ಸಿಂಹವರ್ಮನೆಂಬ ಮತ್ತೊಂದು ಹೆಸರಿದೆ. ಈತನಿಗೆ ವಿಷ್ಣುಗೋಪ ಮತ್ತು ವೀರವರ್ಮನೆಂಬ ಸೋದರರಿದ್ದರು. ಇಮ್ಮಡಿ ಮಾಧವನ ನಂತರ ಅಧಿಕಾರಕ್ಕೆ ಬಂದ ವಿಷ್ಣುಗೋಪನು ಸುಮಾರು ೨೦ ವರ್ಷಗಳ ಕಾಲ ಗಂಗ ಸಾಮ್ರಾಜ್ಯವನ್ನು ಆಳಿದನು. ಈತನ ಮಗನಾದ ಮುಮ್ಮಡಿ ಮಾಧವನು ತಡಂಗಾಲ ಮಾಧವನೆಂದು

ಪ್ರಸಿದ್ಧನಾದವನು. ಕದಂಬ ವಂಶದ ಕಾಕುತ್ಸ್ಥವರ್ಮನ ಮಗಳನ್ನು ಮದುವೆಯಾದನು. ಇವರ ಮಗನೇ ಅವಿನೀತ.

ಅವಿನೀತನು ಚಿಕ್ಕವಯಸ್ಸಿನಲ್ಲೇ ಅಧಿಕಾರಕ್ಕೆ ಬಂದನು. ಪುನ್ನಾಟದ ದೊರೆಯಾದ ಇಮ್ಮಡಿ ಸ್ಕಂದವರ್ಮನ ಮಗಳು ಜ್ಯೇಷ್ಠಾದೇವಿ ಈತನ ಪತ್ನಿ. ವೈಯಕ್ತಿಕವಾಗಿ ಜೈನ ಮತಾವಲಂಬಿಯಾದರೂ ಈತನು ಸರ್ವಧರ್ಮ ಸಹಿಷ್ಣುವಾಗಿದ್ದನು. ಕ್ರಿ.ಶ.೪೬೯ರಿಂದ ೫೨೯ರವರೆಗೆ ೬೦ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಅವಿನೀತ ಮತ್ತು ಜ್ಯೇಷ್ಠಾದೇವಿಯ ಮಗನೇ ದುರ್ವಿನೀತ. ಅವಿನೀತನ ನಂತರ ಅಧಿಕಾರಕ್ಕೆ ಬಂದ ದುರ್ವಿನೀತನು ಕ್ರಿ.ಶ.೫೨೯ ರಿಂದ ೬೦೪ರವರೆಗೆ ಗಂಗ ಸಾಮ್ರಾಜ್ಯವನ್ನು ಆಳಿದನು. ಈತನಿಗೆ ಪುನ್ನಾಟ ದೊರೆಯಾದ ಇಮ್ಮಡಿ ಸ್ಕಂದವರ್ಮನ ರಾಜ್ಯವೂ ಸಹ ದೊರೆಯಿತು. ಸಾಹಿತ್ಯ ಕ್ಷೇತ್ರದಲ್ಲಿ ದುರ್ವಿನೀತನಿಗೆ ವಿಶೇಷ ಸ್ಥಾನವಿದೆ. ಸಂಸ್ಕೃತ ಕವಿಯಾದ ಭಾರವಿಯ 'ಕಿರಾತಾರ್ಜುನೀಯ'ದ ೧೫ನೆಯ ಸರ್ಗಕ್ಕೆ ಟೀಕೆಯೊಂದನ್ನು ಬರೆದನು. ಪೈಶಾಚೀ ಭಾಷೆಯ ಬೃಹತ್ಕಥೆಯ ಸಂಸ್ಕೃತ ರೂಪಾಂತರ, 'ಶಬ್ದಾವತಾರ'ವೆಂಬ ವ್ಯಾಕರಣ ಗ್ರಂಥವನ್ನು ಬರೆದನೆಂದು ಹೇಳಲಾಗಿದೆ. ದುರ್ವಿನೀತನು ಬಹುಶ್ರುತನೂ, ಸ್ವತಃ ಗ್ರಂಥಕರ್ತನೂ, ಕವಿಗಳು ಪಂಡಿತರಿಗೆ ಆಶ್ರಯದಾತನೂ ಆಗಿದ್ದನು. ದುರ್ವಿನೀತನ ನಂತರ ಆತನ ಮಗನಾದ ಮುಷ್ಕರನು ಆಡಳಿತ ನಡೆಸಿದನು. ಈತನ ನಂತರ ಈತನ ಮಗನಾದ ಶ್ರೀವಿಕ್ರಮನು ರಾಜನಾದನು. ಶ್ರೀವಿಕ್ರಮನಿಗೆ ಭೂವಿಕ್ರಮ ಮತ್ತು ಶಿವಮಾರನೆಂಬ ಇಬ್ಬರು ಮಕ್ಕಳು. ಶಿವಮಾರನು ಕ್ರಿ.ಶ.೬೭೯ರಲ್ಲಿ ಪಟ್ಟಕ್ಕೆ ಬಂದನು. ಶಿವಮಾರನ ತರುವಾಯ ಇವನ ಮೊಮ್ಮಗನಾದ ಶ್ರೀಪುರುಷನು ರಾಜನಾದನು. ಪರಾಕ್ರಮಿಯಾದ ಈತನು ಪಲ್ಲವರು ಮತ್ತು ಪಾಂಡ್ಯರನ್ನು ಸದೆಬಡಿದನು. ಚಲುಕ್ಯ ರಾಜ್ಯವನ್ನು ಆಕ್ರಮಿಸಿದ ನಂತರ ಗಂಗಮಂಡಲವನ್ನು ಆಕ್ರಮಿಸಲು ಮುಂದಾದ ರಾಷ್ಟ್ರಕೂಟರೊಡನೆ ಹೋರಾಡಿ ಗಂಗರಾಜ್ಯದ ಸ್ವಾತಂತ್ರ್ಯವನ್ನು ಕಾಪಾಡಿದನು. ಬಾದಾಮಿಯ ಚಲುಕ್ಯರಿಗೆ ಮತ್ತು ಗಂಗರಿಗೆ ಉತ್ತಮವಾದ ಬಾಂಧವ್ಯವಿತ್ತು. ಪರಾಕ್ರಮಿಯಾದ ಮತ್ತು ಪೆರ್ಮಾನಡಿ ಎಂದು ಬಿರುದಾಂಕಿತನಾದ ಶ್ರೀಪುರುಷನನ್ನು ಶಾಸನಗಳು ರಣಭಾಜನ, ರಾಜಕೇಸರಿ, ಭೀಮಕೋಪ ಎಂದೆಲ್ಲಾ ಬಣ್ಣಿಸಿವೆ. ಚಲುಕ್ಯ ವಂಶದ ವಿಜಯಮಹಾದೇವಿ, ನೊಳಂಬಕುಲದ ನೊಳಂಬ ಮಾಧವೆ ಇವನ ಅರಸಿಯರು. ಈತನು 'ಗಜಶಾಸ್ತ್ರ'ವೆಂಬ ಗ್ರಂಥದ ಕರ್ತೃ. ದುಗ್ಗಮಾರ ಎಱೆಯಪ್ಪ, ಇಮ್ಮಡಿ ಶಿವಮಾರ ಮತ್ತು ವಿಜಯಾದಿತ್ಯರು ಈತನ ಮಕ್ಕಳು.

ಶ್ರೀಪುರುಷನ ತರುವಾಯ ಅವನ ಮಗನಾದ ೨ನೆಯ ಶಿವಮಾರ ಅಥವಾ ಸೈಗೊಟ್ಟ ಶಿವಮಾರನು ಪಟ್ಟಕ್ಕೆ ಬಂದನು. ತಂದೆಯಂತೆಯೇ ಸ್ವಾತಂತ್ರ್ಯ ಅಪೇಕ್ಷಿಯಾಗಿದ್ದರೂ ಈತನು ದುರದೃಷ್ಟವಶಾತ್ ರಾಷ್ಟ್ರಕೂಟ ಧ್ರುವನಿಂದ ಮುದುಗುಂದೂರು ಯುದ್ಧದಲ್ಲಿ ಸೋತು ಸೆರೆಯಾದನು.

ಧ್ರುವನು ತನ್ನ ಮಗ ಕಂಬಯ್ಯನನ್ನು ಗಂಗರಾಜ್ಯಕ್ಕೆ ಆಧಿಪತಿಯನ್ನಾಗಿ ನೇಮಿಸಿದನು. ರಾಷ್ಟ್ರಕೂಟರ ಧ್ರುವ, ಗೋವಿಂದನ ಕಾಲದಲ್ಲಿ ಸ್ವತಂತ್ರನಾಗಲು ಪ್ರಯತ್ನ ಮಾಡಿದನು. ಮುಂದೆ ೧ನೆಯ ಅಮೋಘವರ್ಷನ ಅವಧಿಯಲ್ಲಿ ಸ್ವತಂತ್ರನಾಗಲು ಪ್ರಯತ್ನಿಸಿ ಕಾನಿಮೊಗೆಯೂರು ಯುದ್ಧದಲ್ಲಿ ಮಡಿದನು. ಸಾಹಿತ್ಯಪ್ರೇಮಿ ವಿದ್ವಾಂಸನಾದ ಈತನು 'ಶಿವಮಾರ ಮತ' ಅಥವಾ 'ಗಜಾಷ್ಟಕ'ವನ್ನು ಬರೆದಿದ್ದನೆಂದೂ ಅದು ಓವನಿಗೆಯೂ ಒನಕೆವಾಡೂ ಆಗಿ ಪ್ರಸಿದ್ಧವಾಗಿತ್ತೆಂದು ನಗರ ಶಾಸನದಿಂದ ತಿಳಿದುಬರುತ್ತದೆ.

ಶಿವಮಾರನಿಗೆ ಮಾರಸಿಂಹ ಮತ್ತು ೧ನೆಯ ಪೃಥ್ವೀಪತಿ ಎಂಬ ಇಬ್ಬರು ಮಕ್ಕಳಿದ್ದರು. ಮಾರಸಿಂಹನು ಯುವರಾಜನಾಗಿದ್ದಾಗಲೇ ಸತ್ತನು. ಶಿವಮಾರನು ತನ್ನ ತಮ್ಮನಾದ ವಿಜಯಾದಿತ್ಯನಿಗೆ ರಾಜ್ಯಭಾರ ವಹಿಸಿದನು. ವಿಜಯಾದಿತ್ಯನ ನಂತರ ಆತನ ಮಗ ರಾಚಮಲ್ಲನು (ಕ್ರಿ.ಶ.೮೧೬ ರಿಂದ ಕ್ರಿ.ಶ.೮೪೩) ಅಧಿಕಾರಕ್ಕೆ ಬಂದನು. ರಾಚಮಲ್ಲನು ಶಿವಮಾರನ ಕಾಲದಲ್ಲಿ ಕೈತಪ್ಪಿಹೋಗಿದ್ದ ಗಂಗರಾಜ್ಯವನ್ನು ರಾಷ್ಟ್ರಕೂಟರಿಂದ ವಶಪಡಿಸಿಕೊಂಡರೂ, ಕೆಲಭಾಗಗಳು ಅಮೋಘವರ್ಷನ ಸೇನಾಧಿಪತಿ ಬಂಕೇಶನ ಅಧೀನದಲ್ಲೇ ಉಳಿದವು. ಪ್ರಬಲರಾದ ನೊಳಂಬರೊಡನೆ ಸಂಬಂಧ ಬೆಳೆಸಲು ತನ್ನ ಮಗಳಾದ ಜಾಯಬ್ಬೆಯನ್ನು ಪೊಲಲ್ಚೋರ 'ನೊಳಂಬ ರಾಜನಿಗೆ ಕೊಟ್ಟು ಮದುವೆ ಮಾಡಿದನು. ಇವನ ತರುವಾಯ ಕ್ರಮವಾಗಿ ಇವನ ಮಗನಾದ ನೀತಿಮಾರ್ಗ ಎಱೆಗಂಗನು ಸು.೮೪೩ರಲ್ಲಿ ಮೊಮ್ಮಗ ಇಮ್ಮಡಿ ರಾಚಮಲ್ಲ ೮೭೦ರಲ್ಲಿ ಪಟ್ಟಕ್ಕೆ ಬಂದರು. ರಾಷ್ಟ್ರಕೂಟರಿಗೂ, ಗಂಗರಿಗೂ ಆಗಾಗ್ಗೆ ಯುದ್ಧಗಳಾಗುತ್ತಿದ್ದು ಎರಡು ಪಕ್ಷಗಳಿಗೂ ಜಯಾಪಜಯಗಳು ಆಗುತ್ತಿದ್ದವು. ಅಂತಿಮವಾಗಿ ಅಮೋಘವರ್ಷನು ತನ್ನ ಮಗಳಾದ ಚಂದ್ರೊಬ್ಬಲಬ್ಬೆಯನ್ನು ಎಱೆಗಂಗನ ಕಿರಿಯ ಮಗ ೧ನೆಯ ಬೂತುಗನಿಗೆ ಕೊಟ್ಟು ಮದುವೆ ಮಾಡಿ ಸಂಬಂಧ ಬೆಳೆಸಿದನು.

ಎಱೆಯಂಗನ ನಂತರ ಈತನ ಹಿರಿಯ ಮಗ ನರಸಿಂಹನು ಪಟ್ಟಕ್ಕೆ ಬಂದನು. ನರಸಿಂಹನ ನಂತರ ಮತ್ತೊಬ್ಬ ಮಗ ಮುಮ್ಮಡಿ ರಾಚಮಲ್ಲನ ಕಾಲದಲ್ಲಿ ನೊಳಂಬರು ಸ್ವತಂತ್ರರಾಗಲು ಪ್ರಯತ್ನಿಸಿದರು. ಎರೆಯಂಗನ ಮತ್ತೊಬ್ಬ ಮಗನಾದ ಇಮ್ಮಡಿ ಬೂತುಗನು ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನಿಗೆ ಹಲವಾರು ಯುದ್ಧಗಳಲ್ಲಿ ನೆರವು ನೀಡಿದನು. ಕ್ರಿ.ಶ.ಸು.೯೩೬ರಲ್ಲಿ ಕೃಷ್ಣನ ಸಹಾಯದಿಂದ ಬೂತುಗನು ಸೋದರನಾದ ರಾಚಮಲ್ಲನನ್ನು ಸೋಲಿಸಿ ಗಂಗಮಂಡಲಾಧಿಪತಿಯಾದನು. ಸತ್ಯವಾಕ್ಯ, ಗಂಗಗಾಂಗೇಯ, ಗಂಗನಾರಾಯಣ, ಜಯದುತ್ತರಂಗ, ನನ್ನಿಯಗಂಗ ಮೊದಲಾದ ಬಿರುದಾಂಕಿತನಾದ ಇಮ್ಮಡಿ ಬೂತುಗನಿಗೆ ರೇವಕನಿಮ್ಮಡಿ, ಕಲ್ಲಬ್ಬರಸಿ,

ಪದ್ದಬ್ಬರಸಿ ಎಂಬ ರಾಣಿಯರೂ, ಮರುಳ ಮಾರಸಿಂಹ ಮತ್ತು ನೀತಿಮಾರ್ಗ ಗೋವಿಂದರಸರೆಂಬ ಮಕ್ಕಳೂ ಇದ್ದರು.

ಬೂತುಗನ ನಂತರ ಮರುಳ, ಆ ನಂತರ ಇಮ್ಮಡಿ ಮಾರಸಿಂಹ ಗಂಗಾಧಿಪತಿಯಾದರು(ಕ್ರಿ.ಶ.೯೬೩). ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನ ರಾಜ್ಯವಿಸ್ತಾರ ಕಾರ್ಯದಲ್ಲಿ ಮಾರಸಿಂಹನು ಪ್ರಮುಖ ಪಾತ್ರವಹಿಸಿದ್ದನು. ಮುಮ್ಮಡಿಕೃಷ್ಣನು ಕಾಲವಾದ ನಂತರ ಅವನ ಮೊಮ್ಮಗನಾದ ನಾಲ್ಕನೆಯ ಇಂದ್ರನನ್ನು ರಾಜನನ್ನಾಗಿ ಮಾಡಲು ಮಾರಸಿಂಹ ಮತ್ತು ಆತನ ಮಂತ್ರಿ ಚಾವುಂಡರಾಯ ಸಾಕಷ್ಟು ಪ್ರಯತ್ನಿಸಿದರು. ಮಾರಸಿಂಹನು ಕ್ರಿ.ಶ.೯೭೫ರಲ್ಲಿ ಬಂಕಾಪುರದಲ್ಲಿ ಕಾಲವಾದನು. ಮಾರಸಿಂಹನಿಗೆ ಸತ್ಯವಾಕ್ಯ, ಗಂಗಕಂದರ್ಪ, ಗಂಗವಿದ್ಯಾಧರ, ಗಂಗಚೂಡಾಮಣಿ, ಗಂಗಮಾಂಡಲಿಕ, ಗಂಗವಜ್ರ, ಗುತ್ತಿಯಗಂಗ, ನೊಳಂಬಾಂತಕ, ಚಲದುತ್ತರಂಗ, ಜಗದೇಕವೀರ, ಮಂಡಲಿಕತ್ರಿಣೇತ್ರ ಇತ್ಯಾದಿ ಬಿರುದುಗಳಿವೆ. ಬ್ರಹ್ಮಕ್ಷತ್ರಿಯ ಕುಲಸಂಜಾತ, ಅಜಿತಸೇನರ ಶಿಷ್ಯನಾದ ಚಾವುಂಡರಾಯ ಈತನ ಮಂತ್ರಿ. ಈತನ ನಂತರ ಈತನ ಮಗನಾದ ನಾಲ್ಕನೆಯ ರಾಚಮಲ್ಲನು (ಕ್ರಿ.ಶ.೯೭೪ ರಿಂದ ೯೯೯)ರಾಜನಾದನು. ಈ ಹೊತ್ತಿಗೆ ಚಾಲುಕ್ಯರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದ ಇಮ್ಮಡಿ ತೈಲಪನು ಗಂಗವಾಡಿಯ ಉತ್ತರಭಾಗವನ್ನು ಬಹುತೇಕ ಆಕ್ರಮಿಸಿಕೊಂಡನು. ಮತ್ತೊಂದು ಕಡೆಯಿಂದ ಅಳಿದುಳಿದ ಗಂಗಸಾಮ್ರಾಜ್ಯವನ್ನು ಚೋಳರು ವಶಪಡಿಸಿಕೊಂಡ ಕಾರಣದಿಂದ ೧೧ನೆಯ ಶತಮಾನದ ಹೊತ್ತಿಗೆ ಗಂಗರ ಆಳ್ವಿಕೆಯ ಅಂತ್ಯವಾಯಿತು. ನಂತರದ ಕಾಲದಲ್ಲಿ ಕೆಲವು ಮಾಂಡಲಿಕರು ಗಂಗವಂಶಕ್ಕೆ ಸೇರಿದವರೆಂದು ಹೇಳಿಕೊಂಡಿದ್ದರೂ ಅವರಿಗೂ ತಲಕಾಡಿನ ಗಂಗರಿಗೂ ಇದ್ದ ಸಂಬಂಧವು ಎಂತಹುದು ಎಂಬುದು ಸ್ಪಷ್ಟವಾಗುವುದಿಲ್ಲ.

**೨.೪ : ಕದಂಬರು :-**

ತಲಕಾಡಿನ ಗಂಗರು ಕರ್ನಾಟಕದ ದಕ್ಷಿಣಭಾಗದಲ್ಲಿ ಆಳುತ್ತಿದ್ದ ಸಮಯದಲ್ಲಿಯೇ ಕರ್ನಾಟಕದ ಉತ್ತರಭಾಗದಲ್ಲಿ ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕದಂಬರು ಆಳ್ವಿಕೆ ನಡೆಸುತ್ತಿದ್ದರು. 'ಕದಂಬರ ಮೂಲವನ್ನು ಕುರಿತು ೧೧-೧೨ನೆಯ ಶತಮಾನಗಳ ಶಾಸನಗಳಲ್ಲಿ ಕೆಲವು ಕತೆಗಳು ನಿರೂಪಿತವಾಗಿದೆ. ಮುಕ್ಕಣ್ಣ ಕದಂಬ ಇವರ ಮೂಲಪುರುಷನೆಂದಿದೆ. ವಾಸ್ತವಿಕವಾಗಿ ಕದಂಬರು ಮೂಲತಃ ಕನ್ನಡಿಗರೇ ಆಗಿದ್ದು, ಕದಂಬವೃಕ್ಷವು ಇವರ ವಸತಿಯ ಸಮೀಪವಿದ್ದ ಕಾರಣದಿಂದ ಈ ವಂಶಕ್ಕೆ ಕದಂಬ ವಂಶವೆಂದು ಹೆಸರು ಬಂದಿತು. ಮಾನವ್ಯ ಗೋತ್ರಕ್ಕೆ ಸೇರಿದವರೂ ಹಾರಿತೀಪುತ್ರರೆನಿಸಿದ ವೈದಿಕ ಬ್ರಾಹ್ಮಣರು ಇವರೆಂದು ತಾಳಗುಂದದ ಶಾಸನದಿಂದ ಸ್ಪಷ್ಟವಾಗುತ್ತದೆ. ಗೋವೆಯ ಕದಂಬರ ಶಾಸನಗಳಲ್ಲಿ ತ್ರಿಲೋಚನ (ಮುಕ್ಕಣ್ಣ)

ಕದಂಬನೆಂಬುವನು ಈ ವಂಶದ ಮೂಲಪುರುಷನೆಂದೂ, ತ್ರಿಪುರಾಸುರನನ್ನು ಕೊಂದ ಬಳಿಕ ಶಿವನ ಹಣೆಯಿಂದ ಬಿದ್ದ ಬೆವರಿನಿಂದ ಈತನು ಹುಟ್ಟಿದನೆಂದೂ, ಕದಂಬ ವೃಕ್ಷದ ಕೆಳಗೆ ಜನಿಸಿದ ಕಾರಣದಿಂದ ಕದಂಬನೆನಿಸಿಕೊಂಡನೆಂಬ ಕತೆಯಿದೆ. ಕದಂಬರ ಸಮಕಾಲೀನ ಶಾಸನಗಳಲ್ಲಿ ಈ ರೀತಿಯಾದ ಕತೆಗಳಿಲ್ಲ. ಕದಂಬ ವೃಕ್ಷದ ಕಾರಣದಿಂದಾಗಿ ಈ ವಂಶಕ್ಕೆ ಕದಂಬ ಕುಲವೆಂದು ಹೆಸರು ಬಂದಿತ್ತೆನ್ನುವುದು ಹೆಚ್ಚು ಸಮರ್ಥನೀಯವಾಗಿದೆ.

ಮಯೂರವರ್ಮ(ಕ್ರಿ.ಶ.೩೨೫ ರಿಂದ ಕ್ರಿ.ಶ.೩೪೫)ನು ಕದಂಬವಂಶದ ಮೂಲಪುರುಷ. ಗುಡ್ನಾಪುರ ಶಾಸನವು ಈತನ ತಂದೆ ಬಂಧುಷೇಣ, ತಾತ ವೀರಶರ್ಮನೆಂದು ಉಲ್ಲೇಖಿಸುತ್ತದೆ. ಈತನು ವೀರಶರ್ಮನೊಂದಿಗೆ ಕಂಚಿಯ ಘಟಿಕಾಸ್ಥಾನಕ್ಕೆ ಹೋದ ಸಂದರ್ಭದಲ್ಲಿ ಪಲ್ಲವರಿಂದ ಅವಮಾನಿತನಾದನು. ಆಗ ಆತನು ಪಲ್ಲವರ ವಿರುದ್ಧ ತಿರುಗಿಬಿದ್ದು ಪಲ್ಲವರ ಗಡಿಕಾವಲಿನ ಅಧಿಕಾರಿಗಳನ್ನು ಸದೆಬಡಿದು, ಶ್ರೀಶೈಲದವರೆಗಿದ್ದ ಪ್ರದೇಶವನ್ನೂ ಬಾಣರನ್ನೂ ಸ್ವಾಧೀನಪಡಿಸಿಕೊಂಡನು. ಪಲ್ಲವರು ಈತನ ಪರಾಕ್ರಮಕ್ಕೆ ಮಣಿದು ಈತನ ಅಧಿಕಾರವನ್ನು ಒಪ್ಪಿಕೊಂಡರು. ಈ ರೀತಿಯಾಗಿ ಕದಂಬಕುಲ ಸ್ಥಾಪನೆಯಾಯಿತು. ಈತನ ರಾಜ್ಯವು ಕರ್ನಾಟಕದ ಬಿಜಾಪುರ, ಹಾಸನ, ಶಿವಮೊಗ್ಗೆಯನ್ನು ಮೇರೆಯಾಗಿ ಹೊಂದಿ, ಶ್ರೀಶೈಲದಿಂದ ಪಶ್ಚಿಮದ ಅರಬ್ಬಿಸಮುದ್ರದವರೆಗೂ ಹಬ್ಬಿತ್ತು.

ಈತನ ನಂತರ ಕಂಗವರ್ಮ, ಭಗೀರಥ, ರಘು ರಾಜ್ಯವಾಳಿದರು. ರಘುವಿನ ನಂತರ ಅವನ ತಮ್ಮನಾದ ಕಾಕುತ್ಸ್ಥವರ್ಮನು ಪಟ್ಟಕ್ಕೆ ಬಂದನು. ಈತನ ಕಾಲ ಕ್ರಿ.ಶ.೪೦೫ ರಿಂದ ೪೩೦. ಈ ವಂಶದ ಪ್ರಸಿದ್ಧ ದೊರೆಯಾದ ಕಾಕುತ್ಸ್ಥವರ್ಮನ ಸಾರ್ವಭೌಮತ್ವವನ್ನು ಉತ್ತರದ ಗುಪ್ತರೂ, ಮಧ್ಯಭಾರತದ ವಾಕಾಟಕರೂ ಗೌರವಿಸಿದರು. ಈತನು ಕುಮಾರಗುಪ್ತನ ಮಗ ಸ್ಕಂದಗುಪ್ತ, ವಾಕಾಟಕರ ನರೇಂದ್ರಸೇನ ಮತ್ತು ಗಂಗವಂಶದ ೩ನೆಯ ಮಾಧವನಿಗೆ ತನ್ನ ಹೆಣ್ಣುಮಕ್ಕಳನ್ನು ಮದುವೆ ಮಾಡಿಕೊಟ್ಟು ಗುಪ್ತರು, ವಾಕಾಟರು ಮತ್ತು ಗಂಗರೊಡನೆ ವೈವಾಹಿಕ ಸಂಬಂಧವನ್ನು ಬೆಳೆಸಿದನು.

ಕಾಕುತ್ಸ್ಥವರ್ಮನ ನಂತರ ಕದಂಬ ರಾಜ್ಯವು ಈತನ ಮಕ್ಕಳಾದ ಶಾಂತಿವರ್ಮ ಮತ್ತು ೧ನೆಯ ಕೃಷ್ಣವರ್ಮರಲ್ಲಿ ಹಂಚಿಕೆಯಾಯಿತು. ಬನವಾಸಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಶಾಂತಿವರ್ಮನೂ ಮತ್ತು ತ್ರಿಪರ್ವತವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ೧ನೆಯ ಕೃಷ್ಣವರ್ಮನೂ ಆಳತೊಡಗಿದರು. ಕದಂಬ ರಾಜ್ಯ ವಿಸ್ತರಣಾಕಾಂಕ್ಷೆಯೂ ಗಂಗರು ಮತ್ತು ಪಲ್ಲವರ ಆಗ್ರಹಕ್ಕೆ ಕಾರಣವಾಯಿತು. ತಾಳಗುಂದದ ಪ್ರಣವೇಶ್ವರ ದೇವಾಲಯದ ಸ್ತಂಭಶಾಸನವು

ಸಂಸ್ಕೃತ ಭಾಷೆಯಲ್ಲಿದ್ದು ಕವಿಕುಬ್ಜನು ರಚಿಸಿದ್ದಾನೆ. ಈ ಶಾಸನವು ಶಾಂತಿವರ್ಮನ ಆಳ್ವಿಕೆಯ ಕಾಲಕ್ಕೆ ಸೇರಿದ್ದು ಕಾಕುತ್ಥ್ಸವರ್ಮನ ಗುಣಗಾನವನ್ನು ಮಾಡಿದೆ.

ಶಾಂತಿವರ್ಮನ ನಂತರ ಮೃಗೇಶವರ್ಮನು ಪಟ್ಟಕ್ಕೆ ಬಂದನು. ಕ್ರಿ.ಶ.೪೫೫ ರಿಂದ ಕ್ರಿ.ಶ.೪೮೦ರವರೆಗೆ ಆಳಿದ ಈತನು ಕದಂಬ ರಾಜ್ಯದ ವಿಸ್ತರಣೆಗೆ ಮುಂದಾದನು. ಬನವಾಸಿಯ ಜೊತೆಗೆ ಪಲಾಸಿಕಾ (ಇಂದಿನ ಬೆಳಗಾವಿ ಜಿಲ್ಲೆಯ ಹಲಸಿ)ವನ್ನು ರಾಜಧಾನಿಯಾಗಿ ಮಾಡಿಕೊಂಡನು. ಹುಣಸೂರು, ಹಲಸಿಯ ಶಾಸನಗಳು ಈತನು ಗಂಗರು ಮತ್ತು ಪಲ್ಲವರೊಡನೆ ನಡೆಸಿದ ಹೋರಾಟವನ್ನು ದಾಖಲಿಸುತ್ತವೆ. ಈತನ ಮಗನಾದ ರವಿವರ್ಮನು ಸಹ ಈ ಯುದ್ಧಗಳಲ್ಲಿ ಪಾಲ್ಗೊಂಡಿದ್ದನು. ರವಿವರ್ಮನ ಆಳ್ವಿಕೆಯ ನಂತರ ಹರಿವರ್ಮನು ಅಧಿಕಾರಕ್ಕೆ ಬಂದನು. ಆದರೆ ಈತನು ಸೋದರ ಸಂಬಂಧಿಯಾದ ಇಮ್ಮಡಿ ಕೃಷ್ಣವರ್ಮನಿಂದ ಸೋಲಿಸಲ್ಪಟ್ಟನು. ಕಾಕುತ್ಸ್ಥವರ್ಮನ ನಂತರ ಇಬ್ಭಾಗವಾಗಿದ್ದ ಕದಂಬ ರಾಜ್ಯವು ಈ ಘಟನೆಯ ಮೂಲಕ ಒಂದಾಯಿತು. ಇಮ್ಮಡಿ ಕೃಷ್ಣವರ್ಮನ ನಂತರ ಅಜವರ್ಮ, ಭೋಗಿವರ್ಮರು ಕ್ರಮವಾಗಿ ಆಳಿದರು. ಭೋಗಿವರ್ಮನ ಕಾಲದಲ್ಲಿ ಕದಂಬ ರಾಜ್ಯವು ಬಾದಾಮಿ ಚಲುಕ್ಯರ ಸಾಮ್ರಾಜ್ಯದಲ್ಲಿ ಲೀನವಾಗುವುದರೊಂದಿಗೆ ಕದಂಬ ಆಳ್ವಿಕೆಯ ಅಂತ್ಯವಾಯಿತು.

ಕದಂಬರ ಕಾಲದ ಕನ್ನಡ ಶಾಸನಗಳು ಕಡಿಮೆ. ಕನ್ನಡದ ಪ್ರಾಚೀನ ಶಾಸನವಾದ ಹಲ್ಮಿಡಿ ಶಾಸನವು (ಕ್ರಿ.ಶ.ಸು.೪೫೦) ಕನ್ನಡ ಭಾಷೆಯ ಬೆಳವಣಿಗೆಯನ್ನು ಗುರುತಿಸುವಲ್ಲಿ ಪ್ರಮುಖವಾದುದಾಗಿದೆ. ಸುಮಾರು ಎರಡು ಶತಮಾನಗಳಿಗೂ ಹೆಚ್ಚಿನ ಕಾಲ ಆಳಿದ ಕದಂಬ ವಂಶದ ರಾಜ್ಯವು ಈಗಿನ ಬೆಳಗಾಂ, ಕಾರವಾರ, ಉತ್ತರಕನ್ನಡ, ಶಿವಮೊಗ್ಗ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡಿತ್ತು. ಕದಂಬರು ವೈದಿಕ ಮತ್ತು ಜೈನಧರ್ಮಗಳಿಗೆ ಸಮಾನವಾದ ಆಶ್ರಯವನ್ನು ನೀಡಿದರು. ಕದಂಬರು ಸಾಹಿತ್ಯ ಪೋಷಕರೂ ಆಗಿದ್ದರು. ಕವಿಕುಬ್ಜನು ರಚಿಸಿರುವ ತಾಳಗುಂದ ಶಾಸನದಲ್ಲಿ ಮಹಾಕಾವ್ಯಗಳ ಭಾಷೆ, ಅಲಂಕಾರ ವೃತ್ತಗಳೂ ಬಳಕೆಯಾಗಿವೆ. ಶಾಸನಗಳಲ್ಲಿ ಇತರ ಕವಿಗಳು ಮತ್ತು ಕೃತಿಗಳ ಉಲ್ಲೇಖವಿದ್ದರೂ ಆ ಕೃತಿಗಳು ಸಿಕ್ಕಿಲ್ಲ.

**೨.೫ : ಬಾದಾಮಿಯ ಚಲುಕ್ಯರು:–**

ಕದಂಬರಂತೆ ಬಾದಾಮಿಯ ಚಲುಕ್ಯರೂ ಸಹ ಮಾನವ್ಯಸಗೋತ್ರಕ್ಕೆ ಸೇರಿದವರು ಹಾರಿತೀಪುತ್ರರು. ಇವರದು ವರಾಹ ಲಾಂಛನವಾಗಿದೆ. ಮೂಲತಃ ಕನ್ನಡಿಗರಾದ ಇವರ ಮೂಲಪುರುಷ ಜಯಸಿಂಹ ಈ ವಂಶದ ಮೊದಲನೆಯ ರಾಜ. ಇವನ ಮಗ ರಣರಾಗ ಮತ್ತು ಮೊಮ್ಮಗ ೧ನೆಯ ಪುಲಕೇಶಿ. ಕ್ರಿ.ಶ.ಸು.೫೪೦ರಿಂದ ೫೬೬ರವರೆಗೆ ಆಳ್ವಿಕೆ ನಡೆಸಿದ ೧ನೆಯ

ಪುಲಕೇಶಿಯು ವಾತಾಪಿಯಲ್ಲಿ ದುರ್ಗವೊಂದನ್ನು ರಚಿಸಿದ. ಅಶ್ವಮೇಧಾದಿ ಯಜ್ಞಗಳನ್ನು ಮಾಡಿದನು. ೧ನೆಯ ಪುಲಕೇಶಿಗೆ ಕೀರ್ತಿವರ್ಮ ಮತ್ತು ಮಂಗಳೀಶನೆಂಬ ಇಬ್ಬರು ಮಕ್ಕಳು. ೧ನೆಯ ಪುಲಕೇಶಿಯ ನಂತರ ಕೀರ್ತಿವರ್ಮನು ಕ್ರಿ.ಶ.೫೬೬ರಲ್ಲಿ ಪಟ್ಟಕ್ಕೆ ಬಂದನು. ಈತನು ನಳರನ್ನೂ, ಮೌರ್ಯರನ್ನೂ ಮತ್ತು ಕದಂಬರನ್ನೂ ಸೋಲಿಸಿ ಸಾಮ್ರಾಜ್ಯವನ್ನು ವಿಸ್ತರಿಸಿದನು. ಕೀರ್ತಿವರ್ಮನ ಮಗನಾದ ಇಮ್ಮಡಿ ಪುಲಕೇಶಿಯು ಈತನ ಮರಣಕಾಲದಲ್ಲಿ ಅಪ್ರಾಪ್ತವಯಸ್ಕನಾದ ಕಾರಣದಿಂದ ಕೀರ್ತಿವರ್ಮನ ತಮ್ಮನಾದ ಮಂಗಳೀಶನು ರಾಜ್ಯದ ಉತ್ತರಾಧಿಕಾರಿಯಾದನು. ಮಂಗಳೀಶನು ಕಲಚುರ್ಯ ದೊರೆ ಬುದ್ಧನನ್ನೂ, ತುಳುವನಾಡಿನ ಆಳುಪರನ್ನೂ ಸೋಲಿಸಿದನು. ರೇವತಿದ್ವೀಪವನ್ನು ವಶಪಡಿಸಿಕೊಂಡನು. ಇಮ್ಮಡಿ ಪುಲಕೇಶಿಯು ಮಂಗಳೀಶನ ನಂತರ ಕ್ರಿ.ಶ.೬೧೦ರಲ್ಲಿ ಪಟ್ಟಕ್ಕೆ ಬಂದನು.

ಬಾದಾಮಿ ಚಲುಕ್ಯ ವಂಶದ ಪ್ರಸಿದ್ಧ ದೊರೆ ಇಮ್ಮಡಿ ಪುಲಕೇಶಿ ತನ್ನ ಸಾಮರ್ಥ್ಯದಿಂದ ಸಾಮ್ರಾಜ್ಯವನ್ನು ವಿಸ್ತರಿಸಿದನು. ಪರ್ಷಿಯನ್ ದೊರೆ ಖುಸ್ರುವಿನಿಂದ ಗೌರವಿತನಾದನು. ತನ್ನ ವಿರುದ್ಧ ದಂಗೆಯೆದ್ದ ಅಪ್ಪಾಯಿಕ ಮತ್ತು ಗೋವಿಂದರನ್ನು ಸದೆಬಡಿದನು. ಬನವಾಸಿಯ ಕದಂಬರು, ಅಳುಪರು, ಗಂಗರು ಇವನ ವಶರಾದರು. 'ಉತ್ತರಾಪಥೇಶ್ವರ'ನೆಂದು ಪ್ರಸಿದ್ಧನಾಗಿದ್ದ ಶ್ರೀಹರ್ಷನನ್ನು ಇಮ್ಮಡಿಪುಲಕೇಶಿಯು ನರ್ಮದಾ ನದಿಯ ತೀರದಲ್ಲಿ ಎದುರಿಸಿ 'ದಕ್ಷಿಣಪಥೇಶ್ವರ'ನೆಂದು ಕರೆಸಿಕೊಂಡಿದ್ದು ಇತಿಹಾಸದಲ್ಲಿ ಪ್ರಮುಖ ಘಟನೆಯಾಗಿದೆ. ಆ ನಂತರದಲ್ಲಿ ದಕ್ಷಿಣಕೋಸಲ, ಕಲಿಂಗ ಪ್ರಾಂತ್ಯಗಳು ಇವನ ಕೈವಶವಾದವು. ವೇಂಗಿಮಂಡಲವೆನಿಸಿದ ಪಿಷ್ಟಪುರವನ್ನು ವಶಪಡಿಸಿಕೊಂಡ ಈತನು ತನ್ನ ತಮ್ಮನಾದ ಕುಬ್ಜವಿಷ್ಣುವರ್ಧನನನ್ನು ಪ್ರಾಂತಾಧಿಕಾರಿಯಾಗಿ ನೇಮಿಸಿದ. ಮುಂದೆ ಆತನು ಪೂರ್ವ ಚಾಳುಕ್ಯ ವಂಶದ ಸ್ಥಾಪಕನಾದ. ಇಮ್ಮಡಿ ಪುಲಕೇಶಿಯು ಪಲ್ಲವರ ೧ನೆಯ ಮಹೇಂದ್ರವರ್ಮನ ಮೇಲೆ ಜಯಗಳಿಸಿದರೂ, ಆತನ ಮಗನಾದ ನರಸಿಂಹವರ್ಮನಿಂದ ಸೋಲಬೇಕಾಯಿತು. ನರಸಿಂಹವರ್ಮನು ಸು.೬೪೨ರಲ್ಲಿ ಚಲುಕ್ಯ ರಾಜಧಾನಿ ಬಾದಾಮಿಯನ್ನು ವಶಪಡಿಸಿಕೊಂಡನು.

ಇಮ್ಮಡಿ ಪುಲಕೇಶಿಯ ನಂತರ ಅವನ ಮಗನಾದ ೧ನೆಯ ವಿಕ್ರಮಾದಿತ್ಯನು ಪಲ್ಲವರನ್ನು ಚಲುಕ್ಯ ಸಾಮ್ರಾಜ್ಯದಿಂದ ಹೊರಗಟ್ಟಿ ಚಲುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದನು. ಈತನ ಹೋರಾಟಗಳಲ್ಲಿ ಈತನ ಮಕ್ಕಳಾದ ವಿನಯಾದಿತ್ಯ ಮತ್ತು ವಿಜಯಾದಿತ್ಯರು ಪ್ರಮುಖ ಪಾತ್ರ ವಹಿಸಿದರು. ವಿನಯಾದಿತ್ಯನ ನಂತರ ಕ್ರಿ.ಶ.೬೯೬ರಲ್ಲಿ ಪಟ್ಟಕ್ಕೆ ಬಂದ ವಿಜಯಾದಿತ್ಯನು ತಂದೆ ತಾತಂದಿರ ಹಾಗೆ ಪಲ್ಲವರ ವಿರುದ್ಧ ಹೋರಾಟವನ್ನು ಮುಂದುವರಿಸಿದನು. ಈ ಹೋರಾಟದಲ್ಲಿ ವಿಜಯಾದಿತ್ಯನ ಮಗ ಇಮ್ಮಡಿ ವಿಕ್ರಮಾದಿತ್ಯನು ಪ್ರಮುಖ ಪಾತ್ರ ವಹಿಸಿದನು. ಈತನು ಕಂಚಿಯ

ಪಲ್ಲವರಾಜನ ಮೇಲೆ ಯುದ್ಧಮಾಡಿ ಅಪಾರ ಸಂಪತ್ತನ್ನು ಸೂರೆಗೊಂಡು ಬ್ರಾಹ್ಮಣರಿಗೆ, ದೇವಾಲಯಗಳಿಗೆ ದಾನ ಮಾಡಿದನೆಂದು ಕಂಚಿಯ ಶಾಸನದಿಂದ ತಿಳಿದುಬರುತ್ತದೆ. ವಿಕ್ರಮಾದಿತ್ಯನ ಅನಂತರ ಅವನ ಮಗನಾದ ೨ನೆಯ ಕೀರ್ತಿವರ್ಮನು ಪಟ್ಟಕ್ಕೆ ಬಂದನು. ತಂದೆಯ ಹಾಗೆಯೇ ಪಲ್ಲವರ ವಿರುದ್ಧ ಹೋರಾಟ ಮುಂದುವರೆಸಿದ ಈತನು ಅಂತಿಮವಾಗಿ ರಾಷ್ಟ್ರಕೂಟರ ದಂತಿದುರ್ಗನಿಗೆ ಶರಣಾಗುವ ಮೂಲಕ ಬಾದಾಮಿ ಚಲುಕ್ಯರ ಆಳ್ವಿಕೆಯ ಮುಕ್ತಾಯವಾಯಿತು.

ಇವರ ಶಾಸನಗಳಲ್ಲಿ ಕನ್ನಡಕ್ಕೆ ವಿಶೇಷವಾದ ಸ್ಥಾನವಿತ್ತು. ಆದರೂ ಈ ಕಾಲದ ಕನ್ನಡ ಸಾಹಿತ್ಯ ಕೃತಿಗಳು ಯಾವುದೂ ದೊರೆತಿಲ್ಲ. ಪ್ರಖ್ಯಾತವಾದ ಐಹೊಳೆಯ ಶಾಸನದ ಕರ್ತೃ ರವಿಕೀರ್ತಿ ಇಮ್ಮಡಿ ಪುಲಕೇಶಿಯ ಆಸ್ಥಾನ ಕವಿಯಾಗಿದ್ದನು. ಈ ಶಾಸನದಲ್ಲಿ ಪುಲಕೇಶಿಯ ವಿಜಯ ಯಾತ್ರೆಯನ್ನು ಕಾವ್ಯಾತ್ಮಕವಾಗಿ ನಿರೂಪಿಸಿದ್ದಾನೆ. ಇವರಲ್ಲದೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಸಣ್ಣ ರಾಜ್ಯಗಳನ್ನು ಕಟ್ಟಿ ಅಳುಪರು, ಬಾಣರು, ನೊಳಂಬರು ಮುಂತಾದವರು ಕೆಲ ಸಮಯ ಸ್ವತಂತ್ರರಾಗಿ ಕೆಲಸಮಯ ಸಾಮಂತರಾಗಿ ಆಳ್ವಿಕೆ ನಡೆಸುತ್ತಿದ್ದರು.

**೨.೬ : ರಾಷ್ಟ್ರಕೂಟರು :–**

ಬಾದಾಮಿಯ ಚಲುಕ್ಯರ ಇಮ್ಮಡಿ ಕೀರ್ತಿವರ್ಮನ ವಿರುದ್ಧ ದಂಗೆಯೆದ್ದು ಅವನನ್ನು ಸೋಲಿಸಿದ ದಂತಿದುರ್ಗನು ರಾಷ್ಟ್ರಕೂಟ ಮನೆತನಕ್ಕೆ ಸೇರಿದವನಾಗಿದ್ದು, ಈತನಿಗಿಂತ ಮೊದಲು ದಂತಿವರ್ಮ, ೧ನೇ ಇಂದ್ರ, ೧ನೇ ಗೋವಿಂದ, ೧ನೇ ಕರ್ಕ, ೨ನೇ ಇಂದ್ರರು ಕ್ರಮವಾಗಿ ಆಳ್ವಿಕೆ ನಡೆಸಿದ್ದರು. ದಂತಿವರ್ಮನು ಈ ವಂಶದ ಮೂಲಪುರುಷ.

**ದಂತಿದುರ್ಗ:–**

ಇಮ್ಮಡಿ ಇಂದ್ರನ ಮಗನಾದ ದಂತಿದುರ್ಗನು ಬಾದಾಮಿ ಚಲುಕ್ಯರ ಇಮ್ಮಡಿ ವಿಕ್ರಮಾದಿತ್ಯನ ಸಮಕಾಲೀನ ಹಾಗೂ ಸಾಮಂತನಾಗಿದ್ದನು. ಚಲುಕ್ಯರು ನಡೆಸಿದ ಯುದ್ಧಗಳಲ್ಲಿ ಪಾಲ್ಗೊಂಡು ಕಾಂಚಿ, ಕಳಿಂಗ, ಕೋಸಲ, ಶ್ರೀಶೈಲ, ಮಾಳವ ಮತ್ತು ಲಾಟದೇಶಗಳನ್ನು ಗೆಲ್ಲಲು ಸಹಾಯಕನಾದ ದಂತಿದುರ್ಗನು ಅನಂತರದಲ್ಲಿ ಚಲುಕ್ಯರ ಇಮ್ಮಡಿ ಕೀರ್ತಿವರ್ಮನ ದುರ್ಬಲತೆಯನ್ನು ಕಂಡುಕೊಂಡು ಗುಜರಾತಿನ ಚಾಲುಕ್ಯರು, ಮಾಲವ ಮತ್ತು ಮಹಾಕೋಸಲಗಳನ್ನು ಕೈವಶಮಾಡಿಕೊಂಡನು. ಮುಂದೆ ಕೀರ್ತಿವರ್ಮನನ್ನು ಸೋಲಿಸಿ ಸ್ವತಂತ್ರನಾದ ದಂತಿದುರ್ಗನು ರಾಷ್ಟ್ರಕೂಟರ ಆಳ್ವಿಕೆಗೆ ಭದ್ರಬುನಾದಿ ಹಾಕಿದನು.

ದಂತಿದುರ್ಗನ ನಂತರ ಕ್ರಿ.ಶ.ಸುಮಾರು ೭೫೬ರಲ್ಲಿ ಅವನ ಚಿಕ್ಕಪ್ಪನಾದ ಒಂದನೇ ಕೃಷ್ಣನು ಅಧಿಕಾರಕ್ಕೆ ಬಂದನು. ಗುಜರಾತಿನಲ್ಲಿ ಆಳುತ್ತಿದ್ದ ಸೋದರ ಸಂಬಂಧಿ ಇಮ್ಮಡಿ ಕರ್ಕನನ್ನು ಸೋಲಿಸಿ, ಆ ಪ್ರದೇಶಕ್ಕೆ ತನ್ನ ಅಧಿಕಾರಿಗಳನ್ನು ನೇಮಿಸಿ, ಆ ಪ್ರಾಂತ್ಯವನ್ನು ತನ್ನ ಕೈವಶ ಮಾಡಿಕೊಂಡನು. ಬಾದಾಮಿಯ ಚಲುಕ್ಯರನ್ನು ಸಂಪೂರ್ಣವಾಗಿ ಸೋಲಿಸಿದ ಈತನು ದಕ್ಷಿಣದಲ್ಲಿ ತಲಕಾಡಿನ ಗಂಗರನ್ನು ಎದುರಿಸಿದನು. ಗಂಗರ ವಿರುದ್ಧದ ಹೋರಾಟದಲ್ಲಿ ಈತನ ಮಗನಾದ ಇಮ್ಮಡಿ ಗೋವಿಂದನು ಪ್ರಮುಖ ಪಾತ್ರವನ್ನು ವಹಿಸಿದ್ದನು. ರಾಷ್ಟ್ರಕೂಟರ ಸಾಮ್ರಾಜ್ಯವನ್ನು ವಿಸ್ತರಿಸಿದ ಕೀರ್ತಿಯು ಇವನಿಗೆ ಸಲ್ಲುತ್ತದೆ. ಎಲ್ಲೋರಾದ ಜಗತ್ಪ್ರಸಿದ್ಧ ಕೈಲಾಸನಾಥ ಗುಹಾಂತರ ದೇವಾಲಯವನ್ನು ನಿರ್ಮಿಸಿದ ಕೀರ್ತಿಯೂ ಸಹ ಇವನಿಗೆ ಸಲ್ಲುತ್ತದೆ.

ಈತನ ನಂತರ ಇಮ್ಮಡಿ ಗೋವಿಂದ, ಆ ನಂತರದಲ್ಲಿ ಒಂದನೆಯ ಕೃಷ್ಣನ ಮತ್ತೊಬ್ಬ ಮಗನಾದ ಧ್ರುವನು ಅಧಿಕಾರಕ್ಕೆ ಬರುತ್ತಾರೆ. ಕ್ರಿ.ಶ.೭೮೦ರಿಂದ ಕ್ರಿ.ಶ.೭೯೩ರ ಕೇವಲ ಹದಿಮೂರು ವರ್ಷಗಳ ಕಾಲ ಆಳ್ವಿಕೆ ನಡೆಸಿದ ಧೃವನು ದಕ್ಷಿಣಾಪಥದ ಸಾರ್ವಭೌಮನಾಗಿ ಶೌರ್ಯ ಪರಾಕ್ರಮಗಳಿಂದ ಮೆರೆದವನು. ಉತ್ತರದ ವತ್ಸರಾಜ, ವಂಗದೇಶದ ಧರ್ಮಪಾಲನನ್ನು ಸೋಲಿಸಿದನು. ಹಾಗೆಯೇ ವೇಂಗಿಯ ವಿಷ್ಣುವರ್ಧನ, ಪಲ್ಲವರ ನಂದಿವರ್ಮ, ಗಂಗವಂಶದ ಶಿವಮಾರನನ್ನು ಸೋಲಿಸಿ ತನ್ನ ಮಗನಾದ ಸ್ತಂಭ(ಕಂಬಯ್ಯ)ನನ್ನು ಗಂಗವಾಡಿಗೆ ಮಂಡಲಾಧಿಪತಿಯನ್ನಾಗಿ ನೇಮಿಸಿದನು. ಕ್ರಿ.ಶ.೭೯೩ರಲ್ಲಿ ಧೃವನು ಗತಿಸಿದಾಗ ಅವನ ಮಕ್ಕಳಾದ ಕಂಬಯ್ಯ ಮತ್ತು ಮುಮ್ಮಡಿ ಗೋವಿಂದನ ನಡುವೆ ರಾಜ್ಯಾಧಿಕಾರಕ್ಕಾಗಿ ಅಂತಃಕಲಹವುಂಟಾಗುತ್ತದೆ. ಅಂತಿಮವಾಗಿ ಮುಮ್ಮಡಿ ಗೋವಿಂದನದೇ ಮೇಲುಗೈಯಾಗುತ್ತದೆ. ಗಂಗವಾಡಿಯ ಅಧಿಕಾರಿಯಾಗಿ ಕಂಬಯ್ಯನು ಮುಂದುವರೆಯುತ್ತಾನೆ.

ಮುಮ್ಮಡಿ ಗೋವಿಂದನು(ಕ್ರಿ.ಶ.೭೯೩ರಿಂದ ೮೧೪) ಯಥಾಪ್ರಕಾರ ಸಾಮ್ರಾಜ್ಯ ವಿಸ್ತರಣೆಗೆ ತೊಡಗಿ ವಂಗದೇಶದ ಮೇಲೆ ಧಾಳಿ ಮಾಡಿ ಧರ್ಮಪಾಲ, ನಾಗಭಟ, ಚಕ್ರಾಯುಧ ಎಂಬ ಅರಸರನ್ನು ಸೋಲಿಸಿದನು. ವೇಂಗಿಮಂಡಲದ ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸಿದನು. ಈತನ ಸಾರ್ವಭೌಮತ್ವವನ್ನು ಧಿಕ್ಕರಿಸಿದ ಗಂಗ, ಪಲ್ಲವ, ಪಾಂಡ್ಯ, ಕೇರಳರನ್ನು ಬಗ್ಗುಬಡಿದನು. ಒಟ್ಟಾರೆ ಈತನ ಸಾಮ್ರಾಜ್ಯವು ಆಸೇತುಹಿಮಾಚಲ ಪರ್ಯಂತ ಹಬ್ಬಿತ್ತು. ಈತನ ಸೈನ್ಯವು ಬಲಿಷ್ಠವಾದುದಾಗಿತ್ತು. ಈತನಿಗೆ ಜಗತ್ತುಂಗ, ಜಗದ್ರುದ್ರ ಪ್ರಭೂತವರ್ಷ, ಶ್ರೀವಲ್ಲಭ, ಜಿನವಲ್ಲಭ, ಕೀರ್ತಿನಾರಾಯಣ, ತ್ರಿಭುವನಧವಳ ಮುಂತಾದ ಬಿರುದುಗಳಿವೆ. ಕ್ರಿ.ಶ.೮೧೪ರಲ್ಲಿ ಈತನು ದಿವಂಗತನಾದನು.

ಈತನ ಉತ್ತರಾಧಿಕಾರಿಯಾದ ಅಮೋಘವರ್ಷನು ಅಪ್ರಾಪ್ತವಯಸ್ಕನಾಗಿದ್ದ ಕಾರಣದಿಂದ, ಗುಜರಾತಿನ ಪ್ರಾಂತ್ಯಾಧಿಕಾರಿಯಾಗಿದ್ದ ಮುಮ್ಮಡಿ ಗೋವಿಂದನ ತಮ್ಮನ ಮಗನಾದ ಕರ್ಕನು ಅಮೋಘವರ್ಷನ ಪೋಷಕನಾಗಿ ಸಾಮ್ರಾಜ್ಯದ ಜವಾಬ್ದಾರಿಯನ್ನು ಹೊತ್ತನು.

**ಅಮೋಘವರ್ಷ ನೃಪತುಂಗ : –**

ಪ್ರಾಪ್ತ ವಯಸ್ಕನಾಗುವವರೆಗೆ ಕರ್ಕನು ರಾಜ್ಯಾಡಳಿತದ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಿದನು. ಮುಮ್ಮಡಿ ಗೋವಿಂದನ ಮರಣಾನಂತರ ಕ್ರಿ.ಶ.೮೧೪ರಲ್ಲಿ ಅಮೋಘವರ್ಷ ನೃಪತುಂಗನು ಅಧಿಕಾರಕ್ಕೆ ಬಂದನು. ನೃಪತುಂಗನು ತನ್ನ ಕಾಲದ ಸುತ್ತಮುತ್ತಲಿನ ಬಂಡಾಯಗಳನ್ನು ಸದೆಬಡಿದನು. ಹಾಗೆಯೇ ಪಲ್ಲವ, ಚಾಲುಕ್ಯ, ಚೋಳ ಹಾಗೂ ಗಂಗ ಅರಸರೊಂದಿಗೆ ಸ್ನೇಹಪೂರ್ಣ ಸಂಬಂಧವನ್ನು ಬೆಳೆಸಿದನು. ಹಿಂದಿನಿಂದಲೂ ಬೆಳೆದು ಬಂದಿದ್ದ ಗಂಗರೊಡನೆಯ ವೈಮನಸ್ಯವನ್ನು ತಪ್ಪಿಸುವುದಕ್ಕಾಗಿ ಎಱೆಯಂಗನ ಮಗನಾದ ಬೂತುಗನಿಗೆ ತನ್ನ ಮಗಳಾದ ಚಂದ್ರೋಬಲಬ್ಬೆಯನ್ನು ಕೊಟ್ಟು ವಿವಾಹ ಮಾಡಿದನು.

ಅಮೋಘವರ್ಷ ನೃಪತುಂಗನ ಹೆಸರು ಚಿರಸ್ಥಾಯಿಯಾಗಿ ಉಳಿದಿರುವುದು ಆತನು ಸಾಹಿತ್ಯ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ಮಾಡಿದ ಸಾಧನೆಯಿಂದ. ಜೈನ ಮತಾವಲಂಬಿಯಾದ ಈತನು ಸಾಹಿತ್ಯ ಕಲೆಗಳ ಅಭಿವೃದ್ಧಿಗೆ ಗಮನವಿತ್ತನು. ಕನ್ನಡದ ಮೊದಲನೆಯ ಲಕ್ಷಣ ಗ್ರಂಥವಾದ 'ಕವಿರಾಜಮಾರ್ಗ'ವನ್ನು ಈತನ ಆಸ್ಥಾನ ಕವಿಯಾದ ಶ್ರೀವಿಜಯನು ರಚಿಸಿದನು. 'ಪೂರ್ವಪುರಾಣ'ದ ಕರ್ತೃವಾದ ಜಿನಸೇನನು ಈತನ ಗುರು. ಈ ಜಿನಸೇನನು 'ಪಾರ್ಶ್ವಾಭ್ಯುದಯ' ಎಂಬ ಮತ್ತೊಂದು ಕೃತಿಯನ್ನೂ ರಚಿಸಿದ್ದಾನೆ. ಶಾಕಟಾಯನನೆಂಬ ಜೈನವೈಯಾಕರಣಿಯು 'ಶಬ್ದಾನುಶಾಸನ'ವನ್ನೂ ಅದಕ್ಕೆ 'ಅಮೋಘವೃತ್ತಿ'ಯೆಂಬ ಟೀಕಾಗ್ರಂಥವನ್ನೂ ದೊರೆಯ ನೆನಪಿಗಾಗಿ ರಚಿಸಿದನು. 'ಗಣಿತಸಾರಸಂಗ್ರಹ'ದ ಕರ್ತೃ ಮಹಾವೀರಾಚಾರ್ಯನು ಅಮೋಘವರ್ಷನನ್ನು ಸಾರ್ವಭೌಮನೆಂದು ಕರೆದಿದ್ದಾನೆ. ಜೈನ ಮತಾವಲಂಬಿಯಾದರೂ ಸಹ ವೈದಿಕ, ಬೌದ್ಧಧರ್ಮಗಳನ್ನು ಸರಿಸಮವಾಗಿ ಗೌರವಿಸಿದನು. 'ಪ್ರಶ್ನೋತ್ತರ ರತ್ನಮಾಲಿಕಾ' ಎಂಬ ಸಂಸ್ಕೃತ ಗ್ರಂಥವನ್ನು ಈತನು ರಚಿಸಿದ್ದನೆನ್ನಲಾಗಿದೆ. ನೃಪತುಂಗ, ಅತಿಶಯಧವಳ, ವೀರನಾರಾಯಣ ಶ್ರೀವಲ್ಲಭ, ರಟ್ಟಮಾರ್ತಾಂಡ ಮೊದಲಾದ ಬಿರುದುಗಳನ್ನು ಹೊಂದಿದ್ದ ಈತನು ಸುದೀರ್ಘಕಾಲ ಆಳ್ವಿಕೆಯನ್ನು ನಡೆಸಿ ಕ್ರಿ.ಶ.೮೭೮ರಲ್ಲಿ ಮರಣ ಹೊಂದಿದನು.

ನೃಪತುಂಗನ ನಂತರ ಕ್ರಿ.ಶ.೮೭೮ರಲ್ಲಿ ಇಮ್ಮಡಿ ಕೃಷ್ಣನು ಅಧಿಕಾರಕ್ಕೆ ಬಂದನು. ಈತನು ಸದಾಕಾಲ ಯುದ್ಧದಲ್ಲಿ ನಿರತನಾಗಿರಬೇಕಾಗಿ ಬಂದಿತು. ಈತನ ನಂತರ ಈತನ ಮಗನಾದ

ಜಗತ್ತುಂಗ ಅಧಿಕಾರಕ್ಕೆ ಬಂದನು. ಆ ನಂತರದಲ್ಲಿ ಮುಮ್ಮಡಿ ಇಂದ್ರನು ಕ್ರಿ.ಶ.೯೧೪ರಲ್ಲಿ ಅಧಿಕಾರಕ್ಕೆ ಬಂದನು. ಉತ್ಸಾಹಶಾಲಿಯಾದ ಈತನು ಪರಮಾರರ ಉಪೇಂದ್ರನನ್ನು ಸೋಲಿಸಿದನು. ಪ್ರತೀಹಾರ ಭೋಜ ಮತ್ತು ಮಹೀಪಾಲರ ಅಂತಃಕಲಹವನ್ನು ಬಳಸಿಕೊಂಡ ಇಂದ್ರನು ಕಾನ್ಯಕುಬ್ಜವನ್ನು ಗೆದ್ದನು. ವೇಂಗಿಯ ಪೂರ್ವಚಾಳುಕ್ಯರ ರಾಜ್ಯದಲ್ಲಿ ಉಂಟಾದ ಅಂತಃಕ್ಷೋಭೆಯಲ್ಲಿ ಹಸ್ತಕ್ಷೇಪ ಮಾಡಲು ಮುಂದಾದನು. ಈತನ ನಂತರದಲ್ಲಿ ಈತನ ಮಕ್ಕಳಾದ ಎರಡನೆಯ ಅಮೋಘವರ್ಷ ಮತ್ತು ಆ ನಂತರ ನಾಲ್ವಡಿ ಗೋವಿಂದನು ಅಧಿಕಾರಕ್ಕೆ ಬಂದರು. ಆದರೆ ಪ್ರಜಾನುರಾಗವನ್ನು ಗಳಿಸಲು ವಿಫಲನಾದ ಕಾರಣದಿಂದ ನಾಲ್ವಡಿ ಗೋವಿಂದನನ್ನು ಗಂಗರ ಇಮ್ಮಡಿ ಬೂತುಗ, ಚಾಲುಕ್ಯರ ಅರಿಕೇಸರಿ ಮೊದಲಾದವರು ವಿರೋಧಿಸಿ ಮುಮ್ಮಡಿ ಇಂದ್ರನ ತಮ್ಮನಾದ ಮುಮ್ಮಡಿ ಅಮೋಘವರ್ಷನನ್ನು ಪಟ್ಟಕ್ಕೆ ತಂದರು. ರಾಜ್ಯಾಡಳಿತದಲ್ಲಿ ಹೆಚ್ಚಿನ ಆಸಕ್ತಿಯನ್ನು ವಹಿಸದೆ ಈತನು ವೈರಾಗ್ಯಪರನಾಗಿದ್ದನು. ಹೀಗಾಗಿ ಈತನ ಮಗನಾದ ಮುಮ್ಮಡಿ ಕೃಷ್ಣನು ರಾಜ್ಯಭಾರದ ಹೊಣೆಯನ್ನು ಹೊತ್ತನು. ಗಂಗರ ಇಮ್ಮಡಿ ಬೂತುಗನು ರಾಚಮಲ್ಲನಿಂದ ಗಂಗವಾಡಿಯನ್ನು ಪಡೆಯಲು ಈತನು ಸಹಕರಿಸಿದನು. ಕ್ರಿ.ಶ.೯೩೯ರಲ್ಲಿ ಮುಮ್ಮಡಿ ಅಮೋಘವರ್ಷನು ಮರಣಹೊಂದಿದಾಗ ಮುಮ್ಮಡಿ ಕೃಷ್ಣನು ಅಧಿಕೃತವಾಗಿ ಅರಸನಾದನು. ತನ್ನ ಪೂರ್ವಜರಂತೆ ಈತನೂ ಸಹ ಸಾಮ್ರಾಜ್ಯವನ್ನು ವಿಸ್ತರಿಸುವ ಆಕಾಂಕ್ಷೆಯನ್ನು ಹೊಂದಿದ್ದನು. ಗಂಗರ ಬೂತುಗನು ಈ ಕಾರ್ಯದಲ್ಲಿ ನೆರವನ್ನಿತ್ತನು. ಉತ್ತರ ಆರ್ಕಾಟ್ ಜಿಲ್ಲೆಯ ತಕ್ಕೋಲಂ ಎಂಬಲ್ಲಿ ರಾಷ್ಟ್ರಕೂಟರಿಗೆ ಮತ್ತು ಚೋಳರಿಗೆ ನಡೆದ ಪ್ರಸಿದ್ಧ ಯುದ್ಧದಲ್ಲಿ ಚೋಳರನ್ನು ಸೋಲಿಸಿದನು. 'ಚೋಳ' ಸಾಮ್ರಾಜ್ಯದ ಕೆಲವಷ್ಟು ಭಾಗಗಳು ಈತನ ವಶವಾದವು. ಈ ಯುದ್ಧದಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸಿದ್ದ ಇಮ್ಮಡಿ ಗಂಗಬೂತುಗನನ್ನು ಮೆಚ್ಚಿದ ರಾಷ್ಟ್ರಕೂಟ ದೊರೆಯು ಬನವಾಸಿ ಪನ್ನಿರ್ಚ್ಛಾಸಿರ, ಬೆಳ್ವೊಲ ಪುರಿಗೆರೆಯ ಆಧಿಪತ್ಯವನ್ನು ಆತನಿಗೆ ವಹಿಸಿದನು.

ಬೂತುಗನ ಮಗನಾದ ಇಮ್ಮಡಿ ಮಾರಸಿಂಹನು ಮುಮ್ಮಡಿ ಕೃಷ್ಣನ ಉತ್ತರದೇಶದ ದಿಗ್ವಿಜಯದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದನು. ಉತ್ತರದಲ್ಲಿ ಚಂದೇಲರನ್ನು, ಗೂರ್ಜರರನ್ನು, ಪ್ರತೀಹಾರರನ್ನು, ಪರಮಾರ ವಂಶದ ಸೀಯಕ ಹರ್ಷನನ್ನು ಸೋಲಿಸಿದನು. ಜಬ್ಬಲ್ಪುರದ ಸಮೀಪದಲ್ಲಿರುವ ಜೂರಾ ಎಂಬಲ್ಲಿ ದೊರೆತ ಪ್ರಶಸ್ತಿ ಶಾಸನವೊಂದು[6] ಮುಮ್ಮಡಿ ಕೃಷ್ಣನ ಪರಾಕ್ರಮವನ್ನು ಮತ್ತು ವ್ಯಕ್ತಿತ್ವವನ್ನು ಬಣ್ಣಿಸಿದೆ. ಚತುರ ಸೇನಾನಿ, ಆಡಳಿತಪಟುವಾಗಿದ್ದ ಈತನು ಬಹುತೇಕ ಯುದ್ಧಗಳಲ್ಲಿ ಜಯಗಳಿಸಿದನು. ಈತನ ಆಳ್ವಿಕೆಯಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಈತನ ಕಾಲ ಕನ್ನಡ ಸಾಹಿತ್ಯದಲ್ಲಿ ಚಿರಸ್ಮರಣೀಯವಾದುದು. ಕನ್ನಡದ ರತ್ನತ್ರಯರು ಮತ್ತು ಕವಿಚಕ್ರವರ್ತಿಗಳಲ್ಲಿ ಒಬ್ಬನಾದ ಪೊನ್ನನು ಈ ಕಾಲಕ್ಕೆ ಸೇರಿದವನು.

ಕೃಷ್ಣನು ಕ್ರಿ.ಶ.೯೬೭ರಲ್ಲಿ ಗತಿಸಿದನು. ಈತನ ಉತ್ತರಾಧಿಕಾರಿಗಳು ಸಮರ್ಥರಲ್ಲದ ಕಾರಣದಿಂದಾಗಿ ರಾಷ್ಟ್ರಕೂಟರ ಸಾಮ್ರಾಜ್ಯವು ಪತನವಾಯಿತು. ಕೃಷ್ಣನ ಮಗನು ಗತಿಸಿದ ನಂತರ, ಕೃಷ್ಣನ ತಮ್ಮ ಕೊಟ್ಟಿಗನು ರಾಜನಾದನು. ಆ ನಂತರ ಕೊಟ್ಟಿಗನ ತಮ್ಮ ನಿರುಪಮನ ಮಗನಾದ ಎರಡನೆಯ ಕರ್ಕನು ರಾಜನಾದನು. ಆದರೆ ಕ್ರಿ.ಶ.೯೭೩ರಲ್ಲಿ ಚಾಲುಕ್ಯ ಮನೆತನಕ್ಕೆ ಸೇರಿದ ಇಮ್ಮಡಿ ತೈಲಪನು ದಂಗೆಯೆದ್ದು ರಾಷ್ಟ್ರಕೂಟರನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಪುನಃ ಪ್ರತಿಷ್ಠಾಪಿಸಿದನು. ರಾಷ್ಟ್ರಕೂಟರಿಗೆ ನಿಷ್ಠನಾಗಿದ್ದ ಗಂಗಮಾರಸಿಂಹನು ಕೃಷ್ಣನ ಮೊಮ್ಮಗನಾದ ನಾಲ್ಕನೆಯ ಇಂದ್ರನನ್ನು ಬಂಕಾಪುರಕ್ಕೆ ಒಯ್ದು ಪಟ್ಟಾಭಿಷೇಕ ನೆರವೇರಿಸಿ ರಾಷ್ಟ್ರಕೂಟ ರಾಜ್ಯದ ಅಸ್ತಿತ್ವವನ್ನು ಸಾರಲು ಪ್ರಯತ್ನಿಸಿದರೂ ಸಹ ಅದು ಯಶಸ್ವಿಯಾಗದೆ ಕ್ರಿ.ಶ.೯೭೩ರಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಅಸ್ತಂಗತವಾಯಿತು.

ರಾಷ್ಟ್ರಕೂಟರ ಆಳ್ವಿಕೆಯ ಕಾಲವು ಕರ್ನಾಟಕದಲ್ಲಿ ಜೈನಧರ್ಮದ ಬೆಳವಣಿಗೆಯ ದೃಷ್ಟಿಯಿಂದ ಗಮನಾರ್ಹವಾದುದು. ಹಾಗೆಯೇ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ. ಸಂಸ್ಕೃತದಲ್ಲಿ ನಳಚಂಪುವನ್ನು ಬರೆದ ತ್ರಿವಿಕ್ರಮ, ಯಶಸ್ತಿಲಕ ಬರೆದ ಸೋಮದೇವ, ಧವಲ ಮತ್ತು ಜಯಧವಲಗಳ ಕರ್ತೃಗಳಾದ ವೀರಸೇನ ಮತ್ತು ಜಿನಸೇನಮುನಿಗಳು ಈ ಕಾಲದಲ್ಲಿ ಜೀವಿಸಿದ್ದರು. ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನು ಸ್ವತಃ ವಿದ್ವಾಂಸನೂ, ಸಾಹಿತ್ಯ ಪೋಷಕನೂ ಆಗಿದ್ದನು. ಈತನ ಕಾಲದಲ್ಲಿ ಕನ್ನಡದ ಮೊದಲನೆಯ ಲಕ್ಷಣಗ್ರಂಥವಾದ 'ಕವಿರಾಜಮಾರ್ಗ'ವು ಶ್ರೀವಿಜಯಕವಿಯಿಂದ ರಚಿತವಾಯಿತು. ಕನ್ನಡದ ಮತ್ತೊಬ್ಬ ಪ್ರಮುಖ ಕವಿಯಾದ ಪೊನ್ನನು ಮುಮ್ಮಡಿಕೃಷ್ಣನಿಂದ ಕವಿಚಕ್ರವರ್ತಿ ಎಂದು ಬಿರುದು ಪಡೆದವನು. ಕನ್ನಡ ಸಾಹಿತ್ಯದ ಆದಿಕವಿಯಾದ ಪಂಪನು ರಾಷ್ಟ್ರಕೂಟರ ಮಾಂಡಲಿಕರಲ್ಲೊಬ್ಬನಾದ ಅರಿಕೇಸರಿಯ ಆಸ್ಥಾನ ಕವಿಯಾಗಿದ್ದನು. ಶಾಸನ ಸಾಹಿತ್ಯ ದೃಷ್ಟಿಯಿಂದಲೂ ರಾಷ್ಟ್ರಕೂಟರ ಕಾಲವು ಗಮನಾರ್ಹವಾಗಿದೆ.

### ೨.೭ : ಕಲ್ಯಾಣದ ಚಾಲುಕ್ಯರು:-

ರಾಷ್ಟ್ರಕೂಟರಿಂದ ಹಿಂದೆ ಸರಿದಿದ್ದ ಬಾದಾಮಿಯ ಚಲುಕ್ಯರ ಉತ್ತರಾಧಿಕಾರಿಗಳಾಗಿ ಕರ್ನಾಟಕದ ಇತಿಹಾಸದಲ್ಲಿ ಕಾಣಿಸಿಕೊಂಡವರು ಕಲ್ಯಾಣದ ಚಾಲುಕ್ಯರು. ಇಮ್ಮಡಿ ತೈಲಪನು ಕ್ರಿ.ಶ.೯೭೩ರಲ್ಲಿ ರಾಷ್ಟ್ರಕೂಟರ ಆಳ್ವಿಕೆಯನ್ನು ಕೊನೆಗಾಣಿಸಿ ಅಧಿಕಾರಕ್ಕೆ ಬರುವುದರೊಂದಿಗೆ ಈ ವಂಶದ ಆಳ್ವಿಕೆಯು ಆರಂಭವಾಗುತ್ತದೆ.

ಇಮ್ಮಡಿ ತೈಲಪನು ರಾಷ್ಟ್ರಕೂಟರ ಸಾಮಂತನಾಗಿದ್ದವನು. ಆ ನಂತರದಲ್ಲಿ ತರ್ದವಾಡಿ ಸಾಸಿರದ ಪ್ರಾಂತವನ್ನು ಆಳಲು ತೊಡಗಿ ಮಹಾಸಾಮಂತನಾದ ಈತನು ಹಂತಹಂತವಾಗಿ ಪದವಿಗೇರುತ್ತಾ ಅಂತಿಮವಾಗಿ ಕ್ರಿ.ಶ.೯೭೩ರಲ್ಲಿ ರಾಷ್ಟ್ರಕೂಟರ ಕರ್ಕನನ್ನು ಸೋಲಿಸಿ ಚಾಲುಕ್ಯ ಸಾಮ್ರಾಜ್ಯವನ್ನು ಪುನಃ ಸ್ಥಾಪಿಸಿದ ಕೀರ್ತಿಯು ಇಮ್ಮಡಿ ತೈಲಪನಿಗೆ ಸಲ್ಲುತ್ತದೆ. ಆದರೆ ಗಂಗಮಾರಸಿಂಹನು ರಾಷ್ಟ್ರಕೂಟರಿಗೆ ನಿಷ್ಠನಾಗಿದ್ದು, ತೈಲಪನನ್ನು ವಿರೋಧಿಸುತ್ತಲೇ ಬಂದನು. ಆತನ ಮಕ್ಕಳು ಸಹ ವಿರೋಧಿಗಳಾಗಿದ್ದರು. ಅಂತಿಮವಾಗಿ ತೈಲಪನು ಗಂಗರ ಪಾಂಚಾಲದೇವನನ್ನು ಸೋಲಿಸಿ ಕ್ರಿ.ಶ.೯೭೭ರ ಸುಮಾರಿಗೆ ತನ್ನ ಅಧಿಕಾರವನ್ನು ಭದ್ರಪಡಿಸಿಕೊಂಡನು. ದಕ್ಷಿಣ ಭಾರತದಲ್ಲಿ ಪ್ರಬಲರಾಗುತ್ತಿದ್ದ ಚೋಳರು ಗಂಗವಾಡಿಯನ್ನು ಆಕ್ರಮಿಸುತ್ತಿದ್ದಂತೆಯೇ ಚಾಲುಕ್ಯರು ಮತ್ತು ಚೋಳರು ಕದನರಂಗದಲ್ಲಿ ಎದುರಾದರು. ಅಂತಿಮವಾಗಿ ಆಹವಮಲ್ಲ ತೈಲಪನು ಚೋಳನನ್ನು ಕ್ರಿ.ಶ.೯೯೨ರಲ್ಲಿ ಸೋಲಿಸಿದನು. ಹಾಗೆಯೇ ಪರಮಾರವಂಶದ ಮುಂಜನನ್ನು ಸೋಲಿಸಿ ಸೆರೆಹಿಡಿದ ಈತನ ಸಾಹಸದಲ್ಲಿ ಯುವರಾಜನಾದ ಇಜಿವಬೆಡಂಗ ಸತ್ಯಾಶ್ರಯನು ನಿರ್ಣಾಯಕ ಪಾತ್ರವನ್ನು ವಹಿಸಿದ್ದನು. ಆರನೆಯ ವಿಕ್ರಮಾದಿತ್ಯನ ಗದಗಿನ ಶಾಸನವು ಈತನ ಸಾಧನೆಗಳನ್ನು ನಿರೂಪಿಸಿದೆ. ೨೪ವರ್ಷಗಳ ಕಾಲ ಆಳಿದ ತೈಲಪನು ಕ್ರಿ.ಶ.೯೯೭ರಲ್ಲಿ ಮರಣಹೊಂದಿದನು. ಸತ್ಯಾಶ್ರಯ ಮತ್ತು ದಶವರ್ಮ ಈತನ ಇಬ್ಬರು ಮಕ್ಕಳು.

ಇಮ್ಮಡಿ ತೈಲಪನ ನಂತರ ಇಜಿವಬೆಡಂಗ ಸತ್ಯಾಶ್ರಯನು ಕ್ರಿ.ಶ.೯೯೭ರಲ್ಲಿ ಅಧಿಕಾರಕ್ಕೆ ಬಂದನು. ಚೋಳರ ಜೊತೆಗಿನ ಕಾದಾಟವು ಈತನ ಕಾಲದಲ್ಲೂ ಮುಂದುವರೆಯಿತು. ಸಾಕಷ್ಟು ಕೋಲಾಹಲವೆಬ್ಬಿಸಿದ ರಾಜೇಂದ್ರಚೋಳನನ್ನು ಸೋಲಿಸಿದನು. ಕೊಂಕಣದಲ್ಲಿ ಮಾಂಡಲಿಕನಾಗಿದ್ದ ಶಿಲಾಹಾರ ಅಪರಾಜಿತನನ್ನು ಸೋಲಿಸಿದನು. ಹಾಗೆಯೇ ಗುಜರಾತಿನ ಚಾಲುಕ್ಯ ಮೂಲರಾಜನ ವಿರುದ್ಧ ಸಹ ದಂಡೆತ್ತಿದನು. ಹೀಗೆ ಸಾಹಸಿಯಾಗಿ ಮೆರೆದ ಇಜೆವಬೆಡಂಗನು ಕವಿಚಕ್ರವರ್ತಿಯೆಂದು ಬಿರುದನ್ನಿತ್ತು ರನ್ನ ಕವಿಗೆ ಆಶ್ರಯ ನೀಡಿದ್ದನು. ಇಜೆವಬೆಡಂಗ, ಅಕಳಂಕಚರಿತ್ರ, ಸಾಹಸಭೀಮ ಮೊದಲಾದ ಬಿರುದುಗಳನ್ನು ಹೊಂದಿದ್ದ ಈತನನ್ನು ರನ್ನಕವಿಯು 'ಸಾಹಸಭೀಮವಿಜಯಂ' ಅಥವಾ 'ಗದಾಯುದ್ಧ' ಕೃತಿಯ ನಾಯಕನಾದ ಭೀಮನಿಗೆ ಹೋಲಿಸಿ ಕೃತಿಯ ರಚನೆ ಮಾಡಿದ್ದಾನೆ.

ಸತ್ಯಾಶ್ರಯನ ಮಗಳಂದಿರಾದ ಮಹಾದೇವಿಯನ್ನು ನೊಳಂಬಕುಲದ ಇಜೆವನೊಳಂಬ ರಾಜನಿಗೆ ಮತ್ತು ಪಂಪಾದೇವಿಯನ್ನು ಕುಂದಮರಸನಿಗೂ ಕೊಟ್ಟು ಮದುವೆ ಮಾಡಿಕೊಡಲಾಗಿತ್ತು. ಸತ್ಯಾಶ್ರಯನಿಗೆ ಗಂಡುಮಕ್ಕಳಿಲ್ಲದ ಕಾರಣ ದಶವರ್ಮನ ಮಗನಾದ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದನು. ಈತನ ನಂತರ ಈತನ ಸಹೋದರ ಅಯ್ಯಣ, ಆ ನಂತರ ಇಮ್ಮಡಿ ಜಯಸಿಂಹನು ಅಧಿಕಾರಕ್ಕೆ ಬಂದರು. ಕ್ರಿ.ಶ.೧೦೧೫ರಿಂದ ೧೦೪೪ರವರೆಗೆ ಆಳ್ವಿಕೆ ನಡೆಸಿದ ಜಯಸಿಂಹನು

ಆಳ್ವಿಕೆಯ ಉದ್ದಕ್ಕೂ ಶತ್ರುಗಳನ್ನು ಎದುರಿಸಬೇಕಾಗಿ ಬಂದಿತು. ಪರಮಾರರ ಭೋಜ, ಕಲಚುರಿಯ ಗಾಂಗೇಯದೇವ ಮತ್ತು ರಾಜೇಂದ್ರಚೋಳರನ್ನು ಜಯಸಿಂಹನು ಎದುರಿಸಬೇಕಾಯಿತು. ಆದರೆ ಇವರೆಲ್ಲರನ್ನೂ ಸಮರ್ಥವಾಗಿ ಎದುರಿಸಿದ ಜಯಸಿಂಹನು ತನ್ನ ಅಧಿಕಾರವನ್ನು ಬಲಿಷ್ಠಗೊಳಿಸಿದನು. ಚೋಳರಿಂದ ಉಪಟಳಕ್ಕೆ ಒಳಗಾಗಿದ್ದ ವೇಂಗಿಯ ವಿಜಯಾದಿತ್ಯನಿಗೆ ಆಶ್ರಯವಿತ್ತು ಪ್ರಾಂತ್ಯಾಧಿಕಾರಿಯಾಗಿ ನೇಮಿಸಿದನು. ಜಯಸಿಂಹನ ಸೈನಿಕ ಕಾರ್ಯಾಚರಣೆಯಲ್ಲಿ ಆತನ ಸೇನಾನಿಗಳಾದ ಕುಂದಮರಸ ಮತ್ತು ವಾವಣರಸರು ಪ್ರಮುಖ ಪಾತ್ರವಹಿಸಿದ್ದರು. ವಾವಣರಸನು ಬೆಳ್ವೊಲ, ಪುಲಿಗೆಱೆ ಪ್ರಾಂತ್ಯಗಳನ್ನು ಆಳುತ್ತಿದ್ದನು. ಕುಂದಮರಸನು ಬನವಾಸಿ ಪನ್ನಿರ್ಚ್ಛಾಸಿರ, ಸಾಂತಳಿಗೆ ಸಾಸಿರ, ಹೈವೆ ಐವತ್ತು ಪ್ರಾಂತ್ಯಗಳನ್ನು ಆಳುತ್ತಿದ್ದನು. ಜಯಸಿಂಹನ ಸೋದರಿ ಅಕ್ಕಾದೇವಿಯು ಕಿಸುಕಾಡು ಎಪ್ಪತ್ತನ್ನು ಆಳುತ್ತಿದ್ದರೆ, ಈಕೆಯ ಪತಿ ಕದಂಬಕುಲದ ಮಯೂರವರ್ಮನು ಹಾನುಗಲ್ಲು ೫೦೦ರ ಅಧಿಪತಿಯಾಗಿದ್ದನು.

ಜಯಸಿಂಹನ ನಂತರ ಆತನ ಮಗನಾದ ಒಂದನೆಯ ಸೋಮೇಶ್ವರನು ಕ್ರಿ.ಶ.೧೦೪೪ರಲ್ಲಿ ಅಧಿಕಾರಕ್ಕೆ ಬಂದನು. ಆಹವಮಲ್ಲ, ತ್ರೈಲೋಕ್ಯಮಲ್ಲ ಎಂಬ ಬಿರುದುಗಳನ್ನು ಹೊಂದಿದ್ದ ಈತನ ಆಳ್ವಿಕೆಯ ಅವಧಿಯು ಅಕ್ಷರಶಃ ಚಾಲುಕ್ಯರು ಮತ್ತು ಚೋಳರ ನಡುವಿನ ರಣೋತ್ಸಾಹದ ಅವಧಿಯಾಯಿತು. ಇವರಿಬ್ಬರ ನಡುವಿನ ಹೋರಾಟದ ಫಲವಾಗಿ ವೇಂಗಿಮಂಡಲವು ಇಬ್ಭಾಗವಾಗಿ ಇವರಿಬ್ಬರ ನಡುವೆ ಹಂಚಿಹೋಯಿತು. ಚೋಳರನ್ನಲ್ಲದೇ ಸೋಮೇಶ್ವರನು ಪರಮಾರ ಭೋಜ, ಕಲಚುರಿ ಕರ್ಣ, ಚಕ್ರಕೂಟದ ಧಾರಾವರ್ಷನನ್ನು ಎದುರಿಸಿದನು. ಆಂತರಿಕವಾಗಿ ಸಿಡಿದೇಳಲು ಮುಂದಾಗಿದ್ದ ಶಿಲಾಹಾರದ ಕೊಂಕಣದ ಮುಮ್ಮಣಿ, ಕರಹಾಡದ ಮಾರಸಿಂಹ ಮತ್ತು ಸೇಉಣರ ಬಿಲ್ಲಮನನ್ನೂ ಸೋಲಿಸಬೇಕಾಯಿತು. ಜಯಸಿಂಹನ ಈ ಎಲ್ಲಾ ವಿಜಯಯಾತ್ರೆಗಳಲ್ಲಿ ಈತನ ಸೇನಾಧಿಪತಿಗಳೂ ಸಾಮಂತರೂ ಆದ ದಂಡನಾಯಕ ಗುಣ್ಡಮಯ್ಯ, ಮಧುಸೂದನ ವಾಜಿಕುಲದ ನಾಗಮಯ್ಯ, ಗೋವೆಯ ಕದಂಬಕುಲದ ಷಷ್ಠ, ಹೈಹೆಯ ಕುಲದ ರೇವರಸ, ಮಹಾಸಾಮಂತಾಧಿಪತಿ ನಾಗದೇವ ಮುಂತಾದವರು ಪ್ರಮುಖ ಪಾತ್ರವಹಿಸಿದ್ದರು. ಕಲ್ಯಾಣ ಈತನ ಕಾಲದಲ್ಲಿ ಕ್ರಿ.ಶ.ಸುಮಾರು ೧೦೪೮ರ ವೇಳೆಗೆ ರಾಜಧಾನಿಯಾಯಿತು. ಇವನು ಕ್ರಿ.ಶ.೧೦೬೮ರಲ್ಲಿ ಮರಣಹೊಂದಿದನು.

ಸೋಮೇಶ್ವರನ ನಂತರ ಆತನ ಹಿರಿಯ ಮಗನಾದ ಇಮ್ಮಡಿ ಸೋಮೇಶ್ವರನು ಕ್ರಿ.ಶ.೧೦೬೮ರಲ್ಲಿ ಪಟ್ಟಕ್ಕೆ ಬಂದನು. ಅದಕ್ಷನೂ ಹಾಗೂ ಜನರ ಬೆಂಬಲದಿಂದ ವಂಚಿತನಾಗಿದ್ದ ಈತನನ್ನು ಈತನ ಸಹೋದರನಾದ ಆರನೆಯ ವಿಕ್ರಮಾದಿತ್ಯನು ಮತ್ತೊಬ್ಬ ಸಹೋದರನಾದ

ನಾಲ್ಕನೆಯ ಜಯಸಿಂಹ ಮತ್ತು ಗೋವೆಯ ಕದಂಬರ ಜಯಕೇಶಿ, ಹಾನಗಲ್ಲು ಕದಂಬರ ಕೀರ್ತಿವರ್ಮ ಮೊದಲಾದವರ ನೆರವಿನಿಂದ ಸೋಲಿಸಿ ಕ್ರಿ.ಶ.೧೦೭೬ರಲ್ಲಿ ಅಧಿಕಾರಕ್ಕೆ ಬಂದನು.

ಆರನೆಯ ವಿಕ್ರಮಾದಿತ್ಯನು ಅಧಿಕಾರಕ್ಕೆ ಬಂದ ನಂತರದಲ್ಲಿ ಕರ್ನಾಟಕದಲ್ಲಿ 'ಚಾಲುಕ್ಯ ವಿಕ್ರಮಶಕೆ'ಯು ಆರಂಭವಾಗಿ ಸುಮಾರು ೧೦೦ ವರ್ಷಗಳ ಕಾಲ ಬಳಕೆಯಲ್ಲಿತ್ತು. ಶಾಂತಿಪ್ರಿಯನಾದ ಈತನು ೫೦ ವರ್ಷಗಳ ಕಾಲ ಆಳ್ವಿಕೆ ನಡೆಸಿದನು. ಈ ಹಿಂದೆ ಅಧಿಕಾರಕ್ಕಾಗಿ ಚೋಳರ ಮತ್ತು ಕರ್ನಾಟಕದ ಅರಸರ ನಡುವೆ ನಡೆಯುತ್ತಿದ್ದ ಕದನವು ವಿರಾಮಗೊಂಡು ಅಭಿವೃದ್ಧಿಯತ್ತ ಗಮನಹರಿಸಲು ಚೋಳರ ಕುಲೋತ್ತುಂಗ ಮತ್ತು ಚಾಲುಕ್ಯರ ವಿಕ್ರಮಾದಿತ್ಯನು ಮುಂದಾದರು. ಇಷ್ಟಾದರೂ ಸಹ ವಿಕ್ರಮಾದಿತ್ಯನು ಅಧಿಕಾರಕ್ಕೆ ಬರಲು ನೆರವಾಗಿದ್ದ ಜಯಸಿಂಹನು ತಿರುಗಿಬಿದ್ದಾಗ ಆತನನ್ನು ನಿವಾರಿಸಿದನು. ಹಾಗೆಯೇ ದಂಗೆಯೆದ್ದ ಕರಹಾಡದ ಶಿಲಾಹಾರ ಭೋಜ, ಅಳುಪರು, ಹೈವೆಯ ನಾಗವರ್ಮ ಮತ್ತು ಗೊಗ್ಗಿಯರ ಬಂಡಾಯವನ್ನು ವಿಕ್ರಮಾದಿತ್ಯನು ಅಡಗಿಸಿದನು.

ಚಾಲುಕ್ಯರಿಗೆ ಆರಂಭದಿಂದಲೂ ಸಾಮಂತರಾಗಿದ್ದ ಹೊಯ್ಸಳರು ಬಂಡಾಯವೆದ್ದಿದ್ದು ಈತನಿಗೆ ದೊಡ್ಡ ಆಘಾತವಾಯಿತು. ವಿನಯಾದಿತ್ಯ, ಎಱೆಯಂಗರ ಕಾಲದಲ್ಲಿ ನಿಷ್ಠರಾಗಿದ್ದ ಹೊಯ್ಸಳರು ಮುಂದೆ ಒಂದನೆಯ ಬಲ್ಲಾಳ, ವಿಷ್ಣುವರ್ಧನನ ಕಾಲದಲ್ಲಿ ಸ್ವತಂತ್ರರಾಗಲು ಹವಣಿಸಿದಾಗ ವಿಕ್ರಮಾದಿತ್ಯನು ಅವರನ್ನು ನಿವಾರಿಸಲು ಪರಮಾರ ಜಗದೇವನನ್ನು ಕಳುಹಿಸುತ್ತಾನೆ. ಕ್ರಿ.ಶ.೧೧೯೦ರ ಸುಮಾರಿನಲ್ಲಿ ಜಗದೇವನನ್ನು ಹೊಯ್ಸಳರು ಸೋಲಿಸಿದರು. ಕ್ರಿ.ಶ.೧೧೧೭-೧೮ರಲ್ಲಿ ಕಣ್ಣೆಗಾಲದಲ್ಲಿ ನಡೆದ ಕದನದಲ್ಲಿ ಹೊಯ್ಸಳರ ಸೇನಾನಿಯಾದ ಗಂಗರಾಜನು ಚಾಲುಕ್ಯಸೇನೆಯನ್ನು ಸೋಲಿಸಿದನು. ಅಂತಿಮವಾಗಿ ವಿಕ್ರಮಾದಿತ್ಯನು ಹೊಯ್ಸಳ ವಿಷ್ಣುವರ್ಧನನನ್ನು ಹಲಸೂರು, ಹೊಸವೀಡು ಕದನಗಳಲ್ಲಿ ಸೋಲಿಸಿದನು. ಉತ್ತರದಲ್ಲಿ ಪರಮಾರರನ್ನು ಗೆಲ್ಲುವ ಮೂಲಕ ನರ್ಮದಾನದಿಯವರೆಗೆ ರಾಜ್ಯವನ್ನು ವಿಸ್ತರಿಸಿದನು. ಚೋಳರ ವಶದಲ್ಲಿದ್ದ ಆಂಧ್ರದ ವೇಂಗಿಮಂಡಲದ ಭಾಗಗಳು ಕ್ರಮೇಣ ಈತನ ವಶವಾದವು.

ಐವತ್ತು ವರ್ಷಗಳ ಈತನ ಆಳ್ವಿಕೆಯು ಶಾಂತಿ, ಸಮೃದ್ಧಿಯ ಕಾಲವಾಗಿತ್ತು. ಈತನ ಕಾಲದ ನೂರಾರು ಶಾಸನಗಳು ಲಭ್ಯವಾಗಿದ್ದು, ಆಗಿನ ಕಾಲದ ಜನಜೀವನವನ್ನು ಚಿತ್ರಿಸಿದೆ. ಕಲ್ಯಾಣವು ರಾಜಧಾನಿಯಾದರೂ ಹಲವಾರು ನೆಲೆವೀಡುಗಳು ಇದ್ದವು. ಅನಂತಪಾಲ, ಆತನ ಸೋದರಳಿಯ ಗೋವಿಂದ, ಲಕ್ಷ್ಮಣ ದಂಡನಾಯಕ, ಕಾಳಿದಾಸ, ಸಿಂದಪೆರ್ಮಾಡಿ, ಕದಂಬ ಜಯಕೇಶಿ, ಕಾಕತೀಯ ಪ್ರೋಲ ಮೊದಲಾದವರು ಈತನ ನಿಷ್ಠಾವಂತ ಸಾಮಂತರು ಅಧಿಕಾರಿಗಳಾಗಿದ್ದರು.

ಪ್ರಜಾರಂಜಕನೂ, ಕಲಾಪೋಷಕನೂ ಆದ ಈತನ ಆಸ್ಥಾನಕವಿ ವಿಜ್ಞಾನೇಶ್ವರನು ತನ್ನ 'ಮಿತಾಕ್ಷರ' ಎಂಬ ಗ್ರಂಥದಲ್ಲಿ "ಕಲ್ಯಾಣದಂತಹ ರಾಜಧಾನಿಯು ಈ ಹಿಂದೆ ಇರಲಿಲ್ಲ. ಮುಂದೆ ಇರುವುದಿಲ್ಲ. ಹಾಗೆಯೇ ಶ್ರೀವಿಕ್ರಮನಂತಹ ಕ್ಷಿತಿಪತಿಯನ್ನು ಯಾರೂ ನೋಡಿಲ್ಲ, ಕೇಳಿಲ್ಲ" ಎಂಬುದಾಗಿ ಬಣ್ಣಿಸಿದ್ದಾನೆ. ಮತ್ತೊಬ್ಬ ಆಸ್ಥಾನಕವಿಯಾದ ಬಿಲ್ಹಣನು 'ವಿಕ್ರಮಾಂಕದೇವಚರಿತ'ವೆಂಬ ಕೃತಿಯನ್ನು ರಚಿಸಿದ್ದಾನೆ.

ಭೂಲೋಕಮಲ್ಲ ಮುಮ್ಮಡಿ ಸೋಮೇಶ್ವರನು ಕ್ರಿ.ಶ.೧೧೨೭ರಲ್ಲಿ ಅಧಿಕಾರಕ್ಕೆ ಬಂದನು. ಈತನು ಆರನೆಯ ವಿಕ್ರಮಾದಿತ್ಯನ ಮಗ ಮತ್ತು ಉತ್ತರಾಧಿಕಾರಿ. ಸೋಮೇಶ್ವರನು ಅಂತಹ ಯಾವ ದಿಗ್ವಿಜಯಗಳನ್ನು ಕೈಗೊಳ್ಳಲಿಲ್ಲ. ಈತನ ರಾಜ್ಯದಲ್ಲಿ ಶಾಂತಿ, ನೆಮ್ಮದಿಗಳು ನೆಲೆಗೊಂಡಿದ್ದವು. ರಾಜಕೀಯಕ್ಕಿಂತ ಈತನ ಒಲವು ಸಾಹಿತ್ಯ, ಕಲೆಗಳ ಕಡೆಗಿತ್ತು. 'ಮಾನಸೋಲ್ಲಾಸ' ಅಥವಾ 'ಅಭಿಲಷಿತಾರ್ಥ ಚಿಂತಾಮಣಿ' ಎಂಬ ವಿಶ್ವಕೋಶದಂತಿರುವ ಸಂಸ್ಕೃತ ಗ್ರಂಥವನ್ನು ರಚಿಸಿದನು. 'ವಿಕ್ರಮಾಂಕಾಭ್ಯುದಯ' ಈತನು ರಚಿಸಿದ ಮತ್ತೊಂದು ಕೃತಿ.

ಈತನ ನಂತರ ಇವನ ಮಗನಾದ ಇಮ್ಮಡಿ ಜಗದೇಕಮಲ್ಲನು ಕ್ರಿ.ಶ.೧೧೩೯ರಲ್ಲಿ ಪಟ್ಟಕ್ಕೆ ಬಂದನು. ಆಡಳಿತದಲ್ಲಿ ಬಿಗಿಯಿಲ್ಲದ ಕಾರಣದಿಂದ ವೇಂಗಿಯ ಬಹುಭಾಗ ಈತನ ಹತೋಟಿಯಿಂದ ದೂರವಾಯಿತು. ಕಾಕತೀಯ ಇಮ್ಮಡಿ ಪ್ರೋಲ, ಹೊಯ್ಸಳರ ವಿಷ್ಣುವರ್ಧನ ಪ್ರಬಲರಾಗ ತೊಡಗಿದರು. ಕ್ರಿ.ಶ.೧೧೪೩ರ ಹೊತ್ತಿಗೆ ಚಾಲುಕ್ಯ ದೊರೆಯು ಹೊಯ್ಸಳರನ್ನು ಆಕ್ರಮಿತ ಪ್ರದೇಶಗಳಿಂದ ಹೊರಗಟ್ಟಲು ಸಮರ್ಥನಾದನು. ಆದರೆ ಈ ಹೊತ್ತಿಗಾಗಲೇ ಕಲಚುರಿ ಮನೆತನದ ಬಿಜ್ಜಳನು ತನ್ನ ಶಕ್ತಿಯನ್ನು ಹೆಚ್ಚಿಸಿಕೊಂಡು ಚಾಲುಕ್ಯ ಅರಸೊತ್ತಿಗೆಗೆ ಸ್ಪರ್ಧಿಯಾಗತೊಡಗಿದನು.

ಇಂತಹ ಪರಿಸ್ಥಿತಿಯಲ್ಲಿ ಮುಮ್ಮಡಿ ತೈಲಪನು ಕ್ರಿ.ಶ.೧೧೪೯ರಿಂದ ರಾಜ್ಯವಾಳತೊಡಗಿದನು. ಜಗದೇಕಮಲ್ಲನಿಗೆ ಮಕ್ಕಳಿಲ್ಲದ ಕಾರಣದಿಂದ ಆತನ ಸೋದರ ತೈಲಪನು ಅಧಿಕಾರಕ್ಕೆ ಬಂದದ್ದನ್ನು ಸಹಿಸದ ಬಿಜ್ಜಳನು ರಾಜನ ವಿರುದ್ಧ ದಂಗೆಯೆದ್ದು ತನ್ನನ್ನೇ ಚಕ್ರವರ್ತಿಯೆಂದು ಕರೆದುಕೊಂಡನು. ಇದೇ ಸಂದರ್ಭದಲ್ಲಿ ಶಿಲಾಹಾರರು, ಕಾಕತೀಯರು, ಹೊಯ್ಸಳರು ಸ್ವತಂತ್ರರಾಗತೊಡಗಿದರು. ಕ್ರಿ.ಶ.೧೧೬೩ರಲ್ಲಿ ತೈಲನು ಕೊನೆಯುಸಿರೆಳೆದನು.

ಸಾಯುವ ಮುನ್ನ ತೈಲನು ತನ್ನ ಮಗ ತ್ರಿಭುವನಮಲ್ಲ ನಾಲ್ಕನೆಯ ಸೋಮೇಶ್ವರನನ್ನು ಉತ್ತರಾಧಿಕಾರಿಯಾಗಿ ನೇಮಿಸಿದ್ದನು. ಆದರೆ ಇವನು ಮತ್ತು ಈತನ ಸೋದರ ಮುಮ್ಮಡಿ ಜಗದೇಕಮಲ್ಲನು ಮತ್ತು ಭೂಲೋಕಮಲ್ಲನು ರಾಜ್ಯಭ್ರಷ್ಟರಾಗುವುದರೊಂದಿಗೆ ಚಾಲುಕ್ಯ ಸಾಮ್ರಾಜ್ಯವು ಕಲಚುರಿಗಳ ಕೈವಶವಾಯಿತು. ಕ್ರಿ.ಶ.೧೧೮೩ರ ಹೊತ್ತಿಗೆ ಸೋಮೇಶ್ವರನು ಸಾಮ್ರಾಜ್ಯವನ್ನು ಮರಳಿ

ಪಡೆಯಲು ಪ್ರಯತ್ನಿಸಿದರೂ ಸಹ ಈಗಾಗಲೇ ಪ್ರಬಲರಾಗಿದ್ದ ಹೊಯ್ಸಳರು, ಸೇಉಣರು, ಕಾಕತೀಯರ ನಡುವೆ ಚಾಲುಕ್ಯ ರಾಜ್ಯವು ಹೇಳಹೆಸರಿಲ್ಲದಂತಾಯಿತು.

ಕಲ್ಯಾಣ ಚಾಲುಕ್ಯರ ಕಾಲವು ಸಾಂಸ್ಕೃತಿಕ ದೃಷ್ಟಿಯಿಂದ ಮಹತ್ವದ್ದಾಗಿದೆ. ಇವರ ಕಾಲದಲ್ಲಿ ಸ್ಥಾನಿಕ ಸ್ವರಾಜ್ಯಪದ್ಧತಿ ಪ್ರಚಲಿತವಾಗಿತ್ತು. ವಿದ್ಯಾಭ್ಯಾಸಕ್ಕೆ ಮಹತ್ವ ನೀಡಿದ ಇವರ ಕಾಲದಲ್ಲಿ ಧಾರ್ಮಿಕ ಮಠಗಳು, ಅಗ್ರಹಾರ, ಬ್ರಹ್ಮಪುರಿ, ಘಟಿಕಾಸ್ಥಾನಗಳು ಅಸ್ತಿತ್ವಕ್ಕೆ ಹೆಚ್ಚಿನ ಸಂಖ್ಯೆಯಲ್ಲಿ ಬಂದವು. ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಹಲವಾರು ಜನ ಪ್ರತಿಭಾವಂತ ಕವಿಗಳು ಸಾಹಿತ್ಯ ನಿರ್ಮಾಣದಲ್ಲಿ ತೊಡಗಿದರು. ಬಿಲ್ಹಣ, ವಿಜ್ಞಾನೇಶ್ವರ, ವಾದಿರಾಜ, ರನ್ನ, ೨ನೆಯ ನಾಗವರ್ಮ ಮೊದಲಾದವರು ಕೃತಿರಚನೆ ಮಾಡಿದರು. ವಚನಸಾಹಿತ್ಯವು ನಿಶ್ಚಿತ ರೂಪವನ್ನು ಪಡೆದದ್ದು ಈ ಕಾಲದಲ್ಲೇ ಎನ್ನಬಹುದು. ಹಾಗೆಯೇ ಶಿಲ್ಪಕಲೆಗೂ ಸಹ ಸಾಕಷ್ಟು ಪ್ರೋತ್ಸಾಹ ದೊರೆಯಿತು. ರಾಜಕೀಯವಾಗಿ ಸಹ ಚೋಳ ಮತ್ತಿತರರಿಂದ ಕರ್ನಾಟಕವನ್ನು ಮುಕ್ತಗೊಳಿಸಿ ಸ್ಥಾನಮಾನವನ್ನು ಕಲ್ಪಿಸಿದ ಹಿರಿಮೆ ಕಲ್ಯಾಣಿ ಚಾಲುಕ್ಯರಿಗೆ ಸಲ್ಲುತ್ತದೆ.

**೨.೮ : ಕಲಚುರಿಗಳು :-**

ಬಿಜ್ಜಳ ಮತ್ತು ಆತನ ಉತ್ತರಾಧಿಕಾರಗಳ ಕೇವಲ ೨೦ ವರ್ಷಗಳ ಆಳ್ವಿಕೆಯು ಕರ್ನಾಟಕದ ಇತಿಹಾಸದಲ್ಲಿ ಕ್ರಾಂತಿಯ ಪರ್ವವಾಯಿತು. ರಾಜಕೀಯ ಕ್ರಾಂತಿಯ ಜೊತೆಗೆ ಸಾಮಾಜಿಕ, ಧಾರ್ಮಿಕ ಹಾಗೂ ಸಾಹಿತ್ಯಕವಾಗಿ ಕೂಡ ಬದಲಾವಣೆಯ ಗಾಳಿಯು ಬೀಸತೊಡಗಿತು.

ಹೈಹಯ ಕುಲೋತ್ಪನ್ನರಾದ ಇವರ ಮೂಲಸ್ಥಾನ ಕಾಲಂಜರ ಮಂಡಲವಾಗಿದ್ದು, ಕಾಲಂಜರಪುರವು ಅದರ ರಾಜಧಾನಿ. ಈಗಿನ ಮಧ್ಯಪ್ರದೇಶದ ಬಾಂದಾ ಜಿಲ್ಲೆಯಲ್ಲಿರುವ ಕಾಲಂಜಿರ್ ಪ್ರದೇಶವೇ ಕಾಲಂಜರಪುರ. ಮುಂದೆ ಬೇರೆ ಬೇರೆ ಕಡೆಗೆ ಚದುರಿಹೋದ ಶಾಖೆಗಳಲ್ಲಿ ಒಂದು ಶಾಖೆಯು ಕರ್ನಾಟಕಕ್ಕೆ ವಲಸೆ ಬಂದು ನೆಲೆಸಿತು. ಶೈವಭಕ್ತರಾದ ಇವರ ಲಾಂಛನವು ಸುವರ್ಣವೃಷಭವಾಗಿದೆ.

ಕಲಚುರಿಗಳ ವಂಶದಲ್ಲಿ ರಾಜ ಅಥವಾ ಉಚಿತ, ಒಂದನೆಯ ಅಸಗ, ಒಂದನೆಯ ಕನ್ನಮ, ಎರಡನೆಯ ಅಸಗ, ಇಮ್ಮಡಿರಾಜ, ಸಂಕಮನ ನಂತರ ಆಳ್ವಿಕೆಗೆ ಬಂದ ಒಂದನೆಯ ಬಿಜ್ಜಳನು ಐತಿಹಾಸಿಕವಾಗಿ ಪ್ರಸಿದ್ಧನಾಗಿದ್ದಾನೆ. ಆನಂತರದಲ್ಲಿ ಕನ್ನಮನ ಮಗ ಜೋಗಮ, ಆತನ ಮಗ ಪೆರ್ಮಾಡಿಯು ಕ್ರಿ.ಶ.೧೧೧೮ರಿಂದ ೧೧೩೦ರವರೆಗೆ ತರ್ದವಾಡಿ ಸಾಸಿರದ ಮಂಡಳೇಶ್ವರನಾಗಿ ಚಾಲುಕ್ಯರ ಸಾಮಂತನಾಗಿ ಆಳ್ವಿಕೆ ನಡೆಸಿದನು. ಈತನ ಮಗನೇ ಇಮ್ಮಡಿ ಬಿಜ್ಜಳ.

ಇಮ್ಮಡಿ ಬಿಜ್ಜಳನು ಕ್ರಿ.ಶ.೧೧೩೦ರಿಂದ ೧೧೬೭ರ ಅವಧಿಯಲ್ಲಿ ಹಂತ ಹಂತವಾಗಿ ಚಾಲುಕ್ಯರ ಅಧೀನದಲ್ಲಿದ್ದುಕೊಂಡೇ ಪದವಿಗೇರುತ್ತಾ ಅಂತಿಮವಾಗಿ ಚಾಲುಕ್ಯರ ಮುಮ್ಮಡಿತೈಲಪನನ್ನು ಸೋಲಿಸಿ, ಕೊಂದು ಚಾಲುಕ್ಯ ಸಾಮ್ರಾಜ್ಯವನ್ನು ಆಕ್ರಮಿಸಿದನು. ಮಾಂಡಳಿಕನಾಗಿ ಆಳತೊಡಗಿದ್ದ ಒಬ್ಬ ಸಾಮಾನ್ಯನು ಸಾಮ್ರಾಜ್ಯಕ್ಕೊಡೆಯನಾದ ಸನ್ನಿವೇಶವನ್ನು ದಾವಣಗೆರೆಯ ಶಾಸನವೊಂದು[3]

**ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸಲೊಡನೆ ದೋರ್ಗರ್ವದಿಂ ಮನ್ನೆಯರ್ಗು**
**ಬ್ಬಸಮಂ ಮುಂ ಮಾಡಿದಂ ಮತ್ತಿರೆಯಿರೆ ಚಲದಿಂ ಮಂಡಳೇಶರ್ಗೆ ಬೇರೊಳ್**
**ಬಿಸಿನೀರಂ ಪೊಯ್ದನಂತನ್ತಿರೆಯಿರೆ ಬಳಿಯಂ ರಾಯರಂ ಕೂಡೆ ನಿರ್ಮೂ**
**ಳಿಸಿದಂ ಚಕ್ರಾಧಿನಾಥೋಜ್ವಳ ಮುಖತಿಳಕಂ ಬಿಜ್ಜಳಕ್ಷೋಣಿಪಾಳಂ!!**

**ಕೊಡದಿನುದಯಿಸಿದಗಸ್ತ್ಯಂ**
**ಕಡಲಂ ಪೀರ್ವಂತೆ ಮಂಡಳೇಶ್ವರ ರಾಜ್ಯ**
**ಕ್ಕೊಡೆಯನೆನೆಪುಟ್ಟಿ ವೀರದಿ**
**ನೆಡೆಗೊಂಡಂ ಸಕಲಧಾತ್ರಿಯಂ ಬಿಜ್ಜನೃಪಂ॥**

ಎಂದು ಬಣ್ಣಿಸಿದೆ. ಹಾಗೆಯೇ ಮತ್ತೊಂದು ಶಿಕಾರಿಪುರ ತಾಲ್ಲೂಕು ಚಿಕ್ಕಮಾಗಡಿಯ ಶಾಸನವು ಚಾಲುಕ್ಯ ಸಾಮ್ರಾಜ್ಯವು ಬಿಜ್ಜಳನ ವಶವಾದ ಸಂದರ್ಭವನ್ನು

**ಬಳಿಕಂ ನಲವಿಂ ಸಾರ್ದ್ದಳ್**
**ಚಳುಕ್ಯರಾಜ್ಯರಮೆ ಬಿಜ್ಜಲೋರ್ವ್ವೀಪತಿಯಂ**
**ಕಳಚುರಿತಿಲಕನನೇಂಪೆ**
**ಣ್ಗಳಚಿತ್ತಂ ಹೊಸತನಱಸುತಿರ್ಪ್ಪುದು ಹೊಸತೆ॥**[4]

ಎಂದು ಬಣ್ಣಿಸಿದೆ. ಕ್ರಿ.ಶ.೧೧೬೨ ರಿಂದ ಕರ್ನಾಟಕದಲ್ಲಿ ಬಿಜ್ಜಳನ ಆಳ್ವಿಕೆಯೊಂದಿಗೆ ಕಲಚುರಿಗಳ ಆಡಳಿತವು ಆರಂಭವಾಯಿತು. ಚಾಲುಕ್ಯರ ಉತ್ತರಾಧಿಕಾರಿಯೆನಿಸಿದರೂ ಬಿಜ್ಜಳನ ರಾಜ್ಯವು ಸಂಪೂರ್ಣವಾಗಿ ಚಾಲುಕ್ಯ ರಾಜ್ಯವನ್ನು ಒಳಗೊಂಡಿರಲಿಲ್ಲ. ದಕ್ಷಿಣದ ಮೇರೆಯಾದ ಬನವಾಸಿ ಮಂಡಲವನ್ನು ಬಿಟ್ಟು ಇತರ ಸಾಮಂತರು ಅಧಿಕಾರದಲ್ಲಿದ್ದರು. ಐದಾರು ವರ್ಷಗಳಲ್ಲೇ ಬಿಜ್ಜಳನ ಆಳ್ವಿಕೆಯು ಅಂತ್ಯವಾಯಿತು.

ಬಿಜ್ಜಳನ ಆಳ್ವಿಕೆಯ ಕಾಲವು ವಚನ ಚಳುವಳಿಯ ದೃಷ್ಟಿಯಿಂದ ಪ್ರಮುಖವಾದುದಾಗಿದೆ. ಬಸವಣ್ಣನ ಮಾರ್ಗದರ್ಶನದಲ್ಲಿ ನಡೆದ ವಚನ ಚಳುವಳಿಯು ಮುಂದೆ

ಕನ್ನಡ ಸಾಹಿತ್ಯದ ರೂಪರೇಶೆಯನ್ನು ಬದಲಾಯಿಸಲು ಕಾರಣವಾಯಿತು ಎಂಬುದು ಇತಿಹಾಸ. ಬಿಜ್ಜಳನ ಮಕ್ಕಳಾದ ರಾಯಮುರಾರಿ ಸೋವಿದೇವ, ಮಲ್ಲಿಕಾರ್ಜುನ, ಸಂಕಮ, ಆಹವಮಲ್ಲ, ಸಿಂಘಣ ಇವರ ನಡುವೆ ಅಧಿಕಾರಕ್ಕಾಗಿ ಅಂತಃಕಲಹವೇರ್ಪಟ್ಟಿತು. ಕ್ರಿ.ಶ.೧೧೬೭ರ ಹೊತ್ತಿಗೆ ರಾಯಮುರಾರಿ ಸೋವಿದೇವನನ್ನು ಬಿಜ್ಜಳನು ತನ್ನ ಉತ್ತರಾಧಿಕಾರಿಯಾಗಿ ನೇಮಿಸಿದನು. ಆ ನಂತರದಲ್ಲಿ ತಮ್ಮಂದಿರೊಡನೆ ಅಂತಃಕಲಹ ಉಂಟಾದ ಕಾರಣದಿಂದ ಸೋವಿದೇವನು ಕ್ರಿ.ಶ.೧೧೭೬ರ ನಂತರ ಅಧಿಕಾರದಲ್ಲಿ ಮುಂದುವರಿಯಲಾಗಲಿಲ್ಲ. ಈತನ ನಂತರ ಮಲ್ಲಿಕಾರ್ಜುನ, ಸಂಕಮ, ಆಹವಮಲ್ಲ, ಸಿಂಘಣ ಅಧಿಕಾರಕ್ಕಾಗಿ ಕಚ್ಚಾಟ ನಡೆಸಿದರು. ಇದರ ನಡುವೆ ತಲೆಮರೆಸಿ ಕೊಂಡಿದ್ದ ಚಾಲುಕ್ಯ ನಾಲ್ವಡಿ ಸೋಮೇಶ್ವರನು ತನ್ನ ರಾಜ್ಯವನ್ನು ಹಿಂದಕ್ಕೆ ಪಡೆಯಲು ಪ್ರಯತ್ನಿಸಿದರೂ ಈಗಾಗಲೇ ಪ್ರಬಲರಾಗಿದ್ದ ಹೊಯ್ಸಳರು, ಸೇಉಣರು, ಕಾಕತೀಯರ ನಡುವೆ ಚಾಲುಕ್ಯ ಸಾಮ್ರಾಜ್ಯವು ಹೇಳಹೆಸರಿಲ್ಲದಂತಾಯಿತು.

## ೨.೯ : ದೇವಗಿರಿಯ ಸೇಉಣರು :-

ಸೇಉಣರು ಅಥವಾ ದೇವಗಿರಿಯ ಯಾದವರು ಆರಂಭದಲ್ಲಿ ರಾಷ್ಟ್ರಕೂಟರು ಮತ್ತು ಕಲ್ಯಾಣದ ಚಾಲುಕ್ಯರ ಸಾಮಂತರಾಗಿದ್ದರು. ೧೨ನೆಯ ಶತಮಾನದ ಅಂತ್ಯದಲ್ಲಿ ಸ್ವತಂತ್ರ ಪ್ರಭುತ್ವಪಡೆದ ಇವರ ಆಳ್ವಿಕೆಯು ೧೪ನೆಯ ಶತಮಾನದ ಆದಿಯವರೆಗೆ ಮುಂದುವರೆಯಿತು.

ಇಮ್ಮಡಿ ಭಿಲ್ಲಮನು ಕಲ್ಯಾಣ ಚಾಲುಕ್ಯ ವಂಶದ ೨ನೆಯ ತೈಲನ ಸಮಕಾಲೀನನಾದವನು. ಪರಮಾರ ಮುಂಜನ ವಿರುದ್ಧ ತೈಲನು ನಡೆಸಿದ ಹೋರಾಟದಲ್ಲಿ ಈತನು ತೈಲನ ಪರವಾಗಿ ಪಾಲ್ಗೊಂಡಿದ್ದನು. 'ಮಹಾಸಾಮಂತ' ಪದವಿಯನ್ನು ಅಲಂಕರಿಸಿದ್ದನು. ಈತನ ನಂತರ ಈತನ ಮಗ ಒಂದನೆಯ ವೇಸುಗಿಯು, ಆನಂತರ ಮುಮ್ಮಡಿ ಭಿಲ್ಲಮನು ಅಧಿಕಾರಕ್ಕೆ ಬಂದರು. ಈ ಭಿಲ್ಲಮನು ಪರಮಾರರು, ಭೋಜರ ವಿರುದ್ಧ ಚಾಲುಕ್ಯರ ೧ನೆಯ ಸೋಮೇಶ್ವರನು ಹೋರಾಟ ನಡೆಸಿದಾಗ, ಚಾಲುಕ್ಯ ದೊರೆಯನ್ನು ಬೆಂಬಲಿಸಿದನು. ಈತನ ನಂತರ ಈತನ ಮಗನಾದ ೨ನೆಯ ವೇಸುಗಿ, ಆನಂತರ ೪ನೆಯ ಭಿಲ್ಲಮನು ಪಟ್ಟಕ್ಕೆ ಏರಿದರು. ಈ ನಡುವೆ ರಾಜಪದವಿಗಾಗಿ ಸೇಉಣರ ನಡುವೆ ಅಂತಃಕಲಹವಾಯಿತು. ಅಂತಿಮವಾಗಿ ೫ನೆಯ ಭಿಲ್ಲಮನು ಕ್ರಿ.ಶ.೧೧೭೩ರಲ್ಲಿ ಅಧಿಕಾರಕ್ಕೆ ಬಂದನು.

೫ನೆಯ ಭಿಲ್ಲಮನು ಈ ವಂಶದ 'ನೈಜ ಸಂಸ್ಥಾಪಕ'ನೆನ್ನಬಹುದು. ಕಲಚುರಿ ಬಿಜ್ಜಳ, ಆತನ ಮಗ ಮೈಲುಗಿ, ಸಿಂದಕುಲದ ಮುಂಜ, ಕಾಕತೀಯ ರುದ್ರ, ಚಾಲುಕ್ಯ ನಾಲ್ವಡಿ ಸೋಮೇಶ್ವರನ ಸೇನಾನಿಯಾದ ಬರ್ಮನನ್ನು ಎದುರಿಸಬೇಕಾಯಿತು. ಅಂತಿಮವಾಗಿ ಚಾಲುಕ್ಯ

ರಾಜಧಾನಿ ಕಲ್ಯಾಣವು ಈತನ ವಶವಾಯಿತು. ಭಿಲ್ಲಮನಿಗೆ ಪ್ರಬಲ ಸ್ಪರ್ಧಿಗಳಾಗಿದ್ದವರು ಹೊಯ್ಸಳರು. ಹೊಯ್ಸಳ ವೀರಬಲ್ಲಾಳನ ಜೊತೆಗೆ ನಡೆದ ಸೊರಟೂರು ಕದನದಲ್ಲಿ ಈತನು ಸೋತನು. ಆದರೂ ಸಹ ಸೇಉಣ ಅರಸೊತ್ತಿಗೆಯನ್ನು ಚಕ್ರಾಧಿಪತ್ಯವಾಗಿ ಮಾಡಿದ ಯಶಸ್ಸು ಈತನಿಗೆ ಸಲ್ಲುತ್ತದೆ. ಈತನ ನಂತರ ಈತನ ಮಗ ಜೈತುಗಿಯೂ, ಆ ನಂತರದಲ್ಲಿ ಇಮ್ಮಡಿ ಸಿಂಘಣನೂ ಅಧಿಕಾರಕ್ಕೆ ಬಂದರು.

ಕ್ರಿ.ಶ.೧೧೯೯ರಲ್ಲಿ ಅಧಿಕಾರಕ್ಕೆ ಬಂದ ಇಮ್ಮಡಿ ಸಿಂಘಣನು ಈ ವಂಶದ ಮತ್ತೊಬ್ಬ ಪ್ರಮುಖ ದೊರೆ. ಈತನು ಪರಮಾರರು, ಗೋವೆಯ ಕದಂಬರು, ಹಾನುಗಲ್ಲಿನ ಕದಂಬರು, ಶಿಲಾಹಾರರು ಹಾಗೂ ವಿಶೇಷವಾಗಿ ಹೊಯ್ಸಳರೊಡನೆ ಸೆಣಸಾಡಿದನು. ದಕ್ಷಿಣದಲ್ಲಿ ತುಂಗಭದ್ರೆಯವರೆಗೆ ತನ್ನ ರಾಜ್ಯವನ್ನು ವಿಸ್ತರಿಸಿದನು. ಇಮ್ಮಡಿ ಸಿಂಘಣನು ವಿದ್ವಾಂಸರ ಪೋಷಕನಾಗಿದ್ದನು. ಈತನ ಆಸ್ಥಾನದಲ್ಲಿ ಚಾಂಗದೇವ ಮತ್ತು ಕನ್ನಡದ ಕವಿ ಕಮಲಭವನು ಇದ್ದರು. ಈತನು ಶಾಂತೀಶ್ವರಪುರಾಣವನ್ನು ಬರೆದಿದ್ದಾನೆ.

ಸಿಂಘಣನ ನಂತರ ಆತನ ಮಗನಾದ ಜೈತುಗಿಯ ಮಗನಾದ ಕನ್ನರನು ರಾಜನಾದನು. ಆತನ ನಂತರ ಅಧಿಕಾರಕ್ಕೆ ಬಂದ ಮಹದೇವನು ಕಾಕತೀಯ ರಾಣಿ ರುದ್ರಾಂಬೆಯಿಂದ ಸೋಲಿಸಲ್ಪಟ್ಟನು. ಕದಂಬ ಕಾವದೇವ, ಹೊಯ್ಸಳರ ವಿರುದ್ಧ ದಂಡೆತ್ತಿ ಕೈತಪ್ಪಿಹೋಗಿದ್ದ ಭಾಗಗಳನ್ನು ಮರಳಿ ಪಡೆದನು.

ಮಹದೇವನ ನಂತರ ಈತನ ಮಗ ಆಮಣ ಅಧಿಕಾರಕ್ಕೆ ಬಂದನು. ಆದರೆ ಕ್ರಿ.ಶ.೧೨೭೧ರಲ್ಲಿ ಕನ್ನರನ ಮಗನಾದ ರಾಮಚಂದ್ರನು ಆಮಣನನ್ನು ರಾಜ್ಯದಿಂದ ಹೊರದೂಡಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು. ರಾಮಚಂದ್ರನು ಉಳಿದವರಂತೆ ನೆರೆಯವರನ್ನು ಎದುರಿಸುತ್ತಾ ದುರ್ಬಲನಾದನು.

ಈ ವೇಳೆಗಾಗಲೇ ಉತ್ತರಭಾರತದಲ್ಲಿ ಮಹಮ್ಮದೀಯರ ದಾಳಿಗಳು ಯಶಸ್ವಿಯಾಗಿ ಅಂತಿಮವಾಗಿ ಕುತ್ಬುದ್ದೀನ್ ಐಬಕನು ಖಿಲ್ಜಿ ವಂಶದ ಸ್ಥಾಪನೆ ಮಾಡಿನು. ಆ ನಂತರದಲ್ಲಿ ಕ್ರಿ.ಶ.೧೨೯೪ರಲ್ಲಿ ಮಲ್ಲಿಕ್‌ಕಾಫರ್‌ನ ಸೈನ್ಯವು ಸೇಉಣರ ಮೇಲೆ ಆಕ್ರಮಣ ನಡೆಸಿತು. ಆಗ ರಾಮಚಂದ್ರನು ಅಪಾರ ಸಂಪತ್ತನ್ನು ನೀಡಿ ಸೈನ್ಯವನ್ನು ಸಾಗಹಾಕಿದನು. ಪುನಃ ಕ್ರಿ.ಶ.೧೩೦೪ರಲ್ಲಿ ಮುಸ್ಲಿಮರ ಧಾಳಿ ನಡೆದಾಗ ರಾಮಚಂದ್ರನು ಸೆರೆಸಿಕ್ಕನು. ಮರಳಿ ಬಂದ ರಾಮಚಂದ್ರನು ಖಿಲ್ಜಿಯ ಕೈಗೊಂಬೆಯಾದನು. ಹೀಗಾಗಿ ಕಾಕತೀಯರ ಹೊಯ್ಸಳರ ವಿರುದ್ಧದ ಹೋರಾಟದಲ್ಲಿ ಮಲ್ಲಿಕ್‌ಕಾಫರನಿಗೆ ಸಹಾಯಹಸ್ತ ಚಾಚಬೇಕಾಯಿತು. ಕ್ರಿ.ಶ.೧೩೧೨ರಲ್ಲಿ ರಾಮಚಂದ್ರನು

ಮರಣಹೊಂದಿದ ಮೇಲೆ ಈತನ ಮಗ ಸಿಂಘಣನು ಅಧಿಕಾರಕ್ಕೆ ಬಂದರೂ ಸಹ ಈಗಾಗಲೇ ದುರ್ಬಲರಾಗಿದ್ದ ಸೇಉಣರ ಆಳ್ವಿಕೆಯು ಅಂತ್ಯವಾಯಿತು.

### ೨.೧೦ : ಹೊಯ್ಸಳರು :-

ಕಲ್ಯಾಣ ಚಾಲುಕ್ಯರ ಸಾಮಂತರಾಗಿ ೧೧ನೆಯ ಶತಮಾನದಲ್ಲಿ ದಕ್ಷಿಣ ಕರ್ನಾಟಕದಲ್ಲಿ ಆಳಿದ ಹೊಯ್ಸಳರು ಆ ನಂತರದಲ್ಲಿ ಸ್ವತಂತ್ರರಾಗಿ ರಾಜ್ಯ ವಿಸ್ತರಿಸಿದರು. ಚಾಲುಕ್ಯರಂತೆಯೇ ಅವರೂ ಸಹ ಉತ್ಕರ್ಷ, ಅಪಕರ್ಷಗಳನ್ನು ಅನುಭವಿಸಿದರು. ಹೊಯ್ಸಳರ ಆಳ್ವಿಕೆಯ ಕಾಲವು ರಾಜಕೀಯವಾಗಿಯಷ್ಟೇ ಅಲ್ಲದೆ ಸಾಹಿತ್ಯಕ, ಸಾಂಸ್ಕೃತಿಕ, ಶಿಲ್ಪಕಲೆ, ಲಲಿತಕಲೆಗಳ ಕ್ಷೇತ್ರದಿಂದ ಸಾಕಷ್ಟು ಮಹತ್ವಪೂರ್ಣವಾದುದಾಗಿದೆ. ಅಂತೆಯೇ ಉತ್ತರಭಾರತದಿಂದ ದಕ್ಷಿಣದ ಮೇಲೆ ದಂಡೆತ್ತಿ ಬಂದ ಮುಸ್ಲಿಮರ ಧಾಳಿಯನ್ನು ಸಮರ್ಥವಾಗಿ ಎದುರಿಸಿ ಮುಂದೆ ಹಿಂದೂಧರ್ಮದ ರಕ್ಷಣೆಗಾಗಿ ವಿಜಯನಗರ ಸ್ಥಾಪನೆಯಾಗಲು ಪ್ರೇರಣೆಯನ್ನು ಹೊಯ್ಸಳರು ನೀಡಿದ್ದು ಗಮನಾರ್ಹವಾಗಿದೆ. ಈ ಎಲ್ಲಾ ದೃಷ್ಟಿಯಿಂದ ಕರ್ನಾಟಕದ, ದಕ್ಷಿಣ ಭಾರತದ ಇತಿಹಾಸದಲ್ಲಿ ಹೊಯ್ಸಳರ ಪಾತ್ರವು ಪ್ರಮುಖ ಮತ್ತು ವಿಶಿಷ್ಟವಾದುದಾಗಿದೆ.

ಹೊಯ್ಸಳರು ತಮ್ಮನ್ನು ಯದುವಂಶೀಯರೆಂದು ಕರೆದುಕೊಂಡಿದ್ದರೂ ಸಹ, ಆರಂಭದಲ್ಲಿ ಮೂಲತಃ ಮಾಂಡಲಿಕರಾಗಿದ್ದ ಇವರು ಕನ್ನಡಿಗರೆಂಬುದು ಸರ್ವವಿದಿತ. ಹೊಯ್ಸಳ ವಂಶದ ಸ್ಥಾಪಕನಾದ ಸಳನು ಸೊಸೆವೂರು ಅಥವಾ ಶಶಕಪುರದವನು. ಈತನು ವಾಸಂತಿಕಾದೇವಿಯ ಪೂಜೆಗೆಂದು ಹೋದಾಗ ಹುಲಿಯೊಂದು ಪ್ರತ್ಯಕ್ಷವಾಗುತ್ತದೆ. ಆಗ ಸುದತ್ತಾಚಾರ್ಯನು 'ಪೊಯ್ ಸಳ'ನೆಂದು ಆಜ್ಞೆ ಮಾಡುತ್ತಾನೆ. ಆಗ ಸಳನು ಹುಲಿಯನ್ನು ಕೊಂದು ನಂತರ ಹೊಯ್ಸಳ ವಂಶದ ಸ್ಥಾಪಕನಾದನೆಂದು ಕಥೆಯಿದೆ. ಮುಂದೆ ಸಳನು ಹುಲಿಯನ್ನು ಕೊಲ್ಲುತ್ತಿರುವ ಲಾಂಛನವನ್ನು ಹೊಯ್ಸಳರು ರಾಜಲಾಂಛನವಾಗಿ ಅಂಗೀಕರಿಸಿದರು. ಈ ಕತೆಯು ಮೊದಲಿಗೆ ಕ್ರಿ.ಶ.೧೧೧೭ರ ಬೇಲೂರಿನ ವಿಷ್ಣುವರ್ಧನನ ಶಾಸನದಲ್ಲಿ[೭] ಕಾಣಿಸಿಕೊಂಡಿದೆ. ಮುಂದೆ ಈ ಕತೆಯು ಹೊಯ್ಸಳರ ಬಹುತೇಕ ಶಾಸನಗಳಲ್ಲಿ ನಿರೂಪಿತವಾಗಿದೆ[೮] ಮತ್ತೆ ಕೆಲವು ಶಾಸನಗಳಲ್ಲಿ ಹುಲಿಯನ್ನು ಮೊಲವು ಬೇಟೆಯಾಡಿದ ಸ್ಥಳವು ವೀರಕ್ಷೇತ್ರವೆಂದು ಭಾವಿಸಿದ ಸಳನು ದಿವ್ಯಋಷಿಯ ಆದೇಶದಂತೆ ಅಲ್ಲಿ ರಾಜ್ಯವೊಂದನ್ನು ಸ್ಥಾಪಿಸಿದನೆಂದು ಕಥೆಯಿದೆ.[೯] ಒಟ್ಟಾರೆ ಯದುವಂಶೀಯರೆಂದು ಕರೆದುಕೊಂಡ ಇವರು ಹೊಯ್ಸಳರೆಂದು ಕರೆಸಿಕೊಂಡುದಕ್ಕೆ ಕಾರಣವನ್ನು ನಿರೂಪಿಸುವುದೇ ಈ ಕತೆಯ ಉದ್ದೇಶವಾಗಿದೆ. ಮೂಲತಃ ಮಲೆನಾಡು ಸೀಮೆಗೆ ಸೇರಿದ ಹೊಯ್ಸಳ ರಾಜ್ಯವನ್ನು ಚಾಲುಕ್ಯರು ದಕ್ಷಿಣದಲ್ಲಿ ಚೋಳರು ಪ್ರಬಲವಾಗುವುದನ್ನು ತಡೆಗಟ್ಟಲು ಬೆಂಬಲಿಸುತ್ತಾ ಬಂದರು.

ಹೀಗಾಗಿ ಚಾಲುಕ್ಯರಿಗೆ ಸಾಮಂತರಾಗಿ ಆಳ್ವಿಕೆಯನ್ನು ಆರಂಭಿಸಿದ ಹೊಯ್ಸಳರು ಮುಂದೆ ಸಾಮ್ರಾಜ್ಯವನ್ನೇ ಕಟ್ಟಲು ಸಮರ್ಥರಾದರು.

ಹೊಯ್ಸಳರ ಮೊದಲನೆಯ ಅರಸ ನೃಪಕಾಮ. ಈತನು ಇತರ ಸಾಮಂತರ ಸಹಕಾರದೊಂದಿಗೆ ಕಲಿಯೂರಿನ ಕದನದಲ್ಲಿ ಚೋಳರ ದಂಡನಾಯಕ ಅಪ್ರಮೇಯನನ್ನು ಎದುರಿಸಿದನು. ಮತ್ತೊಮ್ಮೆ ರಾಜೇಂದ್ರಚೋಳನನ್ನು ಮಣ್ಣೆಯ ಸಮೀಪದಲ್ಲಿ ಎದುರಿಸಿದನು. ಕಾಮನಿಗೆ ಗೆಲುವಾಗದಿದ್ದರೂ ಅವನ ಶಕ್ತಿಯೇನೂ ಕಡಿಮೆಯಾಗಲಿಲ್ಲ.

ನೃಪಕಾಮನ ಮಗ ವಿನಯಾದಿತ್ಯ ಕ್ರಿ.ಶ.ಸುಮಾರು ೧೦೪೫ರಲ್ಲಿ ಅಧಿಕಾರಕ್ಕೆ ಬಂದನು. ಚಾಲುಕ್ಯ ದೊರೆ ಮೊದಲನೆಯ ಸೋಮೇಶ್ವರನ ಜೊತೆಗೆ ಉತ್ತಮ ಬಾಂಧವ್ಯವನ್ನು ಹೊಂದಿರುವುದಲ್ಲದೆ ಪರಮಾರ ಜಯಸಿಂಹನ ವಿರುದ್ಧದ ಹೋರಾಟದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದನು. ಈತನ ಮಗನಾದ ಎಱೆಯಂಗನೂ ಸಹ ಈ ಯುದ್ಧದಲ್ಲಿ ಪಾಲ್ಗೊಂಡಿದ್ದನು. ವಿನಯಾದಿತ್ಯನ ಕೊನೆಯ ದಿನಗಳಲ್ಲಿ ಎಱೆಯಂಗನ ಕೈಯಲ್ಲಿಯೇ ಅಧಿಕಾರವಿತ್ತು. ಚಾಲುಕ್ಯರ ಮಾಂಡಲಿಕನಾಗಿದ್ದ ಈತನು ಚಾಲುಕ್ಯ ಚಕ್ರವರ್ತಿಯ ಹಲವಾರು ಹೋರಾಟಗಳಲ್ಲಿ ಭಾಗವಹಿಸಿ ರಾಜನ ಮೆಚ್ಚುಗೆಗೆ ಪಾತ್ರನಾಗಿದ್ದನು. ಎಱೆಯಂಗನ ಪತ್ನಿ ಏಚಲದೇವಿ. ಇವರ ಮಕ್ಕಳೇ ಒಂದನೆಯ ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯರು.

ಕ್ರಿ.ಶ.೧೧೦೦ರಲ್ಲಿ ಒಂದನೆಯ ಬಲ್ಲಾಳನು ಅಧಿಕಾರಕ್ಕೆ ಬಂದನು. ಸ್ವಾತಂತ್ರಾಪೇಕ್ಷಿಯಾದ ಈತನು ಮೊದಲಿಗೆ ತನ್ನ ಸುತ್ತಮುತ್ತಲಿದ್ದ ಮಾಂಡಲಿಕರನ್ನು ಕೆಣಕಿ ತನ್ನ ಅಧೀನರನ್ನಾಗಿ ಮಾಡಿಕೊಂಡನು. ಈತನ ಚಟುವಟಿಕೆಗಳನ್ನು ಗಮನಿಸುತ್ತಾ ಇದ್ದ ಚಾಲುಕ್ಯರ ವಿಕ್ರಮಾದಿತ್ಯನು ಇವನನ್ನು ಹತ್ತಿಕ್ಕಲು ಪ್ರಯತ್ನಿಸಿದನು. ಕ್ರಿ.ಶ.೧೧೦೪ರ ಸುಮಾರಿಗೆ ಬಲ್ಲಾಳನು ಸೋತನು. ಕೆಲವೇ ವರ್ಷಗಳಲ್ಲಿ ಮರಣ ಹೊಂದಿದನು.

ಒಂದನೆಯ ಬಲ್ಲಾಳನ ತಮ್ಮ ವಿಷ್ಣುವರ್ಧನ. ಕರ್ನಾಟಕದ ಇತಿಹಾಸದಲ್ಲಿ ಪ್ರಸಿದ್ಧ ದೊರೆಯಾದ ಈತನು ಕ್ರಿ.ಶ.೧೧೦೮ರಿಂದ ೧೧೫೨ರವರೆಗೆ ಆಳ್ವಿಕೆ ನಡೆಸಿದನು. ಬಲ್ಲಾಳನಂತೆಯೇ ಸ್ವಾತಂತ್ರ್ಯ ಪ್ರಿಯನಾದ ಈತನು ಹೊಯ್ಸಳ ಸಾಮ್ರಾಜ್ಯದ ಕನಸನ್ನು ಕಂಡವನು. ಗಂಗವಾಡಿಯ ತಲಕಾಡು, ಕೋಲಾರಗಳು ಚೋಳರ ಅಧೀನದಲ್ಲಿದ್ದು ಮೊದಲು ಅವುಗಳನ್ನು ವಶಪಡಿಸಿಕೊಂಡನು. ಆ ನಂತರದಲ್ಲಿ ವಿಶೇಷವಾಗಿ ಚಾಲುಕ್ಯರ ಸಾಮಂತನಾಗಿರಲು ಒಪ್ಪದ ವಿಷ್ಣುವರ್ಧನನು ತಿರುಗಿಬಿದ್ದು ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿದನು. 'ನೊಳಂಬವಾಡಿಗೊಂಡ' ಎಂಬ ಬಿರುದನ್ನು ಪಡೆದನು. ಹಾಗೆಯೇ ಬಳ್ಳಾರಿ, ಕುಮ್ಮಟ, ದುರ್ಗವನ್ನು ವಶಪಡಿಸಿಕೊಂಡನು. ಹಾನಗಲ್ಲಿನ ಕದಂಬರು, ಬನವಾಸಿಯ ಭುಜಬಲಗಂಗ ಪೆರ್ಮಾಡಿ ಮೊದಲಾದವರನ್ನು ಸೋಲಿಸಿದನು. ವಿಷ್ಣುವರ್ಧನನ

ರಾಜ್ಯ ವಿಸ್ತರಣೆಯನ್ನು ಕಂಡು ಸುಮ್ಮನಿರದ ಚಾಲುಕ್ಯರ ವಿಕ್ರಮಾದಿತ್ಯನು ತನ್ನ ಸಾಮಂತರ ನೆರವಿನಿಂದ ವಿಷ್ಣುವರ್ಧನನ್ನು ಸೋಲಿಸಿದನು. ಮತ್ತೊಮ್ಮೆ ವಿಷ್ಣುವರ್ಧನ ಸಾಮಂತಿಕೆಯನ್ನು ಒಪ್ಪಿಕೊಳ್ಳಬೇಕಾಯಿತು. ಚೋಳರ ಕುಲೋತ್ತುಂಗನ ಜೊತೆಗೆ ನಡೆದ ಯುದ್ಧದಲ್ಲಿ ವಿಷ್ಣುವರ್ಧನನ ತಮ್ಮ ವಿಜಯಾದಿತ್ಯನು ಮಡಿದನು. ಹೀಗೆ ಸ್ವಲ್ಪಕಾಲ ಹಿನ್ನಡೆಯನ್ನು ಕಂಡರೂ ಸಹ ಪುನಃ ಚೇತರಿಸಿಕೊಂಡ ಈತನು ಉಚ್ಚಂಗಿ, ಹಾನಗಲ್ಲು, ಬಂಕಾಪುರಗಳನ್ನು ಮತ್ತೆ ವಶಪಡಿಸಿಕೊಂಡನು. ಹೀಗೆ ರಾಜ್ಯವಿಸ್ತರಣೆಯ ಸಂದರ್ಭದಲ್ಲಿ ಮುನ್ನಡೆ, ಹಿನ್ನಡೆಗಳನ್ನು ಅನುಭವಿಸಿದರೂ ಸಹ ಸ್ವತಂತ್ರ ಹೊಯ್ಸಳ ಸಾಮ್ರಾಜ್ಯದ ನಿರ್ಮಾಣಕ್ಕೆ ಭದ್ರಬುನಾದಿಯನ್ನು ಹಾಕಿದ ಕೀರ್ತಿ ಈತನಿಗೆ ಸಲ್ಲುತ್ತದೆ.

ರಾಜಕೀಯವಾಗಿ ಅಲ್ಲದೆ ವಿಷ್ಣುವರ್ಧನನು ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಕಲಾಪೋಷಕನಾಗಿ ಗಣನೀಯ ಸಾಧನೆಯನ್ನು ಮಾಡಿದ್ದಾನೆ. ಸರ್ವಧರ್ಮ ಸಹಿಷ್ಣುವಾಗಿದ್ದ ಈತನ ಕಾಲದಲ್ಲಿ ಶ್ರೀವೈಷ್ಣವಧರ್ಮವು ಪ್ರವರ್ಧಮಾನಕ್ಕೆ ಬಂದಿತು. ಶ್ರೀರಾಮಾನುಜಾಚಾರ್ಯರಿಗೆ ಆಶ್ರಯವಿತ್ತನು. ಈತನ ಪತ್ನಿ ಶಾಂತಲದೇವಿ ಕರ್ನಾಟಕ ಸಾಂಸ್ಕೃತಿಕ ಇತಿಹಾಸದಲ್ಲಿ ಸ್ಮರಣೀಯಳು. ಲಕ್ಷ್ಮೀದೇವಿ ಮತ್ತು ಬೊಮ್ಮಲದೇವಿ ಈತನ ಇನ್ನಿಬ್ಬರು ಪತ್ನಿಯರು.

ವಿಷ್ಣುವರ್ಧನನ ನಂತರ ಈತನ ಮಗನಾದ ಒಂದನೆಯ ನರಸಿಂಹನು ಕ್ರಿ.ಶ.೧೧೫೨ರಲ್ಲಿ ಪಟ್ಟಕ್ಕೆ ಬಂದನು. ಆದರೆ ಅಸಮರ್ಥನಾದ ಈತನ ವಶದಿಂದ ನೊಳಂಬವಾಡಿ ಕೈತಪ್ಪಿಹೋಯಿತು. ಚೆಂಗಾಳ್ವ ಕೊಂಗಾಳ್ವರು ಸ್ವತಂತ್ರರಾದರು. ಬಿಜ್ಜಳನ ಸಾಮಂತ ಬೊಮ್ಮರಸನು ಬನವಾಸಿ ಪ್ರದೇಶವನ್ನು ವಶಪಡಿಸಿಕೊಂಡನು. ಅಂತಿಮವಾಗಿ ಈತನ ಮಗನಾದ ಇಮ್ಮಡಿ ಬಲ್ಲಾಳನು ತಂದೆಯ ವಿರುದ್ಧವೇ ತಿರುಗಿಬಿದ್ದು ಕ್ರಿ.ಶ.೧೧೭೩ರಲ್ಲಿ ಸಿಂಹಾಸನವನ್ನೇರಿದನು.

ವಿಷ್ಣುವರ್ಧನನ ಸಾಮ್ರಾಜ್ಯ ವಿಸ್ತರಣೆಯ ಆಕಾಂಕ್ಷೆಯು ಇಮ್ಮಡಿ ಬಲ್ಲಾಳನ ಕಾಲದಲ್ಲಿ ಈಡೇರಿತು. ಚೆಂಗಾಳ್ವ, ಕೊಂಗಾಳ್ವರ ಹುಟ್ಟಡಗಿಸಿದ ನಂತರ ಬಲ್ಲಾಳನು **"ಚಿರಕಾಲಂ ರಿಪುಗಳ್ಗೆ ಸಾಧ್ಯಮೆನಿಸಿರ್ದುಚ್ಚಂಗಿಯಂ ಮುತ್ತಿ"**[೧೦] ಉಚ್ಚಂಗಿಯ ಪಾಂಡ್ಯರನ್ನು ಸೋಲಿಸಿದನು. ಹಾಗೆಯೇ ಸೇಉಣ ಭಿಲ್ಲಮನನ್ನು ಎದುರಿಸಿದನು. ಬೆಳ್ವೊಲವು ಈತನ ವಶವಾಯಿತು. ಬೆಳ್ವೊಲ ಸೀಮೆಯನ್ನು ತಮ್ಮ ತಮ್ಮ ವಶ ಮಾಡಿಕೊಳ್ಳಲು ಹೊಯ್ಸಳರು ಮತ್ತು ಸೇಉಣರ ನಡುವೆ ಕಾದಾಟವು ನಡೆಯುತ್ತಲೇ ಇತ್ತು. ಈ ಯುದ್ಧಗಳಲ್ಲಿ ಬಲ್ಲಾಳನ ಅರಸಿ ಉಮಾದೇವಿಯು ಪ್ರಮುಖ ಪಾತ್ರ ವಹಿಸಿದ್ದಳು. ಚೋಳರೊಡನೆ ಹೊಯ್ಸಳನು ರಕ್ತಸಂಬಂಧವನ್ನು ಬೆಳೆಸಿದ್ದನು. ಮುಮ್ಮಡಿ ಕುಲೋತ್ತುಂಗನ ಪತ್ನಿಯಾದ ಸೋಮಲದೇವಿ ಈತನ ಮಗಳು. ಚೋಳರ ಸಾಮಂತ ಸುಂದರಪಾಂಡ್ಯನು ಕುಲೋತ್ತುಂಗನ ವಿರುದ್ಧ ತಿರುಗಿಬಿದ್ದಾಗ ಬಲ್ಲಾಳನು ಕುಲೋತ್ತುಂಗನನ್ನು

ಬೆಂಬಲಿಸಿ ಆತನಿಗೆ ಅಧಿಕಾರ ದೊರೆಯುವಂತೆ ಮಾಡಿದನು. ಇದು ಬಲ್ಲಾಳನಿಗೆ 'ಚೋಳರಾಜ್ಯ ಪ್ರತಿಷ್ಠಾಚಾರ್ಯ'ನೆಂಬ ಬಿರುದನ್ನು ತಂದಿತು.

ಇಮ್ಮಡಿ ಬಲ್ಲಾಳನ ಮಗನಾದ ಇಮ್ಮಡಿ ನರಸಿಂಹನು ತಂದೆಯ ಕಾಲದಲ್ಲೇ ಚೋಳರಾಜ್ಯದ ರಾಜಕೀಯದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದವನು. ಆ ನಂತರ ಕ್ರಿ.ಶ.೧೨೨೦ಕ್ಕೆ ಅಧಿಕಾರಕ್ಕೆ ಬಂದ ನಂತರದಲ್ಲಿ ಬಹುಪಾಲು ವರ್ಷಗಳನ್ನು ಅಲ್ಲಿಯೇ ಕಳೆದನು. ಆ ನಂತರದಲ್ಲಿ ಅಧಿಕಾರಕ್ಕೆ ಬಂದ ಈತನ ಮಗನಾದ ಸೋಮೇಶ್ವರನು ಹೊಯ್ಸಳ ಸಾಮ್ರಾಜ್ಯವನ್ನು ಇಬ್ಭಾಗ ಮಾಡಿ ಸಾಮ್ರಾಜ್ಯದ ಉತ್ತರಭಾಗವನ್ನು ಮುಮ್ಮಡಿ ನರಸಿಂಹನಿಗೂ, ದಕ್ಷಿಣ ಭಾಗವನ್ನು ರಾಮನಾಥನಿಗೂ ನೀಡಿದನು. ಕ್ರಿ.ಶ.೧೨೫೧ರಲ್ಲಿ ಜಟಾವರ್ಮ ಸುಂದರ ಪಾಂಡ್ಯನು ಚೋಳರಾಜ್ಯವನ್ನೂ ವಶಪಡಿಸಿಕೊಂಡನು. ಹತಾಶನಾದ ಸೋಮೇಶ್ವರನು ಪ್ರಾಣಬಿಟ್ಟನು. ರಾಜ್ಯ ಕಳೆದುಕೊಂಡ ರಾಮನಾಥನು ತನ್ನ ಸೋದರ ಮುಮ್ಮಡಿ ನರಸಿಂಹನೊಡನೆ ಕಾದಾಟಕ್ಕೆ ನಿಂತಾಗ ನರಸಿಂಹನು ಅವನನ್ನು ನಿವಾರಿಸಿದನು. ನರಸಿಂಹನ ಮಗನಾದ ಮುಮ್ಮಡಿ ಬಲ್ಲಾಳನು ಕ್ರಿ.ಶ.೧೨೯೨ರಲ್ಲಿ ಅಧಿಕಾರಕ್ಕೆ ಬಂದ ನಂತರ ರಾಮನಾಥ ಮತ್ತು ಆತನ ಮಗ ವಿಶ್ವನಾಥನನ್ನು ಸೋಲಿಸಿ ಹೊಯ್ಸಳ ರಾಜ್ಯವನ್ನು ಒಂದುಗೂಡಿಸಿದನು.

ಮುಮ್ಮಡಿ ಬಲ್ಲಾಳನು ಈ ವಂಶದ ಕೊನೆಯ ಅರಸ. ಐವತ್ತು ವರ್ಷಗಳ ಕಾಲದ ಈತನ ಆಳ್ವಿಕೆಯ ಸಂದರ್ಭದಲ್ಲಿ ದೇಶದ ರಾಜಕೀಯದಲ್ಲಿ ಹಲವಾರು ಸ್ಥಿತ್ಯಂತರಗಳು ನಡೆದವು. ಉತ್ತರಭಾರತದಲ್ಲಿ ಬೇರೂರಿದ್ದ ಮಹಮದೀಯರು ದಕ್ಷಿಣಭಾರತದ ರಾಜ್ಯಗಳನ್ನು ಆಕ್ರಮಿಸ ತೊಡಗಿದರು. ಮಲ್ಲಿಕಾಫರನು ದಂಡಯಾತ್ರೆಯನ್ನು ಕೈಗೊಂಡು ದೋರಸಮುದ್ರವನ್ನು ಮುತ್ತಿದನು. ಪಾಂಡ್ಯರ ರಾಜಧಾನಿ ಮಧುರೆಯನ್ನು ಸೂರೆಗೊಂಡನು. ಕಾಕತೀಯ ಪ್ರತಾಪರುದ್ರನು ಈತನ ಧಾಳಿಗೆ ತುತ್ತಾದನು. ಕ್ರಿ.ಶ.೧೩೦೮ರಲ್ಲಿ ಪಾಂಡ್ಯ ಸೋದರರಲ್ಲಿ ವೈಮನಸ್ಯ ಉಂಟಾದಾಗ ಸುಂದರಪಾಂಡ್ಯನನ್ನು ಬೆಂಬಲಿಸಲು ಬಲ್ಲಾಳನು ತೆರಳಿದಾಗ ಮಲ್ಲಿಕ್‌ಕಾಫರನು ಸೇಉಣರ ಸಹಕಾರದೊಂದಿಗೆ ದೋರಸಮುದ್ರವನ್ನು ಮುತ್ತಿದನು. ಬಲ್ಲಾಳನು ಕಾಫರನಿಗೆ ಕಪ್ಪಕಾಣಿಕೆಯನ್ನಿತ್ತುದ್ದುದಲ್ಲದೆ ಪಾಂಡ್ಯ ರಾಜ್ಯದ ಮೇಲೆ ಕಾಫರನು ಧಾಳಿ ಮಾಡಿದಾಗ ಸಹಕರಿಸ ಬೇಕಾಯಿತು. ಆತನ ಕಣ್ಮುಂದೆಯೇ ಪಾಂಡ್ಯರಾಜ್ಯದ ಕಾಂಚೀಪುರ, ಮಧುರೆಗಳು ಸೂರೆಗೊಂಡವು.

ಕ್ರಿ.ಶ.೧೩೧೨ರಲ್ಲಿ ಸೇಉಣ ರಾಜ್ಯ ಅಸ್ತಂಗತವಾದಾಗ ಹಲವಾರು ಜನ ಸಾಮಂತರು ಸ್ವತಂತ್ರರಾದರು. ಹಾಗೆ ಸ್ವತಂತ್ರರಾದವರಲ್ಲಿ ಕಂಪಿಲನೂ ಒಬ್ಬ. ಮಹಮ್ಮದ್ ತುಘಲಕ್ ಸುಲ್ತಾನನಾದ ಮೇಲೆ ದೋರಸಮುದ್ರವನ್ನು ಮುತ್ತಿದಾಗ ಬಲ್ಲಾಳನು ತಿರುವಣ್ಣಾಮಲೈಯಲ್ಲಿ ಆಶ್ರಯ ಪಡೆದನು. ಸುಲ್ತಾನನ ಸೈನ್ಯ ಮಧುರೆಯ ಪಾಂಡ್ಯರನ್ನು ಸೋಲಿಸಿ, ಪ್ರಾಂತ್ಯಾಧಿಕಾರಿಯನ್ನು ನೇಮಿಸಿತು.

ಕ್ರಿ.ಶ.೧೩೩೦ರ ವೇಳೆಗೆ ದಕ್ಷಿಣದಲ್ಲಿ ಹೊಯ್ಸಳ ಮತ್ತು ಕಂಪಿಲದೇವನ ಪಾಳೆಯಗಳನ್ನುಳಿದು ಉಳಿದೆಲ್ಲವೂ ಸುಲ್ತಾನನ ವಶವಾಗಿದ್ದವು. ಸುಲ್ತಾನನ ವಿರುದ್ಧ ಆತನ ಸೋದರಳಿಯ ಮತ್ತು ಪ್ರಾಂತ್ಯಾಧಿಕಾರಿಯಾದ ಗುರ್‌ಷಾಸ್ಫ್ ದಂಗೆಯೆದ್ದು ಕಂಪಿಲಿಯಲ್ಲಿ ಆಶ್ರಯ ಪಡೆದಾಗ, ಕಂಪಿಲಿಯನ್ನು ಸೈನ್ಯವು ಮುತ್ತಿತು. ಯುದ್ಧದಲ್ಲಿ ಕಂಪಿಲನು ಸೋತನು. ಬಲ್ಲಾಳನು ತನ್ನ ಆಶ್ರಯದಲ್ಲಿದ್ದ ದಂಗೆಕೋರನನ್ನು ಸುಲ್ತಾನನಿಗೆ ಒಪ್ಪಿಸಬೇಕಾಗಿ ಬಂತು.

ದೆಹಲಿಯ ಸುಲ್ತಾನನು ರಾಜ್ಯದಾಹವಷ್ಟನ್ನೇ ಹೊಂದಿರದೆ ಮತಾಂತರಕ್ಕೂ ಮುಂದಾದನು. ಹಿಂದೂ ದೇವಾಲಯಗಳನ್ನು ಭಗ್ನಗೊಳಿಸಿದನು. ಹಿಂದೂಧರ್ಮದ ಅಸ್ತಿತ್ವವನ್ನೇ ಅಲುಗಾಡಿಸಲು ಮುಂದಾದಾಗ, ಎಚ್ಚೆತ್ತ ಮುಮ್ಮಡಿ ಬಲ್ಲಾಳನು ಇದನ್ನು ತಡೆಯಲು ಆಂಧ್ರಪ್ರದೇಶದ ಕಾಕತೀಯ ರಾಜ್ಯದ ಪ್ರೋಲನಾಯಕ ಮತ್ತು ಕಾಪಯ್ಯನಾಯಕರನ್ನು ಬೆಂಬಲಿಸಿ ತೆಲಂಗಾಣದ ಪ್ರಾಂತ್ಯಾಧಿಕಾರಿಯಾಗಿದ್ದ ಮಲ್ಲಿಕ್ ಮಖ್ಬೂಲ್‌ನನ್ನು ಸೋಲಿಸಿದನು. ದಕ್ಷಿಣದ ಮಾಬರ್‌ನಿಂದ ಮಹಮದೀಯರನ್ನು ಓಡಿಸಿ ಶಂಭುವರಾಯನನ್ನು ಅಧಿಕಾರಿಯಾಗಿ ನೇಮಿಸಿದನು. ತನ್ನ ಇಳಿವಯಸ್ಸು ಮತ್ತು ಮಗನಾದ ವಿರೂಪಾಕ್ಷ ಬಲ್ಲಾಳನ ಅಸಮರ್ಥತೆಯ ಅರಿವಿದ್ದ ಬಲ್ಲಾಳನು ತನ್ನ ರಾಜ್ಯದ ವಿವಿಧ ಪ್ರಾಂತ್ಯಗಳ ಅಧಿಕಾರವನ್ನು ಅಲ್ಲಲ್ಲಿನ ಅಧಿಕಾರಿಗಳಿಗೆ ವಹಿಸಿದನು. ದೋರಸಮುದ್ರವು ಕಾಫರನ ಧಾಳಿಯಿಂದ ನಾಶವಾದಾಗ ರಾಜಧಾನಿಯನ್ನು ಬೇಲೂರಿಗೆ ಬದಲಿಸಿದನು. ತಿರುವಣ್ಣಾಮಲೈ, ಹಂಪಿಯನ್ನು ಸಹ ರಾಜಧಾನಿಯಾಗಿ ಮಾಡಿಕೊಂಡನು. ಕ್ರಿ.ಶ.೧೩೪೦ರಲ್ಲಿ ಮಧುರೆಯ ಮಹಮದೀಯರು ದಂಡೆತ್ತಿ ಬಂದಾಗ ಪರಾಕ್ರಮದಿಂದ ಹೋರಾಡಿದ ಬಲ್ಲಾಳನು ಕಣ್ಣಾನೂರನ್ನು ವಶಪಡಿಸಿಕೊಂಡನು. ಮಹಮದೀಯರು ಶರಣಾದಂತೆ ನಟಿಸಿ ಮೋಸದಿಂದ ಬಲ್ಲಾಳನನ್ನು ಬಂಧಿಸಿ ಅಮಾನುಷವಾಗಿ ಕೊಂದರು. ಇದರೊಂದಿಗೆ ಹೊಯ್ಸಳರ ಆಳ್ವಿಕೆಯ ಮುಕ್ತಾಯವಾಯಿತು. ಮುಂದೆ ಹಿಂದೂ ಧರ್ಮದ ರಕ್ಷಣೆಯ ಗುರಿಯನ್ನು ಹೊಂದಿದ್ದ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ಕಾರಣವಾಯಿತು.

ಹೊಯ್ಸಳರ ಇತಿಹಾಸದ ಆರಂಭ ಕಾಲದಲ್ಲಿ ಕೆಲವು ಭಾಗಗಳು ಚೋಳರ ಆಳ್ವಿಕೆಗೆ ಒಳಪಟ್ಟಿದ್ದವು. ಆದರೆ ಸಂಸ್ಕೃತಿಯ ವಿಚಾರದಲ್ಲಿ ಪರಸ್ಪರ ಪ್ರಭಾವಿತವಾಗಿದ್ದವು. ಉತ್ತರ ಕರ್ನಾಟಕದ ಸಾಮಾಜಿಕ ಧಾರ್ಮಿಕ ಕ್ರಾಂತಿಗಳ ಪ್ರಭಾವ ಈ ಭಾಗದ ಮೇಲೆ ಅಷ್ಟಾಗಿ ಪರಿಣಾಮ ಬೀರಲಿಲ್ಲ. ಕರ್ನಾಟಕದ ಸಂಸ್ಕೃತಿಯನ್ನು ಶ್ರೀಮಂತಗೊಳಿಸುವುದರಲ್ಲಿ ಹೊಯ್ಸಳರು ಪ್ರಮುಖ ಪಾತ್ರವಹಿಸಿದರು. ಲಲಿತಕಲೆ, ಸಾಹಿತ್ಯ, ಶಿಲ್ಪಕಲೆಗಳಿಗೆ ಸಾಕಷ್ಟು ಪ್ರೋತ್ಸಾಹ ನೀಡಿದರು. ಸರ್ವಧರ್ಮ ಸಹಿಷ್ಣುಗಳಾದ ಇವರ ಕಾಲದಲ್ಲಿ ಹಲವಾರು ಕಲಾಸಂಪನ್ನವಾದ ದೇವಾಲಯಗಳ ನಿರ್ಮಾಣವಾಯಿತು. ಕನ್ನಡಿಗರ ವೀರತ್ವದ ಸಂಕೇತವಾಗಿ ವೇಳೆವಾಳಿ, ಜೋಳವಾಳಿ, ಲೆಂಕವಾಳಿ, ಗರುಡಪದ್ಧತಿಗಳು

ಅನುಸರಣೆಯಲ್ಲಿದ್ದು 'ಬೀರತನ' ಎಂಬ ಮೌಲ್ಯದ ಸಂಕೇತವಾದವು. ಸಾಹಿತ್ಯವು ಸಮೃದ್ಧವಾಗಿ ಬೆಳೆಯಿತು. ರಾಜಾದಿತ್ಯ, ಸುಮನೋಬಾಣ, ಹರಿಹರ, ರಾಘವಾಂಕ, ಕೆರೆಯಪದ್ಮರಸ, ರುದ್ರಭಟ್ಟ, ನೇಮಿಚಂದ್ರ, ಜನ್ನ, ಆಂಡಯ್ಯ ಮುಂತಾದ ಕವಿಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದರು. ಜನ್ನ, ದೇವಪಾರ್ಯ, ಕಲ್ಲಯ್ಯ, ಸೋಮನಾಥ ಪಂಡಿತ, ಚಿದಾನಂದಕವಿ, ದಶಕೀರ್ತಿದೇವ ಮೊದಲಾದವರು ಶಾಸನಕವಿಗಳಾಗಿ ಶಾಸನ ಸಾಹಿತ್ಯವನ್ನು ಸಂಪನ್ನಗೊಳಿಸಿದರು. ಒಟ್ಟಿನಲ್ಲಿ ಹೊಯ್ಸಳರ ಕಾಲವು ಕರ್ನಾಟಕದ ಇತಿಹಾಸದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ.

ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರವರೆಗಿನ ಕಾಲಾವಧಿಯ ರಾಜಕೀಯ ಇತಿಹಾಸವು ಕರ್ನಾಟಕದ ಹಲವಾರು ಕ್ಷೇತ್ರಗಳ ಉಚ್ಛ್ರಾಯ ಸ್ಥಿತಿಗೆ ಕಾರಣವಾಯಿತು. ಈ ಅವಧಿಯಲ್ಲಿ ಕರ್ನಾಟಕವನ್ನು ಆಳಿದ ರಾಷ್ಟ್ರಕೂಟರು, ಕಲ್ಯಾಣಿಯ ಚಾಲುಕ್ಯರು, ಹೊಯ್ಸಳರು, ಸೇಉಣರು ಅಥವಾ ಯಾದವರು, ಕಲಚುರಿ ಹಾಗೂ ಹಲವಾರು ಪ್ರಾಂತ್ಯಗಳ ಸಾಮಂತರು ಕರ್ನಾಟಕದ ಸಾಹಿತ್ಯ, ವಾಸ್ತುಶಿಲ್ಪ, ಲಲಿತಕಲೆಗಳ ಸರ್ವಾಂಗೀಣ ಪ್ರಗತಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ರಾಜಕೀಯವಾಗಿ ಈ ರಾಜವಂಶಗಳ ಪ್ರಾಬಲ್ಯ ಏಳು-ಬೀಳು, ಅಧಿಕಾರ ವ್ಯಾಪ್ತಿ ಬೇರೆಯಾದರೂ ಕರ್ನಾಟಕದ ವಿವಿಧ ಕ್ಷೇತ್ರಗಳ ಅಭಿವೃದ್ಧಿಯ ವಿಚಾರದಲ್ಲಿ, ಪರಂಪರೆಯ ವಿಚಾರದಲ್ಲಿ ಇವರೆಲ್ಲರ ಉದ್ದೇಶ, ಕನಸುಗಳು ಮಾತ್ರ ಒಂದೇ ರೀತಿಯಾಗಿತ್ತು ಎನ್ನಬಹುದಾಗಿದೆ.

೮ನೆಯ ಶತಮಾನದಿಂದ ೧೩ನೆಯ ಶತಮಾನದವರೆಗೆ ಆಳ್ವಿಕೆ ನಡೆಸಿದ ರಾಷ್ಟ್ರಕೂಟರು, ಕಲ್ಯಾಣಿಯ ಚಾಲುಕ್ಯರು, ಸೇಉಣರು, ಕಲಚುರಿಗಳು, ಹೊಯ್ಸಳರು, ಕರ್ನಾಟಕದ ಇತಿಹಾಸದಲ್ಲಿ ಯಾವ ರೀತಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದರೋ ಅದೇ ರೀತಿಯಲ್ಲಿ ಕರ್ನಾಟಕದ ಸಾಹಿತ್ಯ ಶಿಲ್ಪಕಲೆ, ಲಲಿತಕಲೆಗಳು, ಜನಜೀವನದ ಏಳಿಗೆಗಾಗಿ, ಅಭಿವೃದ್ಧಿಗಾಗಿ ಆದ್ಯತೆಯನ್ನು ನೀಡಿದರು ಎಂಬುದು ಸರ್ವವಿದಿತವಾಗಿದೆ. ಅಂತೆಯೇ ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರ ನಾಲ್ಕುನೂರು ವರ್ಷಗಳ ಈ ಅವಧಿಯು ಕರ್ನಾಟಕದ ಶಾಸನ ಪರಂಪರೆಯ ದೃಷ್ಟಿಯಿಂದಲೂ ಮಹತ್ವಪೂರ್ಣವಾದುದಾಗಿದೆ.

ರಾಜಕೀಯವಾಗಿ ಪ್ರಬಲವಾಗಿದ್ದ ರಾಜವಂಶಗಳು ಶಾಂತಿನೆಮ್ಮದಿಯನ್ನು ಸ್ಥಾಪಿಸಲು ಹೆಚ್ಚು ಗಮನ ನೀಡಿದರು. ಸುವ್ಯವಸ್ಥಿತ ಆಡಳಿತದ ಬಗೆಗೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ರಾಷ್ಟ್ರಕೂಟರ ಮುಮ್ಮಡಿ ಕೃಷ್ಣ ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯ, ಹೊಯ್ಸಳರ ವಿಷ್ಣುವರ್ಧನ ಮೊದಲಾದ ಪ್ರಮುಖರು ರಾಜ್ಯವಿಸ್ತರಣೆಯ ಜೊತೆಜೊತೆಗೆ ಶಾಂತಿ ಸುವ್ಯವಸ್ಥೆ, ಜನಜೀವನದ ಏಳಿಗೆಯತ್ತ ಗಮನಹರಿಸಿದುದು ಸಮಾಜದ ಧಾರ್ಮಿಕ, ಸಾಹಿತ್ಯಕ, ಸಾಂಸ್ಕೃತಿಕ ವಲಯಗಳಲ್ಲಿ ಸಾಕಷ್ಟು ಪ್ರಭಾವವನ್ನು ಬೀರಿತು. ಅಂತೆಯೇ ಶಾಸನಗಳನ್ನು ಹಾಕಿಸುವ, ಶಾಸನಗಳ

ಪಾಠಗಳನ್ನು ಸಿದ್ಧಪಡಿಸುವ ವಿಷಯದಲ್ಲೂ ಸಹ ರಾಜಕೀಯವಾಗಿದ್ದ ಸ್ಥಿರತೆಯು ತನ್ನ ಪ್ರಭಾವವನ್ನು ಬೀರಿತು. ಹೀಗಾಗಿ ಪ್ರತಿಯೊಂದು ರಾಜವಂಶಗಳಿಗೆ ಸೇರಿದ ಶಾಸನಗಳು ತಮ್ಮದೇ ಆದ ರೀತಿಯಿಂದ ಗಮನಸೆಳೆಯುತ್ತದೆ.

## ೨.೧೧ : ವಿಜಯನಗರದ ಅರಸರು :-

ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯಾದುದು ಭಾರತದ ಇತಿಹಾಸದಲ್ಲೇ ಒಂದು ಪ್ರಮುಖವಾದ ಘಟನೆಯಾಗಿದೆ. ಹೊಯ್ಸಳರ ಮುಮ್ಮಡಿ ವೀರಬಲ್ಲಾಳನು ದಕ್ಷಿಣಭಾರತದ ಮೇಲೆ ಉಂಟಾದ ಮುಸಲ್ಮಾನರ ಧಾಳಿಯನ್ನು ಎದುರಿಸಲು ಸಾಕಷ್ಟು ಪ್ರಯತ್ನಿಸಿದನು ಮತ್ತು ತಕ್ಕಮಟ್ಟಿಗೆ ಯಶಸ್ವಿಯೂ ಆದನು. ಅಂತಹ ಪ್ರಯತ್ನಗಳಲ್ಲಿ ಬಲ್ಲಾಳನು ತನ್ನ ಮಾಂಡಲಿಕರಿಗೂ, ಕೈಕೆಳಗಿನ ಅಧಿಕಾರಿಗಳಿಗೂ ಆಡಳಿತದಲ್ಲಿ ಸಮಾನ ಅವಕಾಶವನ್ನು ನೀಡುತ್ತಿದ್ದು, ನಾಡಿನ ರಕ್ಷಣೆಯ ಕಾರ್ಯದಲ್ಲಿ ಅವರನ್ನು ತೊಡಗಿಸಿಕೊಂಡಿದ್ದನು. ಹೀಗೆ ಸಹಕಾರ ನೀಡಿದವರಲ್ಲಿ ಹರಿಯಪ್ಪವೊಡೆಯ (ಹರಿಹರ) ಒಬ್ಬನು. ಹಾಗೂ ಈತನು ಬಲ್ಲಾಳನಿಗೆ ಸಂಬಂಧಿಯೂ ಸಹ. ಬಲ್ಲಾಳನ ಸೋದರಳಿಯ ಬಲ್ಲಪದಣ್ಣಾಯಕನು ಹರಿಹರನ ಅಳಿಯ. ಸೌಹಾರ್ದಯುತವಾದ ಸಂಬಂಧ ಹೊಂದಿದ್ದ ಹರಿಹರನು ಸಹಜವಾಗಿ ಬಲ್ಲಾಳನ ಆಡಳಿತದಲ್ಲಿ ಪಾಲ್ಗೊಳ್ಳಲು ಅವಕಾಶವೂ ಆಗಿತ್ತು. ಸಂಗಮನ ಮಗನಾದ ಈತನು ಕ್ರಮೇಣ ಮಹಾಮಂಡಲೇಶ್ವರ ಪದವಿಗೆ ಏರಿದನು. ಕ್ರಿ.ಶ.೧೩೩೬ರ ಸುಮಾರಿಗೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದುದರಲ್ಲಿ ಈತನ ಪಾತ್ರವಿದೆ. ಕ್ರಿ.ಶ.೧೩೩೬ರಿಂದ ಕ್ರಿ.ಶ.೧೩೫೬ರವರೆಗೆ ಆಳಿದ ನಂತರ ಈತನ ಸಹೋದರನಾದ ಮೊದಲನೆಯ ಬುಕ್ಕರಾಯನು ಅಧಿಕಾರಕ್ಕೆ ಬಂದನು. ಕ್ರಿ.ಶ.೧೩೫೬ರಿಂದ ಕ್ರಿ.ಶ.೧೩೭೭ರವರೆಗೆ ಆಡಳಿತ ನಡೆಸಿದ ಬುಕ್ಕರಾಯನು ಸ್ಥಾಪನೆಯಾದ ರಾಜ್ಯವನ್ನು ಸಮರ್ಥವಾಗಿ ಮುನ್ನಡೆಸುವ ಮತ್ತು ವಿಸ್ತರಿಸುವ ಜವಾಬ್ದಾರಿಯನ್ನು ನಿರ್ವಹಿಸಬೇಕಾಯಿತು. ಹೀಗಾಗಿ ಶಂಭುವರಾಯನನ್ನು ಎದುರಿಸಿ ಆತನನ್ನು ತನ್ನ ಅಧೀನ ಮಾಡಿಕೊಂಡನು. ಈ ಹೋರಾಟದಲ್ಲಿ ಮತ್ತು ಆ ನಂತರದಲ್ಲಿ ಮಧುರೆಯಲ್ಲಿ ದೆಹಲಿಯ ಸುಲ್ತಾನರ ಪ್ರತಿನಿಧಿಯಾಗಿದ್ದ ಜಲಾಲುದ್ದೀನ ಅಹ್‌ಸನಷಹ ವಿರುದ್ದ ನಡೆದ ಹೋರಾಟದಲ್ಲಿ ಬುಕ್ಕರಾಯನ ಮಗನಾದ ಕಂಪಣನು ಪ್ರಮುಖವಾದ ಪಾತ್ರವನ್ನು ವಹಿಸಿದ್ದನು. ಮಧುರೆಯು ಕಂಪಣನ ವಶವಾಯಿತು. ಕಂಪಣನ ಈ ವಿಜಯವನ್ನು ಆತನ ಪತ್ನಿ ಗಂಗಾಂಬಿಕೆಯು 'ಮಧುರಾವಿಜಯಂ' ಅಥವಾ 'ವೀರಕಂಪಣರಾಯ ಚರಿತಂ'ನಲ್ಲಿ ಹೃದಯಂಗಮವಾಗಿ ಬಣ್ಣಿಸಿದ್ದಾಳೆ.

ಬುಕ್ಕರಾಯನು ರಣರಂಗದ ಸಾಧನೆಗಳಿಗಿಂತ ಹೆಚ್ಚು ಪ್ರಸಿದ್ಧನಾಗಿರುವುದು ಆತನ ಪರಮತ ಸಹಿಷ್ಣುತೆಗಾಗಿ. ಶ್ರವಣಬೆಳಗೊಳದ ಶಾಸನವು[೧೧] ಜೈನರು ಮತ್ತು ಶ್ರೀವೈಷ್ಣವರ ನಡುವೆ

ನಡೆದ ವಿವಾದವನ್ನು ಬಗೆಹರಿಸಿದ ವಿಚಾರವನ್ನು ದಾಖಲಿಸುತ್ತದೆ. ಸಾಯಣಾಚಾರ್ಯ ಮತ್ತು ಮಾಧವಾಚಾರ್ಯರ ನಿರ್ದೇಶನದಲ್ಲಿ ವೇದಗಳಿಗೆ ಭಾಷ್ಯವನ್ನು ಬರೆಯಿಸಿದ. ಹೀಗಾಗಿ ಈತನಿಗೆ 'ವೇದಮಾರ್ಗ ಪ್ರತಿಷ್ಠಾಪಕ' 'ವೇದಮಾರ್ಗ ಪ್ರವರ್ತಕ' ಎಂಬ ಬಿರುದುಗಳು ಸಂದವು. ಭೀಮಕವಿ, ಬಾಹುಬಲಿ ಪಂಡಿತ ಮತ್ತು ಮಂಗರಾಜ ಈತನ ಕಾಲದ ಪ್ರಮುಖ ಕವಿಗಳಾಗಿದ್ದಾರೆ.

ಬುಕ್ಕನ ನಂತರ ಕ್ರಮವಾಗಿ ಇಮ್ಮಡಿ ಹರಿಹರ (ಕ್ರಿ.ಶ.೧೩೭೭ರಿಂದ ಕ್ರಿ.ಶ.೧೪೦೪), ಇಮ್ಮಡಿ ಬುಕ್ಕ (ಕ್ರಿ.ಶ.೧೪೦೪ರಿಂದ ಕ್ರಿ.ಶ.೧೪೦೬), ಮೊದಲನೆಯ ದೇವರಾಯ (ಕ್ರಿ.ಶ.೧೪೦೬ರಿಂದ ೧೪೨೨), ವಿಜಯಬುಕ್ಕರಾಯ (ಕ್ರಿ.ಶ.೧೪೨೨ರಿಂದ ೧೪೨೪) ಆಳ್ವಿಕೆಯನ್ನು ನಡೆಸಿದರು. ವಿಜಯ ಬುಕ್ಕರಾಯನ ನಂತರ ಅಧಿಕಾರಕ್ಕೆ ಬಂದ ಇಮ್ಮಡಿ ದೇವರಾಯ (ಕ್ರಿ.ಶ.೧೪೨೪ರಿಂದ ಕ್ರಿ.ಶ.೧೪೪೬)ನು ಸಂಗಮವಂಶದ ಪ್ರಸಿದ್ಧನಾದ ದೊರೆ. ಈತನಿಗೆ ಪ್ರೌಢದೇವರಾಯ, ಪ್ರತಾಪದೇವರಾಯ, ಅಭಿನವದೇವರಾಯ, ಗಜಬೇಂಟೆಕಾರ ಮುಂತಾದ ಬಿರುದುಗಳಿವೆ.

## ಇಮ್ಮಡಿ ದೇವರಾಯ (ಕ್ರಿ.ಶ.೧೪೨೪ರಿಂದ ಕ್ರಿ.ಶ.೧೪೪೬) :-

ವಿಜಯನಗರ ಸಾಮ್ರಾಜ್ಯದ ಇತಿಹಾಸದಲ್ಲಿ ಇಮ್ಮಡಿ ದೇವರಾಯನು ಪ್ರಸಿದ್ಧನಾದ ದೊರೆ. ರಾಜಕೀಯವಾಗಿಯೂ ಸಹ ಪ್ರಬಲನಾದ ಈತನು ಆಂಧ್ರಪ್ರದೇಶದ ರೆಡ್ಡಿ ಮನೆತನಗಳ ನಾಯಕರು ಹಾಗೂ ಒರಿಸ್ಸಾದ ಗಜಪತಿ ಅರಸರ ಬೆಂಬಲವನ್ನು ಗಳಿಸಿದ್ದು ಈತನು ಬಹಮನಿ ಸುಲ್ತಾನನ ವಿರುದ್ಧ ಕಾದಿದನು. ಆ ನಂತರದಲ್ಲಿ ಕಳಿಂಗದೇಶದ ಗಜಪತಿಯು ಪ್ರಬಲನಾಗಲು ಪ್ರಯತ್ನಿಸಿದಾಗ ಆತನನ್ನು ಯುದ್ಧದಲ್ಲಿ ಎದುರಿಸಿದನು. ಇಮ್ಮಡಿ ದೇವರಾಯನ ಪ್ರಾಬಲ್ಯಕ್ಕೆ ಮಣಿದು ಬಹಮನಿ ಸುಲ್ತಾನನು ತನ್ನ ರಾಜಧಾನಿಯನ್ನೇ ಬದಲಾಯಿಸಿದನು. ದೇವರಾಯನ ದಂಡಾಧಿಪನಾದ ಲಕ್ಕಣ್ಣನು ಸಿಂಹಳದ್ವೀಪದ ರಾಜನ ಮೇಲೆ ಧಾಳಿ ನಡೆಸಿ ಆತನನ್ನು ಸೋಲಿಸಿದನು. ಇದರ ಫಲವಾಗಿ 'ದಕ್ಷಿಣ ಸಮುದ್ರಾಧೀಶ್ವರ'ನೆಂಬ ಬಿರುದನ್ನು ಲಕ್ಕಣ್ಣನಿಗೆ ನೀಡಲಾಯಿತು.

ಇಮ್ಮಡಿ ದೇವರಾಯನ ಕಾಲದಲ್ಲಿ ವಿಜಯನಗರದ ಕೀರ್ತಿ, ಪ್ರತಿಷ್ಠೆಗಳು ಹೆಚ್ಚಾಯಿತು. ಆಂತರಿಕ ನೆಮ್ಮದಿ, ಸಂಪದಭಿವೃದ್ಧಿ, ಸರ್ವಾಂಗೀಣ ಪ್ರಗತಿಯುಂಟಾಗಲು ಸಾಧ್ಯವಾಯಿತು. ಈತನ ಕಾಲದಲ್ಲಿ ಭೇಟಿಕೊಟ್ಟ ಇಟಲಿ ದೇಶದ ನಿಕೊಲೊ ಕೊಂಟಿ, ಇರಾನ್ ರಾಯಭಾರಿ ಅಬ್ದುಲ್‌ರಜಾಕ್ ವಿಜಯನಗರ ಸಾಮ್ರಾಜ್ಯದ ವೈಭವವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ. ಸರ್ವಧರ್ಮಸಮನ್ವಯ ನೀತಿಯನ್ನು ಅನುಸರಿಸಿದನು. ಸಾಹಿತ್ಯ, ಲಲಿತಕಲೆಗಳ ಪೋಷಕನೂ ಆಗಿದ್ದ ಈತನು ಕ್ರಿ.ಶ.೧೪೪೬ರಲ್ಲಿ ದಿವಂಗತನಾದನು.

ಇಮ್ಮಡಿ ದೇವರಾಯನ ನಂತರ ಆಳ್ವಿಕೆ ನಡೆಸಿದ ಮಲ್ಲಿಕಾರ್ಜುನ, ಮುಮ್ಮಡಿ ವಿರೂಪಾಕ್ಷ ಅಸಮರ್ಥರೂ, ಅದಕ್ಷರೂ ಆಗಿದ್ದ ಕಾರಣದಿಂದ ಸಾಮ್ರಾಜ್ಯವು ತನ್ನ ವೈಭವವನ್ನು ಕಳೆದುಕೊಂಡಿತು. ಮುಮ್ಮಡಿ ವಿರೂಪಾಕ್ಷನನ್ನು ಆತನ ಮಗನೇ ಕೊಂದು, ತನ್ನ ಸಹೋದರ ಪ್ರೌಢದೇವರಾಯನಿಗೆ ಅಧಿಕಾರವನ್ನು ನೀಡಿದರೂ ಅವನೂ ಅಸಮರ್ಥನಾದ ಕಾರಣದಿಂದ ದಂಡನಾಯಕನಾದ ಸಾಳುವ ನರಸಿಂಹನು ರಾಜನನ್ನು ಪದಚ್ಯುತಗೊಳಿಸಿ ಕ್ರಿ.ಶ.೧೪೮೫ರಲ್ಲಿ ಸಾಳುವ ವಂಶದ ಆಡಳಿತಕ್ಕೆ ನಾಂದಿಹಾಡಿದನು.

ಆದರೆ ಈತನ ಆಳ್ವಿಕೆಯ ಕಾಲದಲ್ಲಿ ಉಮ್ಮತ್ತೂರಿನ ಪಾಳೆಯಗಾರರು, ಉತ್ತರದ ಕಪಿಲೇಂದ್ರ ಮೊದಲಾದವರು ದಂಗೆಯೆದ್ದರು. ಅವರನ್ನು ಅಡಗಿಸಿರುವುದರಲ್ಲೇ ಮಗ್ನನಾದ ಈತನ ಆಳ್ವಿಕೆಯು ಕ್ರಿ.ಶ.೧೪೯೧ರಲ್ಲಿ ಅಂತ್ಯಗೊಂಡಿತು. ತನ್ನ ಆಳ್ವಿಕೆಯ ಕಾಲದಲ್ಲೇ ತುಳುವ ನರಸಿಂಹನಾಯಕನನ್ನು ತನ್ನ ಮಂತ್ರಿಯಾಗಿ, ಸರ್ವಾಧಿಕಾರಿಯಾಗಿ ನೇಮಿಸಿದ್ದನು. ಅಪ್ರಾಪ್ತ ವಯಸ್ಕರಾಗಿದ್ದ ಇಮ್ಮಡಿ ನರಸಿಂಹನ ರಾಜಪ್ರತಿನಿಧಿಯಾಗಿದ್ದ ತುಳುವ ನರಸನಾಯಕನ ನಂತರ ರಾಜನನ್ನು ಪದಚ್ಯುತಗೊಳಿಸಿ ತಾನೇ ಅಧಿಕಾರಕ್ಕೆ ಬಂದನು. ಈ ಮೂಲಕ ತುಳವ ವಂಶದ ಆಳ್ವಿಕೆಯು ಆರಂಭವಾಯಿತು.

ಕ್ರಿ.ಶ.೧೫೦೩ರಲ್ಲಿ ನರಸನಾಯಕನು ಕಾಲವಾದ ನಂತರ ಆತನ ಮಗ ವೀರನರಸಿಂಹನು ಅಧಿಕಾರಕ್ಕೆ ಬಂದನು. ಕ್ರಿ.ಶ.೧೫೦೫ರಿಂದ ಕ್ರಿ.ಶ.೧೫೦೯ರವರೆಗೆ ಅವನು ಆಳ್ವಿಕೆ ನಡೆಸಿದ ನಂತರ ಅಧಿಕಾರಕ್ಕೆ ಬಂದವನು ತುಳುವ ವಂಶದ ಪ್ರಸಿದ್ಧ ದೊರೆಯಾದ ಕೃಷ್ಣದೇವರಾಯ. ಭಾರತದ ಮತ್ತು ಕರ್ನಾಟಕದ ಇತಿಹಾಸದಲ್ಲಿ ತನ್ನದೇ ಆದ ವಿಶೇಷ ಸ್ಥಾನಮಾನವನ್ನು, ಕೀರ್ತಿಯನ್ನು ಗಳಿಸಿ ಮೆರೆದವನು ಶ್ರೀಕೃಷ್ಣದೇವರಾಯ.

## ಕೃಷ್ಣದೇವರಾಯ (ಕ್ರಿ.ಶ.೧೫೦೯ರಿಂದ ೧೫೨೯):-

ಅರಾಜಕತೆಯಿಂದ ನಲುಗಿದ್ದ ಸಾಮ್ರಾಜ್ಯವನ್ನು ಸ್ಥಿರಗೊಳಿಸುವುದು ಈತನ ಮೊದಲನೆಯ ಆದ್ಯತೆಯಾಯಿತು. ಹೀಗಾಗಿ ಜನಹಿತಕ್ಕಾಗಿ ತೆರಿಗೆಗಳನ್ನು ಕಡಿಮೆಗೊಳಿಸಿ, ಜನರ ಬೆಂಬಲ ಗಳಿಸಿದನು. ಹಾಗೆಯೇ ಕೃಷಿ, ವಾಣಿಜ್ಯ ಚಟುವಟಿಕೆಗಳಿಗೆ ವಿಶೇಷ ಪ್ರಾಶಸ್ತ್ಯವಿತ್ತನು. ಸಾಮಂತರನ್ನು ತನ್ನವರನ್ನಾಗಿ ಮಾಡಿಕೊಂಡು ಸೈನ್ಯಬಲವನ್ನು ವರ್ಧಿಸಿಕೊಂಡನು.

ಸೈನ್ಯವನ್ನು ಬಲಿಷ್ಠಗೊಳಿಸಿಕೊಂಡ ನಂತರ ಈತನು ದಂಡಯಾತ್ರೆಯನ್ನು ಕೈಗೊಂಡು ಬಹಮನಿಯ ಸುಲ್ತಾನರನ್ನು ಸೋಲಿಸಿ ರಾಯಚೂರು, ಮುದಗಲ್ ಕೋಟೆಗಳನ್ನು ವಶಪಡಿಸಿ ಕೊಂಡನು. ಪೋರ್ಚುಗೀಸರ ಸಹಕಾರವನ್ನು ಇಂತಹ ಸಂದರ್ಭದಲ್ಲಿ ರಾಯನು ಪಡೆದಿದ್ದನು.

ಬಹಮನಿಯ ಸುಲ್ತಾನನ ಮಗನನ್ನು ಗುಲ್ಬರ್ಗದಲ್ಲಿ ರಾಜನನ್ನಾಗಿ ಮಾಡುವ ಮೂಲಕ 'ಯವನರಾಜ್ಯ ಪ್ರತಿಷ್ಠಾಪನಾಚಾರ್ಯ'ನೆನಿಸಿಕೊಂಡನು. ಈತನ ಮತ್ತೊಂದು ಪ್ರಮುಖವಾದ ದಿಗ್ವಿಜಯವೆಂದರೆ ಕಳಿಂಗದ ಪ್ರತಾಪರುದ್ರ ಗಜಪತಿಯನ್ನು ಸೋಲಿಸಿದ್ದು, ಗಜಪತಿಯ ವಿರುದ್ಧ ನಡೆದ ಹೋರಾಟದಲ್ಲಿ ಈತನ ಮಂತ್ರಿಯಾದ ಸಾಳುವ ತಿಮ್ಮರಸನು ಪ್ರಮುಖ ಪಾತ್ರ ವಹಿಸಿದ್ದನು. ಅಂತಿಮವಾಗಿ ಪ್ರತಾಪರುದ್ರ ಗಜಪತಿಯು ರಾಯನಿಗೆ ತನ್ನ ಮಗಳಾದ ಜಗನ್ಮೋಹಿನಿಯನ್ನು ಕೊಟ್ಟು ಮದುವೆ ಮಾಡಿ ಸಂಬಂಧ ಬೆಳೆಸಿದನು. ಗಜಪತಿಯ ರಾಜ್ಯವನ್ನು ಆತನಿಗೇ ಬಿಟ್ಟುಕೊಟ್ಟು ರಾಯನು ಔದಾರ್ಯವನ್ನು ಮೆರೆದನು.

ಸ್ವತಃ ಕವಿಯೂ, ಸಾಹಿತ್ಯಪೋಷಕನು ಆಗಿದ್ದ ಈತನು ಕವಿಗಳಿಗೆ ಆಶ್ರಯದಾತನಾಗಿದ್ದನು. 'ಅಷ್ಟದಿಗ್ಗಜ'ರೆಂದು ಪ್ರಸಿದ್ಧರಾಗಿದ್ದ ಕವಿಗಳು ಈತನ ಆಶ್ರಿತರು. ಅಲ್ಲಾಸಾನಿ ಪೆದ್ದನ್ನ, ತಿಮ್ಮಕವಿ ಮೊದಲಾದವರು ಹಲವಾರು ಉತ್ತಮ ಕೃತಿಗಳನ್ನು ರಚಿಸಿದ್ದಾರೆ. ರಾಯನು 'ಆಮುಕ್ತಮಾಲ್ಯದ' ಎಂಬ ಕೃತಿಯನ್ನು ರಚಿಸಿದ್ದಾನೆ. ಹೀಗೆ ವೈಭವದಿಂದ ಬಾಳಿದ ಈತನ ಕೊನೆಯ ದಿನಗಳು ಮಾತ್ರ ಸುಖಕರವಾಗಿರಲಿಲ್ಲ. ತನ್ನ ಮಗನನ್ನು ಕಳೆದುಕೊಂಡ ರಾಯನು ಅಂತಿಮವಾಗಿ ಕ್ರಿ.ಶ.೧೫೨೯ರಲ್ಲಿ ಕಾಲವಶನಾದನು.

ಕೃಷ್ಣದೇವರಾಯನ ನಂತರ ಸಾಮ್ರಾಜ್ಯದ ಅಧಿಕಾರಕ್ಕಾಗಿ ಒಳಜಗಳವು ಆರಂಭವಾಯಿತು. ಸಾಮ್ರಾಜ್ಯದ ಹಕ್ಕುದಾರಿಕೆಗಾಗಿ ಹುಚ್ಚತಿರುಮಲ, ಅಚ್ಯುತರಾಯ ಮತ್ತು ರಾಯನ ಅಳಿಯನಾದ ಆರವೀಡುವಂಶದ ರಾಮರಾಯನ ನಡುವೆ ಪ್ರತಿಸ್ಪರ್ಧೆಯುಂಟಾಯಿತು. ಅಂತಿಮವಾಗಿ ರಾಮರಾಯನ ಬೆಂಬಲವನ್ನು ಗಳಿಸಿದ ಅಚ್ಯುತರಾಯನು ಅಧಿಕಾರಕ್ಕೆ ಬಂದನು.

ಕ್ರಿ.ಶ.೧೫೨೯ರಿಂದ ೧೫೪೨ರವರೆಗೆ ಆಳ್ವಿಕೆ ನಡೆಸಿದ ಅಚ್ಯುತರಾಯನು ಸ್ಥಾಪನೆಯಾಗಿದ್ದ ಸಾಮ್ರಾಜ್ಯವನ್ನು ಕಾಯ್ದುಕೊಳ್ಳುವುದಕ್ಕಷ್ಟೇ ಸೀಮಿತನಾದನು. ದೈವಭಕ್ತನಾದ ಈತನು ಅನೇಕ ದೇವಾಲಯಗಳಿಗೆ ದತ್ತಿಯನ್ನು ನೀಡಿದನು.

ಅಚ್ಯುತ ರಾಯನು ಕ್ರಿ.ಶ.೧೫೪೨ರಲ್ಲಿ ದೈವಾಧೀನನಾದಾಗ ಮತ್ತೊಮ್ಮೆ ಅಂತಃಕಲಹವು ಉಂಟಾಯಿತು. ಅಳಿಯ ರಾಮರಾಯನು ಅಚ್ಯುತರಾಯನ ಸೋದರನಾದ ಸದಾಶಿವರಾಯನ ಪಕ್ಷವನ್ನು ವಹಿಸಿದನು. ಅಂತಃಕಲಹಗಳು ಕೊನೆಗೊಂಡ ನಂತರ ಸದಾಶಿವರಾಯನನ್ನು ಸಿಂಹಾಸನದಲ್ಲಿ ನೆಪಮಾತ್ರಕ್ಕೆ ಕೂರಿಸಿದ ರಾಮರಾಯನು ಸರ್ವಾಧಿಕಾರಿಯಾಗಿ ಮೆರೆದನು. ರಾಮರಾಯನ ಸೋದರರಾದ ತಿರುಮಲ ಮತ್ತು ವೆಂಕಟಾದ್ರಿ ಕ್ರಮವಾಗಿ ಪ್ರಧಾನಿ ಹಾಗೂ ಸೇನಾಪತಿ ಪದವಿಗಳನ್ನು ಅಲಂಕರಿಸಿದರು.

ರಾಮರಾಯನು ರಾಜ್ಯದ ಆಡಳಿತದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿದನು. ವಂಶಪಾರಂಪರ್ಯವಾಗಿ ಅಧಿಕಾರದಲ್ಲಿದ್ದವರ ಜಾಗದಲ್ಲಿ ತನಗೆ ನಿಷ್ಠರಾದವರನ್ನು ನೇಮಿಸಿದನು. ಅನೇಕ ಮಹಮ್ಮದೀಯರಿಗೆ ಅಧಿಕಾರ ನೀಡಿದನು. ಅಧಿಕಾರ ವಂಚಿತರಾದವರು ಇವನ ವೈರಿಗಳಾದರೆ, ಅಧಿಕಾರದಲ್ಲಿದ್ದ ಮಹಮ್ಮದೀಯರು ಈತನ ಒಳಗುಟ್ಟುಗಳನ್ನು ಅರಿತು ಸಮಯ ಸಾಧಕರಾದರು. ಷಾಹಿ ರಾಜ್ಯಗಳ ಅಂತಃಕಲಹಗಳಲ್ಲಿ ಮಧ್ಯೆ ಪ್ರವೇಶಿಸಿದ ರಾಮರಾಯನು ಪರಸ್ಪರ ಒಬ್ಬರ ವಿರುದ್ಧ ಮತ್ತೊಬ್ಬರನ್ನು ಎತ್ತಿಕಟ್ಟತೊಡಗಿದನು. ಅಂತಿಮವಾಗಿ ಮುಸಲ್ಮಾನ ಸುಲ್ತಾನರು ಒಗ್ಗಟ್ಟಾಗಿ ಕ್ರಿ.ಶ.೧೫೬೫ರಲ್ಲಿ ರಾಮರಾಯನನ್ನು ರಕ್ಕಸತಂಗಡಿ ಯುದ್ಧದಲ್ಲಿ ಎದುರಿಸಿದರು. ಈತನ ಸೈನ್ಯದಲ್ಲೇ ಇದ್ದ ಮಹಮ್ಮದೀಯ ಸೇನಾನಿಗಳು ಇವನಿಗೆ ಮೋಸಮಾಡಿ ಶತ್ರುಪಕ್ಷ ಸೇರಿದರು. ಯುದ್ಧದಲ್ಲಿ ಸೋತು ಸೆರೆಸಿಕ್ಕ ರಾಮರಾಯನನ್ನು ನಿಜಾಮಷಹನು ಕೊಂದನು. ಈತನ ತಮ್ಮಂದಿರಾದ ತಿರುಮಲರಾಯ ಮತ್ತು ವೆಂಕಟಾದ್ರಿ ರಣರಂಗದಿಂದ ಕಾಲ್ತೆಗೆದರು. ತಿರುಮಲ ರಾಯನು ಅಪಾರ ಧನಕನಕಗಳನ್ನು, ರಾಣೀವಾಸದವರನ್ನು ಸದಾಶಿವರಾಯನನ್ನು ಮತ್ತು ಬಂಧು ಬಾಂಧವರನ್ನು  ಚಂದ್ರಗಿರಿಗೆ ಸಾಗಿಸಿದನು. ಇನ್ನೂರು ವರ್ಷಗಳಿಂದ ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯನ್ನು ಮಹಮ್ಮದೀಯ ಶತ್ರುಸೇನೆಯು ಸುಲಿಗೆ ಮಾಡಿತು. ದೇವಾಲಯಗಳು, ಮನೋಹರ ವಿಗ್ರಹಗಳು ಭಿನ್ನವಾದವು. ಅಗ್ನಿಗೆ ಆಹುತಿಯಾದವು. ಇದರೊಂದಿಗೆ ಸ್ವತಂತ್ರ ಕರ್ನಾಟಕದ ಇತಿಹಾಸವು ಮುಂದೆ ಪರಿಸಮಾಪ್ತಿಯಾಗುವುದು ಅನಿವಾರ್ಯವಾಯಿತು. ದಕ್ಷಿಣಭಾರತವು ಅನೇಕ ನಾಯಕರ ಪಾಳೆಯಗಾರರ ಅಧೀನಕ್ಕೆ ಸಿಕ್ಕಿ ಒಡೆದು ಹೋಯಿತು. ಮುಂದೊಮ್ಮೆ ಪರಕೀಯರಾದ ಬ್ರಿಟಿಷರ ಪಾಲಾಯಿತು.

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಅವಧಿಯಲ್ಲಿ ಆಳ್ವಿಕೆಯನ್ನು ನಡೆಸಿದ ರಾಜಮನೆತನಗಳ ಇತಹಾಸವನ್ನು ಅವಲೋಕಿಸಲಾಯಿತು. ಈ ಅವಧಿಯಲ್ಲಿ ಆಡಳಿತ ನಡೆಸಿದ ರಾಜವಂಶಗಳ ಕಾಲದಲ್ಲಿ ಕನ್ನಡ ಶಾಸನಗಳು ಬೆಳೆದು ಬರಲು ಇದ್ದ ಅವಕಾಶಗಳು ಹಾಗೂ ಅಡ್ಡಿ ಆತಂಕಗಳನ್ನು ವಿಶ್ಲೇಷಿಸಿದಾಗ ರಾಜಕೀಯ ಪರಿಸ್ಥಿತಿಯೂ ಸಹ ಶಾಸನಗಳ ರಚನೆಯ ಮೇಲೆ ಪ್ರಮಾಣದ ಮೇಲೆ ಪ್ರಭಾವಬೀರಿರುವುದು ಮನವರಿಕೆಯಾಗುತ್ತದೆ.

ಕರ್ನಾಟಕದ ಇತಿಹಾಸವು ಕ್ರಿ.ಪೂ.೩–೪ನೆಯ ಶತಮಾನದ ವೇಳೆಗೆ ಆರಂಭವಾಯಿತು. ಮೌರ್ಯರು, ಸಾತವಾಹನರ ನಂತರ ಕನ್ನಡದ ರಾಜವಂಶಗಳಲ್ಲಿ ಪ್ರಮುಖವಾದ ಗಂಗರು ಕರ್ನಾಟಕದ ದಕ್ಷಿಣಭಾಗದಲ್ಲಿ ಆಳ್ವಿಕೆ ನಡೆಸಿದರೆ ಅದೇ ಕಾಲಾವಧಿಯಲ್ಲಿ ಕರ್ನಾಟಕದ ಉತ್ತರ ಭಾಗದಲ್ಲಿ ಸಾಮ್ರಾಜ್ಯ ಸ್ಥಾಪಿಸಿದ ಕದಂಬರು ಕರ್ನಾಟಕದ ಶಾಸನ ಪರಂಪರೆಯ ಆರಂಭದ ಪ್ರವರ್ತಕರಾಗಿ ಕಂಡು ಬರುತ್ತಾರೆ. ಗಂಗರ ಕಾಲದ ತಾಮ್ರಶಾಸನಗಳು ಮತ್ತು ಕದಂಬರ ಕಾಲದ

ಶಾಸನಗಳಲ್ಲಿ ಸಂಸ್ಕೃತ ಭಾಷೆಯ ಬಳಕೆಯೇ ಪ್ರಧಾನವಾಯಿತು. ಬಹುಶಃ ಇದಕ್ಕೆ ಅವರ ಸಂಸ್ಕೃತ ಭಾಷೆಯ ಬಗೆಗಿನ ಹೆಚ್ಚಿನ ಒಲವೇ ಕಾರಣವೆನ್ನಬಹುದು. ಆ ನಂತರದ ಬಾದಾಮಿಯ ಚಲುಕ್ಯರ ಕಾಲದಲ್ಲೂ ಸಹ ಹೆಚ್ಚು ಕಡಿಮೆ ಇದೇ ಪರಿಸ್ಥಿತಿಯು ಮುಂದುವರೆದರೂ ಬಾದಾಮಿ ಚಲುಕ್ಯರ ಕಾಲದಲ್ಲಿ ಕನ್ನಡ ಭಾಷೆಯಲ್ಲಿ ಶಾಸನಗಳ ರಚನೆಯು ಆರಂಭವಾಯಿತೆನ್ನಬಹುದು.

ಕನ್ನಡ ಶಾಸನಗಳ ಬೆಳವಣಿಗೆಯ ದೃಷ್ಟಿಯಿಂದ ೯ನೆಯ ಶತಮಾನದ ನಂತರದ ರಾಜಕೀಯ ವಾತಾವರಣವು ಪ್ರಮುಖ ಪಾತ್ರವಹಿಸಿದೆ. ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಸೇಉಣರು, ಕಲಚುರಿಗಳು ಹಲವಾರು ಸಾಮಂತ ದೊರೆಗಳು ಸಾಹಿತ್ಯ, ವಾಸ್ತುಶಿಲ್ಪ, ಲಲಿತಕಲೆಗಳ ಪ್ರಗತಿಗೆ ಗಮನ ನೀಡಿದಂತೆ ಶಾಸನಗಳನ್ನು ಹಾಕಿಸುವ ಒಂದು ವಿಶಿಷ್ಟ ಪರಂಪರೆಯನ್ನು ಬೆಳೆಸಿದರು. ವಿಶೇಷವಾಗಿ ಶಾಸನಪಾಠವನ್ನು ರಚಿಸುವ ಹೊಣೆಯನ್ನು ಆಸ್ಥಾನಕವಿಗಳು ವಹಿಸಿಕೊಳ್ಳುವಂತಹ ಸನ್ನಿವೇಶಗಳ ನಿರ್ಮಾಣವಾಯಿತು. ವಿಶೇಷವಾಗಿ ಈ ರಾಜಮನೆತನಗಳ ನಡುವೆ ಆಗಾಗ್ಗೆ ತಮ್ಮ ತಮ್ಮ ಪ್ರಾಬಲ್ಯವನ್ನು ಮೆರೆಸಲು ಯುದ್ಧಗಳು ನಡೆಯುತ್ತಿದ್ದರೂ ಸಹ ಸಮಾಜದಲ್ಲಿ ಶಾಂತಿಯ ವಾತಾವರಣವು ನೆಲೆಸಿತ್ತು ಎನ್ನಲು ಸಾಧ್ಯವಿದೆ. ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗ, ಮುಮ್ಮಡಿಕೃಷ್ಣ, ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯ, ಹೊಯ್ಸಳ ವಂಶದ ವಿಷ್ಣುವರ್ಧನನ ಕಾಲದಲ್ಲಿ ಶಾಂತಿ ನೆಮ್ಮದಿಯ ಸುವ್ಯವಸ್ಥೆಯ ರಾಜಕೀಯ ವಾತಾವರಣವಿತ್ತು. ಹಾಗೆಯೇ ಇವರ ಅವಧಿಯಲ್ಲಿ ಸಹಜವಾಗಿ ಶಾಸನಗಳ ರಚನೆಯ ಸ್ವರೂಪದಲ್ಲಿಯೂ ಸಹ ಬದಲಾವಣೆಗಳು ಉಂಟಾಯಿತು. ಸುಸ್ಥಿರವಾದ ಆಡಳಿತದ ಅವಧಿಯಲ್ಲಿ ಲಲಿತಕಲೆಗಳ ಉತ್ಕರ್ಷ ಉಂಟಾದಂತೆಯೇ ಶಾಸನಸಾಹಿತ್ಯ ಸ್ವರೂಪದಲ್ಲೂ ಉನ್ನತಿಯ ಕಾಲವನ್ನು ಕಾಣಬಹುದಾಗಿದೆ. ಶಾಸನಪಾಠ ರಚನೆಯಲ್ಲಿ ಪಂಡಿತರೂ, ವಿದ್ವಾಂಸರೂ ಆದ ಕವಿಗಳು ತೊಡಗಿದ ಕಾರಣದಿಂದ ಕಾವ್ಯಾತ್ಮಕವಾದ ಸುಧೀರ್ಘವಾದ ಶಾಸನಗಳ ರಚನೆಯು ಸಾಧ್ಯವಾಯಿತೆನ್ನಬಹುದು. ಶಾಂತಿ ಸಮೃದ್ಧಿಯ ಕಾಲವು ಶಿಷ್ಟ ಸಾಹಿತ್ಯದ ಬೆಳವಣಿಗೆಗೆ ಸಹ ಸಹಾಯಕವಾಯಿತು. ಕ್ರಿ.ಶ.೧೩ನೆಯ ಶತಮಾನದವರೆಗೆ ಮುಂದುವರಿದ ಈ ವಾತಾವರಣವು ಆ ನಂತರದಲ್ಲಿ ರಾಜಕೀಯದಲ್ಲಿ ಉಂಟಾದ ಸ್ಥಿತ್ಯಂತರಗಳು ಶಾಸನಗಳ ರಚನೆಯ ಮೇಲೂ ಪ್ರಭಾವಬೀರಿದವು.

ವಿಜಯನಗರದ ಅರಸರ ಕಾಲದ ರಾಜಕೀಯ ಪರಿಸ್ಥಿತಿಯು ಶಾಸನ ರಚನೆಯ ಮೇಲೂ ಪ್ರಭಾವ ಬೀರಿತು. ಸಾಮ್ರಾಜ್ಯದ ಆರಂಭದಿಂದ ಅಂತ್ಯದವರೆಗೂ ಒಳಜಗಳಗಳು, ಯುದ್ಧಗಳೇ ಪ್ರಧಾನವಾಗಿದ್ದ ಈ ಕಾಲದಲ್ಲಿ ಸಹಜವಾಗಿ ಶಾಸನ ಪರಂಪರೆಯ ನಿರ್ಲಕ್ಷಿತವಾಯಿತೆನ್ನಬಹುದು. ಈ ಸಾಮ್ರಾಜ್ಯದ ದೊರೆಗಳು ತಮ್ಮನ್ನು 'ಹಿಂದೂಧರ್ಮ ಸಂರಕ್ಷಕ'ರೆಂದು ಗುರುತಿಸಿಕೊಂಡ ಕಾರಣದಿಂದಾಗಿ ಸಂಸ್ಕೃತ ಭಾಷೆಗೆ ಮಹತ್ವ ದೊರೆಯಿತು.

ಹೀಗಾಗಿ ಕನ್ನಡ ಭಾಷೆಯು ಮೂಲೆಗುಂಪಾಯಿತೆಂಬಂತೆ ಶಾಸನಗಳಲ್ಲಿ ಕಾವ್ಯಾತ್ಮಕವಾದ ನಿರೂಪಣೆಯು ಕಡಿಮೆಯಾಗಿ ವರದಿಯ ರೂಪದ ಗದ್ಯವು ಹೆಚ್ಚಾಯಿತು. ಸಂಸ್ಕೃತಿಯ ಮೇಲೆ ಉಂಟಾದ ಧಾಳಿ, ಜನಜೀವನ ಮೌಲ್ಯಗಳಲ್ಲಿ ಉಂಟಾದ ಬದಲಾವಣೆಗಳು ಸಹಜವಾಗಿ ಶಾಸನ ರಚನೆಯ ಮೇಲೂ ಪ್ರಭಾವ ಬೀರಿತು. ಹಾಗೆಯೇ ವಿಜಯನಗರ ಸಾಮ್ರಾಜ್ಯದ ಪತನದ ನಂತರದಲ್ಲಿ ಸಹಜವಾಗಿ ಕವಿಗಳು, ವಿದ್ವಾಂಸರು, ಪಂಡಿತರು ಆಶ್ರಯವನ್ನು ಅರಸುತ್ತಾ ವಲಸೆ ಹೊರಟದ್ದು, ಬರವಣಿಗೆಯ ಮಾಧ್ಯಮದಲ್ಲಿ ಉಂಟಾದ ಬದಲಾವಣೆಗಳು ಸಹ ಸಾಹಿತ್ಯಕ ಶಾಸನಗಳ ರಚನೆಯು ಇಳಿಮುಖವಾಗಲು ಕಾರಣವಾಯಿತು. ಮುಂದೆ ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿದ ಮೈಸೂರರಸರು, ಕೆಳದಿಯ ನಾಯಕರು, ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲಿ ಶಾಸನ ರಚನೆಯ ಪರಂಪರೆಯು ಮುಂದುವರೆದರೂ ಸಹ ಅದು ಕೇವಲ ವಿಷಯ ನಿರೂಪಣೆಗೆ ಮಾತ್ರ ಸೀಮಿತವಾಯಿತು. ಹೀಗಾಗಿ ಶಾಸನ ರಚನಾಪರಂಪರೆಯು ಅವನತಿಯನ್ನು ಕಾಣುವಂತಾಯಿತು. ರಾಜಕೀಯ ಪರಿಸ್ಥಿತಿ, ಆಡಳಿತ ನಡೆಸುವ ರಾಜಮಹಾರಾಜರ ಒಲವು, ಭಾಷಾನೀತಿ, ಸಾಮಾಜಿಕ ಪರಿಸ್ಥಿತಿಯೂ ಸಹ ಶಾಸನ ಪರಂಪರೆಯ ಪ್ರಚುರತೆ, ವ್ಯಾಪಕತೆಯ ಮೇಲೂ ಪ್ರಭಾವ ಬೀರಿದೆ ಎನ್ನಬಹುದು. ಕ್ರಿ.ಶ.೪೫೦ರಿಂದ ಕ್ರಿ.ಶ.೮೫೦ರ ಅವಧಿಯನ್ನು ಕರ್ನಾಟಕದ ಶಾಸನಗಳ ಆರಂಭದ ಕಾಲವೆನ್ನಬಹುದು. ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರ ಅವಧಿಯು ಶಾಸನ ಪರಂಪರೆಯ 'ಸುವರ್ಣಯುಗ'ವೆನ್ನಬಹುದು. ಕ್ರಿ.ಶ.೧೩೫೦ರ ನಂತರದ ಕಾಲವನ್ನು ಅವನತಿಯ ಕಾಲವೆಂದು ಹೇಳಲು ಅವಕಾಶವಿದೆ. ಮನುಷ್ಯನ ಬದುಕಿನಲ್ಲಿ ಬಾಲ್ಯ-ಯೌವನ ಮತ್ತು ವೃದ್ಧಾಪ್ಯವನ್ನು ಕಾಣುವಂತೆ ಶಾಸನ ಬೆಳವಣಿಗೆಯ ಹಂತದಲ್ಲೂ ಕಾಣುವಂತಾಯಿತು ಎನ್ನಬಹುದು. ಒಟ್ಟಾರೆಯಾಗಿ ರಾಜಕೀಯ ಪರಿಸ್ಥಿತಿಯು ಸಹ ತನ್ನದೇ ಆದ ಪ್ರಭಾವವನ್ನು ಶಾಸನ ಕ್ಷೇತ್ರದ ಮೇಲೂ ಬೀರಿದೆ ಎನ್ನಲು ಅವಕಾಶವಿದೆ.

## ಅಡಿ ಟಿಪ್ಪಣಿ

೧. (ಸಂ) ಎಚ್ಚೆಸ್ಕೆ : ಅವಲೋಕನ : ಕರ್ನಾಟಕ ಪರಂಪರೆಯ ಸಮೀಕ್ಷೆ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೫, ಪುಟ-೫೮, ಲೇಖನ : ಗಂಗರ ಕಾಲ, ಲೇಖಕರು : ಡಾ.ಶ್ರೀನಿವಾಸ ರಿತ್ತಿ

೨. ಕನ್ನಡ ಸಾಹಿತ್ಯ ಚರಿತ್ರೆ : ೨ನೆಯ ಸಂಪುಟ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೫, ಪುಟ-೩೦೫, (B.L.Rice, Mysore and coorg from the inscription. London, 1909, P-3)

೩. Dr.K.V.Ramesh, Inscriptions of the western Gangas, Indian Council of Historical Research, New Delhi, 1984, Page-No.LV Introduction

೪. ಆರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ದ್ವಿತೀಯ ಮುದ್ರಣ : ೧೯೭೫, ಪುಟ-೪, ಜೂರದ ಶಾಸನ (ಸು.೯೫೦)

ಶಾಸನ ಪಾಠ :

ಭಾರತದೊಳಿಜಿದನಿಂದ್ರನೊ । ಳೋರಾಸನ ಜಾಣನೆನಿಪಪಾಂಡ್ಯನ ಕುಲಮಂ।
ಬೇರಿಂದೆ ಕಿಱ್ತುಚೋೞನ । ಬೇರಂ ಬೇರಿಂದೆ ಕಿಱ್ತುನಾನೆವೆಡಂಗಂ॥
ಸೋಲದೆ ಪರವನಿತೆಗೆ ಕಣ್ । ಸೋಲದು ಮೊಲೆವಾಲನೂಡಿ ನಡಪಿದ ತಾಯಿಂ।
ಮೇಲೆನೆ ಬಗೆಗುಂ ನೋಡಿರೆ। ಸೋಲದು ಚಿತ್ತಂ ಪರಾಂಗನಾ ಪುತ್ರಕನಾ ॥
ನೋಡಿರೆ ಪರವಧುಗೆ ಮನಂ । ಕೂಡದು ಸೂಱೊಱೆಗೊಳೆತ್ತಿನಡಸಿದ ತೋಳುಂ ।
ಡಾಡಿದ ಮೊಲೆ ಬಸಿಱೊಳಗಿ । ರ್ದಾಡಿದ ಚಿತ್ತಂ ಪರಾಂಗನಾ ಪುತ್ರಕನಾ ॥

೫. ಪೂರ್ವೋಕ್ತ : ಪುಟ-೧೪೦, ಪದ್ಯ ಸಂಖ್ಯೆ-೮೨೩, ೮೨೬

೬. E.C. VII ಶಿಕಾರಿಪುರ ೧೯೭ ಚಿಕ್ಕಮಾಗಡಿ

೭. E.C.( R) IX ಬೇಲೂರು 16 (vಬೇ 58 ) ಕ್ರಿ.ಶ.೧೧೧೭

ಖ್ಯಾತೇಷು ತೇಷು ನೃಪತಿಃ ಕಥಿತಃ ಕದಾಚಿತ್ ಕಶ್ಚಿದ್ವನೇ
ಮುನಿವರೇಣ ಶಳಃ ಕರಾಳಂ ಶಾರ್ದೂಳಕಂ ಪ್ರತಿಹಿ
ಪೊಯ್ಸಳ ಇತ್ಯತೋ ಭೂತ್ತಸ್ಯಾಭಿದಾ ಮುನಿವಚೋಸಿ
ಚಮೂರಲಕ್ಷ್ಮ ॥ ತತೋದ್ವಾರವತೀನಾಥಾಃ ಪೊಯ್ಸಳಾ ದ್ವೀಪಿಲಾಂಛನಾಃ॥

೮. E.C.( R) IX ಬೇಲೂರು 267 ( vಬೇ ೯೨ ) ಹಳೇಬೀಡು ಕ್ರಿ.ಶ.೧೨೭೦

ಹಳೇಬೀಡು 300 ( vಬೇ ೧೧೨ )

ಬಸ್ತಿಹಳ್ಳಿ 389 ( v ಬೇ ೧೨೪ ) ಕ್ರಿ.ಶ.೧೧೩೩

ಕ್ಯಾತಲಾಪುರ 456 ( v ಬೇ ೧೭೬ ) ಕ್ರಿ.ಶ.೧೧೬೨

೯ E.C.( R) IX ಬೇಲೂರು ೫೬೦ ( v ಬೇ ೧೭೧ ) ಬೆಳವಾಡಿ ಕ್ರಿ.ಶ.೧೨೦೭

ಯದುನ್ರಿಪರೊಳು ಸಳನೆಂಬ ನ್ರಿಪಂ ಸಹ್ಯಾಚಳದ ಸಾಮಸ್ಥಾನದಲ್ಲಿ

ಬೇಂಟೆಯಾಡುವಲ್ಲಿ ಮೊಲಂ ಪುಲಿಯನಟ್ಟೆ ಚೋದ್ಯಂಬಟ್ಟಿದು

ವೀರಕ್ಷೇತ್ರಮೆಂದಲ್ಲಿಂ ಬರುತ್ತಿರಲೊರ್ಬ್ಬ ದಿವ್ಯರಿಷಿತಂನಂ ಪುಲಿ[ಪಾ]

ಯಲೆಯ್ತಪ್ಪುದುಮದಂ ಪೊಯ್ಸಳಯೆಂಬುದುವಲಘುಪರಾಕ್ರಮಂಗೇಣಿಂ

ಗೇಣೆಡೆಯಂ ನಿಮಿರಲೀಯದೆ ಕೊಂದಿಕ್ಕುವುದು ಮೀಪುಲಿಯೆ

ವಿಜಯಲಾಂಛನಮೀ ಪೆಸರೆ ವಿಜಯನಾಮಮೆಂದು ಮೆಚ್ಚಿ

ಮುನಿಪುಂಗವಂ ಬರಂಗೊಡಲಂದಿಂದಿಂದಿತ್ತಲಾ ಯದುವಂಶಮೆ

ಪೊಯ್ಸಳವಂಶ ಮೆನಿಸಿದತ್ತಾ ಕ್ಷೇತ್ರಮೆ ಶಶಕಪುರವಾದುದಲ್ಲಿ.....

೧೦ ಆರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ದ್ವಿತೀಯ ಮುದ್ರಣ : ೧೯೭೫, ಪುಟ ಸಂಖ್ಯೆ–೧೮೨, ಪದ್ಯ ಸಂಖ್ಯೆ : ೧೪೯

೧೧. E.C.( R) II ಶ್ರವಣ ಬೆಳಗೊಳ ೪೭೫ (೩೪೪) ಭಂಡಾರಬಸದಿ, ಕ್ರಿ.ಶ.೧೩೬೮

## ಅಧ್ಯಾಯ – ೩

## ಶಾಸನ ಸಾಹಿತ್ಯ ಸ್ವರೂಪ

### ೩.೧ : ನೃಪತುಂಗ ಪೂರ್ವಯುಗ (ಕ್ರಿ.ಶ.೪೫೦ರಿಂದ ಕ್ರಿ.ಶ.೮೫೦ರ ವರೆಗೆ):–

ಕ್ರಿ.ಶ.೪೫೦ರಿಂದ ೮೫೦ರ ಈ ಅವಧಿಯನ್ನು ನೃಪತುಂಗ ಪೂರ್ವಯುಗವೆಂದು ಪರಿಗಣಿಸಬಹುದು. ಕನ್ನಡ ಸಾಹಿತ್ಯದ ಮೊದಲನೆಯ ಉಪಲಬ್ದ ಲಕ್ಷಣಗ್ರಂಥವೆಂದರೆ 'ಕವಿರಾಜಮಾರ್ಗ'. ರಾಷ್ಟ್ರಕೂಟ ದೊರೆ ಅಮೋಘವರ್ಷ ನೃಪತುಂಗನ ಆಸ್ಥಾನಕವಿ ಶ್ರೀವಿಜಯನಿಂದ 'ಕವಿರಾಜಮಾರ್ಗಂ' ೯ನೆಯ ಶತಮಾನದಲ್ಲಿ ರಚಿತವಾಯಿತು. ಹಾಗೆಯೇ ಆದಿಕವಿ ಪಂಪನಿಂದ ರಚಿತವಾದ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಕೃತಿಗಳು ಕನ್ನಡ ಭಾಷೆಯಲ್ಲಿ ದೊರೆತ ಮೊದಲನೆಯ ಸಾಹಿತ್ಯಕೃತಿಗಳಾಗಿವೆ. ಇವುಗಳಿಗಿಂತ ಮೊದಲಿಗೆ ರಚಿತವಾದ ಯಾವ ಕೃತಿಗಳೂ ದೊರೆಯದ ಕಾರಣದಿಂದ ಕ್ರಿ.ಶ.೮೫೦ರ ಮೊದಲಿಗೆ ಇದ್ದ ಕನ್ನಡ ಭಾಷೆಯ ಸಾಹಿತ್ಯವನ್ನು ಅರಿಯಬೇಕಾದರೆ ಶಾಸನಗಳನ್ನೇ ಅವಲಂಬಿಸಬೇಕಾಗುತ್ತದೆ. 'ಕವಿರಾಜಮಾರ್ಗ' ಪೂರ್ವದ ಯುಗದಲ್ಲಿ ಸಿಗುವ ಸಾಮಗ್ರಿಗಳೆಂದರೆ ಶಾಸನಗಳು ಮಾತ್ರ. ಆ ಕಾರಣದಿಂದ ಕವಿರಾಜಮಾರ್ಗದವರೆಗಿನ ಕನ್ನಡ ಸಾಹಿತ್ಯ ಚರಿತ್ರೆಯೆಂದರೆ ಅಲ್ಲಿ ಸಿಗುವ ಶಾಸನಗಳ ಚರಿತ್ರೆಯೇ ಆಗಿದೆ.

"ಕರ್ನಾಟಕದಲ್ಲಿ ಮೊದಲಿಗೆ ಅಶೋಕನ ಶಾಸನಗಳು ಕಾಣಿಸಿಕೊಂಡಿವೆ. ಪ್ರಾಕೃತ ಭಾಷೆಯಲ್ಲಿರುವ ಈ ಶಾಸನಗಳು ಬೌದ್ಧಧರ್ಮದ ಪ್ರಸಾರಕ್ಕಾಗಿ ಹೊರಡಿಸಿದವುಗಳಾಗಿವೆ. ಅಶೋಕನ ಶಾಸನಗಳಲ್ಲದೆ ಚುಟುವಂಶ, ಕದಂಬರು, ಸಾತವಾಹನರಿಗೆ ಸೇರಿದ ಪ್ರಾಕೃತ ಶಾಸನಗಳೂ ಕಂಡುಬಂದಿವೆ"[೧] "ಅಶೋಕನ ಶಾಸನಗಳಲ್ಲಿ ಒಬ್ಬನೇ ವ್ಯಕ್ತಿ, ಒಂದೇ ಧರ್ಮ, ಒಂದೇ ಉದ್ದೇಶವಿದ್ದರೆ ಇಲ್ಲಿ ಹಲವು ವ್ಯಕ್ತಿ, ಹಲವು ಧರ್ಮ, ಹಲವು ಉದ್ದೇಶಗಳು ಕಂಡುಬರುವುದು ಕರ್ನಾಟಕದ ಶಾಸನವಾಹಿನಿ ಕವಲೊಡೆಯುತ್ತಿರುವುದರ ನಿದರ್ಶನ"[೨] ವಾಗಿದೆ.

ಪ್ರಾಕೃತ ಭಾಷೆಯ ಶಾಸನಗಳ ಕಾಲವು ಕರ್ನಾಟಕದಲ್ಲಿ ಮುಕ್ತಾಯಗೊಳ್ಳುತ್ತಿದ್ದಂತೆಯೇ ಸಂಸ್ಕೃತ ಮತ್ತು ಕನ್ನಡ ಭಾಷೆಯ ಶಾಸನಗಳು ಕಾಣಿಸಿಕೊಳ್ಳುತ್ತವೆ. ಈ ಅವಧಿಯಲ್ಲಿ ಆಳ್ವಿಕೆ ನಡೆಸಿದ ಬಹುತೇಕ ಎಲ್ಲಾ ರಾಜವಂಶಗಳ ಹೆಚ್ಚಿನ ಸಂಖ್ಯೆಯ ತಾಮ್ರಶಾಸನಗಳು ಸಂಸ್ಕೃತ ಭಾಷೆಯಲ್ಲಿಯೇ ರಚಿತವಾದವುಗಳಾಗಿವೆ. ಹಾಗೆಯೇ ಐದು ಆರನೆಯ ಶತಮಾನದ ಸಂಸ್ಕೃತ ಶಾಸನಗಳಲ್ಲಿ ಅಂತ್ಯದಲ್ಲಿ ದಾನ ವಿವರ ಅಥವಾ ಮೇರೆಗಳನ್ನು ವಿವರಿಸುವಾಗ ಕನ್ನಡ ಭಾಷೆಯ ಬಳಕೆಯಾಗತೊಡಗಿತು. ಅಂತೆಯೇ ಮುಂದಿನ ಹಂತದಲ್ಲಿ ಕನ್ನಡ ಶಾಸನಗಳ ಆದಿಯಲ್ಲಿ ಸಂಸ್ಕೃತ ಶ್ಲೋಕಗಳ ಬಳಕೆಯಾಗತೊಡಗಿತು. ಇದಕ್ಕೆ ಹಲ್ಮಿಡಿ ಶಾಸನವು ಉತ್ತಮ ಉದಾಹರಣೆಯಾಗಿದೆ. ಹಲ್ಮಿಡಿ

ಶಾಸನದ ಮೇಲ್ಭಾಗದಲ್ಲಿರುವ ವರ್ತುಲಾಕಾರದ ಒಂದು ಸಾಲಿನಲ್ಲಿ ಕೆತ್ತಲಾಗಿರುವ ಪದ್ಯವು ವಿಷ್ಣು ಪರವಾದ ಸಂಸ್ಕೃತ ಶ್ಲೋಕವಾಗಿದೆ.[೩] ಸಂಸ್ಕೃತ ಕನ್ನಡಗಳೆರಡರಲ್ಲೂ ಮುಖ್ಯ ವಿಷಯವನ್ನು ವಿವರಿಸುವ ಶಾಸನಗಳು ಕೆಲವಿದ್ದು, ಗಂಗದೊರೆ ಒಂದನೆಯ ಶಿವಮಾರನ ಕುಳಗಾಣ ಶಾಸನ.[೪] ವು ಉತ್ತಮ ಉದಾಹರಣೆಯಾಗಿದೆ. ಇದೇ ಅವಧಿಯ ಶಾಸನಗಳಲ್ಲಿ ಸಂಸ್ಕೃತ–ಕನ್ನಡ ಭಾಷೆಯನ್ನು ಬಳಸುವಾಗ ಸಂಸ್ಕೃತ ಪ್ರತ್ಯಯಗಳಿಂದೊಡಗೂಡಿದ ಹೆಚ್ಚಿನ ಭಾಗಗಳೂ, ಕ್ವಚಿತ್ತಾಗಿ ಕನ್ನಡ ಪದಗಳೂ ಬಳಕೆಯಾಗಿವೆ. ಹಾಗೆಯೇ ಕನ್ನಡದಲ್ಲಿಯೇ ರಚಿತವಾದ ಶಾಸನಗಳ ಮೇಲೆ ಸಂಸ್ಕೃತ ಭಾಷೆಯ ದಟ್ಟಪ್ರಭಾವವಿರುವುದು ಕಂಡುಬರುತ್ತದೆ.

ಪ್ರಾಕೃತ, ಸಂಸ್ಕೃತದಿಂದ ಕೂಡಿದ ಕನ್ನಡ ಭಾಷೆಯ ಶಾಸನಗಳ ನಂತರ ಮುಂದಿನ ಹಂತದಲ್ಲಿ ಕನ್ನಡದಲ್ಲೇ ರಚಿತವಾದ ಶಾಸನಗಳು ಕಂಡುಬರುತ್ತವೆ. ಕದಂಬ, ಗಂಗ, ಚಲುಕ್ಯ, ರಾಷ್ಟ್ರಕೂಟ, ನೊಳಂಬ, ಬಾಣ, ಮೈದುಂಬರೆಂಬ ದೊಡ್ಡ – ಸಣ್ಣ ರಾಜಮನೆತನಗಳ ಈ ಕಾಲದ ಶಾಸನಗಳು ಪೂರ್ವದ ಹಳಗನ್ನಡದಲ್ಲಿ ರಚಿತವಾದವುಗಳಾಗಿವೆ. ವಸ್ತು, ಭಾಷೆ ಶೈಲಿಗಳ ದೃಷ್ಟಿಯಿಂದ ಸು.೬–೭ನೆಯ ಶತಮಾನಗಳ ಕನ್ನಡ ಶಾಸನಗಳಲ್ಲಿ ಕನ್ನಡಿಗರ ಸಂಸ್ಕೃತಿ ಸಾಹಿತ್ಯಾಭಿರುಚಿಗಳು ಒಂದು ನಿರ್ದಿಷ್ಟತೆಯನ್ನು ಪಡೆಯುತ್ತಿದ್ದುದನ್ನು ಕಾಣಬಹುದು. ಆದರೆ ನೃಪತುಂಗ ಪೂರ್ವಯುಗದ ಈ ಕಾಲದಲ್ಲಿ ರಚಿತವಾದ ಯಾವ ಸಾಹಿತ್ಯ ಕೃತಿಯೂ ದೊರೆಯದಿರುವ ಕಾರಣದಿಂದಾಗಿ ಶಾಸನಗಳಲ್ಲಿನ ಸಾಹಿತ್ಯಕ ಪ್ರಬುದ್ಧತೆಯನ್ನು ಮತ್ತೊಂದರೊಂದಿಗೆ ಒರೆಹಚ್ಚಲು ಬರುವುದಿಲ್ಲ.

ಪ್ರಾಕೃತ ಶಾಸನಗಳ ನಂತರ ಈ ಕಾಲದಲ್ಲಿ ರಚಿತವಾದ ಶಾಸನಗಳ ರಚನೆ ಅಥವಾ ನಿರೂಪಣಾ ಕ್ರಮದಲ್ಲಿ ಏಕರೂಪತೆಯನ್ನು ಕಾಣಲು ಸಾಧ್ಯವಿಲ್ಲ. ಏಕೆಂದರೆ ಸಂಸ್ಕೃತ ಮತ್ತು ಕನ್ನಡ ಶಾಸನಗಳು ಆರಂಭವಾದ ಕಾಲದಲ್ಲಿ ಕನ್ನಡ ಶಾಸನಗಳು ಕಡಿಮೆ ಮತ್ತು ಸಂಸ್ಕೃತ ಶಾಸನಗಳು ಹೆಚ್ಚು. ಬಾದಾಮಿ ಚಲುಕ್ಯರ ಕಾಲಕ್ಕೆ ಎರಡೂ ಸಮ. ಮುಂದೆ ಕನ್ನಡ ಶಾಸನಗಳು ಸಂಖ್ಯಾಪ್ರಮಾಣ ಹೆಚ್ಚಿಸಿಕೊಳ್ಳಲು ಪ್ರಾರಂಭಿಸಿದುದು ಗಂಗ ಶ್ರೀಪುರುಷನ ಕಾಲದಲ್ಲಾದರೂ ನೃಪತುಂಗನವರೆಗೂ ನಮ್ಮ ನಾಡಿನ ಶಾಸನಗಳಲ್ಲಿ ಏಕರೂಪತೆಯಿಲ್ಲ. ಪ್ರಾರಂಭದ ಮಂಗಲ, ಕೊನೆಯ ಫಲಶ್ರುತಿ ಸಹಿತವಾಗಿ ಬಹಳಷ್ಟು ಶಾಸನಗಳು ತಮಗೆ ಬೇರೆ ಬೇರೆ ಸ್ವರೂಪದ ಒಂದು ತುಂಡು ಗದ್ಯ ಇಲ್ಲವೆ ಬಿಡಿ ಪದ್ಯಗಳಾಗಿವೆ. ಆದರೆ ಪ್ರಮಾಣಭೂತ ಚೌಕಟ್ಟು, ನಿರ್ದಿಷ್ಟ ವಿಷಯಾನುಪೂರ್ವಿ, ಸಾಹಿತ್ಯದ ಶ್ರೀಮಂತಿಕೆ ಸಾಧ್ಯವಾದುದು ನೃಪತುಂಗನ ಕಾಲದಲ್ಲಿ. "ಕರ್ನಾಟಕ ರಾಜಕೀಯ ಕ್ಷಿತಿಜದ ಮೇಲೆ ಒಂದೇ ಕಾಲಕ್ಕೆ ಮೂಡಿದ ಚಕ್ರವರ್ತಿ ನೃಪತುಂಗ, ದಕ್ಷಿಣದ ಗಂಗಮಂಡಲದ ಸಾಮಂತ ಶಿವಮಾರ, ಪಶ್ಚಿಮದ ವೆಂಗಿಮಂಡಲದ ಸಾಮಂತ ಗುಣಗ ವಿಜಯಾದಿತ್ಯರು ಕನ್ನಡ ಸಾಹಿತ್ಯ ಲೋಕದ

ದಿಕ್ಪಾಲಕರಂತೆ ಶೋಭಿಸಿದರು. ಸಾಹಿತ್ಯ ಪ್ರಿಯರಾದ ಈ ದೊರೆಗಳ ಆಶ್ರಯ ಆಲೋಚನೆಯಿಂದಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಹರೆಯಮೂಡಿತು."[೫]

"ಕವಿರಾಜಮಾರ್ಗ ಪೂರ್ವದ ಹಳಗನ್ನಡದ ಶಾಸನಗಳ ಒಟ್ಟು ಪದ್ಯಗಳ ಸಂಖ್ಯೆ ಸುಮಾರು ೬೦"[೬] ಆಗಿದ್ದು ತಮಟಕಲ್ಲಿನ ಗುಣಮಧುರನ ಶಾಸನದ ನಂತರದಲ್ಲಿ ಶ್ರವಣಬೆಳಗೊಳದ ನಿಸದಿ ಶಾಸನಗಳಲ್ಲಿ ಸಾಹಿತ್ಯದ ಗುಣವನ್ನು ಕಾಣಬಹುದಾಗಿದೆ. ಬಹುತೇಕ ಈ ಶಾಸನಗಳು ಅಕ್ಷರ ವೃತ್ತಗಳಲ್ಲೇ ರಚಿತವಾಗಿವೆ. ಬಿಡಿ ಬಿಡಿ ಮುಕ್ತಕಗಳಂತಿರುವ ಶ್ರವಣಬೆಳಗೊಳದ ಶಾಸನಗಳು ಜೈನಮುನಿಗಳು ಸಂನ್ಯಸನ ವಿಧಿಯಿಂದ ಮುಡುಪಿದ ವಿಚಾರವನ್ನು ಪ್ರಸ್ತಾಪಿಸುತ್ತವೆ.

ನೃಪತುಂಗನ ಕಾಲದಲ್ಲಿ ಪ್ರಮಾಣಭೂತ ಚೌಕಟ್ಟು, ನಿರ್ದಿಷ್ಟ ವಿಷಯಾನುಪೂರ್ವಿ, ಸಾಹಿತ್ಯದ ಶ್ರೀಮಂತಿಕೆಯನ್ನು ಶಾಸನಗಳಲ್ಲಿ ಕಾಣಲು ಸಾಧ್ಯವಾಯಿತು ಎನ್ನಬಹುದಾದರೂ ಈ ಅವಧಿಯ ಗದ್ಯಶಾಸನಗಳನ್ನು ಗಮನಿಸಿದಾಗ ಶಾಸನಗಳನ್ನು ನಿರೂಪಿಸುವ ಒಂದು ವ್ಯವಸ್ಥಿತ ಕ್ರಮವನ್ನು ರೂಪಿಸಿಕೊಳ್ಳುವ ಪ್ರಯತ್ನವು ನಡೆಯಿತು ಎನ್ನಲು ಸಾಧ್ಯವಿದೆ. ಹಲ್ಮಿಡಿಯ ಶಾಸನ[೭] ದ ಪಾಠವನ್ನು ಗಮನಿಸಿದಾಗ ಅದರಲ್ಲಿ ಆರಂಭದಲ್ಲಿ ಪ್ರಾರ್ಥನಾ ಶ್ಲೋಕ, ಕದಂಬರ ಕಾಕುತ್ಸ್ಥವರ್ಮನ ಬಣ್ಣನೆ, ಆನಂತರ ಶಾಸನೋದ್ದಿಷ್ಟ ಭಾಗ, ಶಾಪಾಶಯ ನಿರೂಪಣೆ, ಈ ರೀತಿಯಾದ ಕ್ರಮವು ಕಂಡುಬಂದಿದೆ. ಹಾಗೆಯೇ ರಾಷ್ಟ್ರಕೂಟ ದೊರೆ ಗೋವಿಂದನ ಕಾಲದ ಮಾವಳಿಯ ಶಾಸನವು[೮] ರಾಷ್ಟ್ರಕೂಟ ದೊರೆ ಗೋವಿಂದನ ಬಣ್ಣನೆ, ವಿಷಯದ ನಿರೂಪಣೆ, ನೀಡಿದ ದಾನದ ವಿವರಗಳು, ಶಾಪಾಶಯಗಳು – ಈ ರೀತಿಯಾದ ಕ್ರಮವನ್ನು ಒಳಗೊಂಡಿದೆ. ತನ್ಮೂಲಕ ಮುಂದಿನ ಶತಮಾನಗಳಲ್ಲಿ ಶಾಸನಗಳು ಒಂದು ವ್ಯವಸ್ಥಿತವಾದ ರೀತಿಯಲ್ಲಿ ರಚನೆಗೊಳ್ಳಲು ಈ ಯುಗದ ಶಾಸನಗಳು ಸ್ಥೂಲ ರೂಪರೇಷೆಯನ್ನು ಒದಗಿಸಿದವು ಎನ್ನಬಹುದು. ಸುಮಾರು ೬–೭ನೆಯ ಶತಮಾನಗಳ ಕನ್ನಡ ಶಾಸನಗಳನ್ನು ಗಮನಿಸಿದಾಗ ಕನ್ನಡ ಜನರ ಸಂಸ್ಕೃತ ಸಾಹಿತ್ಯಾಭಿರುಚಿಗಳು ಆಗ ತಾನೇ ಒಂದು ಹಂತವನ್ನು ತಲುಪುತ್ತಿತ್ತು ಎಂದು ಹೇಳಲು ಅವಕಾಶವಿದೆ. ಸಾಹಿತ್ಯ ದೃಷ್ಟಿಯಿಂದ ಗಮನಿಸಿದಾಗ ಕನ್ನಡ ಗದ್ಯಶಾಸನಗಳು ಹೆಚ್ಚು ಸರಳ, ಸಹಜವಾಗಿ ಕಂಡುಬಂದರೆ, ಪದ್ಯಶಾಸನಗಳು ಹೆಚ್ಚು ಸಂಕೀರ್ಣ, ಅಲಂಕಾರಿಕವಾದವು ಎನ್ನಲು ಅವಕಾಶವಿದೆ.

## ೩.೨ ನೃಪತುಂಗೋತ್ತರ ಯುಗ (ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರ ವರೆಗೆ) :-

ಕ್ರಿ.ಶ.೮೫೦ರ ಹಿಂದಿನ ಕಾಲದಲ್ಲಿ ರಚಿತವಾದ ಶಾಸನಗಳಲ್ಲಿ ಸಾಹಿತ್ಯಕ ಅಂಶವೂ ಕಡಿಮೆ, ಕನ್ನಡ ಭಾಷೆಯ ಪ್ರಚುರತೆಯು ಕಡಿಮೆಯಾಗಿದ್ದರೆ, ಕ್ರಿ.ಶ.೮೫೦ರ ನಂತರದಲ್ಲಿ ರಚನೆಯಾದ ಶಾಸನಗಳು ಕನ್ನಡ ಭಾಷೆಯನ್ನು ಸಮರ್ಥವಾಗಿ ಬಳಸಿಕೊಂಡು ಕಾವ್ಯಾತ್ಮಕವಾಗಿ

ರೂಪುಗೊಳ್ಳುತ್ತವೆ. ಕಲ್ಯಾಣದ ಚಾಲುಕ್ಯರು, ಹೊಯ್ಸಳರ ಕಾಲದ ಶಾಸನಗಳು ಬಾಹ್ಯರೂಪದಲ್ಲೂ ಗಮನಸೆಳೆಯುವಂತಾದವು. ಬಾಹ್ಯರೂಪದಲ್ಲಿಯಷ್ಟೇ ಅಲ್ಲದೆ ಆಂತರಿಕವಾಗಿ ಕೂಡ ಈ ಯುಗದ ಶಾಸನಗಳು ಸಂಪನ್ನವಾಗತೊಡಗಿದವು. ಶಾಸನ ಸಾಹಿತ್ಯವು ಸಹ ಹಂತ ಹಂತವಾಗಿ ಬೆಳೆಯಲು ಸಾಧ್ಯವಾಯಿತು. ನಿರೂಪಣೆಯ ದೃಷ್ಟಿಯಿಂದ ಗಮನಿಸಿದಾಗ ೧೦ನೆಯ ಶತಮಾನದ ಆರಂಭದ ದಶಕಗಳವರೆಗೆ ಕನ್ನಡ ಶಾಸನಗಳ ರಚನೆಯಲ್ಲಿ ಹಿಂದಿನಿಂದ ನಡೆದು ಬಂದ ಪದ್ಧತಿಯೇ ಮುಂದುವರೆಯಿತು. ಅಂದರೆ ಶಾಸನಗಳು ಸಾಮಾನ್ಯವಾಗಿ ಗದ್ಯಾತ್ಮಕವಾಗಿದ್ದು, ವಿಷಯವನ್ನು ನೇರವಾಗಿ, ಸರಳವಾಗಿ ನಿರೂಪಿಸಿವೆ. ಈ ಕಾಲದ ರಾಷ್ಟ್ರಕೂಟ, ಗಂಗ, ನೊಳಂಬರ ಶಾಸನಗಳು ಯಾವ ಆಡಂಬರವೂ ಇಲ್ಲದೆ ಸರಳವಾಗಿವೆ. ಸಾಹಿತ್ಯಾಂಶವೂ ಸಹ ಕಡಿಮೆಯೇ. ವಿರಳವಾಗಿ ಶಾಸನಗಳ ಗದ್ಯದ ನಡುವೆ ಒಂದೋ ಎರಡೋ ಕಂದಪದ್ಯಗಳೋ ವೃತ್ತಗಳೋ ಬಳಕೆಯಾಗಿರುತ್ತವೆ.

ಗದ್ಯಾತ್ಮಕವಾಗಿ, ವಿಷಯವನ್ನು ನೇರವಾಗಿ, ಸರಳವಾಗಿ ನಿರೂಪಿಸಿರುವುದನ್ನು ನೊಳಂಬರ ಕಾಲಕ್ಕೆ ಸೇರಿದ ೯ ಅಥವಾ ೧೦ನೆಯ ಶತಮಾನದ ಕೆರೆಹಳ್ಳಿಯ ಶಾಸನದಲ್ಲಿ ಕಾಣಬಹುದಾಗಿದ್ದು, ಶಾಸನಪಾಠವು ಈ ಕೆಳಗಿನಂತಿದೆ.[೯]

**ಸ್ವಸ್ತಿ ಶ್ರೀ ನೊೞಂಬನ ಪೆರ್ಗ್ಗಡೆ ತ್ರಿಭು**
**ವನಯ್ಯಂ ಪೆರ್ಮ್ಮಾಡಿಯನೋಲಗಿಸಿ ಸಿವ**
**ಯ್ಯನ ಕೆಱೆಯನಾಳುತಮಿೞಲ್ದೇಕೆಱೆಯ ಬಿ**
**ತ್ತು ವಾಟಮಂ ಬಿಟ್ಟರಿದನಾವಾನಾನುಮೞಿಪಿ**
**ಕೊಣ್ಡಾತ ನೀಕೆಱೆಯುಮಂ ವಾರಣಾಸಿಯು**
**ಮನೞಿದಂ ಮಂಗಳಮಹಾಶ್ರೀ**

ಕ್ರಿ.ಶ.ಸು.೮೯೦ರ ಗಂಗ ಎಱೆಯಪ್ಪರಸನ ಕಾಲದ ಬೇಗೂರು ಶಾಸನವನ್ನು[೧೦] ಸಹ ಇದಕ್ಕೆ ಉದಾಹರಣೆಯಾಗಿ ನೀಡಬಹುದು. ಶಾಸನಪಾಠ ಈ ಕೆಳಗಿನಂತಿದೆ.

**೧. ಸ್ವಸ್ತಿ ಸಮಸ್ತಭುವನವಿನೂತ ಗಙ್ಗಕುಳ ಗಗನನಿರ್ಮ್ಮಳತಾರಾಪತಿ**
**ಜಳಧಿಜಳವಿಪುಳವಳಯಮೇಖಳಕಳಾಪಾಳಂ**
**೨. ಕ್ರಿತ್ಯೈಳಾಧಿಪತ್ಯ ಲಕ್ಷ್ಮೀಶ್ವಯಂ ವೃತ ಪತಿತಾಳ್ವಾದ್ಯಗಣಿತಗುಣ**
**ಗಣವಿಭೂಷಣವಿಭೂಷಿತವಿಭೂತಿ ಶ್ರೀಮದೆಱೆಯಪ್ಪರಸರ್**
**೩. ಪಗೆವರೆಲ್ಲಮಂ ನಿಕ್ಷತ್ರಮ್ಮಾಡಿ ಗಙ್ಗವಾಡಿತೊಮ್ಭತ್ತಱುಸಾಸಿರ**
**ಮನೇಕ ಛತ್ರಚ್ಛಾಯೊಳಾಳುತ್ತ ಮಿೞ್ದುಬೀರ ಮ**

೪. ಹೇನ್ದ್ರನೊಳ್ಕಾದಲೆನ್ದು ಅಯ್ಯಪದೇವಜ್ಗೆ ಸಾಮನ್ತಸಹಿತಂ
ನಾಗತ್ತರನಂ ದಣ್ಡುವೇಟಿಕ್ಕೊಡೆ ತುಮ್ಬೆಪಾದಿಯೊಳ್ಕಾದಿ ಕಾಳೆಗಮಿಮ್ಬ
೫. ಟಿದೊಡೆ ಆನೆಯೊಳಾನ್ತಿಟಿದು ಸತ್ತೊಡದಂ ಕೇಳ್ದೆಱೆಯಪಂ ಮೆಚ್ಚಿ
ಇರುಗಜ್ಗೆ ನಾಗತ್ತರವಟ್ಟಂಗಟ್ಟಿ ಬೆಂಪೊರ್ಪ್ಪನ್ನೆರಡು
೬. ಮಂ ಸಾಸನಬದ್ಧಂ ಕಲ್ನಾಡಿತ್ತನವಾವುವೆನ್ದೊಡೆ॥

(ಮುಂದೆ ನೀಡಿದ ಗ್ರಾಮಗಳ ಹೆಸರುಗಳಿವೆ.)

ಈ ವೀರಗಲ್ಲಿನ ಪಾಠವನ್ನು ಗಮನಿಸಿದಾಗ ಮೊದಲೆರಡು ಸಾಲುಗಳು ಗಂಗ ಎಱೆಯಪ್ಪರಸನ ಬಿರುದಾವಳಿಯನ್ನು ಒಳಗೊಂಡಿದೆ. ಆನಂತರದಲ್ಲಿ ಮುಖ್ಯ ವಿಷಯವಾದ ಬೀರಮಹೇಂದ್ರನೊಡನೆ ನಾಗತ್ತರನು ಹೋರಾಡಿ ಮಡಿದ ವಿಚಾರವನ್ನು ನಾಲ್ಕು ಮತ್ತು ಐದನೆಯ ಸಾಲುಗಳು ನಿರೂಪಿಸಿವೆ. ಆರನೆಯ ಸಾಲಿನಿಂದ ೧೯ನೆಯ ಸಾಲುಗಳು ನೀಡಿದ ದಾನದ ವಿವರಗಳನ್ನು ಒಳಗೊಂಡಿದ್ದು, ಗಂಗರ ಕಾಲದ ಶಾಸನ ನಿರೂಪಣಾಕ್ರಮವನ್ನು ದಾಖಲಿಸಿದೆ. ಹಾಗೆಯೇ ಸಂಸ್ಕೃತ ಭೂಯಿಷ್ಠವಾದ ಗದ್ಯಶೈಲಿಯನ್ನು ಈ ಶಾಸನದಲ್ಲಿ ಬಂದಿರುವ ಎಱೆಯಪ್ಪರಸನ ಬಿರುದಿನಲ್ಲಿ ಕಾಣಬಹುದು. ಉಳಿದ ಶಾಸನದ ಭಾಗವು ನಿರೂಪಿತವಾಗಿರುವುದು ಕನ್ನಡದಲ್ಲೇ ಎನ್ನಬಹುದು.

ಕ್ರಿ.ಶ.೯೫೦ರ ಕಾಲದ ಗಂಗರ ಬೂತುಗನ ಕಾಲದ ನಿಸದಿಗಲು[೧೧] ಮೋನಿ ಬಟಾರನೆಂಬುವನ್ನು ಬಣ್ಣಿಸುವಾಗ ಗದ್ಯಭಾಗದ ನಂತರ ಒಂದು ಕಂದಪದ್ಯ, ಒಂದು ಉತ್ಪಲಮಾಲ ವೃತ್ತವನ್ನು ಒಳಗೊಂಡಿದೆ. ಪದ್ಯಗಳು ಈ ಕೆಳಗಿನಂತಿವೆ.

ಪೇನಿಗಳಂ ಪೊಗಟದಿರಭಿ
ಮಾನಿಗಳಂ ಗುಣದಕಣಿಗಳಂ ವಸುಮತಿಯೊಳ್
ದಾನಿಗಳನೂನಮಿಲ್ಲದ
ಮೋನಿಗಳಂಪೋಗಿ ಪೊಗಟ ಕೆಲ್ಲಂಗೆಱೆಯೊಳ್ ॥
ತಾಜ್ಗಡ ಕೊಳ್ವೊನೆನ್ದು ಬಲಗರ್ವ್ವದೆ ಬಲ್ಲಪನಲ್ಲಿಗೋಗಿ ಕಾ
ಯ್ವೊಜ್ಗಡೆಯಾಗಾದಂನ್ತು ನುಡಿದಾಪ್ಪ [೯]ನ ಮೆಚ್ಚಿಸಿಕೊಣ್ಡರಿನ್ತುಕೆ
ಲ್ಲಜ್ಗೆಱೆಯಮ್ಬಲರ್ಪ್ಪೊಗಟೆ ಮೋನಿಭಟಾರರೆನುತ್ತುಲೋಕಮೆ
ಲ್ಲಜ್ಗೆಡೆಗೊಣ್ಡುಗೊಣ್ಡು ಕೊನೆದಪ್ಪುದು ಸಾಹಸಮೇನನೂನಮೋ॥

ಹೀಗೆ ಆರಂಭದ ಕಾಲದ ಶಾಸನಗಳು ವಸ್ತುನಿಷ್ಠವಾಗಿ ಬೆಳೆದಿದ್ದರೂ ಅಲ್ಲಲ್ಲಿ ಗದ್ಯಶೈಲಿಯ ಸರಳತೆ, ನಿರಾಡಂಬರತೆಗಳನ್ನೂ ವಿಷಯ ನಿರೂಪಣೆಯ ಸೊಗಸನ್ನು ಕಾಣಬಹುದು. ಅಪರೂಪಕ್ಕೆ ಶಾಸನಗಳಲ್ಲಿ ಪದ್ಯಗಳನ್ನೂ ಸೇರಿಸುವ ಪರಿಪಾಠವು ಆರಂಭವಾಗಿ ಮುಂದೆ ಅದು ಶಾಸನಗಳಲ್ಲಿ ವರ್ಣನಾತ್ಮಕ ಪದ್ಯಗಳು ಹೆಚ್ಚುತ್ತಾ ಹೋಗಲು ಅನುವು ಮಾಡಿಕೊಟ್ಟಿತು. ಆಗ ಸಹಜವಾಗಿ ಗದ್ಯದ ಪ್ರಮಾಣದಲ್ಲಿ ಮತ್ತು ಸ್ಥಾನದಲ್ಲಿ ವ್ಯತ್ಯಾಸವೂ ಉಂಟಾಗತೊಡಗಿತು. ಈ ರೀತಿಯಾದ ಪರಿವರ್ತನೆಗೆ ೧೦ನೆಯ ಶತಮಾನದಲ್ಲಿದ್ದ ಸಾಹಿತ್ಯಕವಲಯದ ಪ್ರಭಾವವು ಕಾರಣವಾಯಿತು.

೧೦ನೆಯ ಶತಮಾನ ಶಾಸನ ಸಾಹಿತ್ಯದಲ್ಲಿ ಒಂದು ಪ್ರಮುಖವಾದ ಘಟ್ಟ. ಆರಂಭದಲ್ಲಿ ಸರಳವಾದ ಶಾಸನ ರಚನೆಯಿದ್ದರೂ ಮುಂದೆ ಅದು ಸಾಹಿತ್ಯದೃಷ್ಟಿಯಿಂದ ಗಮನಾರ್ಹವಾದ ಶಾಸನಗಳ ರಚನೆಗೆ ಕಾರಣವಾಯಿತು. ಸಂಸ್ಕೃತ ಭಾಷೆಯ ಪ್ರಭಾವದಿಂದ ಹೊರಬರತೊಡಗಿದ ಶಾಸನ ರಚನಾಕಾರರು ಕನ್ನಡ ಭಾಷೆಯ ಶಾಸನಗಳ ರಚನೆಯತ್ತ ಗಮನಹರಿಸಿದರು. ಕಲ್ಯಾಣಿ ಚಾಲುಕ್ಯರ ಆಳ್ವಿಕೆಯ ಆರಂಭದ ಕಾಲಕ್ಕಾಗಲೇ ಸಾಹಿತ್ಯರಚನೆಯಲ್ಲಿ ಹೊಸತನ ಕಂಡುಬಂದಂತೆಯೇ ಶಾಸನ ರಚನೆಯಲ್ಲೂ ಸಹ ಬದಲಾವಣೆಗಳಾಗತೊಡಗಿತು. ಸಂಸ್ಕೃತ ತಾಮ್ರಶಾಸನಗಳಿಗೆ ಸೀಮಿತವಾಗಿದ್ದ ಬರವಣಿಗೆಯ ವಿಧಾನವನ್ನು ಕನ್ನಡದ ಶಿಲಾಶಾಸನಗಳು ಅಳವಡಿಸಿಕೊಂಡವು. ಶಾಸನಗಳ ರಚನೆಯಲ್ಲಿ ಒಂದು ಶಿಸ್ತು ಕಟ್ಟುಪಾಡನ್ನು ಅಳವಡಿಸಿಕೊಳ್ಳಲು ಶಾಸನರಚನಾಕಾರರು ಮುಂದಾದರು. ಈ ಶತಮಾನದ ಗಂಗರ ಶಾಸನಗಳಲ್ಲಿ ಆತಕೂರಿನ ಶಾಸನ[೧೨], ಶ್ರವಣಬೆಳಗೊಳದಲ್ಲಿರುವ ಇಮ್ಮಡಿ ಮಾರಸಿಂಹನ ಪ್ರಶಸ್ತಿಶಾಸನ[೧೩], ರಾಷ್ಟ್ರಕೂಟ ಇಂದ್ರನ ಮರಣವನ್ನು ದಾಖಲಿಸಿರುವ ಶ್ರವಣಬೆಳಗೊಳದ ಶಾಸನ[೧೪] ಮೊದಲಾದವು ಪ್ರಮುಖ ಶಾಸನಗಳು ಹಾಗೂ ಸಾಹಿತ್ಯಕವಾಗಿ ಸಹ ಗಮನಾರ್ಹವಾದವುಗಳು.

೧೦ನೆಯ ಶತಮಾನದಲ್ಲಿ ಆರಂಭವಾದ ಚಂಪೂಶೈಲಿಯಲ್ಲಿ ಶಾಸನವನ್ನು ರಚಿಸುವ ಪರಿಪಾಠವು ೧೧ನೆಯ ಶತಮಾನದ ಹೊತ್ತಿಗೆ ಒಂದು ವ್ಯವಸ್ಥಿತವಾದ ರೂಪವನ್ನು ಪಡೆದುಕೊಂಡಿತು. ಚಾಲುಕ್ಯರ ಆರನೆಯ ವಿಕ್ರಮಾದಿತ್ಯನ ಆಳ್ವಿಕೆ ಆರಂಭವಾದ ನಂತರ ಶಾಸನ ರಚನೆಯಲ್ಲಿ ಪರಿವರ್ತನೆಯ ಪರ್ವವೇ ಆರಂಭವಾಯಿತು. ಈ ರೀತಿಯಾದ ಬದಲಾವಣೆಯು ಮುಂದೆ ಹಲವಾರು ಮಾಂಡಳಿಕರು ಸಾಮಂತರ ಕಾಲದ ಶಾಸನಗಳ ರಚನೆಯ ಮೇಲೂ ಪ್ರಭಾವ ಬೀರಿತು. ಚಾಲುಕ್ಯರ ವಿಕ್ರಮಾದಿತ್ಯನಂತೆಯೇ ಹೊಯ್ಸಳರ ವಿಷ್ಣುವರ್ಧನನ ಕಾಲದ ಶಾಸನಗಳಲ್ಲಿ ಸಹ ಕಾವ್ಯಾತ್ಮಕವಾದ ನಿರೂಪಣೆಯು ಆರಂಭವಾಯಿತು. ಚಂಪೂಕಾವ್ಯಗಳು ಅಷ್ಟಾದಶವರ್ಣನೆಗಳು, ಗದ್ಯಪದ್ಯಗಳ ಹಿತಮಿತವಾದ ಬಳಕೆಯಿಂದ ಕೂಡಿ ವಿಷಯ ನಿರೂಪಣೆಯಲ್ಲಿ ಹೇಗೆ ಸಾರ್ಥಕತೆಯನ್ನು ಹೊಂದಲು ಯಶಸ್ವಿಯಾದವೋ ಅದೇ ರೀತಿಯಲ್ಲಿ ಶಾಸನಗಳೂ ಸಹ ಕೇವಲ

ವಿಷಯ ನಿರೂಪಣೆಗಷ್ಟೇ ಸೀಮಿತವಾಗದೆ ಕಾವ್ಯಾತ್ಮಕವಾಗಿ ಬೆಳೆಯತೊಡಗಿದವು. ಪ್ರತಿಯೊಂದು ಶಾಸನವೂ ಸಹ ಸ್ಥೂಲವಾಗಿ ಮಂಗಳಪದ್ಯಗಳು, ಚಕ್ರವರ್ತಿ, ಆ ವಂಶದ ಪೌರಾಣಿಕ ಹಿನ್ನೆಲೆ, ಚಾರಿತ್ರಿಕ ವಂಶಾವಳಿ, ರಾಜನ ಬಣ್ಣನೆ, ವ್ಯಕ್ತಿತ್ವ ಪರಾಕ್ರಮಗಳ ಬಣ್ಣನೆ, ಅವನ ಸಾಮಂತರು, ಅವರ ವಂಶಾವಳಿ, ನೀಡಿದ ದಾನ, ಕಟ್ಟಿಸಿದ ದೇವಾಲಯಗಳು, ದಾನ ಪಡೆದವನ ವಿವರಗಳು, ಶಾಪಾಶಯ ಭಾಗಗಳು ಹೀಗೆ ಹಂತ ಹಂತವಾಗಿ ಚಿತ್ರಿಸುತ್ತ ಒಂದೊಂದೂ ಪುಟ್ಟ ಕಾವ್ಯದಂತೆ ರಚನೆಯಾಗತೊಡಗಿದವು. ಶಾಸನಪಾಠ ರಚನೆಯನ್ನು ಆಸ್ಥಾನದ ಪಂಡಿತರು, ಕವಿಗಳು ಮಾಡತೊಡಗಿದರು. ಶಾಸನಗಳನ್ನು ಚೌಕಕಂಬಗಳ ಮೇಲೆ ಅಥವಾ ಶಾಸನಕ್ಕಾಗಿಯೇ ರಚಿಸಿದ ಶಿಲಾಫಲಕಗಳ ಮೇಲೆ ಕೆತ್ತತೊಡಗಿದರು. ಶಾಸನಗಳು ನೂರಾರು ಪಂಕ್ತಿಗಳಷ್ಟು ವಿಸ್ತಾರವಾಗಿ ಬೆಳೆದವು.

ಹೀಗೆ ಸುದೀರ್ಘವಾಗಿ ಬೆಳೆದ ಶಾಸನಗಳಿಗೆ ಹೊಯ್ಸಳರ ಕಾಲದಲ್ಲಿ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಕ್ರಿ.ಶ.೧೧೫೯ರ ಹೊಯ್ಸಳರ ದೊರೆ ಒಂದನೆಯ ನರಸಿಂಹನ ಆಳ್ವಿಕೆಯ ಕಾಲದ ಶ್ರವಣಬೆಳಗೊಳದ ಶಾಸನ[೧೫] ವೊಂದನ್ನು ಇಲ್ಲಿ ಉದಾಹರಿಸಬಹುದು. ಶಾಸನವು ಒಟ್ಟು ೬೭ ಪಂಕ್ತಿಗಳನ್ನು ಒಳಗೊಂಡಿದೆ. ಮೊದಲೆರಡು ಪಂಕ್ತಿಗಳಲ್ಲಿ ಮಂಗಳಪದ್ಯಗಳು, ಆ ನಂತರದಲ್ಲಿ ಮೂರನೆಯ ಪಂಕ್ತಿಯಿಂದ ಇಪ್ಪತ್ತಮೂರನೆಯ ಪಂಕ್ತಿಯವರೆಗೆ ಒಂದನೆಯ ನರಸಿಂಹನವರೆಗೆ ಹೊಯ್ಸಳ ವಂಶಾವಳಿಯ ನಿರೂಪಣೆ, ಇಪ್ಪತ್ತೆಂಟನೆಯ ಪಂಕ್ತಿಯವರೆಗೆ ಹೊಯ್ಸಳರ ಬಿರುದಾವಳಿ, ಆ ನಂತರದಲ್ಲಿ ನಲ್ವತ್ತನೆಯ ಪಂಕ್ತಿಯವರೆಗೆ ಮಾನ್ಯಮಂತ್ರಿ ಹುಳ್ಳ ಚಮೂಪನ ಬಣ್ಣನೆ, ಆತನು ಚತುರ್ವಿಂಶತಿ ಬಸದಿಯನ್ನು ನಿರ್ಮಿಸಿದ ವಿಚಾರವು ಐವತ್ಮೂರನೆಯ ಪಂಕ್ತಿಯವರೆಗೆ, ಮುಂದೆ ನಯಕೀರ್ತಿಸಿದ್ಧಾನ್ತದೇವರ ಬಣ್ಣನೆ, ನೀಡಿದ ದಾನದ ವಿವರಗಳು, ಅಂತಿಮವಾಗಿ ಶಾಪಾಶಯಗಳೊಂದಿಗೆ ಶಾಸನವು ಮುಕ್ತಾಯಗೊಂಡಿದೆ. ಹೊಯ್ಸಳ ದೊರೆ ವಿಷ್ಣುವರ್ಧನನ ಮಗನಾದ ಒಂದನೆಯ ನರಸಿಂಹನನ್ನು ಈ ಶಾಸನವು

**ರಿಪುಸರ್ಪ್ಪದರ್ಪ್ಪದಾವಾನಳಬಹಳಶಿಖಾಜಾಳಕಾಳಾಂಬುವಾಹಂ**
**ರಿಪುಭೂಪೋದ್ಯತ್ಪ್ರದೀಪಪ್ರಕರಪಟುತರಸ್ಫಾರ ಝುಂಝಾಸಮೀರಂ**
**ರಿಪುನಾಗಾನೀಕತಾರ್ಕ್ಷ್ಯಂರಿಪುನೃಪನಳಿನೀಷಂಡವೇದಂಡರೂಪಂ**
**ರಿಪುಭೂಭೃದ್ಭೂರಿವಜ್ರಂ ರಿಪು ನೃಪಮದಮಾತಂಗಸಿಂಹಂ ನೃಸಿಂಹಂ॥**

ಎಂಬುದಾಗಿ ಸಂಸ್ಕೃತ ಭೂಯಿಷ್ಠ ಬಂಧದಲ್ಲಿ ಬಣ್ಣಿಸಿದೆ. 'ರಿಪು'ಪದವನ್ನು ಪದೇ ಪದೇ ಬಳಸುವ ಮೂಲಕಪದ್ಯದ ಅರ್ಥವಂತಿಕೆಯನ್ನುಹೆಚ್ಚಿಸಿದೆ. ಹಾಗೆಯೇ

**ಸ್ಥಿರಜಿನಶಾಸನೋದ್ಧರಣರಾದಿಯೊಳಾರೆನೆರಾಚಮಲ್ಲಭೂ**
**ವರಮಂತ್ರಿರಾಯನೆ ಬಳಿಕ್ಕೆ ಬುಧಸ್ತುತನಪ್ಪ ವಿಷ್ಣುಭೂ**
**ವರವರಮಂತ್ರಿ ಗಂಗಣನೆ ಮತ್ತೆ ಬಳಿಕ್ಕೆ ನೃಸಿಂಹದೇವ ಭೂ**
**ವರವರಮಂತ್ರಿ ಹುಳ್ಳನೆ ಪೆಱಂಗಿನಿತುಳ್ಳಡೆ ಪೇಳಲಾಗದೇ॥**

ಎಂಬ ಶಾಸನಪದ್ಯದಲ್ಲಿ ಜೈನಧರ್ಮವನ್ನು ಉದ್ಧರಿಸಿದವರಲ್ಲಿ ರಾಚಮಲ್ಲನ ಮಂತ್ರಿ ಚಾವುಂಡರಾಯ, ವಿಷ್ಣುವರ್ಧನನ ಮಂತ್ರಿ ಗಂಗರಾಜನ ನಂತರದಲ್ಲಿ ನರಸಿಂಹನ ಮಂತ್ರಿಯಾದ ಹುಳ್ಳಚಮೂಪನನ್ನು ಹೆಸರಿಸಬೇಕಾಗುತ್ತದೆ. ಬೇರೆಯವರನ್ನಲ್ಲ ಎಂಬುದಾಗಿ ಬಣ್ಣಿಸಿದೆ.

ಶ್ರವಣಬೆಳಗೊಳದ ಅಕ್ಕನ ಬಸದಿಯ ಬಾಗಿಲು ಬಳಿ ನಿಂತಿರುವ ಶಾಸನ[೧೬]ವು ಎಂಬತ್ತುನಾಲ್ಕು ಪಂಕ್ತಿಗಳನ್ನು ಒಳಗೊಂಡ ಸುದೀರ್ಘ ಶಾಸನವಾಗಿದೆ. ಕ್ರಿ.ಶ.೧೧೮೧ರ ಕಾಲಕ್ಕೆ ಸೇರಿದ ಇಮ್ಮಡಿ ಬಲ್ಲಾಳನ ಈ ಶಾಸನವು ಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯ ಹೆಂಡತಿಯಾದ ಅಚಲದೇವಿಯು ಬಸದಿಯನ್ನು ನಿರ್ಮಿಸಿದ ವಿಚಾರವಿದೆ.

ನಾಗಮಂಗಲ ತಾಲ್ಲೂಕು ಅಳೀಸಂದ್ರದ ಶಾಸನ[೧೭]ವು ೯೭ ಪಂಕ್ತಿಗಳನ್ನು ಒಳಗೊಂಡಿರುವ ಹೊಯ್ಸಳರ ಕಾಲದ ಮತ್ತೊಂದು ಸುದೀರ್ಘವಾದ ಶಾಸನವಾಗಿದೆ. ಹೊಯ್ಸಳರ ವಂಶಾವಳಿಯ ನಿರೂಪಣೆ, ಮರಿಯಾನೆ ದಂಡನಾಯಕರ ಬಣ್ಣನೆಯನ್ನು ಈ ಶಾಸನವು ಸುದೀರ್ಘವಾಗಿ ದಾಖಲಿಸಿದೆ. ಹೀಗೆ ಸುದೀರ್ಘವಾಗಿ ಶಾಸನಗಳನ್ನು ರಚಿಸುವ ಪರಂಪರೆಯು ಹೊಯ್ಸಳರ ಕಾಲದಲ್ಲಿ ವಿಶೇಷವಾಗಿ ಬೆಳವಣಿಗೆಯನ್ನು ಕಾಣತೊಡಗಿತು.

ಶಾಸನ ಪಂಕ್ತಿಗಳು ಹೆಚ್ಚುತ್ತಾ ಹೋಗಿ ಇನ್ನೂರನ್ನು ಮೀರಿದ್ದನ್ನು ಶ್ರವಣಬೆಳಗೊಳದ ಗಂಧವಾರಣ ಬಸದಿಯಲ್ಲಿರುವ ಶಾಸನ[೧೮]ದಲ್ಲಿ ಕಾಣಬಹುದಾಗಿದೆ. ಈ ಶಾಸನವು ಹೊಯ್ಸಳ ವಿಷ್ಣುವರ್ಧನನ ರಾಣಿಯಾದ ಶಾಂತಲೆಯು ಮುಡಿಪಿ ಸ್ವರ್ಗಸ್ಥಳಾದ ವಿಚಾರವನ್ನು ದಾಖಲಿಸುತ್ತದೆ. ಈ ಶಾಸನವು ಒಟ್ಟು ೨೨೪ ಪಂಕ್ತಿಗಳನ್ನು ಒಳಗೊಂಡಿದ್ದು, ಹೊಯ್ಸಳ ವಿಷ್ಣುವರ್ಧನನವರೆಗೆ ಆಳಿದ ದೊರೆಗಳ ಗುಣಗಾನ, ಪಿರಿಯರಸಿ ಪಟ್ಟಮಹಾದೇವಿ ಶಾನ್ತಲದೇವಿಯ ವ್ಯಕ್ತಿತ್ವದ ಗುಣಗಾನ, ಆಕೆಯು ಮುಡಿಪಿದ ಸಂಗತಿ, ಆಕೆಯ ತಂದೆತಾಯಿಯರಾದ ಪೆರ್ಗ್ಗಡೆ ಮಾರಸಿಂಹ, ಮಾಚಿಕಬ್ಬೆಯ ಬಣ್ಣನೆ, ಮಾಚಿಕಬ್ಬೆಯು ಸಲ್ಲೇಖನ ವ್ರತವನ್ನು ಕೈಗೊಂಡು ಮುಡಿಪಿದ್ದು, ಆಕೆಯ ವಂಶಾವಳಿ ಹೀಗೆ ಹಲವಾರು ವಿಷಯಗಳನ್ನು ಒಳಗೊಂಡು ಸುದೀರ್ಘವಾದ ಶಾಸನವಾಗಿದೆ.

ಹೀಗೆ ಆರಂಭವಾದ ಚಂಪೂಶೈಲಿಯ ಪರಂಪರೆಯು ಮುಂದುವರೆಯತೊಡಗಿತು. ಆದರೆ ಮುಂದೆ ಬರ ಬರುತ್ತಾ ಶಾಸನಗಳ ವಿಷಯ ನಿರೂಪಣೆಯ ಸಂದರ್ಭದಲ್ಲಿ ಚರ್ವಿತಚರ್ವಣೆಯು ಆರಂಭವಾಗತೊಡಗಿತು. ಇದಕ್ಕೆ ಬಹುಶಃ ಶಾಸನಪಾಠ ರಚನೆಯ

ಹೊಣೆಗಾರಿಕೆಯನ್ನು ಆಸ್ಥಾನ ಪಂಡಿತರು, ಕವಿಗಳು ವಹಿಸಿಕೊಂಡಿದ್ದುದು, ಬದಲಾವಣೆಯ ಕಡೆಗೆ ಗಮನಹರಿಸದೇ ಇದ್ದದ್ದೂ ಸಹ ಕಾರಣವಾಯಿತು. ಶಿಷ್ಟಸಾಹಿತ್ಯದಲ್ಲಿಯಾದರೋ ಈ ಹೊತ್ತಿಗಾಗಲೇ ವಚನ, ಷಟ್ಪದಿ, ರಗಳೆ ಮೊದಲಾದ ಸಾಹಿತ್ಯ ಪ್ರಕಾರಗಳು ಕಾಣಿಸಿಕೊಂಡರೂ ಶಾಸನಸಾಹಿತ್ಯ ಮಾತ್ರ ಚಂಪೂಶೈಲಿಯನ್ನೇ ಅನುಸರಿಸಿತು.

೧೨, ೧೩ನೆಯ ಶತಮಾನದ ಶಾಸನಗಳಲ್ಲಿ ಸಹ ಚಂಪೂಶೈಲಿಯ ಪರಿಪಾಠದ ಮುಂದುವರೆಯುವಿಕೆಯನ್ನು ಕಾಣಬಹುದಾಗಿದೆ. ಶಾಸನಗಳಲ್ಲಿ ದೇವತಾಸ್ತುತಿ, ಶಾಪಾಶಯಗಳನ್ನು ಸಂಸ್ಕೃತದಲ್ಲಿ ರಚಿಸಿ ಉಳಿದ ಶಾಸನ ಭಾಗವನ್ನು ಕನ್ನಡದಲ್ಲಿ ನಿರೂಪಿಸುವ ಪರಿಪಾಠವು ಆರಂಭವಾಯಿತು. ಮುಂದೆ ಈ ಭಾಗಗಳನ್ನೂ ಸಹ ಸೊಗಸಾದ ಕನ್ನಡ ಪದ್ಯ-ಗದ್ಯಗಳಲ್ಲೇ ರಚಿಸುವ ಪರಿಪಾಠವು ಆರಂಭವಾಯಿತು.

ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನ ಕಾಲದ ಶಾಸನ[೧೯]ವೊಂದು ವಿಷ್ಣುವಿನ ವರಹಾವತಾರವನ್ನು ಬಣ್ಣಿಸುವ ಸೊಗಸಾದ ಪದ್ಯದೊಂದಿಗೆ ಆರಂಭವಾಗಿದೆ. ಪ್ರಾರ್ಥನಾ ಶ್ಲೋಕದ ಪಾಠವು ಈ ಕೆಳಗಿನಂತಿದೆ.

**ಅದಿರದು ಧಾತ್ರಿ ತು(೦)ಳ್ಕದು ಕಡಲ್ನೆಲೆದಪ್ಪದು ದಿಗ್ಗಜಬ್ರಜಂ**
**ಬೆದಱದು ಮಧ್ಯಲೋಕದ ಜನಂ ಸಲೆ ಕಂಪಿಸದದ್ರಿತೊಟ್ಟನೆ**
**ತ್ತಿದ[ನಿದು] ಚೋದ್ಯಮೆಂದು ವಿಬುಧರ್ಪ್ಪರಿಕೀರ್ತ್ತಿಸೆವೊಕ್ಕು ಧಾತ್ರಿಯಂ**
**ಪದುಳದಿನೊಂದೆ ಕೋಡೊಳಿರದೆತ್ತಿದ ಸೂಕರನೀಗೆ ಭೋಗಮಂ॥**

ಹಾಗೆಯೇ ಕ್ರಿ.ಶ.೧೧೧೨ರ ಕಾಲಕ್ಕೆ ಸೇರಿದ ಚಾಲುಕ್ಯ ತ್ರಿಭುವನ ಮಲ್ಲನ ಕಾಲದ ಶಾಸನ[೨೦]ವೊಂದು ಶಾಪಾಶಯ ಭಾಗವನ್ನು ಸೊಗಸಾದ ರೀತಿಯಲ್ಲಿ ಕನ್ನಡ ಭಾಷೆಯಲ್ಲಿ ನಿರೂಪಿಸಿದ್ದು, ಶಾಸನಪದ್ಯವು ಈ ಕೆಳಗಿನಂತಿದೆ.

**ಸಕಳೋರ್ವ್ವೀಸ್ತುತಮಪ್ಪ ಧರ್ಮ್ಮಮನಿದಂಕಾದಂಚಿರೈಶ್ವರ್ಯಭುಂ**
**ಭುಕನಕ್ಕುಂ ವಿಪರೀತದಿಂ ನಡೆದವಂಗಾ ಗಂಗೆಯ ವಾರಣಾ**
**ಸಿಕುರುಕ್ಷೇತ್ರದೊಳೆಯ್ದೆ ಗೋದ್ವಿಜಮುನಿಸ್ತ್ರೀಯರ್ಕ್ಕಳಂ ಕೊನ್ದಪಾ**
**ತಕನಕ್ಕುಂ ಬಿಡದಿರ್ಕ್ಕುಮಾಪುರುಷನೆನ್ತುಂ ರೌರವ ಸ್ಥಾನಮಂ॥**
**ಶಾಸನ ಮಿದಾವುದೆಲ್ಲಿಯ**
**ಶಾಸನ ಮಾರಿತ್ತರೇಕೆ ಸಲಿಸುವೆನಾನೀ**
**ಶಾಸನಮನೆಂಬ ಪಾತಕ**
**ನಾಸಕಳಂ ರೌರವಕ್ಕೆ ಗಳಗಳನಿಳಿಗುಂ॥**

"ಸಕಳೋರ್ವ್ವೀಸ್ತುತಮಪ್ಪ..............."ಪದ್ಯವು ಸಂಸ್ಕೃತದ ಶಾಪಾಶಯಗಳನ್ನು ಕುರಿತ ಪದ್ಯಗಳ ಭಾವಾಂತರವಾಗಿ ಕಂಡುಬಂದರೆ, "ಶಾಸನಮಿದಾವುದು....." ಎಂಬ ಪದ್ಯವು ಶಾಸನರಚನಾಕಾರನ ಪ್ರತಿಭೆಯಿಂದ ಹೊರಹೊಮ್ಮಿದ ರಚನೆಯಾಗಿದೆ.

**ಪ್ರಿಯದಿಂದಿಂತಿದನೆಯ್ದೆ ಕಾವಪುರುಷಂಗಾಯುಂ ಜಯಂಶ್ರೀಯುಮ**
**ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರಂಗಳೊಳುವಾರಣಾ**
**ಸಿಯೊಳೆಳೆಕ್ಕೋಟಿ ಮುನೀಂದ್ರರಂ ಕವಿಲೆಯಂ ವೇದಾಢ್ಯರಂ ಕೊಂದುದೊಂ**
**ದಯಸಂ ಪೊರ್ದ್ದುಗುಮೆಂದು ಸಾಱಿದಪುವೀಶೈಲಾಕ್ಷರಂ ಧಾತ್ರಿಯೊಳು ॥**[೨೧]

ಎಂಬ ಶಾಪಾಶಯ ಪದ್ಯಭಾಗವು ಹೊಯ್ಸಳರ ಕಾಲದ ಹಲವಾರು ಶಾಸನಗಳಲ್ಲಿ ಕಾಣಿಸಿಕೊಂಡಿವೆ. ಶಾಸನದ ಎಲ್ಲಾ ವಿಚಾರಗಳನ್ನು ಕನ್ನಡ ಭಾಷೆಯಲ್ಲಿಯೇ ನಿರೂಪಿಸಬೇಕೆಂಬ ಮನೋಭಾವನೆಗೆ ಇವುಗಳು ನಿದರ್ಶನವಾಗಿವೆ.

ಈ ಅವಧಿಯ ಶಾಸನ ರಚನೆಗಳಲ್ಲಿ ಕಾಣಬಹುದಾದ ಮತ್ತೊಂದು ಪ್ರಮುಖ ವಿಚಾರವೆಂದರೆ ಸಂಸ್ಕೃತ ಮತ್ತು ಕನ್ನಡ ಭಾಷೆಯನ್ನು ಬಳಸಿದ ರೀತಿಯಾಗಿದೆ. ತಾಮ್ರಶಾಸನಗಳು ಸಂಪೂರ್ಣವಾಗಿ ಸಂಸ್ಕೃತದಲ್ಲಿ ರಚನೆಯಾಗಿ ಮೇರೆಯನ್ನು ವಿವರಿಸುವಾಗ ಮಾತ್ರ ಪ್ರಾದೇಶಿಕವಾದ ಭಾಷೆಯನ್ನು ಬಳಸುವ ಪರಿಪಾಠವು ಮುಂದುವರೆಯುತ್ತದೆ.[೨೨] ಕೆಲವು ಶಿಲಾಶಾಸನಗಳಲ್ಲಿ ಸಂಸ್ಕೃತ ಮತ್ತು ಕನ್ನಡ ಭಾಷೆಯನ್ನು ಸರಿಸಮನಾಗಿ ಬಳಸಿರುವ ಸನ್ನಿವೇಶವೂ ಕಂಡುಬರುತ್ತದೆ. ಶ್ರವಣಬೆಳಗೊಳದ ಚಿಕ್ಕಬೆಟ್ಟದಲ್ಲಿರುವ ಹಲವಾರು ಶಾಸನಗಳಲ್ಲಿ ಈ ರೀತಿಯಾದ ಪರಿಪಾಠವನ್ನು ಕಾಣಬಹುದಾಗಿದೆ. ಹೊಯ್ಸಳರ ಒಂದನೆಯ ನರಸಿಂಹನ ಮಹಾಪ್ರಧಾನವಾದ ಹುಳ್ಳರಾಜನು ತನ್ನ ಗುರುಗಳಾದ ದೇವಕೀರ್ತಿ ಪಂಡಿತನ ನೆನಪಿಗಾಗಿ ನಿಲ್ಲಿಸಿದ ಕ್ರಿ.ಶ.೧೧೬೩ರ ಶಾಸನ,[೨೩] ಕ್ರಿ.ಶ.೧೦೯೯ರ ಕಾಲದ ಜೈನಮುನಿ ನಯಕೀರ್ತಿದೇವನ ನೆನಪಿಗಾಗಿ ಮಂತ್ರಿನಾಗದೇವನು ನಿಲ್ಲಿಸಿದ ಶಾಸನ,[೨೪] ೧೨ನೆಯ ಶತಮಾನಕ್ಕೆ ಸೇರಿದ ಕೊಂಡ ಕುಂದಾನ್ವಯದ ಜೈನಯತಿ ಗೋಪನಂದಿಯ ಶಾಸನ,[೨೫] ಅದೇ ಶತಮಾನಕ್ಕೆ ಸೇರಿದ ಭಾನುಕೀರ್ತಿದೇವನ ನಿಸದಿಯ ಶಾಸನ[೨೬] ಮುಂತಾದವುಗಳು ಸಂಸ್ಕೃತ – ಕನ್ನಡ ಎರಡನ್ನೂ ಬಳಸಿಕೊಂಡು ರಚನೆಯಾಗಿರುವ ಶಾಸನಗಳಿಗೆ ಉದಾಹರಣೆಗಳಾಗಿವೆ. ಹೆಚ್ಚಾಗಿ ಈ ರೀತಿಯಾದ ಶಾಸನ ರಚನೆಯ ಪ್ರಸಕ್ತಿಯು ಧಾರ್ಮಿಕವಾಗಿ ಪ್ರಸಿದ್ಧರಾಗಿದ್ದವರ ಸಂದರ್ಭದಲ್ಲಿ ಕಂಡುಬಂದಿದೆ ಎಂಬುದು ಗಮನಾರ್ಹವಾಗಿದೆ. ಕ್ರಿ.ಶ.೧೨೩೬ರಲ್ಲಿ ಹೊಯ್ಸಳ ದೊರೆ ಸೋಮೇಶ್ವರನ ಕಾಲದ ಶಾಸನ[೨೭] ವೊಂದರಲ್ಲಿ ಮೊದಲನೆಯ ಪಂಕ್ತಿಯಿಂದ ನಲ್ವತ್ತನೆಯ ಪಂಕ್ತಿಯವರೆಗೆ ಸಂಸ್ಕೃತ ಭಾಷೆಯನ್ನು ಬಳಸಿ, ಆ ನಂತರ 'ಅಯಮೇವಾರ್ಥಃ

ಕರ್ಣಾಟಭಾಷಯಾ ಪ್ರಕಟೀಕ್ರಿಯತೇ' ಎಂಬ ವಾಕ್ಯದಿಂದ ಆರಂಭಿಸಿ ಕನ್ನಡ ಭಾಷೆಯಲ್ಲಿ ಶಾಸನ ಪಾಠವನ್ನು ಬರೆಯಲಾಗಿದೆ.

ದಾನ ಶಾಸನಗಳನ್ನು ರಚಿಸುವ ಅಥವಾ ನಿರೂಪಿಸುವ ಕ್ರಮವೇ ಹೆಚ್ಚು ಕಡಿಮೆ ಒಂದು ಸಿದ್ಧಮಾದರಿಯಂತೆ ಪ್ರಚಲಿತವಾಗತೊಡಗಿತು. ದಾನಿ ಮತ್ತು ದಾನಪ್ರತಿಗೃಹೀತ ಇವರ ವಂಶಾವಳಿ, ಗುಣಗಾನವನ್ನು ಮಾಡುವ ಪರಂಪರೆಯ ಆರಂಭವಾಯಿತು. ಅಷ್ಟೇ ಅಲ್ಲದೆ ರಾಜ್ಯವಾಳುವ ಚಕ್ರವರ್ತಿ, ಅವನ ಸಾಮಂತ, ಕೈಕೆಳಗಿನ ಅಧಿಕಾರಿಗಳನ್ನು ಅನುಕ್ರಮವಾಗಿ ವರ್ಣಿಸುವ ಪರಿಪಾಠವು ಆರಂಭವಾಯಿತು. ಇಂತಹ ಸಂದರ್ಭದಲ್ಲಿ ಈ ಹಿಂದೆಯೇ ಇದ್ದ ಶಾಸನ ಪಾಠವನ್ನು ಯಥಾವತ್ತಾಗಿ ಅಥವಾ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ ಬಳಸಿಕೊಳ್ಳಲು ಶಾಸನರಚನಾಕಾರರು ಮುಂದಾದರೆನ್ನಬಹುದು. ಕ್ರಿ.ಶ.೧೧೫೯ರ ಶ್ರವಣಬೆಳಗೊಳದ ಭಂಡಾರಬಸದಿಯ ಶಾಸನ[೨೮] ಮತ್ತು ಕ್ರಿ.ಶ.೧೧೮೧ರ ಅಕ್ಕನ ಬಸದಿಯ ಶಾಸನ[೨೯] ವನ್ನು ಇಲ್ಲಿ ಗಮನಿಸಬಹುದು. ಈ ಎರಡು ಶಾಸನಗಳು ಹೊಯ್ಸಳರ ಕಾಲಕ್ಕೆ ಸೇರಿದವುಗಳಾಗಿವೆ. ಭಂಡಾರ ಬಸದಿಯ ಶಾಸನದಲ್ಲಿ ಹೊಯ್ಸಳರ ಒಂದನೆಯ ನರಸಿಂಹನವರೆಗೆ ವಂಶಾವಳಿಯನ್ನು ನಿರೂಪಿಸುವಾಗ ಬಂದಿರುವ ಶಾಸನ ಪದ್ಯಗಳನ್ನೇ ಚಾಚೂತಪ್ಪದೇ ಅಕ್ಕನ ಬಸದಿಯ ಶಾಸನವು ಒಳಗೊಂಡಿರುತ್ತದೆ. ಈ ಶಾಸನದ ಮುಂದಿನ ಭಾಗದಲ್ಲಿ ಮಾತ್ರ ಒಂದನೆಯ ನರಸಿಂಹನ ಪತ್ನಿ ಏಚಲದೇವಿ ಮತ್ತು ಇಮ್ಮಡಿ ಬಲ್ಲಾಳನನ್ನು ಬಣ್ಣಿಸಿರುವ ಪದ್ಯಗಳು ಕಂಡುಬರುತ್ತವೆ. ಬಹುತೇಕ ರಾಜರ ವಂಶಾವಳಿಯನ್ನು ನಿರೂಪಿಸುವ ಸಂದರ್ಭದಲ್ಲಿ ಈ ರೀತಿಯಾದ ಪ್ರಕ್ರಿಯೆಯು ನಡೆಯುತ್ತಿದ್ದಿರಬಹುದು. ಮುಂದೆ ಶಾಸನದ ಪ್ರಮುಖ ಭಾಗವನ್ನು ಮಾತ್ರ ಆ ಶಾಸನಕಾರನು ಸ್ವತಂತ್ರವಾಗಿ ರಚಿಸುತ್ತಿದ್ದನೆನ್ನಬಹುದು. ಈಗಾಗಲೇ ಸಿದ್ಧವಾಗಿರುವ ರಾಜವಂಶಾವಳಿಯ ಭಾಗವನ್ನು ಯಥಾವತ್ತಾಗಿ ಶಾಸನಕ್ಕೆ ಅಳವಡಿಸಿಕೊಂಡು ನಂತರ ಉದ್ದಿಷ್ಟವಾದ ವಿಷಯವನ್ನು ಮಾತ್ರ ಆ ಶಾಸನರಚನಾಕಾರನು ಬರೆಯುತ್ತಿದ್ದನು ಎನ್ನಲು ಅವಕಾಶವಿದೆ. ಬೇಲೂರು ತಾಲ್ಲೂಕು ಮಾರೇನಹಳ್ಳಿಯ ಶಾಸನ[೩೦]ದಲ್ಲಿ ರಚನಾಕಾರನು ಇಮ್ಮಡಿ ಬಲ್ಲಾಳನವರೆಗೆ ಬಳಸಿರುವ ಪದ್ಯಗಳೆಲ್ಲಾ ಹೊಯ್ಸಳರ ಕಾಲದ ಬಹುತೇಕ ಶಾಸನಗಳಲ್ಲಿ ಕಂಡುಬರುವ ಪದ್ಯಗಳಾಗಿವೆ. ಆ ನಂತರದಲ್ಲಿ ಮಾತ್ರ ಕವಿಯು 'ಬಾಚಯ್ಯನು ಹೇಳ್ದ ಪದ್ಯ' ಎಂದು ಆರಂಭಿಸಿ ಬಲ್ಲಾಳನ ಪಾದಪದ್ಮೋಪಜೀವಿಯಾದ ಬೆನಕನ ಮಾರವ್ವೆಯ ಅನ್ವಯಾವತಾರವನ್ನು ನಿರೂಪಿಸಿದ್ದಾನೆ.

ದಾನಶಾಸನಗಳಂತೆಯೇ ಈ ಕಾಲಾವಧಿಯಲ್ಲಿ ಪ್ರಶಸ್ತಿ ಶಾಸನಗಳ ರಚನೆಯು ಪ್ರಾಮುಖ್ಯತೆಯನ್ನು ಪಡೆಯಿತು. ಇಮ್ಮಡಿ ಮಾರಸಿಂಹನ ನೆನಪಿಗೆ ಇರುವ ಶ್ರವಣಬೆಳಗೊಳದ ಕೂಗೇಬ್ರಹ್ಮದೇವರ ಸ್ತಂಭ ಶಾಸನ[೩೧] ರಾಷ್ಟ್ರಕೂಟ ಇಂದ್ರನ ನೆನಪಿಗಾಗಿ ಇರುವ ಶ್ರವಣಬೆಳಗೊಳದ

ಮತ್ತೊಂದು ಶಾಸನ,[೩೨] ಕುವರಲಕ್ಷ್ಮನ ವೀರಗಲ್ಲು[೩೩] ಮೊದಲಾದವುಗಳನ್ನು ಹೆಸರಿಸಬಹುದಾಗಿದೆ. ಹಾಗೆಯೇ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಧಾರ್ಮಿಕ ಕಾರಣಗಳಿಗಾಗಿ ಆತ್ಮಾರ್ಪಣೆ ಮಾಡಿಕೊಂಡವರ ಬಗೆಗಿನ ಶಾಸನಗಳು, ನಿಸಿದಿಗಲ್ಲುಗಳು ಮೊದಲಾದವುಗಳಲ್ಲಿ ವೇಳೆವಾಟಿ, ಚೋಳವಾಟಿ, ಗರುಡಪದ್ಧತಿಯ ವಿಷಯಗಳನ್ನು ಒಳಗೊಂಡ ಶಾಸನಗಳು ಅಸಂಖ್ಯಾತವಾಗಿದ್ದು ಸಾಹಿತ್ಯಕವಾಗಿಯೂ ಸಹ ಗಮನ ಸೆಳೆಯುತ್ತವೆ. ಕರ್ನಾಟಕದ ಮಾಸ್ತಿಗಲ್ಲುಗಳಲ್ಲಿ ದೇಕಬ್ಬೆಯ ಶಾಸನ[೩೪]ವು ಪ್ರಮುಖವಾದದ್ದು ಮತ್ತು ಸಾಹಿತ್ಯಕವಾಗಿ ಸಹ ಗಮನಸೆಳೆಯುತ್ತದೆ.

ಶಾಸನ ಪಾಠವನ್ನು ಸಿದ್ಧಪಡಿಸುತ್ತಿದ್ದವರಲ್ಲಿ ಸಾಮಾನ್ಯರಿಂದ ಹಿಡಿದು ಪಾಂಡಿತ್ಯವನ್ನು ಹೊಂದಿದ್ದು ರಾಜಾಶ್ರಯವನ್ನು ಪಡೆದ ಕವಿಗಳೂ ಇದ್ದಾರೆ. ಯಾವುದೇ ರೀತಿಯಾದ ಕಟ್ಟುಪಾಡುಗಳಿಗೆ ಒಳಗಾಗದೆ ರಚಿತವಾದ ಶಾಸನಗಳು, ಆ ನಂತರದಲ್ಲಿ ವರ್ಣನೆಗಳು, ಪ್ರೌಢಶೈಲಿಗೆ ಮಹತ್ವ ನೀಡಿ ರಚನೆಯಾದ ಶಾಸನಗಳು, ಗಂಭೀರವಾದ ಗದ್ಯಶೈಲಿಯಲ್ಲಿ ನಿರೂಪಿಸಿರುವ ಬಿರುದಾವಳಿಗಳು, ಗದ್ಯಾತ್ಮಕವಾಗಿಯಾದರೂ ಮನೋಜ್ಞವಾಗಿ ನಿರೂಪಿತವಾಗಿರುವ ವೀರಗಲ್ಲುಗಳು, ಹೀಗೆ ಹಲವಾರು ವೈವಿಧ್ಯಮಯವಾದ ಶಾಸನಗಳು ಈ ಕಾಲಾವಧಿಯಲ್ಲಿ ಹೇರಳವಾಗಿ ರಚನೆಯಾದವು. ಕವಿಗಳಾದರೋ ಪ್ರೌಢವಾದ, ಸಂಸ್ಕೃತ ಭೂಯಿಷ್ಠವಾದ ಶೈಲಿಯನ್ನೂ ಜೊತೆ ಜೊತೆಗೆ ದೇಶಿ ಶೈಲಿಯನ್ನು ಅನುಸರಿಸಿದರು. ಶಾಸನಗಳ ಜೀವಾಳವು ವರ್ಣನೆಯಾದ್ದರಿಂದ ಶಬ್ದಾಲಂಕಾರ, ಅರ್ಥಾಲಂಕಾರಗಳು ಯಥೇಚ್ಛವಾಗಿ ಕಾಣಿಸಿಕೊಂಡವು. ಯಾರ ಹೊಗಳಿಕೆಯನ್ನೂ ಮಾಡಲು ಬಯಸದೆ ಕೇವಲ ವೈರಾಗ್ಯಮೂರ್ತಿಯಾದ ಶ್ರವಣಬೆಳಗೊಳದ ಗೊಮ್ಮಟೇಶ್ವರನನ್ನು ಬಣ್ಣಿಸಿರುವ 'ಗೊಮ್ಮಟಸ್ತುತಿ'[೩೫] ಯಂತಹ ಖಂಡಕಾವ್ಯದ ಸೃಷ್ಟಿಯೂ ಆಯಿತು. ಆದ್ದರಿಂದ ಹತ್ತರಿಂದ ಹದಿಮೂರನೆಯ ಶತಮಾನದ ಸುಮಾರು ೪೦೦ ವರ್ಷಗಳನ್ನು 'ಕರ್ನಾಟಕ ಶಾಸನಗಳ ಸುವರ್ಣಯುಗ'ವೆಂದು ವಿದ್ವಾಂಸರು ಗುರುತಿಸಿದ್ದಾರೆ.[೩೬] "ಲಿಖಿತಕ್ಕೆ ಕೇವಲ ವ್ಯಾವಹಾರಿಕ ಸ್ವರೂಪವು ಕಡಿಮೆಯಾಗಿ ಸಾಹಿತ್ಯದ ವೈಖರಿ ಉಂಟಾಯಿತು. ಎಲ್ಲವು ಪ್ರಬಂಧವಾಯಿತು. ಕವಿತೆಯಾಯಿತು. ಪದ್ಯವು ಗದ್ಯವನ್ನು ಆಕ್ರಮಿಸಿತು. ಗದ್ಯವು ಪದ್ಯದ ವೇಷವನ್ನು ಧರಿಸಿತು. ಶಬ್ದಾಲಂಕಾರ, ಅರ್ಥಾಲಂಕಾರಗಳು ಅಧಿಕಾರ ನಡೆಸಿದವು. ವರ್ಣನೆಗಳು ವಿಸ್ತಾರಗೊಂಡವು. ವಿವರಗಳು ಹಬ್ಬಿದವು. ಅನೇಕ ಶಾಸನಗಳು ಚಂಪೂಶೈಲಿಯ ಖಂಡಕಾವ್ಯದಂತೆ ಸುದೀರ್ಘವಾಗಿ, ಲಲಿತಮನೋಹರವಾಗಿ ಸ್ವಯಂಪೂರ್ಣವಾಗಿ ಶೋಭಿಸಿದವು"[೩೭] ಎಂಬ ಅಭಿಪ್ರಾಯವು ಈ ಕಾಲಾವಧಿಯ ಶಾಸನಗಳ ನಿರೂಪಣಾಕ್ರಮದ ಬಗೆಗೆ ಬರೆದ ಭಾಷ್ಯವೆನ್ನಬಹುದಾಗಿದೆ. ಒಟ್ಟಿನಲ್ಲಿ ಕನ್ನಡ ಶಾಸನಗಳ ರಚನೆಯು ಈ ಯುಗದಲ್ಲಿ ಹುಲುಸಾಗಿ ನಡೆಯಿತು. ಸಾಹಿತ್ಯಕವಾಗಿಯೂ ಗಮನಸೆಳೆಯುವಂತಹ ಹಲವಾರು ಶಾಸನಗಳು ಈ ಕಾಲದಲ್ಲಿ ರಚನೆಯಾದವು. ಕನ್ನಡ ಶಾಸನ

ಪ್ರಪಂಚದಲ್ಲಿ ಈ ನಾಲ್ಕು ನೂರು ವರ್ಷಗಳ ಅವಧಿಯು ತನ್ನದೇ ಆದ ವಿಶೇಷತೆ ಮತ್ತು ವೈವಿಧ್ಯತೆಯನ್ನು ಹೊಂದಿದೆ ಎನ್ನಬಹುದು.

### ೩.೩ : ವಿಜಯನಗರ ಕಾಲ (ಕ್ರಿ.ಶ.೧೩೫೦ರಿಂದ ಕ್ರಿ.ಶ.೧೬೦೦ರ ವರೆಗೆ) :-

ಹದಿಮೂರನೆಯ ಶತಮಾನದ ಮಧ್ಯಭಾಗದ ನಂತರದಲ್ಲಿ ಕನ್ನಡ ಶಾಸನಗಳ ರಚನೆಯಲ್ಲಿ ಗುರುತರವಾದ ಬದಲಾವಣೆಯು ಉಂಟಾಯಿತು. ಈವರೆಗಿನ ಶಾಸನಗಳು ಪದ್ಯಾತ್ಮಕವಾಗಿದ್ದು ಪುಟ್ಟ ಚಂಪೂ ಕಾವ್ಯಗಳಂತೆ ಮನಸೆಳೆಯುತ್ತಿದ್ದರೆ, ಹದಿಮೂರನೆಯ ಶತಮಾನದ ನಂತರದಲ್ಲಿ ವಿಶೇಷವಾಗಿ ವಿಜಯನಗರದ ಅರಸರ ಆಳ್ವಿಕೆಯ ಕಾಲದಲ್ಲಿ ಶಾಸನ ರಚನೆಯ ವಿಧಾನದಲ್ಲಿ ವಿಶೇಷವಾದ ಬದಲಾವಣೆಯಾಯಿತು. ಈ ರೀತಿಯಾದ ಬದಲಾವಣೆಗಳಿಗೆ ರಾಜಕೀಯವಾಗಿ ಪ್ರಬಲವಾದ ವಿಜಯನಗರ ಸಾಮ್ರಾಜ್ಯದ ರಾಜರುಗಳ ಭಾಷೆ, ಸಂಸ್ಕೃತಿ, ಧಾರ್ಮಿಕವಾಗಿ ಬದಲಾದ ಒಲವುಗಳು ಕಾರಣವಾಗುತ್ತವೆ. ವಿಶೇಷವಾಗಿ ಮುಸಲ್ಮಾನರ ಧಾಳಿಯನ್ನು ಎದುರಿಸುವ ಮೂಲಕ ನೂತನ ಸಾಮ್ರಾಜ್ಯದ ಸ್ಥಾಪನೆಯಾದ ಕಾರಣದಿಂದ ವಿಜಯನಗರದರಸರು "ಹಿಂದೂ ಧರ್ಮ ಸಂರಕ್ಷಕ"ರೆಂದು ಗುರುತಿಸಿಕೊಂಡರು. ಹೀಗಾಗಿ ಅವರ ಒಲವು ವಿಶೇಷವಾಗಿ ಸಂಸ್ಕೃತದ ಕಡೆಗೆ ತಿರುಗಿತು. "ಸಂಸ್ಕೃತ ಭಾಷೆಯಲ್ಲಿ ಶಾಸನ ಹಾಕಿಸುವುದು ಒಂದು ಗೌರವದ ಸಂಗತಿ ಎಂದು ಆ ಕಾಲದ ರಾಜರ ಮತ್ತು ಜನರ ಭಾವನೆಯಾಗಿದ್ದಿತ್ತೆನ್ನಬಹುದು. ಈ ಅವಧಿಯಲ್ಲಿ ಸೃಷ್ಟಿಯಾದ ಕಾವ್ಯಗಳಲ್ಲಿ ಷಟ್ಪದಿ, ಸಾಂಗತ್ಯ ಮುಂತಾದ ದೇಶೀಯ ಛಂದಸ್ಸುಗಳು ಪ್ರಚುರದಲ್ಲಿದ್ದರೂ, ಅನೇಕ ಸಂಸ್ಕೃತ ವೃತ್ತಗಳೂ ಕಂದಗಳು ಕನ್ನಡ ಶಿಲಾಶಾಸನಗಳಲ್ಲಿ ವಿಪುಲವಾಗಿ ಬಳಕೆಯಾಗಿವೆ"[೩೮] ಎನ್ನಲು ಅವಕಾಶವಿದೆ.

ಹೊಯ್ಸಳರ ಕಾಲದಲ್ಲಿ ಸಿಗುವಷ್ಟು ಅಧಿಕಸಂಖ್ಯೆಯಲ್ಲಿಯೇ ವಿಜಯನಗರದ ಅರಸರ ಕಾಲದಲ್ಲೂ ಶಾಸನಗಳು ವಿಪುಲವಾಗಿ ದೊರೆಯುತ್ತವೆ. ಹಾಗೂ ಈ ಅರಸರ ಕಾಲ ನಿಷ್ಕರ್ಷೆ ಮಾಡಲು, ಅಂದಿನ ಜನಜೀವನವನ್ನು ಅರಿಯಲು ಶಾಸನಗಳು ಪ್ರಮುಖ ಆಧಾರಗಳಾಗಿವೆ. ಆದರೂ ಸಹ ಈ ಶಾಸನಗಳು ಸಾಹಿತ್ಯದ ದೃಷ್ಟಿಯಿಂದ ಗಮನ ಸೆಳೆಯುವುದರಲ್ಲಿ ಹಿಂದೆ ಬೀಳುತ್ತವೆ. ಇದಕ್ಕೆ ಮೊದಲನೆಯದಾಗಿ ಶಾಸನ ರಚನೆಗೆ ಬಳಸುತ್ತಿದ್ದ ಮಾಧ್ಯಮದಲ್ಲಿ ಆದ ಬದಲಾವಣೆಯನ್ನು ಗಮನಿಸಬೇಕಾಗುತ್ತದೆ. ವಿಜಯನಗರ ಪೂರ್ವಕಾಲದಲ್ಲಿ ಶಾಸನಗಳನ್ನು ರಚಿಸಲು ವಿಶೇಷವಾಗಿ ಕರಿಯ ಬಳಪದ ಕಲ್ಲನ್ನು ಬಳಸುತ್ತಿದ್ದರು. ಹಾಗೂ ವಿಶೇಷವಾಗಿ ಶಿಲಾಫಲಕಗಳನ್ನು ನಿರ್ಮಿಸಿಕೊಳ್ಳುವ ಪರಿಪಾಠವಿತ್ತು. ಆದರೆ ಈ ಪರಿಪಾಠವು ಆ ನಂತರದ ಕಾಲದಲ್ಲಿ ಕಣ್ಮರೆಯಾಗತೊಡಗಿ ವಾಸ್ತುಶಿಲ್ಪದಿಂದ ಹಿಡಿದು ಶಾಸನಗಳನ್ನು ಬರೆಯುವುದಕ್ಕೂ

ಶಿಲ್ಪಿಗಳು ಬೆಕ್ಕೆಕಲ್ಲು ಅಥವಾ ಬೆಣಚುಕಲ್ಲನ್ನು ಬಳಸಲು ಆರಂಭಿಸಿದರು. ಈ ಕಾರಣದಿಂದಾಗಿ ವಾಸ್ತುಶಿಲ್ಪ, ಮೂರ್ತಿಗಳ ರಚನೆಯಲ್ಲಿ ಒಂದು ರೀತಿಯಾದ ಅವನತಿ ಉಂಟಾದಂತೆ ಶಾಸನಗಳ ಸೌಂದರ್ಯದಲ್ಲೂ ಅವನತಿಯ ಆರಂಭವಾಯಿತು. ಶಾಸನಗಳನ್ನು ಸಾಮಾನ್ಯವಾಗಿ ದೇವಾಲಯಗಳ ಭಿತ್ತಿಗಳ ಮೇಲೆ, ಹಾಸುಗಲ್ಲುಗಳ ಮೇಲೆ ಅಥವಾ ಪ್ರತ್ಯೇಕ ಕಲ್ಲುಚಪ್ಪಡಿಗಳ ಮೇಲೆ, ಬಂಡೆಗಳ ಮೇಲೋ, ತಾಮ್ರಪಟಗಳ ಮೇಲೋ ಬರೆಯುವ ಪರಿಪಾಠ ಕಾಣಿಸಿಕೊಂಡಿತು. ಇದರಿಂದಾಗಿ ಶಾಸನಗಳ ಅಲಂಕಾರ ಕಡಿಮೆಯಾಯಿತು. ಹಿಂದೆಲ್ಲ ಚಿಕ್ಕ ಮತ್ತು ಸುಂದರ ಅಕ್ಷರಗಳಿಂದ ಕೂಡಿದ್ದ ಶಾಸನಗಳ ಸಂಖ್ಯೆ ಕಡಿಮೆಯಾಗತೊಡಗಿತು. ಅಕ್ಷರಗಳ ಗಾತ್ರ ದೊಡ್ಡದಾದ ಕಾರಣದಿಂದ ಸ್ಥಳಾಭಾವ ಉಂಟಾಗಿ ಕಾವ್ಯಮಯವಾದ ಶಾಸನ ಪಾಠಕ್ಕಿಂತ ನಿರೂಪಣೆಗಷ್ಟೇ ಮಹತ್ವ ದೊರೆಯುವಂತಾಯಿತು. ಹಾಗೆಯೇ ಹಿಂದಿನ ಶತಮಾನಗಳಲ್ಲಿ ಕುಸುರಿ ಕೆಲಸದ ಮೂಲಕ ಶಾಸನಗಳನ್ನೂ ಸಹ ಅಲಂಕಾರಿಕವಾಗಿ ರಚಿಸುತ್ತಿದ್ದ ಶಿಲ್ಪಿಗಳ ಅಭಾವವು ರಾಜಾಶ್ರಯದಿಂದ ವಂಚಿತರಾದ ಕಾರಣದಿಂದ ಉಂಟಾಯಿತು. ಹೀಗಾಗಿ ಶಾಸನ ಸೌಂದರ್ಯವು ತಗ್ಗಲು ಆರಂಭವಾಯಿತು.

ಹೊಯ್ಸಳ ಸಾಮ್ರಾಜ್ಯದ ಅವನತಿಯ ಕೆಲವೇ ವರ್ಷಗಳಲ್ಲಿ ಕ್ರಿ.ಶ.೧೩೬೮ರಲ್ಲಿ[೩೯] ರಚನೆಯಾದ ಬುಕ್ಕರಾಯನ ಶಾಸನವು ವಿಜಯನಗರ ಕಾಲದ ಶಾಸನಗಳ ಸ್ವರೂಪಕ್ಕೆ ಅತ್ಯುತ್ತಮ ಉದಾಹರಣೆಯೆನ್ನಬಹುದು. ಈ ಶಾಸನದ ಸ್ವರೂಪವನ್ನು ಕುರಿತು "ಕ್ರಿ.ಶ.೧೩೬೮ನೆಯ ಬುಕ್ಕರಾಯನ ಶ್ರವಣಬೆಳಗೊಳದ ಶಾಸನದಲ್ಲಿ ಹೊಯ್ಸಳರ ಅಕ್ಷರದ ಮುಂದುವರಿದ ಛಾಯೆಯನ್ನು ಕಾಣಬಹುದು. ಶಾಸನದ ಆರಂಭದಲ್ಲಿಯಾಗಲೀ, ಅಂತ್ಯದಲ್ಲಿಯಾಗಲೀ ಯಾವುದೇ ಅಲಂಕಾರಗಳಿಲ್ಲದೆ, ನೇರವಾಗಿ ಆರಂಭವಾಗಿರುವ ಈ ಶಾಸನದಲ್ಲಿ ಅಕ್ಷರಗಳನ್ನು ದಪ್ಪವಾಗಿ ಬರೆಯಲಾಗಿದೆ. ಈ ಶಾಸನಕ್ಕೆ ಬಳಸಿರುವ ಕಲ್ಲು ಬಳಪದ ಕಲ್ಲು. ಸುಮಾರು ೫ ಅಡಿ ಎತ್ತರವಿರುವ ಈ ಶಾಸನದಲ್ಲಿ ಹೊಯ್ಸಳರ ಕಾಲದಲ್ಲಾಗಿದ್ದರೆ ಸುಮಾರು ೧೦೦ ಸಾಲುಗಳನ್ನಾದರೂ ರಚಿಸುತ್ತಿದ್ದರು. ಆದರೆ ಇಲ್ಲಿ ೩೫ ಸಾಲುಗಳನ್ನು ಬರೆಯಲಾಗಿದೆ. ಇದು ಸೂಕ್ಷ್ಮ ಕುಸುರಿ ಮಾಡುವ ಶಿಲ್ಪಿಗಳ ಅಭಾವವಾಗಿದ್ದುದ್ದನ್ನು ತೋರಿಸುತ್ತದೆ"[೪೦] ಎಂಬ ಅಭಿಪ್ರಾಯವು ವಿಜಯನಗರದ ಅರಸರ ಕಾಲದಲ್ಲಿ ಶಾಸನ ಪರಂಪರೆಯಲ್ಲಿ ಉಂಟಾದ ಹಠಾತ್ ಬದಲಾವಣೆಗಳನ್ನು ದಾಖಲಿಸಿದೆ.

ವಿಜಯನಗರ ಸಾಮ್ರಾಜ್ಯ ಮತ್ತು ಆ ನಂತರದ ಕಾಲದ ಕನ್ನಡ ಶಾಸನಗಳಲ್ಲಿ ಹೆಚ್ಚಿನವು ಗದ್ಯದ ರೂಪದಲ್ಲಿವೆ. ನೇರವಾಗಿ ವಿಷಯ ನಿರೂಪಣೆಯನ್ನು ಮಾಡಿರುವುದೇ ಹೆಚ್ಚು. ಆದರೂ ಸಹ ಅಲ್ಲಲ್ಲಿ ಕಾವ್ಯದ ದೃಷ್ಟಿಯಿಂದ ಗಮನಾರ್ಹವಾದ ಶಾಸನಗಳು ವಿರಳವಾಗಿ ದೊರೆಯುತ್ತವೆ. ಕ್ರಿ.ಶ.೧೩೮೦ರ ಇಮ್ಮಡಿ ಹರಿಹರನ ಕಾಲದ ಹೊಮ್ಮ[೪೧] ಶಾಸನವನ್ನು ಇಲ್ಲಿ ಉದಾಹರಿಸಬಹುದು.

ಇಪ್ಪತ್ತೇಳು ಪಂಕ್ತಿಗಳಿಂದ ಕೂಡಿದ ಈ ಶಾಸನವು ಇಮ್ಮಡಿ ಹರಿಹರನವರೆಗೆ ವಂಶಾವಳಿಯ ನಿರೂಪಣೆ, ನಂತರ ಕಂಪಮಂತ್ರಿ, ಹದಿನಾಡಿನ ಬಲ್ಲಪಮಂತ್ರಿ, ಹೊಮ್ಮ ಗ್ರಾಮದ ಬಣ್ಣನೆ, ಆ ನಂತರದಲ್ಲಿ ಮೂಲಸ್ಥಾನೇಶ್ವರ ದೇವಾಲಯಕ್ಕೆ ನೀಡಿದ ದಾನದ ವಿವರಗಳು ಹಾಗೂ ಅಂತಿಮವಾಗಿ ಶಾಪಾಶಯ ಭಾಗದಿಂದ ಮುಕ್ತಾಯಗೊಂಡಿದೆ. ವಿಶೇಷವಾಗಿ ಹೊಯ್ಸಳರ ಕಾಲದ ಶಾಸನಗಳಲ್ಲಿನ ನಿರೂಪಣಾ ವಿಧಾನವನ್ನೇ ಇಲ್ಲೂ ಸಹ ಬಳಸಿರುವಂತೆ ಕಂಡುಬರುತ್ತದೆ. ಈ ಶಾಸನದಲ್ಲಿ ಹೊಮ್ಮ ಗ್ರಾಮವನ್ನು ಬಣ್ಣಿಸಿರುವ

**ಅದಱಿಕೊಳ್ಬಂದೋದಿ ವಾಚಸ್ಪತಿ ಸುರಪತಿಯಾಸ್ಥಾನದೊಳ್ಸಂದನಾರ್ಪ್ಪಿಂ।**
**ದದಱಿಕೊಳ್ಬಂದಿರ್ದುವಾಣೀಸತಿಸರಸಕಳಾಪ್ರೌಢೆಯಾದಳ್ಶಶಾಂಕಂಅದಱ**
**ದ್ಯದ್ಧರ್ಮರುಕ್ಸಂಗದಿನೆಸೆವಕಳಾಭೂಷಣನಾದಂಮಹೀಭಾಗದೊಳೆಂದ**
**ನಾರ್ದ್ದು ತದ್ಗ್ರಾಮದಮಹಿಮೆಯಿಂ ಬಂಣಿಸಲ್ಬಲ್ಲವನಾವಂ"**

ಎಂಬ ಪದ್ಯ ಮತ್ತು ಶಾಪಾಶಯ ಭಾಗದಲ್ಲಿರುವ

**ಇದನಾವಂ ನೋಡಿ ಸಂತೋಷದೆ ನಡಿಸಿದ ಭೂಪಾಲವಕ್ಷಸ್ಥಳಾವಾ**
**ಸದೊಳಿರ್ಪ್ಪಿಂ ನಾಂ ಸಮಂತಲ್ಲದೆ ಯಿದಕುಱಿಕಾಯಿರ್ದ್ದನಾವಾ**
**ಸದೊಳ್ಮಾಣದೆ ನಿಲ್ವಳ್ತಾನದೆನ್ನಗ್ರಜೆಯೆನುತೆ ರಮಾದೇವಿ ಕೀರ್ತ್ಯಂಗನಾ ಹ**
**ಸ್ತದೆ ದಿಕ್ಪಾಲಬ್ರಜಾಧ್ಯಕ್ಷದೊಳನವರತಂ ಡಂಗುರಂ ಪೊಯ್ಸುತಿರ್ಪ್ಪಳು॥**

ಎಂಬ ಮಹಾಸ್ರಗ್ಧರೆಯಲ್ಲಿರುವ ಪದ್ಯಗಳು ಶಾಸನಕವಿಯ ಸಹಜ ಭಾಷಾಶೈಲಿಯನ್ನು ಪ್ರತಿನಿಧಿಸುತ್ತವೆ. ಶಾಸನದ ಕಡೆಯಲ್ಲಿರುವ 'ಅಕ್ಷಾರದ ಗೋಪಂಣನ ಬರಹ" ಎಂಬ ಮಾತಿನಿಂದ ಈ ಶಾಸನವನ್ನು ಗೋಪಣ್ಣನೆಂಬುವನು ಬರೆದಿದ್ದಾನೆ ಎನ್ನಬಹುದು.

ವಿಜಯನಗರ ಸಾಮ್ರಾಜ್ಯದ ಅರಸರು ಎಲ್ಲಾ ಧರ್ಮಗಳಿಗೂ ಸಮಾನವಾದ ಪ್ರೋತ್ಸಾಹ ಮತ್ತು ಆಶ್ರಯವನ್ನಿತ್ತಿದ್ದರು. ಈ ಕಾರಣದಿಂದಾಗಿ ಶ್ರೀವೈಷ್ಣವ, ಶೈವ, ವೀರಶೈವ, ಜೈನಧರ್ಮಗಳ ಪ್ರಸಕ್ತಿಯು ಈ ಕಾಲದ ಶಾಸನಗಳಲ್ಲಿ ಕಂಡುಬರುತ್ತವೆ. ಅಂತೆಯೇ ಈ ಕಾಲದಲ್ಲಿ ಜೈನಧರ್ಮವು ಉಳಿದುಕೊಳ್ಳಲು ಮುಖ್ಯವಾಗಿ ಜೈನವ್ಯಾಪಾರಿಗಳು, ಸಣ್ಣಪುಟ್ಟ ಅರಸರು ಮತ್ತು ಮಂತ್ರಿಗಳು ಕಾರಣರಾಗಿದ್ದಾರೆ. ಕಾರ್ಕಳ, ವೇಣೂರು, ಮೂಡಬಿದಿರೆ ಮುಂತಾದ ಸ್ಥಳಗಳು ಜೈನರ ಧಾರ್ಮಿಕ ಕೇಂದ್ರಗಳಾಗಿ ಬೆಳವಣಿಗೆಯನ್ನು ಕಂಡವು. ಇಂತಹ ಧಾರ್ಮಿಕ ಕೇಂದ್ರಗಳಲ್ಲಿ ರಚನೆಯಾದ ಶಾಸನಗಳಲ್ಲಿ ಸಾಹಿತ್ಯಕವಾಗಿ ಮನಸೆಳೆಯುವ ಪದ್ಯ ಶಾಸನಗಳ ರಚನೆಯಾಗಿರುವುದನ್ನು ಕಾಣಬಹುದು. ಕ್ರಿ.ಶ.೧೪೨೬ರ ಪ್ರೌಢದೇವರಾಯನ ಕಾಲದ ಮೂಡಬಿದಿರೆ ಶಾಸನ[೬೨]ವು ಚಂಪೂ ಕಾವ್ಯದ ಮಾದರಿಯಲ್ಲಿಯೇ ರಚಿತವಾಗಿದೆ. ಜಂಬೂದ್ವೀಪ, ಭರತಕ್ಷೇತ್ರ, ಆರ್ಯ್ಯಾಖಂಡ,

ತುಳುದೇಶ, ಮೂಡುಬಿದಿರೆ, ಅಲ್ಲಿಯ ತ್ರಿಭುವನ ಚೂಡಾಮಣಿಬಸದಿ, ಚಂದ್ರಪ್ರಭ ಬಿಂಬದ ವರ್ಣನೆಗಳಿಂದ ಕೂಡಿದ ಶಾಸನವಾಗಿದೆ. ಮೂಡಬಿದಿರೆಯ ಸೊಬಗನ್ನು ಮತ್ತು ಜನರನ್ನು ಬಣ್ಣಿಸಿರುವ

**ಪುರಮೊಪ್ಪಿದುದು ವಂಶವೆಂಬ ಪೆಸರಿಂ ಬಾಹ್ಯಪ್ರದೇಶಂಗಳೊಳ್**
**ವರಶಾಲೇಯದಿನಿಕ್ಷುಶಾಕ[ಟ]ದಿನಾರಾಮಂಗಳಿಂ ಸುತ್ತಿದಾ**
**ಪರಿಖಾಂತಃಪರಿಧಿಪ್ರತೋಳಿಗಳಿನುದ್ಯತ್ಕೇತನ ವ್ರಾತದಿಂ**
**ದುರುಜೈನಾಲಯರಮ್ಯಹರ್ಮ್ಯಚಯದಿಂ ಪುಣ್ಯಾಂಗನಾಸಂಗದಿಂ॥**
**ಘನವಕ್ಷೋರುಹಹಾರ ಭಾರವಿಚಲನ್ಮಧ್ಯಂ ಮನಃಪ್ರೀತರೊಂ**
**ದನುರಾಗಕ್ಕೆಡೆಯಾಗೆ ಸಂಚರಿಪನಾರೀವೃಂದದಿಂ ಸಾರಕಾ**
**ವ್ಯನವಾರ್ತ್ತಾಮೃತ ಸೇವೆಯಿಂ ತಣಿವ ಕಾವ್ಯಪ್ರೌಢರಿಂ ರತ್ನಕಾಂ**
**ಚನಜೀನಾಂಬರ ವಿಕ್ರಯ ಕ್ರಯಿಕರಂ ಚೆಲ್ವಾದುದೆತ್ತಂ ಪುರಂ॥**
**ಅಂತಾಪುರವಾಸ್ತವ್ಯ**
**ರ್ಕ್ಕಂತುಗೆ ರೂಪಿಂದೆ ಧನದಗಂ ಸಿರಿಯಿಂದ**
**ತ್ಯಂತವಿತರಣದಿನಾದಿನ**
**ಕಾಂತತನೂಜಂಗೆ ಮಾಡುವರ್ಕ್ಕೌತುಕಮಂ॥**

ಎಂಬ ಪದ್ಯಗಳಲ್ಲಿ ಕವಿಯ ಪ್ರೌಢಿಮೆಯು ವ್ಯಕ್ತವಾಗಿದೆ.

ಕ್ರಿ.ಶ.೧೪೩೦ರ ಕಾಲದ ಮತ್ತೊಂದು ಶಾಸನ[೪೩]ವು ಸಹ ಚಂಪೂಕಾವ್ಯದ ಮಾದರಿಯಲ್ಲಿಯೇ ರಚಿತವಾದುದಾಗಿದೆ. ೪೮ ಪದ್ಯಗಳಿಂದ ಕೂಡಿದ ಈ ಶಾಸನವು ನಗಿರೆ ರಾಜ್ಯದ ದೊರೆ ಮಹಾಮಂಡಳೇಶ್ವರ ಭೈರವ ರಾಜನು ಅವನ ರಾಣಿ ನಾಗಲದೇವಿಯರು ಮೂಡುಬಿದಿರೆಯ 'ತ್ರಿಭುವನ ಚೂಡಾಮಣಿ' ಚಂದ್ರಜಿನಮಂದಿರದಲ್ಲಿ ಮಾಡಿದ ದಾನ ವಿವರಗಳನ್ನು ಒಳಗೊಂಡಿದೆ. ಲವಣಸಮುದ್ರ, ಜಂಬೂದ್ವೀಪ, ತುಳುದೇಶಗಳನ್ನೂ ಒಂದೊಂದು ಪದ್ಯದಲ್ಲಿ ಬಣ್ಣಿಸಿ ಆ ನಂತರದಲ್ಲಿ ಮೂಡುಬಿದಿರೆಯ ಮಹಾಜನಗಳನ್ನು ಶಾಸನ ಹೊಗಳುತ್ತದೆ. ಭೈರವರಸನ ದಾನಗುಣವನ್ನು ಕೀರ್ತಿಸುವ

**ಕಲ್ಪಿಸಿದಂತುಟಂಕೊಡುಗು ಕಲ್ಪಕುಜಂ ತ್ರಿದಶರ್ಗ್ಗೆನಾಕ**
**ದಲ್ಲಿರ್ಪ್ಪುದು ಚೋದ್ಯಮಲ್ಲ ದಿಟನಿನ್ನಯ ಹಸ್ತಸುರೇಂದ್ರಭೂಜ**
**ತಾನಿರ್ಪ್ಪುದು ಧಾತ್ರಿಯಲ್ಲಿ ಬುಧಯಾಜಕರಿಂಗೆಯನೇಕ ವಸ್ತುವಂ**
**ಕಲ್ಪಿಸದೀವುತಿರ್ಪ್ಪುದದು ಚೋದ್ಯಉ ಭೈರವಮಂಡಲೇಶ್ವರಾ ॥**

ಎಂಬ ಪದ್ಯವು ಗಮನ ಸೆಳೆಯುತ್ತದೆ.

ಹಾಗೆಯೇ ಇದೇ ಸ್ಥಳದ ಕ್ರಿ.ಶ. ೧೫ನೆಯ ಶತಮಾನದ ಮತ್ತೊಂದು ಶಾಸನ[೪೪]ವು ಸಾಳ್ವಮಲ್ಲನನ್ನು ಹೊಗಳುವ ಹಲವಾರು ಪದ್ಯಗಳನ್ನು ಒಳಗೊಂಡಿದ್ದು, ಕವಿಯ ಪ್ರತಿಭೆಗೆ ಸಾಕ್ಷಿಯಾಗಿದೆ. ಸಾಳ್ವಮಲ್ಲನಾದರೋ 'ನುಡಿದಂತೆ ನಡೆಯುವವ'ನೆಂಬುದನ್ನು ಬಣ್ಣಿಸುವಾಗ ಕವಿಯು

**ಪೊಡವಿರಸಾತಳಕಿಳಿದೊಡೆ**

**ಪಡೆಮಾರ್ತೇಂ ಮೇರುವೆಳ್ದು ನಡೆದಾಡಿದೊಡಂ**

**ಪಡುವಲೆ ರವಿ ಮೂಡಿದೊಡಂ**

**ನುಡಿದಡೆ ತಪ್ಪುವನೆ ಸಾಳ್ವಮಲ್ಲ ನರೇಂದ್ರಂ**

ಎಂದಿರುವ ಮಾತು ಸಾಳ್ವಮಲ್ಲನ ಮಾತಿಗಿದ್ದ ಮಹತ್ವವನ್ನು ನಿರೂಪಿಸಿದೆ. ಹೀಗೆ ಮೂಡಬಿದಿರೆ ಮುಂತಾದ ಜೈನಧಾರ್ಮಿಕ ಕೇಂದ್ರಗಳಲ್ಲಿ ರಚನೆಯಾದ ಶಾಸನಗಳು ಹಿಂದಿನ ಶತಮಾನಗಳಲ್ಲಿದ್ದ ಸಾಹಿತ್ಯಸ್ವರೂಪದ ಪರಂಪರೆಯನ್ನು ಮುಂದುವರೆಸಿವೆಯೆನ್ನಬಹುದು. ಹಾಗೆಯೇ ಹರಿಹರದ ಕೆಲವು ಶಾಸನಗಳೂ ಸಹ ಚಂಪೂವಿನಂತೆ ಸುದೀರ್ಘವಾಗಿ ರಚಿತವಾಗಿರುವುದನ್ನು ಗಮನಿಸಬಹುದು. ಕ್ರಿ.ಶ.೧೪೨೪ರ ವೀರಪ್ರತಾಪದೇವರಾಯನ ಕಾಲದ ಶಾಸನ[೪೫]ವು ಬುಳ್ಳಚಮೂಪನು ಹರಿದ್ರಾ ನದಿಗೆ ಕಟ್ಟೆಯನ್ನು ಕಟ್ಟಿಸಿದ ಸಾಮಾಜಿಕ ಚಟುವಟಿಕೆಯನ್ನು ಕಾವ್ಯಾತ್ಮಕವಾಗಿ ನಿರೂಪಿಸಿದೆ. ಈ ಶಾಸನದಲ್ಲಿ ಪ್ರತಾಪದೇವರಾಯನ ಮಂತ್ರಿಯಾದ ಚಾಮರಾಜನೃಪಾಲ, ಬುಳ್ಳಚಮೂಪನನ್ನು ಕವಿಯು ಸೊಗಸಾಗಿ ಬಣ್ಣಿಸಿದ್ದಾನೆ. ಬುಳ್ಳಚಮೂಪನು ಹರಿದ್ರಾನದಿಗೆ ಕಟ್ಟೆಯನ್ನು ಕಟ್ಟಿ ಕಾಲುವೆಯನ್ನು ರಚಿಸಿದ ಆತನ ಸಾಮರ್ಥ್ಯವನ್ನು

**ನಿಂದಿರೆನಲ್ ನಿನ್ನಾಜ್ಞೆಗೆ**

**ನಿಂದಳ್ ನೀಂ ಕರೆಯಲೊಡನೆ ಪರಿಕಾಲಿಂದಂ**

**ಬಂದಳ್ ಹರಿದ್ರೆಯನಲೇ**

**ನೆಂದುಸುರ್ವೆಂ ಬುಳ್ಳ ರಾಜ ನಿನ್ನಯ ಸತ್ವಂ।**

ಎಂಬುದಾಗಿ ಶಾಸನ ಕವಿಯು ಬಣ್ಣಿಸಿದ್ದಾನೆ. ಹಾಗೆಯೇ ಕ್ರಿ.ಶ.೧೪೧೦ರ ಮತ್ತೊಂದು ಶಾಸನ[೪೬]ವು ವಿಶಿಷ್ಟವಾದ ಶಾಸನವಾಗಿದೆ. ಶಾಸನದ ಬಹುಭಾಗವನ್ನು ಆರಂಭದಲ್ಲಿ ಸಂಸ್ಕೃತದಲ್ಲಿ ನಿರೂಪಿಸಿ ನಂತರ ಕನ್ನಡ ಗದ್ಯದಲ್ಲಿ ವೀರಪ್ರತಾಪದೇವ ಮಹಾರಾಯನು ಶ್ರೀಹರಿಹರದೇವರಿಗೆ ಮತ್ತು ಹರಿಹರಕ್ಷೇತ್ರನಿವಾಸಿಗಳಾದ ಮಹಾಜನರಿಗೆ ಮಾಡಿಕೊಟ್ಟ ವ್ಯವಹಾರ ನಿರ್ಣಯವನ್ನು ನಿರೂಪಿಸಿದೆ.

ಶಾಸನದ ಮತ್ತೊಂದು ವಿಶೇಷವೆಂದರೆ ತಾಮ್ರಶಾಸನದಲ್ಲಿ ನಿರೂಪಿಸಿದ ವಿಚಾರವನ್ನು ಶಿಲಾಶಾಸನದ ರೂಪದಲ್ಲಿ ನಿರೂಪಿಸಿರುವುದಾಗಿದೆ.

ಇಷ್ಟಾಗಿಯೂ ಸಹ ವಿಜಯನಗರದ ಕಾಲದ ಶಾಸನಗಳು ಹೆಚ್ಚಿನ ಪ್ರಮಾಣದಲ್ಲಿ ಗದ್ಯದಲ್ಲಿಯೇ ರಚಿತವಾದವುಗಳು. ಆಡಂಬರಕ್ಕೆ ಅವಕಾಶವಿಲ್ಲದಂತೆ ಹೇಳಬೇಕಾದ ವಿಚಾರವನ್ನು ನೇರವಾಗಿ ಹೇಳುವುದು ಈ ಕಾಲದ ಶಾಸನಗಳ ವಿಶೇಷತೆಯಾಗಿದೆ. ಈ ಕಾಲದ ಬಹುಪಾಲು ಶಾಸನಗಳಲ್ಲಿ ಶಾಪಾಶಯ ಭಾಗದಲ್ಲಿ ಸಂಸ್ಕೃತ ಶ್ಲೋಕಗಳ ಜೊತೆ ಜೊತೆಗೆ ಯಾವೊಂದು ಎಗ್ಗೂ ಇಲ್ಲದೇ ಅಶ್ಲೀಲ ಬೈಗುಳಗಳನ್ನು ಬಳಸುವ ಪರಿಪಾಠವು ಆರಂಭವಾಯಿತೆನ್ನಬಹುದು. ಕ್ರಿ.ಶ.೧೫೨೪ರ ಕಾಲದ ಬೇಲೂರಿನ ಶಾಸನ[೪೭]ದಲ್ಲಿ ೩೪ನೆಯ ಸಾಲಿನಿಂದ ೩೬ನೆಯ ಸಾಲಿನವರೆಗೆ **'ಯಿಾ ಧಂಮಕೆ ಅವನಾನೊಬ್ಬನು ಆಳಪಿದವನು ತಂಮ ತಂದೆತಾಯಿಯನು ಗುರುವನು ಗೋಉ ಬ್ರಾಂಹ್ಮರನು ಕಾಶಿಯಕ್ಷೇತ್ರದಲಿ ವದಿಸಿದ ದೋಷಕ್ಕೆ ಹೋಹರು'** ಎಂಬ ಕನ್ನಡದ ಮಾತಿನ ನಂತರ ಸಂಸ್ಕೃತದ ಶಾಪಾಶಯ ಪದ್ಯಗಳನ್ನು ಒಳಗೊಳ್ಳುತ್ತದೆ. ಹಾಗೆಯೇ ಕೆಲವು ಶಾಸನಗಳ ಗದ್ಯವು ಗ್ರಾಂಥಿಕವಾಗಿರದೆ ಗ್ರಾಮ್ಯವಾಗಿರುವ ಸಂದರ್ಭವು ಇದೆ. ಒಟ್ಟಾರೆಯಾಗಿ ಕ್ರಿ.ಶ.೧೩೫೦ರ ನಂತರ ವಿಜಯನಗರ ಕಾಲದ ಶಾಸನಗಳು ಸಾಹಿತ್ಯಕವಾಗಿ ಗೌಣವಾದರೂ ರಾಜಕೀಯ ಇತಿಹಾಸ, ಅಂದಿನ ಧಾರ್ಮಿಕ ಜೀವನ, ಜನಜೀವನವನ್ನು ಅರಿಯಲು ಮೂಲಭೂತ ಆಕರಗಳಾಗಿವೆ. ಈ ಕಾರಣದಿಂದ ವಿಜಯನಗರ ಕಾಲದ ಶಾಸನಗಳನ್ನು ಕುರಿತು "ಸಾಹಿತ್ಯಾಂಶ ಕಡಿಮೆಯಿದ್ದರೂ ಶಾಸನಗಳು ಅವುಗಳ ನಿಜವಾದ ಅರ್ಥದಲ್ಲಿ ಸಾರ್ಥಕತೆಯನ್ನೇ ಪಡೆದಿವೆ"[೪೮] ಎಂಬ ಅಭಿಪ್ರಾಯವು ವ್ಯಕ್ತವಾಗಿರುವುದನ್ನು ಗಮನಿಸಬಹುದು.

### ೩.೪ : ಪ್ರಮುಖ ಶಾಸನಗಳು ಮತ್ತು ಶಾಸನಕವಿಗಳು :-

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗೆ ಕರ್ನಾಟಕವನ್ನು ಆಳಿದ ಹಲವಾರು ರಾಜಮನೆತನಗಳ ಆಳ್ವಿಕೆಯಲ್ಲಿ ಅಸಂಖ್ಯಾತ ಶಾಸನಗಳು ರಚಿತವಾದವು. ಐತಿಹಾಸಿಕವಾಗಿ ಆಯಾ ಕಾಲದ ಇತಿಹಾಸವನ್ನು ರಚಿಸಲು ಪ್ರಮುಖ ಆಕರವಾಗಿರುವ ಶಾಸನಗಳಲ್ಲಿ ಹಲವಾರು ಸಾಹಿತ್ಯಕವಾಗಿಯೂ ಗಮನಸೆಳೆಯುತ್ತವೆ. ಇಂತಹ ಶಾಸನಗಳನ್ನು ರಚಿಸಿದ ಶಾಸನ ಕವಿಗಳನ್ನು ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಶಾಸನಗಳಲ್ಲಿ ಹಲವಾರು ಜನ ಕವಿಗಳು ತಮ್ಮ ಹೆಸರು, ಬಿರುದು ಮೊದಲಾದವುಗಳನ್ನು ಹೇಳಿಕೊಂಡಿರುತ್ತಾರೆ. ಮತ್ತೆ ಕೆಲವು ಶಾಸನಗಳು ಸಾಹಿತ್ಯಕವಾಗಿ, ಕಾವ್ಯಾತ್ಮಕವಾಗಿ ರಚನೆಗೊಂಡಿದ್ದರೂ ಸಹ ಆ ಶಾಸನವನ್ನು ಬರೆದ ಕವಿಯ ಉಲ್ಲೇಖವು ಇಲ್ಲದಿರುವ ಸಾಧ್ಯತೆಗಳಿವೆ.

ಕವಿಯು ತಾನೇ ಸ್ವತಃ ಪ್ರಸ್ತಾಪ ಮಾಡದಿರಬಹುದು. ಶಾಸನಗಳಲ್ಲಿ ಸ್ಥಳಾಭಾವವಿರಬಹುದು. ಇಲ್ಲವೇ ಶಾಸನದ ಅಂತ್ಯಭಾಗವು ತ್ರುಟಿತವಾಗಿರುವ ಕಾರಣದಿಂದ ಎಷ್ಟೋ ಜನ ಶಾಸನಕವಿಗಳ ಹೆಸರುಗಳು ತಿಳಿಯದಿರುವ ಸಾಧ್ಯತೆಗಳಿವೆ. ಈ ಎಲ್ಲಾ ಅಂಶಗಳನ್ನು ಆಧರಿಸಿ ಶಾಸನಕವಿಗಳ ವಿಚಾರವನ್ನು ತಿಳಿಯಬೇಕಾಗುತ್ತದೆ. ಹಾಗೆಯೇ ಶಾಸನವನ್ನು ಹೊರತುಪಡಿಸಿ ಕವಿಯ ವಿಚಾರವನ್ನಾಗಲೀ ಅಥವಾ ಕವಿಯ ಪ್ರಸ್ತಾಪವನ್ನು ಬಿಟ್ಟು ಶಾಸನದ ಬಗ್ಗೆಯಾಗಲೀ ಮಾತನಾಡಲು ಸಾಧ್ಯವಿಲ್ಲ. ಆದ್ದರಿಂದ ಶಾಸನಕವಿಗಳ ವಿಚಾರವನ್ನು ಪ್ರಸ್ತಾಪಿಸುತ್ತಲೇ ಪ್ರಮುಖವಾದ ಶಾಸನಗಳ ಬಗೆಗೆ ತಿಳಿದುಕೊಳ್ಳಬೇಕಾಗುತ್ತದೆ. ಈ ಕಾರಣದಿಂದಾಗಿ ಪ್ರಮುಖ ಶಾಸನಗಳು ಮತ್ತು ಶಾಸನಕವಿಗಳ ವಿಚಾರವನ್ನು ಒಟ್ಟಿಗೆ ಗಮನಿಸಬೇಕು.

"ಕನ್ನಡ ಶಾಸನ ಪ್ರಪಂಚಕ್ಕೆ ಸಾಹಿತ್ಯದ ದೃಷ್ಟಿಯಿಂದ ಭಾರತೀಯ ಘನತೆಯನ್ನು ದೊರಕಿಸಿಕೊಟ್ಟವರು ಶಾಸನಕವಿಗಳು. ರಾಜಕೀಯ ಮತ್ತು ಸಾಮಾಜಿಕ ದಾಖಲೆಗಳಾದ ಶಾಸನಗಳನ್ನು ತಮ್ಮ ಪ್ರತಿಭಾಸ್ಪರ್ಶದಿಂದ ಸಾಹಿತ್ಯವನ್ನಾಗಿಸಿದ ಈ ಕವಿಗಳ ಸಂಖ್ಯೆ ಕರ್ನಾಟಕದಲ್ಲಿ ವಿಪುಲವಾಗಿದೆ. ಇವರನ್ನು ಹೊರತುಪಡಿಸಿ ಬರೆದ ಕವಿಚರಿತೆಯು ಯಾವ ಕಾಲಕ್ಕೂ ಅಪೂರ್ಣ'[೨೯] ಎಂಬ ಅಭಿಪ್ರಾಯವು ಶಾಸನಕವಿಗಳ ಇತಿಹಾಸ ರಚನೆಯ ಅನಿವಾರ್ಯತೆಯನ್ನು ಪ್ರತಿಪಾದಿಸುತ್ತದೆ.

ಶಾಸನಕವಿಗಳ ಇತಿಹಾಸವನ್ನು ರಚಿಸುವಾಗ ಕೆಲವೊಂದು ತೊಡಕುಗಳು ಎದುರಾಗುತ್ತವೆ. ಕೆಲವು ಶಾಸನಗಳಲ್ಲಿ ಬರೆದವನ ಸ್ಪಷ್ಟ ಉಲ್ಲೇಖವಿದ್ದರೆ, ಆಗ ಶಾಸನಕವಿಯನ್ನು ಗುರುತಿಸುವುದು ಸುಲಭವಾಗುತ್ತದೆ. 'ಬಮ್ಮರ ಹರಿಯಂಣ ಹೇಳ್ದ ಶಾಸನ' ಮತ್ತು '.......ವಿರಚಿಸಿದನೊಪ್ಪೆ ಲಕ್ಷ್ಮೀಧರತನಯಂ ರಾಮದೇವನೀ ಶಾಸನಮಂ'[೩೦]ಎಂಬ ವಾಕ್ಯಗಳಿಂದ ಕ್ರಮವಾಗಿ ಬಮ್ಮರ ಹರಿಯಂಣ ಮತ್ತು ರಾಮದೇವನೆಂಬುವನು ಶಾಸನಕವಿಗಳೆಂದು ಗುರುತಿಸಬಹುದು.

"ಶ್ರೀಮತ್ಕವಿರಾಜವಲ್ಲಭಂ ಕಪ್ಪಣಭಟ್ಟರ ಲಿಖಿತಂ", 'ಕವಿ ವೈಜನಾಥ ಬರೆದಂ', 'ಜನ್ನಯ್ಯ ಕವಿತೆ, ದಾವಣ್ಣನ ಬರಪ'[೩೧] ಎಂಬ ವಾಕ್ಯಗಳಲ್ಲಿ ಕವಿ, ಲಿಪಿಕಾರ, ರೂವಾರಿ ಮೂವರಿಗೂ 'ಲಿಖಿತಂ', 'ಬರೆದಂ', 'ಬರೆಪ' ಎಂದು ಬಳಸಿದ್ದಾಗ ಒಬ್ಬರಿಂದ ಮತ್ತೊಬ್ಬನನ್ನು ಪ್ರತ್ಯೇಕಿಸುವುದು ಕಷ್ಟವಾಗುತ್ತದೆ. ಅಂತಹ ಸಂದರ್ಭಗಳಲ್ಲಿ "ಶ್ರೀಮತ್ಕವಿರಾಜವಲ್ಲಭಂ" ಎಂಬಂತೆ ವಿದ್ವತ್ ಸೂಚಕ ವಿಶೇಷಣಗಳಿದ್ದರೆ ಆಗ ಆತನನ್ನು ಶಾಸನಕವಿಯೆಂದು ಭಾವಿಸಬೇಕಾಗುತ್ತದೆ. ಕೆಲವೊಂದು ಕಡೆ ಶಾಸನಕವಿಯೇ ಲಿಪಿಕಾರನಾಗಿ ಸಹ ಕಾರ್ಯ ಮಾಡಿರುವ ಸಾಧ್ಯತೆಗಳನ್ನು ಕಾಣಬಹುದು. 'ಸನ್ಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ'[೩೨] ಎಂಬ ಮಾತಿನಲ್ಲಿ ಶಾಸನಪಾಠವನ್ನು ರಚಿಸಿ ಕಲ್ಲಿನ ಮೇಲೆ ಕೆತ್ತಿದವನು ದಾಮರಾಜನೆಂಬುವನೊಬ್ಬನೇ ಎಂದಾಗುತ್ತದೆ.

ಕೆಲವೊಂದು ಶಾಸನಗಳನ್ನು ಒಬ್ಬರಿಗಿಂತ ಹೆಚ್ಚು ಜನರು ರಚಿಸಿರುವ ಸನ್ನಿವೇಶಗಳು ಕಂಡು ಬರುತ್ತದೆ. "ಒದವಿದ ಕುಪ್ಪಟೂರ ಸುಜನಾಗ್ರಣಿ ಚಿಂಮರ ವಾಸು[ದೇವ]ನುಂ । ಸದುಗುಣಯುಕ್ತನಪ್ಪ ಕವಿದೊಡ್ಡರ ನಾಚಯನುಂ ಸಮಸ್ತ ಸ।........ ಗ್ಯರ ಕೇಸವದೇವ ನೆಂಬಿವ ।ರ್ಮ್ಮದದೊಳೆ ಕೂಡಿ ಪೇಳ್ದರಿದು ಸಲ್ಗು ಶಶಾಂಕದಿನೇಶರುಳ್ಳಿನಂ'[೫೩] ಎಂಬಲ್ಲಿ ಚಿಂಮರವಾಸುದೇವ, ದೊಡ್ಡರ ನಾಚಯ ಮತ್ತು ಕೇಸವದೇವ ಎಂಬ ಮೂರು ಜನರು ಸೇರಿ ರಚಿಸಿದರೆಂದು ಹೇಳಬೇಕಾಗುತ್ತದೆ.

ಕ್ರಿ.ಶ.೪೫೦ರಿಂದ ೮೫೦ರವರೆಗಿನ ಈ ಅವಧಿಯಲ್ಲಿ ಸಾಹಿತ್ಯಕವಾಗಿ ಮನಸೆಳೆಯುವ ಶಾಸನಗಳ ರಚನೆಯಾಗಿದ್ದರೂ ಸಹ ಶಾಸನಗಳನ್ನು ರಚಿಸಿದ ಕವಿಗಳ ಉಲ್ಲೇಖವು ಅಷ್ಟಾಗಿ ಕಂಡುಬಂದಿಲ್ಲ. 'ಕವಿರಾಜಮಾರ್ಗ'ದಲ್ಲಿ ಪರಮಶ್ರೀವಿಜಯ ಕವೀಶ್ವರ, ಚಂದ್ರ, ಲೋಕಪಾಲರನ್ನು ಪದ್ಯಕಾರರೆಂದು ಉಲ್ಲೇಖಿಸಲಾಗಿದೆ. ಆದರೆ ಈ ಪದ್ಯಕಾರರ ಯಾವ ಕೃತಿಗಳು ದೊರೆತಿಲ್ಲ. ಸಾಹಿತ್ಯಕೃತಿಗಳ ಸಂದರ್ಭದಲ್ಲೇ ಈ ರೀತಿಯಾದ ಸಂದಿಗ್ಧತೆಯಿರುವಾಗ ಶಾಸನಗಳನ್ನು ರಚಿಸಿದ ಕವಿಗಳ ಬಗ್ಗೆ ಈ ಅವಧಿಯಲ್ಲಿ ಹೆಚ್ಚಿನ ಮಾಹಿತಿಗಳನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಆದರೂ ಸಹ ದಿವ್ಯಭಾಷಾಕಲನ್, ಮ[ಮಾ]ರಮ್ಮ ಎಂಬಿಬ್ಬರು ಕವಿಗಳನ್ನು ಉಲ್ಲೇಖಿಸಬಹುದಾಗಿದೆ.'[೫೪]

**ದಿವ್ಯಭಾಷಾಕಲನ್:-**

ಗುಂಡ್ಲುಹಳ್ಳಿ ಶಾಸನದಲ್ಲಿ "ಲಿಖಿಚ್ಚಿದೋನ್ ದಿವ್ಯಭಾಷಾಕಲನ್ ತ್ರಿಣ್ಯನಾಮಗಿರಿ ಗ್ರಾಮಮಾಳ್ದೋನ್" ಎಂದಿದೆ. 'ದಿವ್ಯಭಾಷಾಕಲನ್' ಎಂಬುದು ಈ ಶಾಸನ ರಚಕನ ಬಿರುದಾಗಿದ್ದು, ಈ ಬಿರುದನಿಂದಲೇ ಪ್ರಸಿದ್ಧನಾಗಿದ್ದಾನೆ. ಈ ಶಾಸನ ಕಾಲ ಕ್ರಿ.ಶ.ಸುಮಾರು ೭೫೪ ಆಗಿರುವುದರಿಂದ ಅಚಲನು ಬರೆದ ಪಟ್ಟದಕಲ್ಲಿನ ಪದ್ಯಶಾಸನವು ಎಂಟನೆಯ ಶತಮಾನದ ಕೊನೆಯ ಭಾಗಕ್ಕೆ ಸೇರಿದುದರಿಂದ ಸದ್ಯಕ್ಕೆ 'ದಿವ್ಯಭಾಷಾಕಲನ್' ಕನ್ನಡ ಶಾಸನ ಸಾಹಿತ್ಯದ ಪ್ರಥಮ ಕವಿಯೆನ್ನಬಹುದು.

**ಮ(ಮಾ)ರಮ್ಮ :-**

ಅಂಗರನನ್ನು ಕುರಿತು ೫ ತ್ರಿಪದಿಗಳುಳ್ಳ ಸೊರಬ ಶಾಸನದ ಅಂತ್ಯಭಾಗದಲ್ಲಿ "ಅರವಡ್ಡಗಿರಿಯರ ವದರ್ಪ್ಪಲಿ ಮಾಡಿದ ಸಿಲಾಕರ್ಮ ಮಲಗಾರರ ಕುಂದವಾಸಿಯ ಮಗಂ ಮರಮ್ಮ ವರೆವ(ದ) ಲಿಕಿತನ್" ಎಂದಿದೆ. ಇಲ್ಲಿ ಶಿಲಾಕರ್ಮ ಮಾಡಿರುವವ ಬೇರೆ ಲೇಖಕ ಬೇರೆ ಎಂಬುದು ಸ್ಪಷ್ಟವಾಗುತ್ತದೆ. ಮರಮ್ಮ ಅಥವಾ ಮಾರಮ್ಮ ಬೇರೊಬ್ಬನು ಬರೆದ ಶಾಸನವನ್ನು ಶಾಸನ ಶಿಲೆಯ ಮೇಲೆ ಬರೆದವನೇ ಅಥವಾ ಶಾಸನ ಕವಿಯೇ ಎಂದು ಹೇಳುವುದು ಕಷ್ಟ.

ಶಾಸನಪಾಠವನ್ನು ಒಬ್ಬನು ರಚಿಸಿ, ಮತ್ತೊಬ್ಬನು ಶಿಲೆಯ ಮೇಲೆ ಬರೆದು, ಇನ್ನೊಬ್ಬನು ಕಂಡರಿಸುತ್ತಿದ್ದ ಪದ್ಧತಿ ಇದ್ದ ಕಾರಣದಿಂದ ಈ ಮರಮ್ಮನನ್ನು ಕವಿಯೆನ್ನಲು ಅವಕಾಶವಿದೆ.

**ನಾಗವರ್ಮ(ಕ್ರಿ.ಶ.೯೧೮) :–**

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಂದಳಿಕೆ ಗ್ರಾಮದ ಶಿಲಾಶಾಸನದ.[೫೫] ಕೊನೆಗೆ 'ಬರೆದೊಂ ನಾಗವರ್ಮ್ಮಂ' ಎಂದು ಕವಿ ಸೂಚನೆ ಕಂಡುಬರುತ್ತದೆ. ರಾಷ್ಟ್ರಕೂಟ ದೊರೆ ಅಕಾಲವರ್ಷ(ಕೃಷ್ಣ-೨)ನ ಸಾಮಂತ ಕಲಿವಿಟ್ಟರಸ. ಈತನ ಕೈಕೆಳಗೆ ನಾಳ್ಗಾವುಂಡ ನಾಗಾರ್ಜುನನು ನಾಗರಖಂಡವನ್ನು ಆಳುತ್ತಿದ್ದು ಯುದ್ಧದಲ್ಲಿ ಮಡಿಯಲು ಆತನ ಸತಿ ಜಕ್ಕಿಯಬ್ಬೆ ನಾಳ್ಗಾಂವುಡಿಯಾಗಿ ಆಡಳಿತ ನಡೆಸಿದಳು. ಈಕೆಯ ಜೀವನದ ಕೊನೆಯ ದಿನಗಳನ್ನು ವರ್ಣಿಸುವ ಪದ್ಯಗಳು ಮನೋಹರವಾಗಿದ್ದು. ಕರ್ನಾಟಕದ ಆದರ್ಶಮಹಿಳೆಯರ ಸಾಲಿನಲ್ಲಿ ಈಕೆಯನ್ನು ಗುರುತಿಸಲು ಕಾರಣವಾಗುತ್ತವೆ. ಶಾಸನದ ಮೂರು ಪದ್ಯಗಳು "ವಧುವಾಗಿಯುಂ ನಿಜವೀರ ವಿಕ್ರಮಗರ್ಬ್ಬದಿಂ" ನಾಡನ್ನು ಪಾಲಿಸಿದ ನಾಳ್ಗಾವುಂಡಿ ಜಕ್ಕಿಯಬ್ಬೆಯ ದೈವಭಕ್ತಿಯನ್ನು ಬಣ್ಣಿಸಿವೆ.

**ಕಾಚಯ್ಯ (ಕ್ರಿ.ಶ.೯೩೭) :–**

ಚಿತ್ರದುರ್ಗ ತಾಲ್ಲೂಕು ಭರಮಸಾಗರ ಹೋಬಳಿ ಇಸಾಮುದ್ರದಲ್ಲಿರುವ ಕಲ್ಲೇಶ್ವರ ದೇವಾಲಯದ ಬಳಿಯಿರುವ ಶಾಸನವೊಂದರ[೫೬] ಕೊನೆಯ ಭಾಗದಲ್ಲಿ "ಕನ್ನರನಭಿಮತದೊಳೆ ಶಾಸನಮಂ ಬರೆದೊಂ ಸೇನಬೋವಂ ಕಾಚಯ್ಯಂ" ಎಂದಿರುವುದರಿಂದ ಈತನೇ ಶಾಸನವನ್ನು ರಚಿಸಿದವನಾಗಿದ್ದಾನೆ. ಅಮೋಘವರ್ಷನ ಆಳ್ವಿಕೆಯನ್ನು ಪ್ರಸ್ತಾಪಿಸಿ, ನಂತರ ಪದ್ಯಭಾಗದಲ್ಲಿ ರಟ್ಟ ವಂಶಾವಳಿಯ ಪೌರಾಣಿಕ ಹಿನ್ನೆಲೆಯ ನಿರೂಪಣೆಯಿದೆ. ಆನಂತರ ರಾಷ್ಟ್ರಕೂಟ ದೊರೆ ಕನ್ನರನ ಪರಾಕ್ರಮ, ಆತನು ನೀಡಿದ ದತ್ತಿ, ಫಲಶ್ರುತಿಯನ್ನು ಕಾಣಬಹುದು. ಧರ್ಮಪರನಾದ ಕನ್ನರದೇವನನ್ನು ಶಾಸನವು "ಮನುಮಾರ್ಗಚರಿತನಾದ, ಅನಂತಗುಣಗಳಿಂದ ಕೂಡಿದ ಈತನು "ಧರ್ಮನಂದನನಿಂ ರಾಘವನಿಂ ದಿಳೀಪನೃಪನಿಂ ಮಾನ್ಧಾತನಿಂದಗ್ಗಳಂ" ಎಂದು ಬಣ್ಣಿಸಿದೆ. ಫಲಶ್ರುತಿಯನ್ನೊಳಗೊಂದ ಗದ್ಯಭಾಗವು ಕವಿಯ ಗದ್ಯರಚನೆ, ಆ ಕಾಲದ ಭಾಷೆ ಸಾಹಿತ್ಯದ ರೀತಿಗೆ ಮಾದರಿಯಾಗಿದೆ. ಕವಿಯ ಸಂಗ್ರಹಶಕ್ತಿಯ ದ್ಯೋತಕವಾಗಿ ಆತನು ರಾಷ್ಟ್ರಕೂಟರ ಸುದೀರ್ಘ ವಂಶಾವಳಿಯನ್ನು ಕೆಲವೇ ಪದ್ಯಗಳಲ್ಲಿ ಹೊಂದಿಸಿರುವುದನ್ನು ಗಮನಿಸಬೇಕಾಗುತ್ತದೆ.

**ಕಪ್ಪಣಭಟ್ಟ (ಕ್ರಿ.ಶ.೧೦೩೯):-**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕುಪ್ಪಗಡ್ಡೆ ಅಗ್ರಹಾರದಲ್ಲಿ ನರಸಿಂಹ ದೇವಾಲಯದಲ್ಲಿರುವ ಶಾಸನವನ್ನು ರಚಿಸಿದ್ದಾನೆ.[೫೭] ಶಾಸನವನ್ನು ಈತನೇ ರಚಿಸಿದನೋ ಇಲ್ಲವೋ ಎಂಬ ಸಂದೇಹವಿದ್ದರೂ[೫೮] ಸಹ 'ಕವಿರಾಜವಲ್ಲಭಂ' ಎಂದು ಶಾಸನದಲ್ಲಿ ಹೇಳಿರುವುದರಿಂದ ಈತನೇ ಶಾಸನದ ಕರ್ತೃವಾಗಿದ್ದಾನೆ. ಕಲ್ಯಾಣ ಚಾಲುಕ್ಯರ ದೊರೆಯಾದ ಜಯಸಿಂಹನ ಕಾಲಕ್ಕೆ ಈ ಶಾಸನ ಸೇರಿದೆ. ಮಾಟೂರ ವಂಶಕ್ಕೆ ಸೇರಿದ ಮಹಾಸಾಮಂತಾಧಿಪತಿ ಆಲಯ್ಯನು ಕುಂದಮನೆಂಬ ಮಾಂಡಲಿಕನ ಜೊತೆಗೆ ನಡೆದ ಕಾಳಗದಲ್ಲಿ ಹೋರಾಡಿ ಮಡಿದ ವಿಚಾರವಿದೆ. ಆಲಯ್ಯನ ಮಗನು ಕುಪ್ಪಗಡ್ಡೆ ಅಗ್ರಹಾರದಲ್ಲಿ ದೇವಾಲಯವನ್ನು ಕಟ್ಟಿಸಿದ ವಿಚಾರವನ್ನು ಶಾಸನವು ಒಳಗೊಂಡಿದೆ. ಕವಿಯು ಚಂಪಕಮಾಲೆ, ಮತ್ತೇಭವಿಕ್ರೀಡಿತ, ಶ್ಲೋಕ, ಶಾಲಿನಿ ವೃತ್ತಗಳನ್ನು ಬಳಸಿದ್ದಾನೆ. ಕುಂದಮ ಮತ್ತು ಆಲಯ್ಯರ ನಡುವಿನ ಹೋರಾಟವನ್ನು ಬಣ್ಣಿಸುವ

**ಕೆಡೆವ ಭಟರ್ಭಟಾಂತ್ರವೃತ್ತದಿಂದಮುರುಳ್ವಹಯಂಹಯಾಳಿಯಂ**
**ಪುಡಿಪುಡಿಯಾಗೆ ಮೆಟ್ಟುವ ಗಜಂ ಗಜಮಾಂಸಮನುರ್ಬಿತಿಂದು ಕೂ**
**ಗಿಡುವ ಮರುಳ್ಮರುಳ್ಪಡೆಯನಟ್ಟುವ ಸಿದ್ಧಗಣಂ ಗಣಂಗಳು**
**ಬಡಿವ ನಿಶಾಚರರ್ಸ್ಸಮರಧೀರರಿರುತ್ತಿಱಿದಾಜಿರಂಗದೊಳ್**

ಎಂದು ಬಣ್ಣಿಸಿರುವ ಪದ್ಯದಲ್ಲಿ ಏಕಾವಳಿ ಅಲಂಕಾರವನ್ನು ಕವಿಯು ಬಳಸಿದ್ದಾನೆ.

**ಕವಿಮಲ್ಲ (ಕ್ರಿ.ಶ.೧೦೫೭) :-**

ಈತನು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ ತಾಲ್ಲೂಕಿನ ಬೆಳತೂರು ಗ್ರಾಮದಲ್ಲಿ ಬಿನಕಲಮ್ಮನ ಗುಡಿಯ ಬಳಿ ನಿಂತಿರುವ ಶಾಸನ[೫೯] ವನ್ನು ರಚಿಸಿದವನು. ಈ ಶಾಸನವು ದೇಕಬ್ಬೆಯ ಶಾಸನವೆಂದೇ ಪ್ರಸಿದ್ಧವಾಗಿದೆ. ಇಮ್ಮಡಿ ರಾಜೇಂದ್ರಚೋಳನ ಆಳ್ವಿಕೆಯ ಕಾಲದ ಈ ಶಾಸನವು ಕುಱುವನ್ದ ವಂಶಕ್ಕೆ ಸೇರಿದ ಪೆರ್ವ್ವಯಲಿನ ಏಚನ ಪತ್ನಿಯಾದ ದೇಕಬ್ಬೆಯ ಮರಣ ವೃತ್ತಾಂತವನ್ನು ತಿಳಿಸುವ ಸುಂದರವಾದ ಕಾವ್ಯಾತ್ಮಕವಾದ ರಚನೆಯಾಗಿದೆ. ಈ ಶಾಸನದಲ್ಲಿ ದೇಕಬ್ಬೆಯ ತಂದೆತಾಯಿಗಳ ವಂಶಾವಳಿವನ್ನು ನೀಡಿದೆ. ಈಕೆಯ ತಂದೆ ರವಿಗನು ನುಗುನಾಡಿನ ಅಧಿಕಾರಿಯಾಗಿದ್ದ. ರವಿಗನು ಎಡನಾಡ ಅಧಿಪನಾದ ನಾಲ್ಗೋಜನ ಮಗಳಾದ ಪೊನ್ನಕ್ಕನನ್ನು ವರಿಸಿದ್ದನು. ಇವರಿಬ್ಬರ ಮಗಳೇ ದೇಕಬ್ಬೆ. ದೇಕಬ್ಬೆಯನ್ನು ನವಿಲೆನಾಡಿನ ಏಚನು ಮದುವೆಯಾಗಿದ್ದನು. ಉತ್ತಮ ಜಟ್ಟಿಯಾಗಿದ್ದ ಈತನು ತನ್ನ ದಾಯಿಗನನ್ನು ಇರಿದನೆಂಬ ಕಾರಣದಿಂದ ಏಚನನ್ನು ತಲಕಾಡಿಗೆ ಒಯ್ದು ಅರಸನು ಮರಣದಂಡನೆಯನ್ನು ವಿಧಿಸಿದನು. ಇದನ್ನು

ಕೇಳಿ ದೇಕಬ್ಬೆಯು ಸತಿಯಾಗಲು ನಿರ್ಧರಿಸಿದಳು. ಈ ವಿಚಾರವನ್ನು ಶಾಸನಕವಿ ಮಲ್ಲನು 'ಕರುಣರಸ' ಪ್ರಧಾನವಾಗಿ ಬಣ್ಣಿಸಿದ್ದಾನೆ.

ದೇಕಬ್ಬೆಯು ಸತಿಯಾದ ವಿಚಾರವನ್ನು ಶಾಸನದ ೨೦ನೆಯ ಪಂಕ್ತಿಯಿಂದ ೨೭ನೆಯ ಪಂಕ್ತಿಯವರೆಗೆ ಕವಿಯು ಮನೋಜ್ಞವಾಗಿ ಬಣ್ಣಿಸಿದ್ದಾನೆ. "ಕಲಿಕಾಲ ವೇಳನೆನಿಸಿದ ಕಲಿಚಾಗಿಯನಿಱಿರಿದು ಕೊನ್ದಱಿಂಬ" ಸುದ್ದಿಯನ್ನು ಕೇಳಿ "ರವಿಗನ ಕುಲದೀಪಕಿ"ಯಾದ ದೇಕಬ್ಬೆಯು "ಸಾಯಲೆನ್ದು ಕೊಣ್ಡಕೆ" ನಡೆಯುತ್ತಾಳೆ. ತಂದೆ ತಾಯಿ ಮತ್ತು ಬಂಧುಜನರು ಅವಳನ್ನು ಕುರಿತು "ಮಗಳೆ ಸಾಯದೆ ಮಾಣ್" ಎಂದು ಕಾಲ್ವಿಡಿದು ಬೇಡಿದರೂ ಸಹ 'ಅನಿನ್ದಿತೆ'ಯಾದ ದೇಕಬ್ಬೆಯು ಅದನ್ನು ನಯವಾಗಿ ತಿರಸ್ಕರಿಸುತ್ತಾಳೆ. "ನುಗುನಾಡಧಿಪತಿ ರವಿಗನ ಮಗಳಾಗಿ, ನವಿಲೆನಾಡಧಿಪತಿಗೆ ಸತಿಯಾದ ತಾನು "ಕೊಟ್ಟಕೊಣ್ಡಮನೆಯೆಸಮಱಿಯಲ್" ಬಗೆಯುವುದಿಲ್ಲ ಎಂದು ನುಡಿದ ದೇಕಬ್ಬೆಯು ದೇವರ ನೈವೇದ್ಯ ಹಾಗೂ ನಂದಾದೀಪಕ್ಕಾಗಿ ಭೂಮಿ, ತೋಟವನ್ನು ದಾನವಾಗಿ ನೀಡಿ ಸತಿಯಾಗುವ ಮೂಲಕ ಪ್ರಾಣತ್ಯಾಗ ಮಾಡಿದಳು. ಈ ಪ್ರಸಂಗವನ್ನು ಕವಿಯು ಮಹಾಸ್ರಗ್ಧರೆಯಲ್ಲಿ

**ನೆರೆದೆಲ್ಲಂ ಬೇಡ ಮಾಣೆನ್ದಡೆ ನುಡಿಯದಿರಿಂ ಪೋಗಿವಾಂ ಮಾಣೆನೆನ್ದಾ**
**ದರದಿನ್ದಂ ಭೂಮಿಪೊಂಪುಟ್ಟುಗೆ ಪಸುಧನಮಂ ದನಮಂ ನೀಡುತಂ ದೇ**
**ವರದೇವಂಗ್ಗಱ್ತ್ತಿಯಿಂ ಕಯ್ಮುಗಿದುರಿವುರಿಯಂ ಪೊಕ್ಕು ದೇಕಬ್ಬೆ ತನ್ನಂ**
**ಧರೆಯೆಲ್ಲಂ ಮೆಚ್ಚೆ ನಿಚ್ಚಂ ಪೊಗಟೆತುಂ ದೇವಲೋಕಕ್ಕೆ ವೋದಳ್ ॥**

ಎಂಬುದಾಗಿ ಕಣ್ಣಿಗೆ ಕಟ್ಟುವಂತೆ ಕರುಣಾರಸಪೂರ್ಣವಾಗಿ ಬಣ್ಣಿಸಿದ್ದಾನೆ. "ಶ್ರೀರಮಣಿ ಗೌರಿ ಸಚಿಧಾರಿಣಿಯಪುತ್ರಿ ರತಿಭೂರಮಣಿಯನ್ನದ ಸರೂಪಳೂ, ಔದಾರೆ, ಜಯಧಾರೆ, ಜಸಧಾರೆ ಭಯಹಾರೆ, ಪತಿಭಕ್ತೆ, ಧೃತಶಕ್ತೆ, ಎನಿಸಿದ "ವೀರನಿಧಿ, ಚಲದವಾರಿನಿಧಿ ಗುಣದ ಚಾರುನಿಧಿ' ಎಂದು ಪ್ರಸಿದ್ಧಳಾದ 'ನಾರಿಜನರನ್ನೆ'ಳಾದ ದೇಕಲೆಗೆ ಸಮಾನರಾದವರು' 'ಶಕಳಧಾರಿಣಿ'ಯಲ್ಲಿ ಯಾರಿದ್ದಾರೆಂದು ಕವಿಯು ಮನತುಂಬಿ ಹೊಗಳಿದ್ದಾನೆ. ಕುಡಿಯರವಲ್ಲಭನಾದ ಕಲಿಕಾಲ ಕರ್ಣ್ನನೂ ನುಗುನಾಡ ರಾಘವನೂ ಆದ ರವಿಗನು ತನ್ನ 'ನಿಜಸುತೆ'ನನುರಾಗದಿಂ ಮಣ್ಡಲಕ್ಕೆಲ್ಲಂ ಪಡಿಛನ್ದಮಾಗೆ ಶಿಲಾಸ್ತಂಭಶಾಸನಮಾಗೆ' ಈ ಶಾಸನವನ್ನು ನಿರ್ಮಿಸಿದನು.

ಕವಿಮಲ್ಲನು ಸರಳವಾದ ಭಾಷೆಯನ್ನು ಬಳಸಿ ವಿಷಯವನ್ನು ನೇರವಾಗಿ ನಿರೂಪಿಸಿದ್ದಾನೆ. ಕಂದ, ಚಂಪಕಮಾಲೆ, ಪಿರಿಯಕ್ಕರ, ಸ್ರಗ್ಧರೆ, ಮಹಾಸ್ರಗ್ಧರೆ ಹಾಗೂ ವಿರಳವಾದ ಲಲಿತವೃತ್ತವನ್ನು ಕವಿಯು ಬಳಸಿದ್ದಾನೆ. ಐತಿಹಾಸಿಕವಾಗಿ ಪ್ರಮುಖವಾಗಿರುವ ಈ ಶಾಸನವು ಸಾಹಿತ್ಯ ದೃಷ್ಟಿಯಿಂದಲೂ ಸಹ ಮಹತ್ವವಾದುದಾಗಿದೆ. ಕವಿಯು ದೇಕಬ್ಬೆಯ ತಂದೆ, ತಾಯಿ ಎಡೆನಾಡ

ಅಧಿಪ ಸತ್ಯವಾಕ್ಯ ನಾಲ್ಗೋಜನ ಬಣ್ಣನೆಯನ್ನೂ ಸಹ ಚಿಕ್ಕದಾಗಿ ಚೊಕ್ಕವಾಗಿ ನೀಡುತ್ತಾನೆ. ಜವನಯ್ಯ ಮತ್ತು ಜಾಕಬ್ಬೆಗೆ ಮಗನಾಗಿ ರವಿಗನು ಹುಟ್ಟಿದ ಕೂಡಲೇ "ಉದ್ಭವಮಾಯ್ತು ಅಜಿವು ಅಜಿವಿನೊಡನೆ ಪುಟ್ಟಿದುದು ಆಯಂ ಸವಸನ್ಧಾಯದೊಡಂ ಸಂಭವಮಾದುದು ಚಾಗಂ" ಎನ್ನುತ್ತಾನೆ ಕವಿ. 'ಕುಡಿಯರ ವಲ್ಲಭ, ಕುಡಿಯರಾಭರಣ, ನುಗುನಾಡರಾಮನೆಂದು ಪ್ರಸಿದ್ಧನಾದ ರವಿಗನ ಜೊತೆಗೆ "ಈಗಡಿನ ನಿಕೃಷ್ಟನಿರ್ಗ್ಗುಣನಿಕೃತ್ಯ ನಿರಾಚರಣೇಟವೀಟರಂ ಕಡುಜಡರೆನ್ತು" ಹೋಲಿಸಲು ಸಾಧ್ಯವೆಂದು ಕವಿಯು ಪ್ರಶ್ನಿಸುತ್ತಾನೆ. ಕುಡಿಯರ ವಲ್ಲಭನ ಕೀರ್ತಿಲತೆಯು "ಕಡಲಕಡೆವರಮಜಾಣ್ಡದ ಕುಡಿವರ ಮಾಸಾಗಜೇನ್ದ್ರದನ್ತುವರಂ" ಹಬ್ಬಿತ್ತು. ಈ ರವಿಗನ ಪತ್ನಿಯಾದ ಪೊನ್ನಕ್ಕಳನ್ನು "ವನಿತಾರನ್ನ"ವೆಂದು ಕವಿಯು ಕರೆದಿದ್ದಾನೆ. ಈಕೆಯಾದರೋ "ನಿರುಪಮ ಸೀಳ ಗುಣ, ಉತ್ತಮದಾನ, ಆತ್ಮಭಕ್ತಿಯಿಂದ ಗಿರಿಸುತೆರಂಭೆಮೇನಕೆ ಸರಸ್ವತಿರುಕ್ಮಿಣಿ ಸತ್ಯಭಾಮೆಯರಿಗೆ ಸಮನಾದವಳೇ ಹೊರತು "ಈಗಡಿನ ದುಷ್ಟಕನಿಷ್ಟದುಶೀಳದುರ್ಗ್ಗುಣಾಧರೆಯರ" ಜೊತೆಗೆ ಹೋಲಿಸಲು ಸಾಧ್ಯವಿಲ್ಲವೆಂಬುದು ಕವಿಯ ಅಭಿಮಾನದ ಮಾತು.

ಪತಿಯ ಶವದ ಜೊತೆಯಲ್ಲಿ ಚಿತೆಯೇರಿದರೆ ಅದು ಸಹಗಮನವೆನಿಸುತ್ತದೆ. ಪತಿಯು ಎಲ್ಲೋ ದೂರದಲ್ಲಿ ಮಡಿದುದನ್ನು ಕೇಳಿ ಅವನ ಸ್ಮಾರಕವಾಗಿ ಅವನಿಗೆ ಸೇರಿದ ಯಾವುದಾದರೂ ವಸ್ತುವನ್ನು ಹಿಡಿದುಕೊಂಡು ಪ್ರಾಣಬಿಡುವುದು 'ಅನುಗಮನ' ಅಥವಾ 'ಅನುಮರಣ'ವೆನಿಸಿ ಕೊಳ್ಳುತ್ತದೆ. ದೇಕಬ್ಬೆಯ ಶಾಸನವು ಅನುಗಮನಕ್ಕೆ ಉತ್ತಮ ಉದಾಹರಣೆಯಾಗಿದೆ. ಇಂತಹ ಉತ್ತಮವಾದ ಕಾವ್ಯಾಂಶಗಳಿಂದ ಕೂಡಿದ ಶಾಸನವನ್ನು ಬರೆದ ಕವಿಮಲ್ಲನು ಶಾಸನದ ಕಡೆಯ ಭಾಗದಲ್ಲಿ ಕಂದಪದ್ಯದಲ್ಲಿ 'ಕವಿರಾಜಬಾನ್ಧವ'ನಾದ 'ಸಂದಜಿಕೆಯವಗಾದ ಮಲ್ಲ'ನಾದ ತಾನು ರಚಿಸುದುದಾಗಿ ಹೇಳಿಕೊಳ್ಳುತ್ತಾನೆ. ಹಾಗೆಯೇ ತಾನು ವ್ಯರ್ಥವಾಗಿ ಶಬ್ದಗಳನ್ನು ಬಳಸುವವನಲ್ಲ ಎಂಬುದನ್ನು 'ಜಱುಚದ' ಎಂಬ ಪದದ ಮೂಲಕ ಸೂಚಿಸಿದ್ದು ಅದು ಶಾಸನಪಾಠವನ್ನು ಗಮನಿಸಿದಾಗ ಯಥಾರ್ಥವಾಗಿದೆಯೆಂದು ಮನವರಿಕೆಯಾಗುತ್ತದೆ. "ಕನ್ನಡದಲ್ಲಿ ಇಷ್ಟು ವಿಸ್ತಾರವಾಗಿ ಸಹಗಮನವನ್ನು ವರ್ಣಿಸಿರುವ ಶಾಸನವು ಮತ್ತೊಂದಿಲ್ಲ"[೬೦] ಎಂಬ ಅಭಿಪ್ರಾಯವು ಈ ಶಾಸನದ ಐತಿಹಾಸಿಕ ಮಹತ್ವವನ್ನೂ ಪ್ರತಿಪಾದಿಸಿದರೆ, ಸಾಹಿತ್ಯಕ ದೃಷ್ಟಿಯಿಂದ ಅಪೂರ್ವವಾದ ಈ ಶಾಸನವನ್ನು ಕುರಿತು ತಿ.ತಾ.ಶರ್ಮರು ಇದನ್ನು 'ಮಹಾಸತಿಯ ಮಹಾಕಾವ್ಯರೂಪದ ಶಾಸನ' ಹಾಗೂ 'ವೀರಕರುಣಾದ್ಭುತರಸಗಳ ತೊರೆ'[೬೧] ಎಂದು ಕರೆದಿರುವುದು ಸಮಂಜಸವಾಗಿದೆ.

**ಮಲ್ಲಿನಾಥ (ಕ್ರಿ.ಶ.೧೦೬೨) :-**

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಹುಂಚದಲ್ಲಿ ಸೂಳೆಯ ಬಸದಿಯ ಎದುರಿನಲ್ಲಿರುವ ಮಾನಸ್ತಂಭದ ಮೇಲಿನ ಶಾಸನ ಮತ್ತು ಬಸದಿಯ ಎದುರಿಗಿರುವ ಶಾಸನವನ್ನು ಈತನು ಬರೆದನೆಂದು ತಿಳಿದುಬರುತ್ತದೆ. ಕವಿಯು ತನ್ನ ಬಗ್ಗೆ ಶಾಸನದ ಕೊನೆಯಲ್ಲಿ ಕಂದಪದ್ಯದಲ್ಲಿ

**ಸುಜನಜನಕುಮುದ ಚಂದ್ರನ**
**ಸುಜನಜನಾನನ ವಿಲೋಕಮಣಿಮುಕುರನಾ**
**ಸುಜನಜನವನಜ ಹಂಸನ**
**ಸುಜನಂಜನಂಪೊಗಳೆ ಮಲ್ಲಿನಾಥಂ ನೆಗೞ್ದಂ"**

ಎಂದು ಹೇಳಿಕೊಂಡಿದ್ದಾನೆ. ಪಟ್ಟಣಸ್ವಾಮಿ ನೊಕ್ಕಯ್ಯಸೆಟ್ಟಿಯ ಮಗನೂ, ಚಂದ್ರಮುನಿನಾಥನ ಶಿಷ್ಯನು ಈ ಮಲ್ಲಿನಾಥ. ಈ ಶಾಸನಗಳಲ್ಲಿ ಕಲ್ಯಾಣ ಚಾಲುಕ್ಯ ದೊರೆಯಾದ ತ್ರೈಲೋಕ್ಯಮಲ್ಲನ ಆಳ್ವಿಕೆಯ ಉಲ್ಲೇಖವಿದೆ. ಚಾಲುಕ್ಯರ ಸಾಮಂತರಾದ ಶಾಂತರರ ವೀರ ಶಾಂತರದೇವನು ಆಳುತ್ತಿದ್ದಾಗ ನೊಕ್ಕಯ್ಯಸೆಟ್ಟಿಯು ಕೈಗೊಂಡ ಧಾರ್ಮಿಕ ಕಾರ್ಯಗಳನ್ನು ಬಣ್ಣಿಸುತ್ತದೆ. ಕವಿಯು ಶ್ಲೋಕ, ಕಂದ, ಗೀತಿ, ಮಣಿಭೂಷಣ ಅಥವಾ ಮಣಿವಿಭೂಷಣ ಅಥವಾ ಉತ್ಸವ, ಪಿರಿಯಕ್ಕರ, ಸ್ರಗ್ಧರೆ, ಮಹಾಸ್ರಗ್ಧರೆ, ಉತ್ಪಲಮಾಲೆ, ಚಂಪಕಮಾಲೆ, ಮಲ್ಲಿಕಾಮಾಲೆ, ಮತ್ತೇಭವಿಕ್ರೀಡಿತ ಹಾಗೂ ಮತ್ತ ಕೋಕಿಲ ಮುಂತಾದ ವೃತ್ತಗಳನ್ನು ಬಳಸಿದ್ದಾನೆ. ಸಾನ್ತರ ಬೀರದೇವನಿಗೆ ಸಮಾನರಾದ ವೀರರೂ, ಉದಾರ ಪ್ರತಾಪಿಗಳೂ, ಧರ್ಮಪರರೂ ಆದ ದೊರೆಗಳನ್ನು ಕೃತ, ತ್ರೇತಾ, ದ್ವಾಪರ ಮತ್ತು ಕಲಿಯುಗಗಳಲ್ಲಿ ಕಾಣಲು ಸಾಧ್ಯವೇ? ಎಂದು ಹೇಳುವ ಮೂಲಕ ಕವಿಯು ಸಾನ್ತರದೇವನೇ ವೀರ, ಉದಾರ, ಪ್ರತಾಪಿ ಮತ್ತು ಧರ್ಮಪರವೆಂದು ಬಣ್ಣಿಸಿದೆ. ಹಾಗೆಯೇ ಪಟ್ಟಣಸ್ವಾಮಿ ನೊಕ್ಕಯ್ಯನನ್ನು 'ಧರ್ಮದತವರ್ಮನೆ' ಎಂದು ಕರೆದಿರುವ ಶಾಸನದ ಪದ್ಯವೊಂದು

**ಬಲ್ಲಲನಪ್ಪ ಪೆರ್ಬ್ಬುಸಿಯಬಯಕೆಗೆ ಭಾಜನಮಾದದೊಳ್ಗಿಬೀ**
**ಳಲ್ಲರಿವಂತೆನೇಲ್ದನರೆಗಡ್ಡದ ದೊಡ್ಡರ ಬೆಲ್ಲವಾತುಗ**
**ಳ್ಕೊಲ್ಲುಗಮವಾರ್ಕ್ಕಕೆಮ್ಮನೆಡೆಯಾಡದಿರೋವೆಲೆಶಿಷ್ಟಬೇಡಿಕೊ**
**ಳ್ಕೊಲ್ಪಡೆ ನಮ್ಮಧರ್ಮದ ತವರ್ಮ್ಮನೆ ಪಟ್ಟಣಸಾಮಿನೊಕ್ಕನಂ ॥**

ಎಂದು ನುಡಿಯುತ್ತದೆ. ಹಾಗೆಯೇ ಈ ಶಾಸನವು ನೊಕ್ಕನ ಧರ್ಮಕಾರ್ಯಗಳನ್ನು ಗದ್ಯದಲ್ಲಿಯೂ ಬಣ್ಣಿಸಿದೆ.

**ದಾಮರಾಜ (ಕ್ರಿ.ಶ.೧೦೮೫) :–**

ಈತನು ಶಿವಮೊಗ್ಗ ಜಿಲ್ಲೆ ತಟ್ಟೆಕೆರೆಯ ರಾಮೇಶ್ವರದೇವಾಲಯದ ಮುಂದಿರುವ ಶಾಸನ[೩]ವನ್ನು ರಚಿಸಿದ್ದಾನೆ. ಶಾಸನದ ಕಡೆಯಲ್ಲಿ "ಸನ್ಧಿವಿಗ್ರಹಿ ದಾಮರಾಜಂ ಸಾಸನಗಬ್ಬಮಂ ಪೇಳ್ದು ಬರೆದಂ" ಎಂದು ಹೇಳಿಕೊಂಡಿದ್ದಾನೆ. ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಿದ ಶಾಸನದಲ್ಲಿ ಆರಂಭದಲ್ಲಿ ಕವಿಯು ಸಂಸ್ಕೃತದಲ್ಲಿ ಗಂಗವಂಶಾವಳಿಯನ್ನು ನಿರೂಪಿಸಿ ಆನಂತರ ಸಾಮಂತ ಗಂಗ ಪೆರ್ಮಾನಡಿಯನ್ನು ಬಣ್ಣಿಸುತ್ತಾನೆ.

**ನುಡಿದುದೆ ನನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸುಮಾ**
**ಪ್ಪೆಡಿದುದೆ ವಜ್ರಲೇಪಮುಱಿದಿಱ್ದದೆ ಮೃತ್ಯು ಪರೋಪಕಾರದೊ**
**ಳ್ನಡೆದುದೆ ಬಟ್ಟೆ ಷಣ್ಗುಣಮೆ ಮೆಯ್ಯೆನೆ ಧರ್ಮ್ಮದೊಳೊಂದಿ ನಿನ್ನವೋ**
**ಲ್ನಡೆವ ನೃಪೇಂದ್ರನಾವನಖಿಳಾವನಿಯೊಳ್ಕಲಿಗಂಗಭೂಪತೀ ॥**

ಎಂಬಂತೆ ಇದ್ದ ಗಂಗಪೆರ್ಮಾನಡಿಯ ಮಹಾಮಾತ್ಯ ಪದವಿಯನ್ನು "ದೇವೇಂದ್ರಂಗೆ ಬ್ರಹಸ್ಪತಿಯಂತು ಬಲೀಂದ್ರಂಗೆ ಭಾರ್ಗ್ಗವನೆಂತಂತೆ" ಅಲಂಕರಿಸಿದ್ದವನು ನೊಕ್ಕಯ್ಯನು ಈತನ ಪೆರ್ಗ್ಗಡೆತನವನ್ನು –

**ಪೆರ್ಗ್ಗಡೆತನಮಂ ಬಲ್ಲ**
**ಖರ್ವ್ವಳಗಮನಣಮಱಿಯರುಳಿದಮಾತ್ಯರ್ನ್ನೊಕ್ಕಂ**
**ಪೆರ್ಗ್ಗಡೆಗಂಗನ ಮನೆಯೊಳ್**
**ಮಾರ್ಗ್ಗೆಡೆ ಸಂಗರದ ಮೊನೆಯೊಳೆನೆ ಮೆಚ್ಚದರಾರ್ ॥**

ಎಂಬಂತೆ ನಡೆಸಿದವನು. ಇಂತಹ ನೊಕ್ಕಯ್ಯನು ಕಟ್ಟಿಸಿದ ಬಸದಿಗಳ ವಿಚಾರವನ್ನು ಈ ಶಾಸನವು ಪ್ರಸ್ತಾಪಿಸುತ್ತದೆ. ಅಲ್ಲಿಯ ಪೆರ್ಗ್ಗೞ ಮತ್ತು ಬಸದಿಯಾದರೋ

**ಸರನಿಧಿಬಳಸಿದುದೆಂಬಂ**
**ತಿರಲಿತ್ತಾ ತಟ್ಟೆಕೆರೆಯ ಪೆರ್ಗ್ಗೞ ಸುತ್ತ**
**ಲ್ಪರಿಯುನಡುವಮರ ಸೈಳದ**
**ದೊರೆಯೆನಿಸಿದ ತೆಱದೆ ಬಸದಿ ಸೊಗಯಿಸಿತೋರ್ಕ್ಕಿಂ॥**

ಎಂಬಂತೆ ಕಂಡುಬರುತ್ತಿತ್ತೆಂದು ಕವಿಯು ಬಣ್ಣಿಸಿದ್ದಾನೆ. ಈ ದಾಮರಾಜನು ಒಳ್ಳೆಯ ಕವಿಯಾಗಿದ್ದು, ನೊಕ್ಕಯ್ಯನ ಆಶ್ರಯದಲ್ಲಿದ್ದನೆನ್ನಬಹುದು.

**ಮಲ್ಲಿಕಾರ್ಜುನ ಭಟ್ಟ (ಕ್ರಿ.ಶ.೧೧೧೦೨):-**

ಈತನು ಶಿಕಾರಿಪುರದ ಎರಡು ಶಾಸನಗಳನ್ನು ರಚಿಸಿದ್ದಾನೆ. ಈ ಶಾಸನಗಳು ಬಳ್ಳಿಗಾವೆ ಗ್ರಾಮದ ಕೇದಾರೇಶ್ವರ ದೇವಾಲಯದ ಪ್ರಾಕಾರದಲ್ಲಿವೆ. ಶಾಸನಗಳ ಕಾಲ ಕ್ರಿ.ಶ.೧೧೧೦೨. ಈ ಎರಡೂ ಶಾಸನಗಳು ಚಾಲುಕ್ಯರಾಜ ತ್ರಿಭುವನ ಮಲ್ಲದೇವನ ಕಾಲಕ್ಕೆ ಸೇರಿದವುಗಳಾಗಿವೆ. ಮೊದಲನೆಯದರಲ್ಲಿ ಗೋವಿಂದ ದಂಡನಾಯಕನು ಕೇದಾರೇಶ್ವರ ದೇವಾಲಯಕ್ಕೆ ದತ್ತಿಬಿಟ್ಟ ವಿಷಯವನ್ನು ಮತ್ತು ಎರಡನೆಯದರಲ್ಲಿ ಕೊಂಕಣಾಧಿಪ ಚಂದ್ರನೃಪಕುಮಾರನಾದ ಕಾಮದೇವರಸನು ಕೇದಾರೇಶ್ವರ ದೇವರ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಾಗಿ ದತ್ತಿ ಬಿಟ್ಟ ವಿಷಯವನ್ನು ಒಳಗೊಂಡಿದೆ[೬೪] ಶಾಸನಗಳ ಕೊನೆಯಲ್ಲಿರುವ

**ವಿನುತಮಧುರೋಕ್ತಿಯಿಂ ತ ।**
**ನ್ನನತಿಶಯ ವಚೋವಿಭೂತಿಗಿದುವೆ ಯಶಶ್ಶಾ ।**
**ಸನಮಾದುದೆಂಬಿನಂ ಶಾ ।**
**ಸನಮನಿದಂ ಬರೆದನಾಶುಕವಿ ನಿಟಿಲಾಕ್ಷಂ ॥**

ಎಂಬ ಪದ್ಯದಿಂದ ಈತನಿಗೆ ಆಶುಕವಿನಿಟಿಲಾಕ್ಷ'ನೆಂಬ ಬಿರುದಿತ್ತು ಎಂದು ತಿಳಿದುಬರುತ್ತದೆ. 'ಕವಿಸಾರಸ್ವತ ಮಹೋದಯನ ಕಿಂಕರ'ನೆಂಬ ಮಾತಿನಿಂದ ಈತನು "ಸಾರಸ್ವತ ಮಹೋದಯ"ನೆಂಬ ಬಿರುದನ್ನು ಹೊಂದಿದ್ದ ಸೋಮೇಶ್ವರಪಂಡಿತನ ಶಿಷ್ಯನೆಂದು ಗೊತ್ತಾಗುತ್ತದೆ.

**ಪರಿಕಿಸೆ ಮಲ್ಲಿದೇವವಿಭುಗಾರ್ ಸಮನಿರ್ಬರುಮಿರ್ಕೆಲಂಗಳೊಳ್ ।**
**ಬರೆದುವನಂತ್ಯದಿಂ ಬರೆವ ಬಾಜಿಪ ಬಾಜಿಪಕಬ್ಬಮೆಂತುಟಂ ।**
**ತಿರೆಪೊಸಗಬ್ಬಮಂ ನುಡಿವ ಭಾವಿಸಿ ಕೇಳ್ವ ಕಥಾ ಚತುಷ್ಕಮಂ ।**
**ಧರೆ ಪರಿಕರ್ಮಮೆಂದಿನಿತುಮಂ ಗುಣೆಯಿಪ್ಪಮತಿಪ್ರಭಾವದೊಳ್ ॥**

ಎಂಬ ಪದ್ಯದ ಮೂಲಕ ಈತನ ಕವಿತಾಸಾಮರ್ಥ್ಯದ ಬಹುಮುಖ ಪ್ರತಿಭೆಯ ಅರಿವಾಗುತ್ತದೆ. ಇಬ್ಬರು ಎರಡು ಪಕ್ಕಗಳಲ್ಲಿ ಕುಳಿತು ಬರೆದುದನ್ನು ಒಮ್ಮೆಲೆ ಬರೆಯುವ, ಹೊಸ ಕಾವ್ಯವನ್ನು ಹೇಳುವ ಕೇಳುವ, ಕೇಳಿದ್ದುದನ್ನು ಆ ಕೂಡಲೇ ಹೇಳುವ ಮತಿಪ್ರೌಢಿಮೆ ಈತನದಾಗಿದೆ. ಹಾಗೆಯೇ ಈತನು 'ಸಹಜ ಸಾರಸ್ವತ, ವಾಚಕವಾರಿಜಾಸನ, ನಾನಾವಿಧಾವಧಾರಣಾಚಕ್ರವರ್ತಿ, ಕವಿಕಂಜಸಂಭವಂ, ಸುಕವೀಂದ್ರ ಷಣ್ಮುಖ'ನೆಂದು ತನ್ನನ್ನು ಕರೆದುಕೊಂಡಿದ್ದಾನೆ. ಈತನ ಬಿರುದುಗಳನ್ನು ಗಮನಿಸಿದಾಗ ಅವಧಾನ ಕಲೆಯಲ್ಲಿ ಈತನು ಸಮರ್ಥನೆಂದೂ ಬಹುಶ್ರುತನೆಂದೂ ಹೇಳಲು ಅವಕಾಶವಿದೆ. ಗೊಬ್ಬೂರು ಈತನ ಸ್ಥಳವಾಗಿದ್ದು, "ಮಲ್ಲಿದೇವವಿಭು" ಎಂದು ಕರೆದುಕೊಂಡಿರುವುದರಿಂದ ಈತನು ಒಬ್ಬ ಅಧಿಕಾರಿಯಾಗಿದ್ದನೆಂದು ಆರ್.ನರಸಿಂಹಚಾರ್ಯರು

ಅಭಿಪ್ರಾಯ ಪಡುತ್ತಾರೆ. ಈತನೊಬ್ಬ ಪ್ರೌಢಕವಿಯೆಂಬುದು ಶಾಸನ ಪದ್ಯಗಳನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ. ಗೋವಿಂದ ದಂಡನಾಯಕನ ಪರಾಕ್ರಮವನ್ನು ಕವಿಯು –

**ಬಱಸಿಡಿಲಂತುಡುಂಕುವ ಮದಾನ್ದಗಜಕ್ಕಿದಿರಾಗಿ ಕೋಳ್ಕಳಂ**
**ಮುಱಿಪುರದಿನ್ದ ಪೆರ್ಬ್ಬುಲಿಯ ಮೀಸೆಯೊಳುಯ್ಯಲನಾಡುವೊಂದು ಪೇ**
**ರಱಿಕೆಯ ಬೀರರಾನ್ತಡಮದೇವೆಸಗೊಣ್ಡಪೆ ನೆತ್ತರಂ ನೆಲ**
**ಕ್ಕೆಱಿಯದೆ ಮಾಣ್ಬುಮೀ ಸಮರರಂಗದೊಳೀ ರಣರಂಗಭೈರವಂ ॥**

ಎಂದು ಬಣ್ಣಿಸಿದ್ದಾನೆ. ಹಾಗೆಯೇ ಪುರಾಣಪ್ರಸಿದ್ಧನಾದ ಪರಶುರಾಮನ ಮಹಿಮೆಯನ್ನು ಕವಿಯು ಸಂಗ್ರಹವಾಗಿ

**ಧರಣೀಮಂಡಲದೊಳ್ ಧರಾಭುಜರನಿರ್ಪತ್ತೊಂದು ಸೂಟಿಟ್ ಕೊಂದುತ**
**ದ್ಧರಣೀಮಂಡಲಮಂ ಸಮಸ್ತಧರಣೀದೇವರ್ಗೆ ವಾರ್ಧ್ಯಂತಿಕಂ ॥**
**ಬರಮಿತ್ತಲ್ಲಿ ಧರಾಮರಸ್ವದೊಳಿರಲ್ಕಾಗೆಂದು ಪೋಗೊತ್ತಿ ಸಾ ।**
**ಗರಮಂ ಚಾಪದ ಕೂರ್ಪಿನೊಳ್ ಬುಧನುತಂ ಶ್ರೀರೇಣುಕೀನಂದನಂ ॥**

ಎಂಬುದಾಗ ಬಣ್ಣಿಸಿದ್ದಾನೆ.

**ಚಾವರಾಜ (ಕ್ರಿ.ಶ.೧೧೧೫) :–**

ಈತನು ಶ್ರವಣಬೆಳಗೊಳದ ಎರಡುಕಟ್ಟೆ ಬಸದಿಯ ಬಲಗಡೆ ಮಂಟಪದಲ್ಲಿರುವ ಎರಡನೆಯ ಕಂಬದ ಮೇಲಿನ ಶಾಸನವನ್ನು ಮತ್ತು ಚಾಮುಂಡರಾಯ ಬಸದಿಯ ದಕ್ಷಿಣಭಾಗದ ಮಂಟಪದಲ್ಲಿರುವ ಎರಡನೆಯ ಕಂಬದ ಶಾಸನವನ್ನು ಬರೆದಿದ್ದಾನೆ.[೬೫] ಇವನು ಪ್ರಭಾಚಂದ್ರ ಸಿದ್ಧಾಂತ ದೇವರ ಶಿಷ್ಯ. ಮೊದಲನೆಯ ಶಾಸನದಲ್ಲಿ ಕವಿ ತನ್ನನ್ನು 'ಮೃದುರೇಖಾವಿಳಾಸ' ಎಂದು ವಿಶೇಷಿಸಿಕೊಂಡಿದ್ದಾನೆ. ಮೊದಲನೆಯ ಶಾಸನವು ಗಂಗರಾಜನ ಪತ್ನಿಯಾದ ಲಕ್ಷ್ಮೀಮತಿ ದಂಡ ನಾಯಕಿತಿ ತನ್ನ ಗುರುವಾದ ಪ್ರಭಾಚಂದ್ರಸಿದ್ಧಾಂತದೇವರ ಗುರುವಾದ ಮೇಘಚಂದ್ರ ತ್ರೈವಿದ್ಯದೇವರು ಸ್ವರ್ಗಸ್ಥರಾಗಲು ಅವರಿಗೆ ನಿಸಿದ ಮಾಡಿಸಿದ ವಿಚಾರವನ್ನು ಒಳಗೊಂಡಿದೆ. ಎರಡನೆಯದು ಮಹಾಪ್ರಧಾನ ದಂಡನಾಯಕನಾದ ಗಂಗರಾಜನು ತನ್ನ ತಾಯಿಯಾದ ಪೋಚಾಂಬಿಕೆಯು ಸ್ವರ್ಗವಾಸಿಯಾದಾಗ ನಿಸಿದಿಯನ್ನು ಮಾಡಿಸಿದುದನ್ನು ಹೇಳುತ್ತದೆ. ಈ ಶಾಸನಗಳು ಸಂಸ್ಕೃತ ಕನ್ನಡಗಳ ಗಂಭೀರ ಬಂಧದಲ್ಲಿ ರಚಿತವಾಗಿವೆ. ಓಜೋಮಯವಾದ ಸಮಾಸ ಭೂಯಿಷ್ಠ ಶೈಲಿಯನ್ನು ಹಾಗೂ ರಥೋದ್ಧತ, ಇಂದ್ರ ವಜ್ರ, ವಿಪರೀತಾಖ್ಯಾನಕಿ, ವಸಂತತಿಲಕ, ಮಾಲಿನಿ ಮೊದಲಾದ ಛಂದೋಪ್ರಕಾರಗಳನ್ನು ಕವಿಯು ಬಳಸುವ ಮೂಲಕ ತಾನು ಸಮರ್ಥ

ಕವಿಯೆಂದು ತೋರಿಸಿಕೊಂಡಿದ್ದಾನೆ. ಮೇಘಚಂದ್ರ ವ್ರತೀಂದ್ರನನ್ನು ಬಣ್ಣಿಸಿರುವ ಪದ್ಯವು ಕವಿಯ ಕಾವ್ಯ ನೈಪುಣ್ಯಕ್ಕೆ ಮಾದರಿಯಾಗಿದೆ.

ಕ್ಷಮೆಗೀಗಳ್ ಜೌವನಂತೀವಿದುದತುಳ ತಪಶ್ರೀಗೆ ಲಾವಣ್ಯಮೀಗಳ್
ಸಮಸಂದಿರ್ದತ್ತು ತನ್ನೀ ಶ್ರುತವಧುಗಧಿಕ ಪ್ರೌಢಿಯಾಯ್ತೀಗಳೆನ್ದಂ
ದೆಮಹಾವಿಖ್ಯಾತಿಯಂ ತಾಳ್ದಿದನಮಳಚರಿತ್ರೋತ್ತಮಂಭವ್ಯತೇಜೋ
ರಮಣಂ ತ್ರೈವಿದ್ಯ ವಿದ್ಯೋದಿತ ವಿಶದಯಶಂ ಮೇಘಚಂದ್ರ ವ್ರತೀಂದ್ರಂ।

## ಮರ್ದಿಮಯ್ಯ (ಕ್ರಿ.ಶ.೧೧೨೩) :-

ಶ್ರವಣಬೆಳಗೊಳದ ಚಿಕ್ಕಬೆಟ್ಟದ ಮೇಲೆ ಚಾಮುಂಡರಾಯನ ಬಸದಿಯ ದಕ್ಷಿಣಭಾಗದ ಮಂಟಪದಲ್ಲಿ ೧ನೆಯ ಕಂಬದ ಮೇಲಿರುವ ಶಾಸನದಲ್ಲಿ "ಶ್ರೀಮತ್ ಪ್ರಭಾಚಂದ್ರಸಿದ್ಧಾಂತದೇವರ ಗುಡ್ಡ ಹೆಗ್ಗಡೆ ಮರ್ದಿಮಯ್ಯಂ ಬರೆದಂ" ಎಂಬ ಮಾತು ಬಂದಿದ್ದು ಶಾಸನದ ಕರ್ತೃ ಮರ್ದಿಮಯ್ಯನೆಂದು ತಿಳಿದುಬರುತ್ತದೆ.[೬೬] ಶಾಸನಕವಿಯು ಸಂಸ್ಕೃತ ಮತ್ತು ಕನ್ನಡ ಭಾಷೆಗಳೆರಡರಲ್ಲೂ ಪರಿಣತನಾದವನಾಗಿದ್ದು, ಇಂದ್ರವಜ್ರ, ವಿಪರೀಖ್ಯಾನ್ಯಕಿ, ವಸಂತತಿಲಕ, ಮಾಲಿನಿ ಮುಂತಾದ ಛಂದೋಬಂಧಗಳನ್ನು ಕವಿಯು ಬಳಸಿದ್ದಾನೆ. ಶಾಸನದಲ್ಲಿ ಪದ್ಮನಂದಿ, ಗೃಧ್ರಪಿಂಛ, ದಿವಾಕರನಂದಿ, ಗುಣನಂದಿ, ಮಳಧಾರಿದೇವ, ಕುಂದಕುಂದ ಮುಂತಾದವರನ್ನು ಸ್ತುತಿಸಿದ್ದಾನೆ. ವಿಷ್ಣುವರ್ಧನನ ದಂಡಾಧಿಪನಾದ ಗಂಗರಾಜನು ತನ್ನ ಗುರುವಾದ ಶುಭಚಂದ್ರದೇವನು ಸ್ವರ್ಗಸ್ಥನಾದಾಗ, ಅವರಿಗೆ ನಿಸಿದಿಯನ್ನು ನಿರ್ಮಿಸಿರುವುದು ಶಾಸನದ ವಿಷಯವಾಗಿದೆ. ಜೈನ ಯತಿಗಳ ಕಠಿಣವಾದ ವ್ರತವಿಧಾನವನ್ನು ವಿವರಿಸುವಂತಿದೆ ಈ ಕೆಳಗಿನ ಮಲಧಾರಿದೇವನನ್ನು ಕುರಿತಾದ ಶಾಸನ ಪದ್ಯ

ಮಱೆದುಮದೊಮ್ಮೆ ಲೌಕಿಕದ ವಾರ್ತೆಯನಾಡದ ಕೆತ್ತಬಾಗಿಲಂ
ತೆಱೆಯದ ಭಾನುವಸ್ತಮಿತಮಾಗಿರೆ ಪೋಗದ ಮೆಯ್ಯನೊಮ್ಮೆಯುಂ
ತುಱಿಸದ ಕುಕ್ಕುಟಾಸನಕೆ ಸೋಲದ ಗಂಡವಿಮುಕ್ತವೃತ್ತಿಯಂ
ಮಱೆಯದ ಘೋರದುಶ್ಚರತಪಶ್ಚರಿತಂ ಮಳಧಾರಿದೇವರ ॥
ಶುಭಚಂದ್ರಮುನೀಂದ್ರಯಶ
ಪ್ರಭೆಯೊಳ್ ಸರಿಯಾಗಲಾರದಿಂತೀಚಂದ್ರಂ।
ಪ್ರಭುತೆಗಿದೆ ಕಂದಿಕುಂದಿದ
ನಭವಶಿರೋಮಣಿಗದೇಕೆ ಕಂದುಂ ಕುಂದುಂ ॥

ಎಂಬ ಕಂದ ಪದ್ಯದಲ್ಲಿ ಶುಭಚಂದ್ರಮುನೀಂದ್ರನ ಯಶಸ್ಸನ್ನು ಚಮತ್ಕಾರಿಕವಾಗಿ ಬಣ್ಣಿಸಿದೆ.

**ಸಾಂತಮಹಂತ (ಕ್ರಿ.ಶ.೧೧೩೮) :–**

ಹೊಯ್ಸಳ ದೊರೆ ವಿಷ್ಣುವರ್ಧನನ ಕಾಲಕ್ಕೆ ಸೇರಿದ ನಾಗಮಂಗಲದ ಲಾಲನಕೆರೆಯ ಶಾಸನ[೬೭]ವನ್ನು ಸಾಂತಮಹಂತ ಕವಿಯು ರಚಿಸಿದ್ದಾನೆ. ಶಾಸನದಲ್ಲಿ ಕಡೆಯ ಭಾಗದಲ್ಲಿ ತಾನು 'ಸೋಮಿಯಕ್ಕ ನಣುಗಿನ ಪುತ್ರ'ನೆಂದು ಕವಿಯು ಹೇಳಿಕೊಂಡಿದ್ದಾನೆ. ಈ ಶಾಸನವು ವಿನಯಾದಿತ್ಯನಿಂದ ವಿಷ್ಣುವರ್ಧನನವರೆಗೆ ಹೊಯ್ಸಳ ವಂಶಾವಳಿಯನ್ನು ಕಾವ್ಯಾತ್ಮಕವಾಗಿ ನಿರೂಪಿಸಿದೆ. ಆ ನಂತರದಲ್ಲಿ ಹೊಯ್ಸಳದೊರೆಯ ಮಂತ್ರಿಯಾದ ಏಚಿರಾಜ ದಂಡಾಧೀಶನ ವಂಶಾವಳಿಯ ನಿರೂಪಣೆ, ಆತನು ದೊರೆಯನ್ನು ಮೆಚ್ಚಿಸಿ ಲಾಲನಕೆರೆಯ ಗೌಂಡಿಕೆಯ ಉಂಬಳಿಯನ್ನು ಪಡೆದು, ಅದರಲ್ಲಿ ಸ್ವಲ್ಪ ಭಾಗವನ್ನು ಮಲ್ಲಿಕಾರ್ಜುನ ದೇವರಿಗೆ ಬಿಟ್ಟಂತೆ ತಿಳಿದು ಬರುತ್ತದೆ. ಈತನು ಸಹಜವಾದ ಹಾಗೂ ಸರಳವಾದ ಭಾಷೆಯನ್ನು ಬಳಿಸಿರುತ್ತಾನೆ. ಈತನ ಭಾಷಾ ಬಳಕೆಗೆ ಶಿವನನ್ನು ಸ್ತುತಿಸಿರುವ

**ಪತ್ತಿರೆ ಗಂಗೆಯ ಹನಿಗಳು**
**ಮುತ್ತಿನ ಬಾಸಿಗಮಿದೆನಿಸಿ ವಾಸುಗಿ ಸುಖದಿಂ**
**ಸುತ್ತಿರ್ದ್ದ ಜೂಟದಾದೇ**
**ವೋತ್ತಮ ನಮಗೊಸೆದು ಕೊಡುಗೆ ಸುಕಸಂಪದಮಂ ॥**

ಎಂಬುದು ಸಾಕ್ಷಿಯಾಗಿದೆ. ಬಿಟ್ಟಿದೇವನ ದಂಡಾಧೀಶನಾದ ಏಚಿರಾಜನ ವ್ಯಕ್ತಿತ್ವವನ್ನು

**ನುಡಿದ ನುಡಿ ತಾಂಬ್ರಸಾಶನ**
**ಪಡೆದ ಧನಂ ಸದುಬುಧರ್ಗ್ಗಮಾತ್ಯರೊಳಧಿಕಂ**
**ಪೊಡವಿಯೊಳೆ ತೋರ್ಪ್ಪ ಸುರತರು**
**ಪಡೆಮಾತೇಂ ಬಿಟ್ಟದೇವದಂಡಾಧೀಶಂ ॥**

ಎಂಬ ಕಂದಪದ್ಯ ಹಾಗೂ ಮಂತ್ರಿ ಬೋಕಣನ ಪರಾಕ್ರಮವನ್ನು

**ಬೀರಂ ಬಿಂಕಮದೇವುದೋ**
**ಹಾರುವ ನಿನಗೆಂದು ನುಡಿವಗಳಹನ ಬಾಯೊಳು**
**ಕೂರಲಗನೆಯ್ದೆ ಕುತ್ತುವ**
**ವೀರಾಗ್ರಣಿ ಮಂತ್ರಿ ಬೋಕಣಂ ವಸುಮತಿಯೊಳು ॥**

ಎಂಬ ಪದ್ಯವು ಬಣ್ಣಿಸಿದೆ. ಹಾಗೆಯೇ ಕ್ರಿ.ಶ.೧೧೭೭ರ ಜಯಚಾಮರಾಜಪುರ (ಹಲಕೂರು)ದ ಶಾಸನ (ಎಕ Vಅಕೆ ೬೨) ಮತ್ತು ಕೆಲ್ಲಂಗೆರೆಯ ಶಾಸನವನ್ನು (ಶಾ.ಸಂ.೧೧೨)ವನ್ನು ಈತನೇ ರಚಿಸಿದ್ದಾನೆ.

### ದೇವಭದ್ರಮುನಿ (ಕ್ರಿ.ಶ.೧೧೬೦) :-

ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ತಾಲ್ಲೂಕು ಬೂದಿಹಾಳು ಹೋಬಳಿ ಹೆಗ್ಗರೆ ಗ್ರಾಮದ ಬಸದಿಯ ಜೈನಶಾಸನವನ್ನು ದೇವಭದ್ರಮುನಿಯು[೬೮] ರಚಿಸಿರುವುದಾಗಿ ತಿಳಿದುಬರುತ್ತದೆ. ೭೭ ಸಾಲುಗಳ ಸುದೀರ್ಘವಾದ ಈ ಶಾಸನದಲ್ಲಿ ಕಲ್ಯಾಣಚಾಲುಕ್ಯನಾದ ಭೂವಲ್ಲಭ ಪೆರ್ಮಾಡಿದೇವನು ಆಳುತ್ತಿದ್ದನೆಂದೂ, ಹೊಯ್ಸಳ ವಿಷ್ಣುವರ್ಧನ ಮತ್ತು ಆತನ ಮಗ ಮೊದಲನೆಯ ನರಸಿಂಹನು ಆಳುತ್ತಿದ್ದರೆಂದೂ ಅವರ ವಂಶಾವಳಿಯನ್ನು ನಿರೂಪಿಸಿದೆ. ಅನಂತರ ಆತನ ಸಾಮಂತನಾದ ಚಟ್ಟನ ಸ್ತುತಿ, ವಂಶಾವಳಿ ನಿರೂಪಣೆಯಿದೆ. ಈ ಚಟ್ಟನಾದರೋ 'ಕರ್ನಾಟಕ ಕಾಮಿನೀ ಶಶಿವದನ ಮಣಿಮಯಮುಕುರ' ನೆನಿಸಿದ್ದನೆಂದು ಇಲ್ಲಿ ವರ್ಣಿಸಿದೆ. ಗೋವಿದೇವ ಮಹಾಸಾಮಂತನು ತನ್ನ ರಾಣಿಯಾದ ನಾಯಕಿಯ ಸ್ಮರಣಾರ್ಥ ಹೆಗ್ಗೆರೆಯಲ್ಲಿ ಚೆನ್ನಪಾರ್ಶ್ವನಾಥ ಬಸದಿಯನ್ನು ಕಟ್ಟಿಸಿ, ದಾನದತ್ತಿಗಳನ್ನು ಬಿಟ್ಟ ವಿಚಾರವಿದೆ.

**ಉಚಿತಪದಾಳಂಕಾರಂ**
**ಪ್ರಚುರರಸಂ ನೆಗಳಲಿಂತು ಜಿನಶಾಸನಮಂ**
**ರಚಿಯಿಸಿದಂ ಹರಹಾಸ ಸ**
**ದ್ರುಚಿರಯಶಂ ದೇವಭದ್ರಮುನಿಪೋತ್ತಂಸಂ ॥**

ಎಂಬ ಪದ್ಯದ ಮೂಲಕ ಕವಿಯು ತಾನು ಉಚಿತ ಪದಾಲಂಕಾರ ಪ್ರಚುರ ರಸಗಳಿಂದ ಕಾವ್ಯವನ್ನು ರಚಿಸಿರುವುದಾಗಿ ಹೇಳಿಕೊಂಡಿದ್ದಾನೆ.

### ಶಾಂತಿನಾಥ (ಕ್ರಿ.ಶ.೧೧೬೫) : –

ನಾಗಮಂಗಲ ತಾಲ್ಲೂಕಿನ ಲಾಲನಕೆರೆಯ ಶಾಸನದ[೬೯] ಕರ್ತೃ ಶಾಂತಿನಾಥಕವಿ. "ದಕ್ಷಿಣ ಹೆಂಮನಮಂಮಂ ಲಾಕ್ಷಣಗವಿ ಶಾಂತಿನಾಥ ಕವಿಕುಳತಿಲಕಂ ದಾಕ್ಷಿಂಣ್ಯ ನಿಧಿ ಗುಣೋತ್ಕರ ಸಿಕ್ಷಾಗುರು" ಈ ಶಾಸನವನ್ನು ಹೇಳಿದನೆಂಬ ಮಾತಿನಿಂದ ಈತನು ದಕ್ಷಿಣ ಹೆಮ್ಮನ ಮೊಮ್ಮಗನು, ಲಕ್ಷಣ ಕವಿಯೂ ಹಾಗೂ ಉಪಾಧ್ಯಾಯನೂ ಆಗಿದ್ದನೆಂದು ತಿಳಿದುಬರುತ್ತದೆ. ಹೊಯ್ಸಳ ವೀರಬಲ್ಲಾಳನ ಕಾಲಕ್ಕೆ ಸೇರಿದ ಈ ಶಾಸನದಲ್ಲಿ ಹೊಯ್ಸಳ ವಂಶಾವಳಿ, ಪ್ರಧಾನ ಹೆಗ್ಗಡೆ

ಕಂಟಿಮಯ್ಯ, ಚೊಕ್ಕಣ್ಣ, ದಂಡನಾಯಕ ಹರಿಯಣ್ಣ ಮೊದಲಾದ ಸಮಸ್ತ ಪ್ರಜೆ ಗಾವುಂಡಗಳೂ ಮಧುಕೇಶ್ವರ ದೇವರ ಸೇವಾರ್ಥ ದಾನದತ್ತಿಗಳನ್ನು ನೀಡಿದ ವಿವರಗಳಿವೆ. ಈ ಶಾಸನದಲ್ಲಿ ಕಂಡು ಬಂದಿರುವ –

**ಇದಿರಾದರಿಭೂಪಾಳರ**

**ಮದದಾನೆಯ ಕೊಂಬ ನುಡಿದು ದಂತದ ಬಳೆಯಂ**

**ಬಿದುವಿನ ಮುತ್ತಿನ ಹಾರಮ**

**ನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಹಂ ॥**

ಎಂಬ ಪದ್ಯವು ಹಾಸನ ಜಿಲ್ಲೆಯ ಅರಸಿಕೆರೆ ತಾಲ್ಲೂಕಿನ ಹಲ್ಲೂರು (ಕ್ರಿ.ಶ.೧೧೭೭), ಬೆಳಗುಂಬ (ಕ್ರಿ.ಶ.೧೧೯೫), ಹಾಗೂ ಹಿರಿಯೂರು (ಕ್ರಿ.ಶ.೧೨೦೬) ಹಾಗೂ ಅರಸಿಕೆರೆಯ ಕಣಿಕಟ್ಟೆ ಗ್ರಾಮದ ಶಾಸನದಲ್ಲೂ ಕಾಣಿಸಿಕೊಂಡಿರುವುದರಿಂದ (ಕ್ರಿ.ಶ.೧೧೮೯) ಡಾ.ಎಂ.ಎಂ.ಕಲಬುರ್ಗಿ ಅವರು ಈ ಎಲ್ಲ ಶಾಸನಗಳನ್ನು ಶಾಂತಿನಾಥನೇ ಬರೆದಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ.[೨೦] ಶಾಂತಿನಾಥನು ಒಬ್ಬ ಸಮರ್ಥಕವಿಯೆಂಬುದು ಆತನ ಶಾಸನದ ರಚನೆಯ ಶೈಲಿಯನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ.

**ಸೂರ್ಯಣ (ಕ್ರಿ.ಶ.೧೧೭೦) :–**

ಹಾಸನ ಜಿಲ್ಲೆಯ ದುದ್ದ ಹೋಬಳಿ ಜಕ್ಕೇನಹಳ್ಳಿಯ ಕಲ್ಲೇಶ್ವರ ದೇವಾಲಯದ ಶಾಸನದ ಕರ್ತೃ ಸೂರ್ಯಣ. ಶಾಸನದ ಅಂತ್ಯದಲ್ಲಿ "ಸೂರ್ಯ್ಯಣಂ ಲೇಖಕ ಮದನಮಹೇಶ್ವರಂ ಬರವರಾಚಾರ್ಯ್ಯಂ" ಎಂದು ಹೇಳಿಕೊಂಡಿದ್ದಾನೆ.[೨೧] ಇದರಲ್ಲಿ ವೀರಪ್ರತಾಪನರಸಿಂಹನವರೆಗೆ ಹೊಯ್ಸಳ ವಂಶಾವಳಿ, ಆತನ ಪ್ರಧಾನ ಹೆಗ್ಗಡೆ ಕಾಳಿಮಯ್ಯನ ವಂಶಾವಳಿ, ಜಕ್ಕೇನಹಳ್ಳಿಯಲ್ಲಿ ಕಾಳೇಶ್ವರ ದೇವಾಲಯವನ್ನು ನಿರ್ಮಿಸಿ ದಾನದತ್ತಿಗಳನ್ನು ಬಿಟ್ಟ ವಿಚಾರವಿದೆ. ಕನ್ನಡ ಹಾಗೂ ಸಂಸ್ಕೃತ ಪದ್ಯಗಳನ್ನೊಳಗೊಂಡ ಈ ಶಾಸನವು ಕವಿಯ ಕಲ್ಪನಾವಿಲಾಸ, ಶಬ್ದಗಳ ಪ್ರಯೋಗ ಉಚಿತತೆಗೆ ನಿದರ್ಶನವಾಗಿದೆ. ಹೊಯ್ಸಳ ವಿಷ್ಣುವರ್ಧನನನ್ನು ಬಣ್ಣಿಸಿರುವ

**ಇನನೋರ್ವಂ ಪೊಱಗಾಗಿ ಪೇೞ್ಪುದುವೆ ತೇಜಂ ಕ್ಷತ್ರಿಯಂಗರ್ಕ್ಕನಂ**

**ದನನೋರ್ವ್ವಂ ಪೊಱಗಾಗಿ ಪೇೞ್ಪುದುವೇದಾನಂ ಭೂಭುಜಂಗಬ್ಜಗ**

**ರ್ಭನುಮೋರ್ವ್ವಂ ಪೊಱಗಾಗಿ ಪೇೞ್ಪುದುವೇ ಚಾತುರ್ಯ್ಯಂ ನ್ರಿಪಂಗೆಂದು ಮೆ**

**ಚ್ಚನಿವಂ ಮತ್ತಿನ ಭೂಪರಂನ್ರಿಪವರಂ ಶ್ರೀರೂಪನಾರಾಯಣಂ ॥**

ಎಂಬ ಪದ್ಯ ಹಾಗೂ ಹೆಗ್ಗಡೆ ಕಾಳಿಮಯ್ಯನನ್ನು ಬಣ್ಣಿಸಿರುವ

**ವನಧಿಗದೊಂದೆ ಗುಣ್ಪು ಸಹಜಂ ಕನಕಾದ್ರಿಗದೊಂದೆಪೆಂಪು ಮ**
**ತ್ತನುಪಮದಾನವೊಂದೆ ನಿಜವಾ ದಿವಿಜಕ್ಷಿತಿಜಕ್ಕೆ ನೋರ್ಪ್ಪಡಾ**
**ವನಧಿಯ ಗುಣ್ಪುಮೇರುವಿನ ಪೆಂಪು ಸುರದ್ರುಮದಾರ್ಪ್ಪದಾವಗಂ**
**ತನಗೆನಲೀ ಧರಾತಳದೊಳಾರ್ದ್ದೊರೆ ಹೆಗ್ಗಡೆ ಕಾಳಿಮಯ್ಯನೊಳ್ ॥**

ಎಂಬ ಪದ್ಯಗಳು ಉತ್ತಮ ಉದಾಹರಣೆಗಳಾಗಿವೆ.

## ದೇವಪಾರ್ಯ (ಕ್ರಿ.ಶ.೧೧೭೩) :-

ಹಾಸನ ಜಿಲ್ಲೆಯ ಅರಸಿಕೆರೆಯ ಬಸ್ತಿಗೆ ಪಶ್ಚಿಮದಲ್ಲಿ ಬಿದ್ದಿರುವ ಶಿಲಾಶಾಸನವನ್ನು ದೇವಪಾರ್ಯ ರಚಿಸಿದನೆಂದು ತಿಳಿದುಬರುತ್ತದೆ.[೭೨] ಶಾಸನದ ಕೊನೆಯಲ್ಲಿರುವ

**ಭುವನನುತ ವಾಜಿವಯೋ**
**ದ್ಭವಕರ ವಿಭು ಸೋಮನಾಥಪುತ್ರಂ ಪೇಟ್ದಂ।**
**ಕವಿರಾಜಂ ಕಾಶ್ಯಪ ಗೋ**
**ತ್ರವರ್ದ್ಧನಂ ದೇವಪಾರ್ಯನೀ ಶಾಸನಮಂ ॥**

ಎಂಬ ಪದ್ಯದಿಂದ ಈತನು ಕಾಶ್ಯಪಗೋತ್ರದ ವಾಜಿವಂಶದ ಸೋಮನಾಥನ ಮಗನೆಂದೂ, 'ಕವಿರಾಜ'ನೆಂಬುದು ಈತನ ಬಿರುದು ಎಂದೂ ವೇದ್ಯವಾಗುತ್ತದೆ. ಹೊಯ್ಸಳ ವೀರಬಲ್ಲಾಳನವರೆಗೆ ವಂಶಾವಳಿಯ ನಿರೂಪಣೆ, ಬಲ್ಲಾಳನ ಗುಣಗಾನವನ್ನು ಒಳಗೊಂಡು ನಂತರ ಆತನ ಪ್ರಧಾನನಾದ ಹರಿಹರನು ಅರಸೀಕೆರೆಯಲ್ಲಿ ಕಟ್ಟಿಸಿದ ದೇವಾಲಯಕ್ಕೆ ಬಿಟ್ಟ ದಾನದತ್ತಿಗಳ ವಿವರಗಳನ್ನು ಒಳಗೊಂಡಿದೆ. ಸಮವೃತ್ತ, ಶ್ಲೋಕಗಳಿಂದ ತುಂಬಿರುವ ೧೦೩ ಸಾಲುಗಳ ಈ ದೀರ್ಘ ಶಾಸನದಲ್ಲಿ ಶಬ್ದಸಂಪತ್ತು, ಸಂಯೋಜನಾ ಸಾಮರಸ್ಯಗಳು ಮನೋಹರವಾಗಿವೆ.

## ರಾಮದೇವ (ಕ್ರಿ.ಶ.೧೧೮೦) :-

ಹೊನ್ನಾಳಿ ತಾಲ್ಲೂಕಿನ ಬೆಳಗುತ್ತಿ ಗ್ರಾಮದಲ್ಲಿರುವ ಸಿದ್ದೇಶ್ವರ ದೇವಾಲಯದ ಒಂದು ಶಾಸನವನ್ನು ಮತ್ತು ಚಿಕ್ಕಯೆರೆಹಳ್ಳಿ ಗ್ರಾಮದಲ್ಲಿ ರಾಮೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಶಾಸನವನ್ನು ರಾಮದೇವನು ರಚಿಸಿದನೆಂದು[೭೩] ತಿಳಿದುಬರುತ್ತದೆ. ಚಿಕ್ಕಯೆರೆಹಳ್ಳಿ ಶಾಸನದಲ್ಲಿ "ವಿರಚಿಸಿದನೊಪ್ಪೆ ಲಕ್ಷ್ಮೀಧರತನಯಂ ರಾಮದೇವನೀ ಶಾಸನಮಂ" ಎಂಬ ವಾಕ್ಯದಿಂದ ಈತನು ಲಕ್ಷ್ಮೀಧರನ ಮಗನೆಂದು ತಿಳಿದುಬರುತ್ತದೆ. ಆದರೆ "ಹೊನ್ನಾಳಿಯ ಶಾಸನವನ್ನು ಈತನು ಬರೆದಿರುವುದು ದುಸ್ತರವೆಂಬ ಅಭಿಪ್ರಾಯವೂ ವ್ಯಕ್ತವಾಗಿದೆ."[೭೪] ಮೊದಲನೆಯ ಶಾಸನದಲ್ಲಿ

ಸಂಕರಾಸಿ ಪಂಡಿತನೆಂಬುವನ ಉಪದೇಶವನ್ನು ಕೇಳಿ ಮೇಲಾಳ್ಕೆಯ ಮಹದೇವನಾಯಕ ಮತ್ತಿತರರು ದಾನ ನೀಡಿದ ವಿವರಗಳಿದ್ದರೆ, ಎರಡನೆಯ ಶಾಸನದಲ್ಲಿ ಬೆಳಗುತ್ತಿಯ ಸಿಂದಸಾಮಂತ ಈಶ್ವರ ಭೂಪನ ಕೈಕೆಳಗೆ ಅಧಿಕಾರಿಯಾಗಿದ್ದ ನಾಡಪ್ರಭು ಹತ್ತಿಯೂರ ಕೇತಗಾವುಂಡನು ತನ್ನ ಬಾಂಧವರೊಡನೆ ರಾಮನಾಥದೇವರ ಪೂಜಾದಿಗಳಿಗಾಗಿ ದತ್ತಿಬಿಟ್ಟ ವಿಚಾರವಿದೆ. ಶಾಸನದ ಭಾಷೆಯು ಸಂಸ್ಕೃತ ಮತ್ತು ಕನ್ನಡ. ಈತ ಪ್ರೌಢಕವಿಯಾಗಿದ್ದು ಮನೋಹರ ಮತ್ತು ಸುಲಲಿತವಾದ ಶೈಲಿಯಲ್ಲಿ ಖ್ಯಾತ ಕರ್ನಾಟಕ ವೃತ್ತಗಳನ್ನೂ, ಕಂದಪದ್ಯಗಳನ್ನೂ ಬಳಸಿದ್ದಾನೆ. ಸಮುದ್ರವನ್ನು ಬಣ್ಣಿಸಿರುವ –

**ಪರಿಧಾವನ್ಮತ್ಸ್ಯಪುಚ್ಛಾಹತಮಕರಕರಾಸ್ಫಾಳನಾಭೀಳನಕ್ರ**
**ಸ್ಫುರಿತೋದ್ಯಚ್ಛಿಂಶು ಮಾರಕ್ರಮಣಸಮುದಿತೋಚ್ಚಂಡವಾತಾ ಭಿಘಾತೋ**
**ದ್ಧುರವೀಚೀಶೀಕರೌಘಸ್ಥಗಿತ ನಿಖಿಳ ದಿಙ್ಮಂಡಲಂ ರಂಜಿಕುಂಭಾ**
**ಸುರ ಜಂಬೂದ್ವೀಪಮಂ ಸುತ್ತಿಜಿದಖಿಳಧರಾಭೋಗಭದ್ರಂ ಸಮುದ್ರಂ॥**

ಎಂಬ ಪದ್ಯವು ಸಂಸ್ಕೃತ ಭೂಯಿಷ್ಠವಾದ ಶೈಲಿಗೆ ಉದಾಹರಣೆಯಾಗಿದೆ.

## ತ್ರಿವಿಕ್ರಮ ಪಂಡಿತ (ಕ್ರಿ.ಶ.೧೧೮೭) :–

ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿನ ಬಾಣಾವರದ ಬಾಣೇಶ್ವರ ದೇವಾಲಯದ ಬಳಿಯಿರುವ ಶಾಸನ, ಅರಸೀಕೆರೆಯ ಮತ್ತೆರಡು ಶಾಸನಗಳನ್ನು[೨೫] ತ್ರಿವಿಕ್ರಮ ಪಂಡಿತನು ರಚಿಸಿದನೆಂದು ತಿಳಿದುಬರುತ್ತದೆ. ಹಾಗೆಯೇ ಹರಿಹರ ಸೂರಿ ಎಂಬುವನು ರಚಿಸಿದ ಬೊಮ್ಮೇನಹಳ್ಳಿಯ ಶಾಸನದ ಕೊನೆಯಲ್ಲಿ "ತ್ರಿವಿಕ್ರಮ ಕವೀಶ್ವರ ನೂರ್ಜಿತ ವಾಣಿ ತಿಳ್ದಿತಾಂ ಬರದ" ನೆಂಬ ವಾಕ್ಯದಿಂದ[೨೬] ತ್ರಿವಿಕ್ರಮ ಪಂಡಿತನು ಹರಿಹರಸೂರಿಯು ರಚಿಸಿದ ಕಾವ್ಯವನ್ನು ಪರಿಷ್ಕರಿಸಿದನೆಂಬ ಅಂಶವು ತಿಳಿದುಬರುತ್ತದೆ. ತ್ರಿವಿಕ್ರಮ ಪಂಡಿತನಿಗೆ 'ಕವೀಶ್ವರ'ನೆಂಬ ಬಿರುದಿತ್ತು ಎನ್ನಬಹುದು.

ಈ ಮೂರೂ ಶಾಸನಗಳು ಹೊಯ್ಸಳದೊರೆ ಇಮ್ಮಡಿ ಬಲ್ಲಾಳನ ಕಾಲಕ್ಕೆ ಸೇರಿದವುಗಳು. ಕಮ್ಮಟದ ಚಟ್ಟಸೆಟ್ಟಿ ಚಟ್ಟೇಶ್ವರ ದೇವಾಲಯವನ್ನು ನಿರ್ಮಿಸಿದ ವಿಚಾರ ಬಾಣಾವರ ಶಾಸನದ ವಸ್ತು. ಅರಸಿಯ ಕೆರೆಯ ಶಾಸನಗಳು ಮೇಲೇಶ್ವರ ದೇವಾಲಯದ ಜೀರ್ಣೋದ್ಧಾರಕ್ಕಾಗಿ ಬಲ್ಲಾಳನು ನಾಡ ಸಮಸ್ತರ ಸಮ್ಮುಖದಲ್ಲಿ ದಾನವಿತ್ತ ವಿಚಾರ ಮತ್ತು ವೀರಬಲ್ಲಾಳೇಶ್ವರ ದೇವಾಲಯವನ್ನು ನಿರ್ಮಿಸಿದ ವಿಚಾರವನ್ನು ಒಳಗೊಂಡಿದೆ.

ಈ ಮೂರು ಶಾಸನಗಳು ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದು, ಗದ್ಯಪದ್ಯಮಯವಾಗಿದೆ. ಖ್ಯಾತಕರ್ನಾಟಕ ವೃತ್ತಗಳು, ಶ್ಲೋಕ, ಶಾಲಿನಿ ಹಾಗೂ ವಿಶೇಷವಾಗಿ ಕಂದಪದ್ಯಗಳನ್ನು ಕವಿ ಬಳಸಿದ್ದಾನೆ. ಇಮ್ಮಡಿ ವೀರಬಲ್ಲಾಳನನ್ನು ಬಣ್ಣಿಸಿರುವ ಶಾಸನ ಪದ್ಯವು ಕವಿಯ ಸಹಜ ಶೈಲಿಗೆ ಉದಾಹರಣೆಯಾಗಿದೆ. ಪದ್ಯವು ಹೀಗಿದೆ.

**ಫಣಿನಾಥಂಪಾಟಿ ಭೋಗಕ್ಕಮರ ಪತಿಸಮಂರೂಪಸಂಪತ್ತಿಗಬ್ಜೇ**
**ಕ್ಷಣನುದ್ಯದ್ ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾವಿಶೇಷ**
**ಕ್ಕೆಣೆಧೀರೋದಾತ್ತಚಿತ್ತಕ್ಕಮಮಸರಿದಶಾಸ್ಯಾರಿ ದಾನಕ್ಕೆ ಮತ್ತೆ**
**ತೊಣೆಕರ್ಣ್ನಂ ತಾನೆನಲ್ಕೀ ವಸುಧೆಯೊಳೆಸೆದಂ ವೀರಬಲ್ಲಾಳಭೂಪಂ ॥**

**ವಾಸುದೇವ, ನಾಚಯ, ಕೇಶವದೇವ (ಕ್ರಿ.ಶ.೧೧೪೯) :-**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕುಪ್ಪಗಡ್ಡೆ ಗ್ರಾಮದಲ್ಲಿ ರಾಮೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಶಾಸನವನ್ನು[೭೮] ಈ ಮೂವರು ಜನ ಕವಿಗಳು ಸೇರಿ ಬರೆದರೆಂದು ಈ ಕೆಳಕಂಡ ಪದ್ಯದಿಂದ ತಿಳಿದುಬರುತ್ತದೆ.

**ಒದವಿದ ಕುಪ್ಪಟೂರ ಸುಜನಾಗ್ರಣಿ ಚಿಮ್ಮರ ವಾಸು[ದೇವ]ನುಂ**
**ಸದುಗುಣಯುಕ್ತನಪ್ಪ ಕವಿದೊಡ್ಡರ ನಾಚಯನುಂ ಸಮಸ್ತ ಸ**
**..................................ಗ್ಯರ ಕೇಶವದೇವನೆಂಬಿಂನ**
**ರ್ಮುದದೊಳೆ ಕೂಡಿ ಪೇಳ್ದರಿದುಸಲ್ಗು ಶಶಾಂಕದಿನೇಶರುಳ್ಳಿನಂ ॥**

ಕಲ್ಯಾಣ ಚಾಲುಕ್ಯರ ಅರಸ ತ್ರಿಭುವನಮಲ್ಲ ಸೋಮೇಶ್ವರ ಆಳ್ವಿಕೆ ಕಾಲದ ಈ ಶಾಸನದಲ್ಲಿ ಕಾದಂಬ ಕಾಮದೇವರಸನು ಬನವಾಸಿ ಪನ್ನಿರ್ಚ್ಛಾಸಿರ ಹಾಗೂ ಹಾನುಂಗಲಯ್ನೂರನ್ನು ಆಳುತ್ತಿದ್ದಾಗ ಕುಪ್ಪಗಡ್ಡೆ ಅಗ್ರಹಾರದ ಮಹಾಜನ ರಾಮಯ್ಯನೆಂಬಾತನಿಂದ ರಾಮೇಶ್ವರ ದೇವಾಲಯದ ನಿರ್ಮಾಣವಾದ ವಿಚಾರವಿದೆ. ಈ ಶಾಸನದಲ್ಲಿ ಜಂಬೂದ್ವೀಪ, ಕುಂತಳವಿಷಯ, ಕಾಮರಸನ ವಂಶಾವಳಿ, ಕುಪ್ಪಗಡ್ಡೆ, ರಾಮಯ್ಯನ ವರ್ಣನೆಯನ್ನು ಕವಿಗಳು ಮಾಡಿರುತ್ತಾರೆ. ಚಂಪೂಶೈಲಿಯಲ್ಲಿರುವ ಈ ಶಾಸನದ ಮೇಲೆ ಸಂಸ್ಕೃತದ ಪ್ರಭಾವವಿದೆ. ಕವಿಗಳು ಖ್ಯಾತಕರ್ನಾಟಕ ವೃತ್ತಗಳನ್ನು ಸೊಗಸಾಗಿ ಬಳಸಿದ್ದಾರೆ.

### ಮಾಳೆಯ (ಕ್ರಿ.ಶ.೧೧೯೨) :-

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆಯಲ್ಲಿ ಕೇದಾರೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಶಾಸನವೊಂದರ[೭೮] ಕೊನೆಯ ಭಾಗದಲ್ಲಿ 'ಕವಿರಾಜರ ಪಂಡಿತ ಮಾಳೆಯನ ಕವಿತೆ' ಎಂದಿದೆ. ಮಾಳೆಯನಿಗೆ 'ಕವಿರಾಜಪಂಡಿತ' ಎಂಬ ವಿಶೇಷಣದ ಬಳಕೆಯಾಗಿರುವುದರಿಂದ ಈತನು ಶಾಸನಕವಿಯಾಗಿ ಪ್ರಸಿದ್ಧನಾಗಿದ್ದನೆನ್ನಬಹುದು. ಹೊಯ್ಸಳ ಇಮ್ಮಡಿ ಬಲ್ಲಾಳನ ಕಾಲದ ಈ ಶಾಸನದಲ್ಲಿ ಬಲಿವಂಶದ ಎಚಿಯಣ ಚಮೂಪನಾಥನು ಬಲಿಪುರದ (ಬಳ್ಳಿಗಾವೆ) ಕೇದಾರೇಶ್ವರ ದೇವರ ಪೂಜಾದಿಗಳಿಗಾಗಿ ದತ್ತಿ ಬಿಟ್ಟ ವಿಚಾರವಿದೆ. ಅರಸ ಬಲ್ಲಾಳ, ದಾನಿ ಎಚಿಯಣ ಮತ್ತು ಪ್ರತಿಗ್ರಹಿ ವಾಮಶಕ್ತಿದೇವರ ಅನ್ವಯವನ್ನು ವರ್ಣಿಸಲಾಗಿದೆ. ಶಾಸನವು ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದು, ಕವಿಗೆ ಸಂಸ್ಕೃತದಲ್ಲೂ ಪಾಂಡಿತ್ಯವಿದ್ದಂತೆ ತಿಳಿದುಬರುತ್ತದೆ. ಚಂಪೂಶೈಲಿಯ ಈ ಶಾಸನದಲ್ಲಿ ಖ್ಯಾತಕರ್ನಾಟಕವೃತ್ತಗಳು, ಮಾಲಿನಿ, ಮಂದಾಕ್ರಾಂತ, ವಸಂತತಿಲಕ ಹಾಗೂ ಕಂದಪದ್ಯಗಳನ್ನು ಕವಿಯು ಬಳಸಿದ್ದಾನೆ. ಕೇದಾರೇಶ್ವರ ದೇವಾಲಯದ ಸ್ಥಾನಾಚಾರ್ಯನಾದ ವಾಮಶಕ್ತಿ ಪಂಡಿತನನ್ನು ಬಣ್ಣಿಸಿರುವ ಪದ್ಯವು ಕವಿಯ ಸಹಜಶೈಲಿಗೆ ಉದಾಹರಣೆಯಾಗಿದೆ.

**ಕಡೆವಂದಂಬುಧಿಯೊಳ್ಸುರೇಂದ್ರಗಜಮಂ ಸ್ತ್ರೀರತ್ನಮಂ ಲಕ್ಷ್ಮಿಯಂ**
**ತೊಡವಂ ಕೌಸ್ತುಭಮಂ ಸರಸ್ವತಿಯುಮಂ ದೇವಾದಿಗಳ್ಮುನ್ನಿವಂ**
**ಪಡೆದಂತೀ ಸತುಪುತ್ರನಂ ಸುಜನನಂ ಧರ್ಮಜ್ಞನಂ ಧನ್ಯನಂ**
**ಪಡೆದಂ ಸದ್ಗುಣಿ ವಾಮಶಕ್ತಿಯತಿಯಂ ಲೋಕೋತ್ತಮಂ ಗೌತಮಂ ॥**

### ಹರಿಹರಸೂರಿ (ಕ್ರಿ.ಶ.೧೧೯೪) :-

ಅರಸೀಕೆರೆ ತಾಲ್ಲೂಕಿನ ಬೊಮ್ಮನಹಳ್ಳಿಯ ಶಾಸನದ ಕರ್ತೃ ಹರಿಹರಸೂರಿ.[೭೯] ಹರಿಹರಸೂರಿಯ ಕರ್ತೃತ್ವದ ವಿಚಾರವನ್ನು ಹೇಳುವ ಶಾಸನದ ಭಾಗದಲ್ಲಿ –

**ಹರಿಹರಸೂರಿ ಸೀಗುರಿಯ ಕಾಮನ ತಮ್ಮನುಮೇಶದತ್ತ ವಾ**
**ಗ್ವಿರಚಿಸಿದಂ ತ್ರಿವಿಕ್ರಮ ಕವೀಶ್ವರನೂರ್ಜಿತವಾಣಿತಿರ್ದಿಂತಾಂ**
**ಬರೆದನುಪೇತಲಕ್ಷಣಗಣಂ ಗುಣಿದಾಸಮನೊಪ್ಪುವನ್ತುಕಂ**
**ಡರಿಸಿದನಿನ್ತು ಶಾಸನದೊಳಾದುದಯಂ ಧರೆಗುತ್ತರೋತ್ತರಂ ॥**

ಎಂಬುದರಿಂದ ಹರಿಹರಸೂರಿಯು ಬರೆದ ಶಾಸನವನ್ನು ತ್ರಿವಿಕ್ರಮ ಪಂಡಿತನು ಪರಿಷ್ಕರಿಸಿದನೆಂದು ತಿಳಿದುಬರುತ್ತದೆ. ಈ ತ್ರಿವಿಕ್ರಮ ಪಂಡಿತನು ಬಾಣಾವರ ಶಾಸನವನ್ನು ರಚಿಸಿದವನಾಗಿದ್ದು ಈತನಿಗೆ 'ಕವೀಶ್ವರ'ನೆಂಬ ಬಿರುದಿತ್ತು. ಹೊಯ್ಸಳರ ಇಮ್ಮಡಿ ಬಲ್ಲಾಳನ ಕಾಲದ ಈ ಶಾಸನವು ಮಹಾಪ್ರಧಾನ ಮಾಚಿರಾಜಯ್ಯನು ಮಧುಸೂದನಪುರದ ತ್ರಿಕೂಟದ ಮಲ್ಲಿಕಾರ್ಜುನ ಮತ್ತು ಮಧುಸೂದನದೇವರ ಪೂಜಾದಿಗಳಿಗಾಗಿ ದಾನದತ್ತಿಗಳನ್ನು ನೀಡಿದ ವಿವರಗಳನ್ನು ಒಳಗೊಂಡಿದೆ. ಮಧುಸೂದನಪುರ ಅಗ್ರಹಾರವನ್ನು ಮಧುಸೂದನ ದಂಡನಾಥನು ಸ್ಥಾಪಿಸಿ ಅಲ್ಲಿ ತ್ರಿಕೂಟದೇವಾಲಯವನ್ನು ಕಟ್ಟಿಸಿದ ವಿಚಾರವಿದೆ. ಶಾಸನವು ಕನ್ನಡ ಮತ್ತು ಸಂಸ್ಕೃತ ಭಾಷೆಯಲ್ಲಿ ರಚಿತವಾಗಿದ್ದು ಚಂಪೂಶೈಲಿಯಲ್ಲಿದೆ. ಕವಿಯು ಕಾವ್ಯರಚನೆಯಲ್ಲಿ ಖ್ಯಾತಕರ್ನಾಟಕ ವೃತ್ತಗಳನ್ನು ವಿಶೇಷವಾಗಿ ಬಳಸಿದ್ದಾನೆ.

## ಜನ್ನಕವಿ (ಕ್ರಿ.ಶ.೧೧೯೮) :-

ಕವಿಜನ್ನನು ಶಾಸನರಚನೆಯಲ್ಲಿ ಮತ್ತು ಪ್ರೌಢಕಾವ್ಯರಚನೆಯಲ್ಲಿ ಅಗ್ರಗಣ್ಯನಾದ ಕವಿಯಾಗಿದ್ದಾನೆ. ಜನ್ನಕವಿಯು ಬರೆದ ಒಟ್ಟು ಶಾಸನಗಳು ನಾಲ್ಕು.[೮೦] ಚನ್ನರಾಯಪಟ್ಟಣದ ಶಾಸನದ ಅಂತ್ಯದಲ್ಲಿ "ಜನ್ನಯ್ಯನ ಕವಿತೆ" ಎಂದೂ ತರೀಕೆರೆಯ ಅಮೃತಾಪುರದ ಶಾಸನದ ಅಂತ್ಯದಲ್ಲಿ 'ಉದ್ದಂಡಕವಿ ಭಾಳನೇತ್ರಂ ಸುಕವಿಜನ ಮಿತ್ರಂ ಜನ್ನಯ್ಯನ ಕವಿತೆ'ಯೆಂದು ಬಂದಿದೆ. ಆದ್ದರಿಂದ ಈ ಬಿರುದುಗಳು ಜನ್ನನಿಗೆ ಚನ್ನರಾಯಪಟ್ಟಣದ ಶಾಸನದ ರಚನೆಯ ನಂತರ ದೊರೆತಿದೆಯೆಂದು ಹೇಳಬಹುದು. ಚನ್ನರಾಯಪಟ್ಟಣದ ತಾಮ್ರಶಾಸನದಲ್ಲಿ ಹೊಯ್ಸಳ ವೀರಬಲ್ಲಾಳನ ಮಹಾಪ್ರಧಾನನೂ ಶ್ರೀಕರಣಹೆಗ್ಗಡೆಯಾದ ಮಾಚಣನು ಕೇಶವಪುರವೆಂಬ ಆನೆಗನಕೆರೆಯೆಂಬ ಅಗ್ರಹಾರವನ್ನು ಶ್ರೀಮತ್ ಪ್ರಸನ್ನ ಕೇಶವದೇವರ ಆರಾಧಕರಾದ ವಿವಿಧ ಗೋತ್ರದ ಮಹಾಜನರಿಗೆ ಶ್ರೀವೀರಬಲ್ಲಾಳದೇವರ ಶ್ರೀಹಸ್ತದಿಂದ ಧಾರೆಯೆರಿಸಿ ಕೊಡಿಸಿದ ವಿಚಾರವಿದೆ.

ತರೀಕೆರೆಯ ಅಮೃತಾಪುರದ ಶಾಸನವು ೧೧೯ ಪಂಕ್ತಿಗಳನ್ನು ಒಳಗೊಂಡ ಒಂದು ಪುಟ್ಟ ಚಂಪೂಕಾವ್ಯ. ಈ ಶಾಸನದಲ್ಲಿ ಜನ್ನಕವಿಯು ಅಮಿತ ದಂಡನಾಥನು ಬೆಳ್ವಲದೇಶದ ಗದಗಿನಲ್ಲಿ ತಟಾಕವನ್ನು ನಿರ್ಮಿಸಿದ ವಿಚಾರವಿದೆ. ತರೀಕೆರೆಯ ಮತ್ತೊಂದು ಶಾಸನದಲ್ಲಿ ಕವಿಯು ನಾಗಗವುಂಡನ ಮತ್ತು ಕೇತಗವುಂಡನ ಪರಾಕ್ರಮಗಳನ್ನು ಬಣ್ಣಿಸಿದ್ದಾನೆ.

ಜನ್ನನು ರಚಿಸಿರುವ ಶಾಸನಗಳನ್ನು ಅವಲೋಕಿಸಿದಾಗ ಅವನು ಹಂತ ಹಂತವಾಗಿ ಉತ್ತಮ ಕವಿಯಾಗಿ ರೂಪುಗೊಂಡು ಮುಂದೆ ಕನ್ನಡ ಸಾಹಿತ್ಯಕ್ಕೆ ಅನಂತನಾಥಪುರಾಣ ಮತ್ತು

ಯಶೋಧರಚರಿತೆಯಂತಹ ಕೃತಿಗಳನ್ನು ನೀಡಲು ಸಮರ್ಥನಾದನೆಂದು ಹೇಳಬಹುದು. ಜನ್ನನ ಕವಿತಾ ಸಾಮರ್ಥ್ಯವು ಆತನು ರಚಿಸಿರುವ ಶಾಸನಗಳಲ್ಲಿ ವ್ಯಕ್ತವಾಗಿದೆ. ಖ್ಯಾತಕರ್ನಾಟಕ ವೃತ್ತಗಳ ಜೊತೆಗೆ ಈತನು ಆರ್ಯಾಗೀತಿ, ಶ್ಲೋಕ ಮೊದಲಾದ ಪ್ರಕಾರಗಳನ್ನು ಬಳಸಿದ್ದಾನೆ. ಈತನ ಶಾಸನಗಳಲ್ಲಿ ಬಂದಿರುವ ವರಾಹಮೂರ್ತಿಯ ಪ್ರಾರ್ಥನಾ ಶ್ಲೋಕ, ವೀರಬಲ್ಲಾಳನ ಪರಾಕ್ರಮವನ್ನು ಬಣ್ಣಿಸಿರುವ ಪದ್ಯಗಳು, ಮಾಚಿರಾಜನನ್ನು ಬಣ್ಣಿಸಿರುವ ಪದ್ಯಗಳು, ತರೀಕೆರೆಯ ಅಮೃತಾಪುರದ ಶಾಸನದಲ್ಲಿರುವ ಶಿವಪರವಾದ ಪ್ರಾರ್ಥನಾಪದ್ಯ, ಹೊಯ್ಸಳ ಎಱೆಯಂಗನನ್ನು ಹೊಗಳಿರುವ ಪದ್ಯಗಳು, ಹೊಯ್ಸಳ ನರಸಿಂಹನ ಪರಾಕ್ರಮವನ್ನು ಬಣ್ಣಿಸಿರುವ ಪದ್ಯಗಳು ಗಮನಸೆಳೆಯುತ್ತದೆ. ವೀರಬಲ್ಲಾಳನ ದಂಡನಾಥನಾದ ಅಮಿತದಂಡನಾಥನ ಪ್ರಭಾವದಿಂದ ಜನ್ನನು ಹೊಯ್ಸಳರ ಆಶ್ರಯಕ್ಕೆ ಬಂದಿರಲೂಬಹುದು. ಈ ಅಮಿತ ದಂಡನಾಯಕನನ್ನು ಜನ್ನನು ಹಲವಾರು ಪದ್ಯಗಳಲ್ಲಿ ಸೊಗಸಾಗಿ ಬಣ್ಣಿಸಿದ್ದಾನೆ.[೮೯] ಅಂತಹ ಪದ್ಯಗಳಲ್ಲಿ –

**ಸಿರಿಯುಂಟೇ ಪೆಱರ್ಗಿತ್ತು ತೋಱುವುದು ಬಲ್ಪುಂಟೇಮನಂ ಮೆಚ್ಚದಾಂ**
**ತರನುಗ್ರಾಜಿಯೊಳಿಕ್ಕಿ ತೋಱುವುದು ತಾನುಂಡುಟ್ಟು ಚಿರ್ಮ್ಮೆಂದುಕೊಂ**
**ಡಿರೆ ಮಾಣೆಂತಟಬಲ್ಪದಾವಸಿರಿಯೆಂದಾತ್ತಣ್ಮೆ ಕೂರ್ತ್ತಿರ್ತ್ತುಮ**
**ಚ್ಚರಿಪಂಗರ್ತ್ಥಿಸುವಂಗೆ ಸಲ್ವನಮಿತಂ ದಂಡೇಶದಿಕ್ಕುಂಜರಂ ॥**

ಎಂಬುದನ್ನು ಗಮನಿಸಬಹುದಾಗಿದೆ.

**ಇದು ತಾಂ ಬಲ್ಲಾಳರಾಜಾಭ್ಯುದಯ ಜಯವತಿ ಮಂಗಳಾಚಾರಮೋಮೇ**
**ಣಿದು ಪೂರ್ಣಾಂಭೋನಿಧಾನ ಪ್ರಬಳ ಲಹರಿಕಾಪೂರ ನಿರ್ಘೋಷಮೋಮ**
**ತ್ತಿದು ಹರ್ಷೋತ್ಕರ್ಷ ವರ್ಷಾಂಬುದ ನಿನದಮೋಪೇಳೆಂಬಿನಂ ಭೋಜನೋತ್ಸಾ**
**ಹದಿನೊಪ್ಪುತ್ತಿರ್ಪ್ಪುದೋರಂತಮಿತನ ಮನೆಯೊಳ್ ವಿಪ್ರಕೋಟಿಪ್ರಘೋಷಂ ॥**

ಎಂಬ ಪದ್ಯದ ಮೂಲಕ ಜನ್ನಕವಿಯು ಅಮಿತ ದಂಡನಾಥನ ಗುಣಗಾನವನ್ನು ವಿಪ್ರಕೋಟಿಯು ಮಾಡಿದ ರೀತಿಯನ್ನು ಬಣ್ಣಿಸಿದ್ದಾನೆ. ಒಟ್ಟಿನಲ್ಲಿ ಜನ್ನನು ರಚಿಸಿರುವ ಶಾಸನಗಳನ್ನು ಗಮನಿಸಿದಾಗ ಆರಂಭದಲ್ಲಿ ಶಾಸನಕವಿಯಾಗಿದ್ದ ಜನ್ನನು ತನ್ನ ಬರವಣಿಗೆಯನ್ನು ಪಳಗಿಸಿಕೊಳ್ಳುತ್ತಾ ಮುಂದೆ ಒಬ್ಬ ಪ್ರಮುಖ ಕವಿಯಾಗಿ ರೂಪುಗೊಳ್ಳಲು ಸಾಧ್ಯವಾಯಿತೆನ್ನಬಹುದು. ಒಟ್ಟಾರೆಯಾಗಿ "ಜನ್ನನಿಗೆ ಸಹಜವಾದ ವರ್ಣನಾಚಾತುರ್ಯ ಮತ್ತು ವ್ಯಕ್ತಿಗಳ ಸ್ವಭಾವ ಚಿತ್ರಣ ಶಾಸನ ಮತ್ತು ಕಾವ್ಯಗಳಲ್ಲಿ ಒಂದೇ ಪ್ರಕಾರದ್ದಿದೆಯೆಂದು ಹೇಳಬಹುದು. ಜನ್ನನು ಮಹಾಕಾವ್ಯಗಳನ್ನು ಬರೆಯಬಲ್ಲನೆಂಬುದರ ಅಂಕುರವು ಅವನು ರಚಿಸಿದ ಶಾಸನಗಳಲ್ಲಿ ಕಂಡುಬರುತ್ತದೆ. ಅವನ ಶಾಸನಗಳು ಲೌಕಿಕವಾಗಿಯೂ,

ಕಾವ್ಯಗಳು ಧರ್ಮಪರವಾಗಿಯೂ ಇವೆ"[೮೨] ಎಂಬ ಅಭಿಪ್ರಾಯವು ಜನ್ನನ ಕವಿತಾ ಸಾಮರ್ಥ್ಯವನ್ನು ಸಮರ್ಥವಾಗಿ ವಿವರಿಸಿದೆ.

**ಬೊಪ್ಪಣಕವಿ (೧೨ನೆಯ ಶತಮಾನ) :–**

ಶ್ರವಣಬೆಳಗೊಳದ ಗೊಮ್ಮಟೇಶ್ವರನ ದ್ವಾರಪಾಲಕ ಬಾಗಿಲ ಎಡಗಡೆಗೆ ನಿಲ್ಲಿಸಿರುವ ಶಾಸನ[೮೩]ವನ್ನು ಬೊಪ್ಪಣ ಕವಿಯು ರಚಿಸಿದ್ದಾನೆ. "ಪೊಡವಿಗೆ ಸಂದ ಗೊಮ್ಮಟಜಿನೇಂದ್ರ ಗುಣಸ್ತವ ಶಾಸನಕ್ಕೆ ಕನ್ನಡಗವಿ ಬಪ್ಪನೆಂದೆನಿಪ ಬೊಪ್ಪಣಪಂಡಿತನೊಲ್ದು ಪೇೞ್ದ" ಎಂಬ ಮಾತಿನಿಂದ 'ಗೊಮ್ಮಟಜಿನೇಂದ್ರ ಗುಣಸ್ತವ'ವೆಂದು ಈ ಶಾಸನವನ್ನು ಕರೆಯಬೇಕಾಗುತ್ತದೆ. ಸಾಮಾನ್ಯವಾಗಿ ಶಾಸನಗಳಲ್ಲಿ ವರ್ಣಿತರಾಗುವವರು ಲೌಕಿಕರು. ಆದರೆ ಬೊಪ್ಪಣನು ಇದರಲ್ಲಿ ಅಲೌಕಿಕ ವ್ಯಕ್ತಿತ್ವವನ್ನು ಹೊಂದಿರುವ ಗೊಮ್ಮಟ ಜಿನ ಅಥವಾ ಬಾಹುಬಲಿಯ ಅಪ್ರತಿಮ ಗುಣವಿಶೇಷ ಮಹಿಮೆಯನ್ನು ಭಕ್ತಿಭಾವ ಸ್ಫುರಿಸಿ ಧನ್ಯತಾಭಾವ ಹೊಂದುವಂತೆ ಮನದುಂಬಿ ಹೊಗಳಿದ್ದಾನೆ.

ಬೊಪ್ಪಣ ಕವಿಗೆ 'ಸುಜನೋತ್ತಂಸ'ನೆಂಬ ಬಿರುದು ಇತ್ತು. ಆದರೆ ಈ ಬಿರುದು ಅವನಲ್ಲಿದ್ದ ವಿನಯವಂತಿಕೆಯ ದ್ಯೋತಕವಾಗಿದೆಯೇ ಹೊರತು, ಅಹಂಕಾರದ ಪ್ರತೀಕವಲ್ಲವೆಂಬುದನ್ನು ಶಾಸನದ –

**ಸುಜನರ್ಬ್ಬ್ವರೆ ತನಗವ**
**ರಜಸ್ರಮುತ್ತಂಸಮಪ್ಪ ಪುರುಳಿಂ ಬೊಪ್ಪಂ**
**ಸುಜನೋತ್ತಂಸನೆನಿಪ್ಪಂ**
**ಸುಜನರ್ಗ್ಗುತ್ತಂಸಮೆಂಬ ಪುರುಳಿಂದೆನಿಸಂ ॥**

ಎಂಬ ಪದ್ಯವು ಬಿಂಬಿಸುತ್ತದೆ. ಅಲ್ಲದೆ ತನ್ನನ್ನು ಸುಕವಿ ಸಮಾಜನುತನೆಂದೂ, ವಿಶದ ಕೀರ್ತಿಯೆಂದು ಕನ್ನಡಗವಿ ಬಪ್ಪನೆಂದೂ ಕರೆದುಕೊಂಡಿದ್ದಾನೆ.

ಈ ಶಾಸನದಲ್ಲಿ ಒಟ್ಟು ೩೨ ಪದ್ಯಗಳಿವೆ. ಅವುಗಳಲ್ಲಿ ೨೭ ಅಕ್ಷರವೃತ್ತಗಳು ಮತ್ತು ಕಂದಗಳು. ಖ್ಯಾತಕರ್ನಾಟಕ ವೃತ್ತಗಳಲ್ಲಿಯೇ ಕವಿಯು ಗುಣಸ್ತವವನ್ನು ನಿರ್ವಹಿಸಿದ್ದಾನೆ. ಕೊನೆಯಲ್ಲಿ ಮಾತ್ರ ಒಂದು ವೃತ್ತ ಹಾಗೂ ಕಂದಪದ್ಯಗಳಲ್ಲಿ ಕವಿಯು ಸ್ವಕೀಯ ವಿಚಾರವನ್ನು ಪ್ರತಿಪಾದಿಸಿದ್ದಾನೆ. ಶಾಸನದ ಮುಖ್ಯಭಾಗವಾದ ೨೭ ವೃತ್ತಗಳಿಂದ ಈ ಸ್ತವವೂ ಒಂದು ನಕ್ಷತ್ರಮಾಲಿಕೆಯೇ ಆಗಿದೆ. 'ಜಿನಮತಿಶಾಸನ' 'ಜಿನಶಾಸನ'ವಾದ ಇದನ್ನು ಆಧ್ಯಾತ್ಮ ಕಳಾಧರನೆನಿಸಿದ ಬಾಳಚಂದ್ರಮುನಿಯ ನಿಯೋಗದಂತೆ ಬೊಪ್ಪಣನು ರಚಿಸಿದನು. ಕವಡಮಯ್ಯನ ದೇವಣನು ಕಡೆಯಿಸಿದನು. ಬಾಗಡೆಯ ರುದ್ರನು ಪ್ರತಿಷ್ಠೆ ಮಾಡಿದನು.

**ಶ್ರೀಗೊಂಮಟಜಿನನಂ ನರ**

**ನಾಗಾಮರದಿತಿಜಖಚರಪತಿಪೂಜಿತನಂ ।**

**ಯೋಗಾಗ್ನಿಹತಸ್ಮರನಂ**

**ಯೋಗಿಧ್ಯೇಯನನಮೇಯನಂಸ್ತುತಿಯಿಸುವೆಂ ॥**

ಎಂಬುದಾಗಿ ಶಾಸನವು ಆರಂಭವಾಗುತ್ತದೆ. ಗೊಮ್ಮಟಜಿನನಾದರೋ ನರ ನಾಗ ಅಮರದಿತಿಜ ಖಚರಪತಿ ಪೂಜಿತನೂ, ಯೋಗಾಗ್ನಿಹತಸ್ಮರನೂ, ಯೋಗಿಧ್ಯೇಯನೂ, ಅಮೇಯನೂ ಆದವನಾಗಿದ್ದಾನೆ. ಈ ಗೊಮ್ಮಟ ಜಿನನನ್ನು ಬಣ್ಣಿಸುವ ಸಂದರ್ಭದಲ್ಲಿ ಕವಿಯು ಸ್ವೋಪಜ್ಞತೆಯನ್ನು ಮೆರೆದಿದ್ದಾನೆ. ಆರಂಭದ ಏಳು ಪದ್ಯಗಳಲ್ಲಿ ಕವಿಯು ಗೊಮ್ಮಟನ ಪೌರಾಣಿಕ ವ್ಯಕ್ತಿತ್ವವನ್ನು ಸಂಕ್ಷಿಪ್ತವಾಗಿ ನಿರೂಪಿಸಿದ್ದಾನೆ. ಗಂಗರಸ ರಾಚಮಲ್ಲನ ಮಂತ್ರಿ ಚಾವುಂಡರಾಯನು ಶ್ರವಣಬೆಳ್ಗೊಳದಲ್ಲಿ ಗೊಮ್ಮಟನ ಶಿಲಾಮೂರ್ತಿಯನ್ನು ಪ್ರತಿಷ್ಠಾಪಿಸಲು ಕಾರಣವಾದ ಸಂದರ್ಭವನ್ನು ವಿವರಿಸಲಾಗಿದೆ. ಭರತ–ಬಾಹುಬಲಿಯ ಪ್ರಸಂಗ, ಭರತನು ಪೌದನಪುರದಲ್ಲಿ ೫೨೫ ಬಿಲ್ಲುಗಳ ಪ್ರಮಾಣದಲ್ಲಿ ಬಾಹುಬಲಿಯ ವಿಗ್ರಹವನ್ನು ನಿರ್ಮಿಸಿದ್ದು, ಕುಕ್ಕಟಸರ್ಪಗಳ ಉಪಟಳವು ಹೆಚ್ಚಾದಾಗ ಪ್ರಾಕೃತರಿಗೆ ಆ ವಿಗ್ರಹದ ದರ್ಶನವು ದುರ್ಲಭವಾದುದು, ಕಡೆಗೆ ಚಾವುಂಡರಾಯನು ಜನರಿಂದ ಕೇಳಿ ತಿಳಿದಿದ್ದ ಪೌದನಪುರದ ಮೂರ್ತಿಯ ದರ್ಶನ ಮಾಡಲು ಬಯಸಿದರೂ ಅದು ಸಾಧ್ಯವಾಗದಿದ್ದಾಗ ತಾನೇ ಶ್ರವಣಬೆಳಗೊಳದಲ್ಲಿ ಪ್ರತಿರೂಪವಾದ ವಿಗ್ರಹವನ್ನು ನಿರ್ಮಿಸುತ್ತಾನೆ. ಇವಿಷ್ಟು ವಿಚಾರವನ್ನು ಕವಿಯು ಸಂಗ್ರಹ ಮತ್ತು ಸಂಕ್ಷಿಪ್ತವಾಗಿ ನಿರೂಪಿಸಿರುವುದು ಆತನ ಶೈಲಿಗೆ ಸಾಕ್ಷಿಯಾಗಿದೆ.

ಗೊಮ್ಮಟನ ಮಹಿಮಾತಿಶಯ ವರ್ಣನೆಯ ಪದ್ಯಗಳು ಎಂಟನೆಯ ಪದ್ಯದಿಂದ ಕಾಣಿಸಿಕೊಳ್ಳುತ್ತದೆ. "ಔನ್ನತ್ಯಮುಂ ನುತ ಸೌಂದರ್ಯಮುಮೂರ್ಜಿತಾತಿಶಯಮುಂ ತನ್ನಲ್ಲಿ ನಿಂದಿರ್ದುವೇಂ ಕ್ಷಿತಿಸಂಪೂಜ್ಯಮೊ ಗೊಮ್ಮಟೇಶ್ವರನ ಜಿನ ಶ್ರೀರೂಪಮಾತ್ಮೋಪಮಂ" ಎಂಬ ಮಾತು ವಿಗ್ರಹದ ಭವ್ಯತೆಯನ್ನು ಪ್ರತಿಬಿಂಬಿಸುತ್ತವೆ. ಇಂತಹ ಭವ್ಯಮೂರ್ತಿಯ

**ಪ್ರತಿವಿದ್ದಂ ಬರೆಯಲ್ಮಯಂ ನೆಱೆಯೆನೋಡಲ್ನಾಕಲೋಕಾಧಿಪಂ**

**ಸ್ತುತಿಗೆಯ್ಯಲ್ಫಣಿನಾಯಕಂ ನೆಱೆಯನೆಂದಂದನ್ಯರಾರಾರ್ಪ್ಪುಂ**

**ಪ್ರತಿವಿದ್ಧಂ ಬರೆಯಲ್ ಸಮನ್ತು ತವೆ ನೋಡಲ್ ಬಣ್ಣಿಸಲ್ ನಿಸ್ಸೀಮಾ**

**ಕೃತಿಯಂ ದಕ್ಷಿಣ ಕುಕ್ಕಟೇಶತನುವಂ ಸಾಶ್ಚರ್ಯಸೌಂದರ್ಯ್ಯಮಂ ॥**

ಎಂಬ ಮಾತಿನ ಮೂಲಕ ಕವಿಯು ಗೊಮ್ಮಟಜಿನನ ಪ್ರತಿರೂಪವನ್ನು ಮಯನಿಂದ ಬರೆಯಲು, ದೇವೇಂದ್ರನಿಂದ ನೋಡಲು, ಆದಿಶೇಷನಿಂದ ಸ್ತುತಿಸಲು ಸಾಧ್ಯವಾಗಲಿಲ್ಲವೆಂದ ಮೇಲೆ ಅನ್ಯರಿಂದ

ಅದು ಸಾಧ್ಯವೇ? ಎಂದು ಪ್ರಶ್ನಿಸುತ್ತಾನೆ. ಇಂತಹ ಭವ್ಯಮೂರ್ತಿಯ ಮೇಲೆ ಪಕ್ಷಿಗಳು ಸಹ ಮರೆತಾದರೂ ಹಾರುವುದಿಲ್ಲ. ಪ್ರಶ್ನೋತ್ತರ ರೂಪದಲ್ಲಿ ಕವಿಯು ಗೊಮ್ಮಟನನ್ನು ಹೀಗೆ ಬಣ್ಣಿಸುತ್ತಾನೆ.

**ಅನುಪಮರೂಪನೇ ಸ್ಮರನುದಗ್ರನೆ ನಿರ್ಜ್ಜಿತಚಕ್ರಿ ಮತ್ತುದಾ**
**ರನೆನೆಱಿಗೆಲ್ದುಮಿತ್ತನಿಖಿಳೋರ್ವ್ವಿಯನತ್ಯಭಿಮಾನಿಯೆ ತಪಃ**
**ಸ್ಥನುಮೆರಡಂಘ್ರಿಯಿತ್ತೆಳೆಯೊಳಿರ್ದ್ದಪುದೆಂಬನನೂನ ಬೋ**
**ಧನೇ ವಿನಿಹತ ಕರ್ಮ್ಮಬಂಧನೆ ಬಾಹುಬಳೀಶನಿದೇನುದಾತ್ತನೋ ॥**

ಎತ್ತರವಾದ ಬೆಟ್ಟದ ಮೇಲೆ ಭವ್ಯಾಕಾರವಾಗಿ ನಿಂತಿರುವ ಮೂರ್ತಿಯು ಉನ್ನತವಾದ ಸಂದೇಶವನ್ನು ಬೀರುತ್ತಿದೆ. ಕವಿಯ ಪ್ರಕಾರ ಅದೇನೆಂದರೆ –

**ಸಮ್ಮದವಾಗಲಾಗ ಕೊಲೆಯುಂ ಪುಸಿಯುಂ ಕಳವುಂ ಪರಾಂಗನಾ**
**ಸಮ್ಮತಿಯುಂಪರಿಗ್ರಹದ ಕಾಂಕ್ಷೆಯುಮೆಂಬಿವಱಿಂದಮಾದೊಡೆಂ**
**ದುಮ್ಮನುಜಂಗಿರತ್ರೆಯ ಪರತ್ರೆಯ ಕೇಡೆನುತುಂ ಮಹೋಚ್ಚದೊ**
**ಳ್ಗೊಮ್ಮಟದೇವನಿರ್ದ್ದು ಸಲೆ ಸಾಱುವವೋಲೆಸಿರ್ದ್ದನೀಕ್ಷಿಸೈ ॥**

ಹಾಗೆಯೇ ಭರತನ ನೆಲದಲ್ಲಿ ತಾನು ತಪಸ್ಸಿನಲ್ಲಿ ನಿಂತ ಮೌನಕಷಾಯ ತನ್ನನ್ನು ಬಾಧಿಸಿತು ಎನ್ನುವಾಗ "ನಿಮ್ಮಡಿಯೆನ್ನ ಧಾತ್ರಿಯೊಳಗಿರ್ದಪುವೆಂಬುದು ವೇಡ ಧಾತ್ರಿತಾಂ । ನಿಮ್ಮದು ವೆಮ್ಮದುಂ ಬಗೆವೊಡಲ್ಲದು ಬೇಱದು" ಎಂಬುದಾಗಿ ಭರತನಾಡಿದ ಮಾತು ಬಾಹುಬಲಿಯ ಮುಂದೆ ಭರತನು ಪರಿಪಕ್ವಗೊಂಡಿರುವನೆಂಬ ಧ್ವನಿಯನ್ನು ಹೊರಡಿಸುತ್ತದೆ. ಇಂತಹ ಉತ್ತಮವಾದ ಕಾವ್ಯಾಂಶದಿಂದ ಕೂಡಿದ ಯಾವ ಲೌಕಿಕವಾದ ಜಂಜಡವನ್ನು ಬಿಂಬಿಸದೆ ಕೇವಲ ವೈರಾಗ್ಯಮೂರ್ತಿಯನ್ನು ಬಣ್ಣಿಸಿರುವ ಶಾಸನವು ವಿರಳಾತಿವಿರಳವೆನ್ನಬಹುದು. ಈ 'ಗೊಮ್ಮಟಜಿನಸ್ತವ' ಶಾಸನವನ್ನು ಕುರಿತು ಹಿರಿಯ ವಿದ್ವಾಂಸರಾದ ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿಯವರು "ಒಂದು ಉದಾತ್ತ ವಸ್ತುವನ್ನು ಲಕ್ಷ್ಯದಲ್ಲಿರಿಸಿಕೊಂಡು ಭಾವಗೀತಾತ್ಮಕವಾದ ಮನೋಧರ್ಮ ಕಾವ್ಯಲಹರಿಗಳಿಂದ ವಿಶಿಷ್ಟಕಲ್ಪನೆಗಳನ್ನು ಆಕೃತಿಗೊಳಿಸಿರುವ ಕಾವ್ಯಗಳಾಗಲೀ ಕಾವ್ಯಭಾಗಗಳಾಗಲೀ ಈ ಹಿಂದೆ ವಿರಳವೇ. ಕಾವ್ಯಾಂತರ್ಗತ ಜಿನಸ್ತುತಿಗಳಲ್ಲಿ ಆ ಮನೋಧರ್ಮವೂ ಲಹರಿಯೂ ಕಾಣುವುದಾದರೂ ಅಲ್ಲಿ ಈ ವ್ಯಾಪ್ತಿ ವಿಸ್ತಾರಗಳೂ ವಿಲಾಸ ವೈಖರಿಗಳೂ ಕಾಣಿಸುವುದಿಲ್ಲ. ಆದರೆ ಅವುಗಳ ಪ್ರಭಾವ ಬೊಪ್ಪಣನ ಮೇಲೆ ಆಗಿದೆ. ಅವುಗಳನ್ನು ಬರೆದ ಕವಿಗಳ ಹಾಗೆಯೇ ಈತನೂ ವಸ್ತುಸ್ತವ ರೂಪಸ್ತವ ಗುಣಸ್ತವಗಳನ್ನು ತನ್ನ 'ಗೊಮ್ಮಟಜಿನಸ್ತುತಿ'ಯಲ್ಲಿ ಮುಪ್ಪುರಿಗೊಳಿಸಿದ್ದಾನೆ. ಕೃತಿಗಿರುವ ಗುಣಸ್ತವವೆಂಬ ಮಾತೂ

ಗಮನಾರ್ಹ" ಎಂದು ವ್ಯಕ್ತಪಡಿಸಿರುವ ಅಭಿಪ್ರಾಯ[೮೪]ವು ಈ ಶಾಸನದ ಮಹತ್ವವನ್ನು ವಿಶದಪಡಿಸುತ್ತದೆ. ಹಾಗೆಯೇ "ಕನ್ನಡನಾಡಿನ ಶಿಲ್ಪಕೃತಿಯೊಂದರಿಂದ ಆವೇಶಗೊಂಡು ರಸಸ್ಯಂದಿಯಾದ ಕಾವ್ಯವನ್ನು ಬರೆಯುವುದರಲ್ಲಿ ಬೊಪ್ಪಣ ಪಂಡಿತನು ಮೊದಲನೆಯವನು"[೮೫] ಎಂಬ ಡಿ.ಎಲ್.ನರಸಿಂಹಾಚಾರ್ಯರ ಮಾತು ಕವಿಯ ಕವಿತಾ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಹಾಗೆಯೇ ಬೊಪ್ಪಣನು "ನಿರ್ವಾಣ ಲಕ್ಷ್ಮೀಪತಿ ನಕ್ಷತ್ರಮಾಲಿಕೆ" ಎಂಬ ಇಪ್ಪತ್ತೆಂಟು ಪದ್ಯಗಳನ್ನು ಒಳಗೊಂಡ ವೈರಾಗ್ಯ ಬೋಧಕವಾದ ಪುಟ್ಟಕೃತಿಯನ್ನು ರಚಿಸಿದ್ದಾನೆ. 'ನೀತಿಕಂದಗಳು' ಎಂಬುದು ಸಹ ಈತನ ಕೃತಿಯಾಗಿದೆ ಎಂಬ ಅಭಿಪ್ರಾಯವಿದೆ. ಶಾಸನ ಕವಿಯಾದರೂ ಬೊಪ್ಪಣನು ಕನ್ನಡ ಸಾಹಿತ್ಯದಲ್ಲಿ ಒಂದು ವಿಶಿಷ್ಟಸ್ಥಾನವನ್ನು ಪಡೆದಿದ್ದಾನೆ.

**ಚಿದಾನಂದಮಲ್ಲಿಕಾರ್ಜುನ (ಕ್ರಿ.ಶ.೧೨೩೪) :-**

ಮಂಡ್ಯ ಜಿಲ್ಲೆಯ ಬಸರಾಳಿನ ಎರಡು ಶಾಸನಗಳನ್ನು ರಚಿಸಿದವನು ಚಿದಾನಂದ ಮಲ್ಲಿಕಾರ್ಜುನ.[೮೬] ಮಂಡ್ಯ ೨೯ ಮತ್ತು ೩೦ ಎರಡೂ ಸೇರಿ ಒಂದು ಸಂಘಟಿತ ಶಾಸನ. ಕ್ರಿ.ಶ.೧೨೩೪ನೆಯ ವರ್ಷದ (ಮಂ.೨೯) ಇಮ್ಮಡಿ ನರಸಿಂಹನ ಶಾಸನ ರಾಜನ ವಂಶಾವಳಿಯನ್ನು ಕೊಡುವುದಲ್ಲದೇ ಆತನ ಪ್ರಧಾನಿ ತೆನೆದಂಕವಂಶದ ಹರಿಹರ ದಂಡನಾಯಕನು ತನ್ನ ತಮ್ಮಂದಿರಾದ ಸಿಂಗೆಯನಾಯಕ ಮತ್ತು ಮಾರೆಯ ನಾಯಕರೊಡಗೂಡಿ ಮಲ್ಲಿಕಾರ್ಜುನ ದೇವಾಲಯವನ್ನು ಕಟ್ಟಿಸಿ ಕೆರೆಯನ್ನು ನಿರ್ಮಿಸಿ ರಾಜನಿಂದ ಭೂಮಿಯನ್ನು ಪಡೆದು ದತ್ತಿಯಾಗಿ ಬಿಟ್ಟಂತೆ ತಿಳಿಸುತ್ತದೆ. ಮೂರು ವರ್ಷದ ನಂತರ ಕ್ರಿ.ಶ.೧೨೩೭ರಲ್ಲಿ ಹೊಯ್ಸಳ ಸೋಮೇಶ್ವರನು ಆಳುತ್ತಿದ್ದಾಗ ಹರಿಹರದಂಡನಾಯಕನು ಬಸುರಿವಾಳಕ್ಕೆ ಸೇರಿದ ಬೇಬಿ ಮತ್ತು ತರಣಿ ಎಂಬ ಎರಡು ಉಪಗ್ರಾಮಗಳನ್ನು ಪೂಜಾರಿಗಳು, ಪರಿಚಾರಕರು, ಬಾಣಸಿಗ, ತೋಟಿಗ, ಮಾಲೆಗಾರ ಮುಂತಾದ ನಿಯೋಗಿಗಳ ಜೀವಿತಕ್ಕಾಗಿ ದತ್ತಿಬಿಟ್ಟನು. ಈ ಎರಡು ವ್ಯವಹಾರಗಳನ್ನು ಕಲ್ಲಿನ ಮೇಲೆ ದಾಖಲು ಮಾಡಿದುದು ಬಹುಶಃ ಒಂದೇ ಕಾಲದಲ್ಲಿ ಎಂದರೆ ಸೋಮೇಶ್ವರನ ಆಳ್ವಿಕೆಯಲ್ಲಿ ಎರಡನೆಯ ದತ್ತಿಯನ್ನು ಬಿಟ್ಟಾಗ ಎಂಬುದು ಸೂಚಿತವಾಗುತ್ತದೆ. ಒಳ್ಳೆಯ ಕಾವ್ಯಮಯವಾದ ಈ ಶಾಸನವನ್ನು 'ಸೂಕ್ತಿಸುಧಾರ್ಣವ'ದ ಕರ್ತೃವೆಂದು ಬೇರೆ ಆಧಾರಗಳಿಂದ ತಿಳಿದುಬಂದಿರುವ ಮಲ್ಲಿಕಾರ್ಜುನನೆಂದು ಗುರುತಿಸಲಾಗಿರುವ, ಪರಮ ಪ್ರಕಾಶ ಯೋಗೀಶ್ವರನ ಮಗ ಕವಿ ಚಿದಾನಂದನು ರಚಿಸಿದನೆನ್ನಲಾಗಿದೆ. ಈ ಶಾಸನದ ಒಂದು ಪದ್ಯ ಸೂಕ್ತಿಸುಧಾರ್ಣವದಲ್ಲಿ ಬಂದಿದೆ.[೮೭]

ಬಸರಾಳಿನ ಶಾಸನದ ಕೊನೆಯಲ್ಲಿರುವ ಕಂದಪದ್ಯದಿಂದ ಈತನು ತನ್ನನ್ನು "ಸತ್ಯವೀಶ್ವರ"ನೆಂದು ಕರೆದುಕೊಂಡಿರುವುದು ತಿಳಿದುಬರುತ್ತದೆ. ಬಸರಾಳು ಶಾಸನದಲ್ಲಿ ಕಂಡುಬರುವ

**ಮುನ್ನಂ ರೂಢಿಯ ಕೃಷ್ಣಕಂಧರನುಮಂ ಮಾಕ್ಕೊಂಡು ಚೋಳೋರ್ವಿಯಂ**

**ನಿನ್ನಂತಾರೊಳಪೊಕ್ಕು ಸಾಧಿಸಿದರಾಪ್ಪಾಂಡ್ಯೇಶನಂ ಶೌರ್ಯ್ಯದಿಂ**

**ಬೆನ್ನಂ ಪತ್ತಿಸೆ ಸೋವಿದೇವಘಟೆಯಂ ಕೈಕೊಂಡ ರಾಚ್ಪೋರ್ವಳನಂ**

**ತನ್ನಾಮ್ನಾಯದ ರಾಜ್ಯದೊಳ್ನೆಲೆಸಿದರ್ಸೋರ್ಮಾನ್ವಯೋರ್ವಿಶ್ವರರ್॥**

ಎಂಬ ಪದ್ಯವು ಸಾಕಷ್ಟು ಚರ್ಚಿತವಾದ ಪದ್ಯವಾಗಿದೆ. ಕಾರಣವೇನೆಂದರೆ ಈ ಪದ್ಯದಲ್ಲಿ ಬಂದಿರುವ 'ಕೃಷ್ಣಕಂದರ'ನು ಸೇವುಣರ ದೊರೆ ಕನ್ನರದೇವನೆಂಬ ಅಭಿಪ್ರಾಯಕ್ಕೆ ಆರಂಭದಲ್ಲಿ ವಿದ್ವಾಂಸರು ಬಂದಿದ್ದರು. ಆದರೆ ಈಗ 'ಕೃಷ್ಣಕನ್ನರ'ನೆಂದರೆ ರಾಷ್ಟ್ರಕೂಟ ದೊರೆ ಮುಮ್ಮಡಿಕೃಷ್ಣನೆಂದು ಅಭಿಪ್ರಾಯ ಪಡಲಾಗಿದೆ. ಪದ್ಯದ ಮೊದಲ ಭಾಗವನ್ನು ಕುರಿತು "ಹಿಂದಿನ ಕಾಲದಲ್ಲಿದ್ದ ಪ್ರಸಿದ್ಧವಾದ ಕೃಷ್ಣಕಂಧರನ ಮೇಲಿನ ಹುರುಡಿನಿಂದ ನಿನ್ನಂತೆ ಯಾರು ಒಳನುಗ್ಗಿ ಚೋಳರ ಪ್ರಾಂತ್ಯವನ್ನು ಸ್ವಾಧೀನಪಡಿಸಿಕೊಂಡರು ಮತ್ತು ಪರಾಕ್ರಮದಿಂದ ಬೆನ್ನಟ್ಟಿ ಪಾಂಡ್ಯದೊರೆಯನ್ನು ಸೋಲಿಸಿದರು?" ಎಂದು ಅಭಿಪ್ರಾಯ ಪಡಬಹುದು[೮೮] ಈ ಪದ್ಯವು ಕ್ರಿ.ಶ.೧೨೩೦ರ ಭೀಮನಹಳ್ಳಿಯ ಶಾಸನದಲ್ಲೂ ಕಂಡುಬಂದಿದೆ.

'ಸೂಕ್ತಿಸುಧಾರ್ಣವ' ಅಥವಾ 'ಕಾವ್ಯಸಾರ' ಈತನ ಕೃತಿಯಾಗಿದೆ. ಈ ಕೃತಿಯ ಪೀಠಿಕಾಭಾಗದಲ್ಲಿ ಹೊಯ್ಸಳ ವಂಶವೃತ್ತಾಂತವನ್ನು ತಿಳಿಸುವ ಕೆಲವು ಪದ್ಯಗಳಿದ್ದು ಅವುಗಳಲ್ಲಿ ಬಸರಾಳು ಶಾಸನದ ಒಂಭತ್ತು ಪದ್ಯಗಳು, ನಾಗಮಂಗಲದ ಭೀಮನಹಳ್ಳಿಯ ಶಾಸನದ ಪದ್ಯಗಳು ಐದು ಮತ್ತು ತರೀಕೆರೆಯ ಶಾಸನದ ಒಂದು ಪದ್ಯವನ್ನು ಕಾಣಬಹುದು.

ಬಸರಾಳಿನ ಎರಡು ಶಾಸನಗಳೂ ಸಹ ಖ್ಯಾತಕರ್ನಾಟಕ ವೃತ್ತಗಳನ್ನು ಒಳಗೊಂಡು ರಚಿತವಾಗಿವೆ. ಸಾಕಷ್ಟು ಬಿಗಿ ಬಂಧದಿಂದ ರಚಿತವಾಗಿರುವ ಈ ಶಾಸನಗಳಲ್ಲಿ ಹೊಯ್ಸಳರ ಪರಾಕ್ರಮ ಹಾಗೂ ವಿಜಯಗಳನ್ನು ವರ್ಣಿಸಿರುವ ಪದ್ಯಗಳೇ ಕಂಡುಬರುತ್ತದೆ. ಬಸರಾಳಿನ ಮಲ್ಲೇಶ್ವರ ದೇವಾಲಯವನ್ನು ಈ ಶಾಸನದ ಪದ್ಯವು ಸೊಗಸಾಗಿ ಬಣ್ಣಿಸಿದೆ. ಶಾಸನದ ಪದ್ಯವು ಹೀಗಿದೆ.

**ಮೊದಲಿಂದಂ ಕಳಶಂಬರಂ ಮೆಱೆವ[ನಾ]ನಾ ಚಿತ್ರಪತ್ರಂಗಳಿಂ**

**ಮುದಮಂಬೀಱುವ ಭಾರತಾದಿ ಕಥೆಯಂ ಮೆಯ್ವೆತ್ತ ಕೂಟಂಗಳಿಂ**

**ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇಳೆಂಬಿನಂವಿಭ್ರಮಾ**

**ಸ್ಪದಮಾಗಿಪ್ಪುದು ಮಲ್ಲಿಕಾರ್ಜುನಮದೇ........ ದೇವಾಲಯಂ ॥**

## ಸೋಮನಾಥ ಪಂಡಿತ (ಕ್ರಿ.ಶ.೧೨೩೪) :-

ಈತನು ಅರಸಿಕೆರೆ ತಾಲ್ಲೂಕಿನ ಹಾರನಹಳ್ಳಿಯಲ್ಲಿರುವ ಕೇಶವದೇವರ ಗುಡಿಯ ಮುಂದಿರುವ ಶಾಸನವನ್ನು[೪೯] ರಚಿಸಿದ್ದಾನೆ. ಈ ಶಾಸನವು ಹೊಯ್ಸಳ ದೊರೆ ಇಮ್ಮಡಿನರಸಿಂಹನ ಕಾಲಕ್ಕೆ ಸೇರಿದ್ದು, ಈ ಶಾಸನದಲ್ಲಿ ಈತನ ಸೋದರಿಯಾದ ಸೋವಲದೇವಿಯು ಸೋಮನಾಥಪುರವೆಂಬ ಹೆಸರಿನ ಹಾರನಹಳ್ಳಿಯಲ್ಲಿ ಅಗ್ರಹಾರವನ್ನು ಸ್ಥಾಪಿಸಿದಳೆಂಬ ವಿಚಾರವಿದೆ. ಸಂಸ್ಕೃತ ಮತ್ತು ಕನ್ನಡ ಭಾಷೆಯಲ್ಲಿ ಶಾಸನವಿದ್ದು ಗದ್ಯಪದ್ಯ ಮಿಶ್ರಿತವಾಗಿದೆ. ಕವಿಯು ಖ್ಯಾತಕರ್ನಾಟಕ ವೃತ್ತಗಳು ಮಾಲಿನೀ ವೃತ್ತ, ಕಂದಪದ್ಯಗಳನ್ನು ಬಳಸಿದ್ದಾನೆ. "ಶ್ರೀಮದಾನಂದ ಬೋಧಪ್ರಭುಗಳ ದಾಸ ಕವಿಕುಳತಿಳಕ ಸುಕವಿ ಕಂಠಾಭರಣ ಸೋಮನಾಥ ಪಂಡಿತರು ಪದ್ಯಂಗಳ ಹೇಳಿದರು" ಎಂಬ ವಾಕ್ಯದಿಂದ ಕವಿಗೆ 'ಕವಿಕುಳತಿಳಕ' ಮತ್ತು 'ಸುಕವಿಕಂಠಾಭರಣ'ನೆಂಬ ಬಿರುದು ಇತ್ತೆಂದು ತಿಳಿದುಬರುತ್ತದೆ. ಹಾಗೂ ಈತನು ಆನಂದಬೋಧ ಮುನಿಯ ಶಿಷ್ಯನೆಂದೂ ಮನವರಿಕೆಯಾಗುತ್ತದೆ.

## ಕಬ್ಬದ ದಾಮೋದರ, ಚೇರೆಯ ಅಲ್ಲಾಳ ಬುಧ (ಕ್ರಿ.ಶ.೧೨೪೯) :-

ಚಿಕ್ಕಮಗಳೂರು ತಾಲ್ಲೂಕಿನ ಅಂಬಳೆಗ್ರಾಮದ ಲೋಕೇಶ್ವರ ದೇವಾಲಯದ ಮುಂದಿರುವ ಶಾಸನವನ್ನು[೫೦] ರಚಿಸಿದವರು ಇವರಿಬ್ಬರು. "ಕವಿಕಬ್ಬದ ದಾಮೋದರ....... ಚಕ್ರೇಶ ಚೇರೆಯಲ್ಲಾಳಬುಧಂ ಸವಿನಯದೆ ಪೇಳ್ದರ್" ಎಂಬ ವಾಕ್ಯದಿಂದ ಶಾಸನವನ್ನು ರಚಿಸಿದವರು ಕಬ್ಬದ ದಾಮೋದರ ಮತ್ತು ಚೇರೆಯ ಅಲ್ಲಾಳಬುಧನೆಂದು ವ್ಯಕ್ತವಾಗುತ್ತದೆ. ಹೊಯ್ಸಳ ದೊರೆ ವೀರಸೋಮೇಶ್ವರನ ಕಾಲಕ್ಕೆ ಈ ಶಾಸನವು ಸೇರಿದೆ. ಸೋಮೇಶ್ವರನ ಪಾದಪದ್ಮೋಪಜೀವಿಯಾದ ಬೆಟ್ಟರಸ ದಣ್ಣಾಯಕರು ತಮ್ಮ ಸಮಸ್ತಾಭ್ಯುದಯಕ್ಕಾಗಿ ಪ್ರತಾಪಪುರವಾದ ಅಮ್ಮೆಳೆಯ ದ್ವಾದಶಪುರದ ಶೇಷಮಹಾಜನಗಳು, ಪಟ್ಟಣಸ್ವಾಮಿ ಸಿರೆಯ ಪದ್ಮಣ್ಣನೊಳಗಾದ ಸಮಸ್ತನಖರಗಳ ಸಮಕ್ಷಮದಲ್ಲಿ ಊರವರನ್ನು ಒಡಂಬಡಿಸಿ ದತ್ತಿ ನೀಡಿದ ವಿಚಾರವನ್ನು ಒಳಗೊಂಡಿದೆ. ಖ್ಯಾತಕರ್ನಾಟಕ ವೃತ್ತಗಳನ್ನು ಕವಿಗಳು ಬಳಸಿದ್ದಾರೆ. ಶಾಸನ ಕವಿಗಳಾದ ಇವರಿಬ್ಬರ ಕಾವ್ಯಶೈಲಿಗೆ ಒಂದು ಉದಾಹರಣೆಯನ್ನು ಗಮನಿಸಬಹುದು. ಬೆಟ್ಟದರಸ ದಣ್ಣಾಯಕರ ತಂದೆ ಕೇಶಿರಾಜವಿಭುವಿನ ಬಣ್ಣನೆ

**ಮುನಿದನೆ ಮೂಱುರಾಯರಿದಿರಾಂತಡೆ ಗೆಲ್ದಪನೀವೆನೆಂದು ಪೂ**
**ಣ್ದನೆ ಜಗತೀತಳಂ ನೆಱೆಯೆ ಬೇಡಿದೊಡಿತ್ತಪನೊಲ್ದು ಕಾ**

ವೆನೆಂದನೆ ಜವನಟ್ಟಿಕೊಂದಪೆನೆನುತ್ತಿರೆ ಕಾದಪನೆಂದೊಡಿಂ ನದಾ
ರ್ತನಗೆಣೆವೈರಿವಾರಣ ವಿದಾರಣಕೇಸರಿಕೇಶಿರಾಜನೊಳು ॥

## ಈಶ್ವರಾರ್ಯ (ಕ್ರಿ.ಶ.೧೨೭೪) :-

ದಾವಣಗೆರೆ ಜಿಲ್ಲೆ ಹರಿಹರ ತಾಲ್ಲೂಕಿನ ಭಾನುವಳ್ಳಿಯ ಶಿಲಾಶಾಸನವನ್ನು ಈಶ್ವರಾರ್ಯ ಕವಿಯು ರಚಿಸಿದ್ದಾನೆ.[೧] ಈ ಶಾಸನವು ಯಾದವರ(ಸೇಉಣರು) ರಾಮಚಂದ್ರರಾಯನವರೆಗೆ ವಂಶಾವಳಿಯನ್ನು ನಿರೂಪಿಸಿದೆ. ಈತನ ಮಹಾಪ್ರಧಾನನಾದ ತಿಪ್ಪರಸನು ಆ ಊರಿನ ಸುಂಕವನ್ನು ಬಿಟ್ಟುಕೊಟ್ಟಿರುವುದೇ ಈ ಶಾಸನದ ವಸ್ತುವಾಗಿದೆ. ದೇವಗಿರಿಯ ಸಿಂಘಣ, ರಾಮಚಂದ್ರ ಮತ್ತು ಆತನ ಮಹಾಪ್ರಧಾನ ತಿಪ್ಪರಸರ ಪ್ರಶಂಸೆಯನ್ನೊಳಗೊಂಡ ಕಂದಪದ್ಯಗಳು ಕವಿಯ ಕಲ್ಪನೆ ಮತ್ತು ಉತ್ಪ್ರೇಕ್ಷೆಗಳಿಂದ ಕೂಡಿ ಸಹಜಸುಂದರವಾಗಿದೆ. ಸೇಉಣ ದೊರೆ ರಾಮಚಂದ್ರನನ್ನು ಕಂದಪದ್ಯವೊಂದು

**ಕಾಮಂ ಖ್ಯಾತಂ ಚೆಲ್ವಿಂ**
**ಭೀಮಂಭುಜಬಲದಿನಮೃತತನುವಿಂ ಸೋಮಂ**
**ಕಾಮಂ ಭೀಮಂ ಸೋಮಂ**
**ರಾಮಮಹೀಪತಿಗೆ ತದ್ಗುಣಂಗಳನಿಪಂ ॥**

ಎಂದು ಬಣ್ಣಿಸಿದೆ. ಕಾಮನು ಚೆಲುವಿಗೆ, ಭೀಮನು ಪರಾಕ್ರಮಕ್ಕೆ, ಸೋಮನು ಶೀತಲತೆಗೆ ಸಮಾನರು. ಆದರೆ ಈ ರಾಮಮಹೀಪನಾದರೋ ಆ ಮೂರೂ ಗುಣಗಳನ್ನು ತನ್ನಲ್ಲಿ ಹೊಂದಿದ್ದಾನೆಂದು ಶಾಸನ ಕವಿಯು ಬಣ್ಣಿಸಿದ್ದಾನೆ.

## ಅಕ್ಷರದ ಗೋಪಣ್ಣ (ಕ್ರಿ.ಶ.೧೩೮೦) :-

ಚಾಮರಾಜನಗರದ ಹೊಮ್ಮಗ್ರಾಮದ ಶಾಸನವನ್ನು[೨] 'ಅಕ್ಷಾರದ ಗೋಪಂಣನ ಬರಹ' ಎಂಬ ಶಾಸನದ ಕಡೆಯ ವಾಕ್ಯದಿಂದ ಬರೆದವನು ಗೋಪಂಣನೆಂದು ಪರಿಗಣಿಸಬಹುದಾಗಿದೆ. ಖ್ಯಾತಕರ್ನಾಟಕ ವೃತ್ತಗಳು ಹಾಗೂ ಕಂದಪದ್ಯಗಳಿಂದ ಕೂಡಿದ ಈ ಶಾಸನವು ಇಮ್ಮಡಿ ಹರಿಹರನ ಕಾಲಕ್ಕೆ ಸೇರಿದೆ. ಈ ಶಾಸನದಲ್ಲಿ 'ಸರ್ವಜ್ಞವಿಷ್ಣುಪುರ' ಅಥವಾ 'ಅಕಳಂಕ ಚತುರ್ವೇದಿಮಂಗಲ' ವೆಂದು ಪ್ರಸಿದ್ಧವಾದ ಹೊಮ್ಮ ಗ್ರಾಮದ ಮೂಲಸ್ಥಾನೇಶ್ವರ ದೇವರಿಗೆ ಇಲ್ಲಿಯ ಮಹಾಜನರು ದತ್ತಿ ನೀಡಿದ ವಿವರಗಳಿವೆ. ಇಮ್ಮಡಿ ಹರಿಹರನ ಮಂತ್ರಿಯಾದ ಕಂಪಮಂತ್ರಿಯನ್ನು ಈ ಶಾಸನವು ಬಣ್ಣಿಸಿದೆ. ಹಾಗೆಯೇ ಶಾಸನದಲ್ಲಿ ಕವಿಯು ಹೊಮ್ಮಗ್ರಾಮವನ್ನು

ತುಂಗತರಂಗ ಕಾಂಚನನದೀತಟಸಂಭವನಾಳಿಕೇರನಾ
ರಂಗಸುಪೂಗಚೂತವರಚಂಪಕಬಂಧುರ ನಂದನಾಳಿಯಿಂ
ಪಿಂಗದ ನೀಲನೀರರುಹಪಂಕಜಸೌರಭ ಸಾರಲೋಲಸ
ದ್ಭೃಂಗದಿನೊಪ್ಪುಗುಂ ಭರದೆ ಹೊಂಮಮೆನಿಪ್ಪಪುರಂ ನಿರಂತರಂ ॥

ಎಂಬುದಾಗಿ ಬಣ್ಣಿಸಿದ್ದಾನೆ.

**ನೃಸಿಂಹ (ಕ್ರಿ.ಶ.೧೩೮೧) :-**

ಮದ್ದೂರು ತಾಲ್ಲೂಕು ಅರುವನಹಳ್ಳಿಯ ವೀರಗಲ್ಲುಗುಡಿಯ ಶಾಸನವನ್ನು[೯೩] ಈತನು ರಚಿಸಿದ್ದಾನೆ. ಬುಕ್ಕರಾಯನ ಮಗನಾದ ವೀರಹರಿಹರರಾಯನು ಆಳ್ವಿಕೆ ನಡೆಸುತ್ತಿದ್ದಾಗ ಬಡವರ ಕುಲದ ಕೀರ್ತಿದೇವನ ಮಗನಾದ ಭಟ್ಟರ ಬಾಚಿಯಪ್ಪನು 'ಪರಮಪದ'ವನ್ನು ಹೊಂದಿದ ವಿಚಾರವನ್ನು ಒಳಗೊಂಡಿದೆ. ಶಾಸನಕವಿಯು ಬಾಚಿಯಪ್ಪನನ್ನು 'ಪರಬಲಭೀಮ, ಪುಣ್ಯಜಿನಧಾಮ, ದಯಾಂಬುಧಿಸೋಮ, ವರಭುಜದಂಡ, ಸದ್ಗುಣಕರಂಡ'ನೆಂದು ಬಣ್ಣಿಸಿದ್ದಾನೆ.

**ಧರಣೋಜ : (ಕ್ರಿ.ಶ.೧೪೨೪) :-**

ಹರಿಹರದ ಹರಿಹರೇಶ್ವರ ದೇವಾಲಯದಲ್ಲಿರುವ ಎರಡು ಶಾಸನಗಳನ್ನು[೯೪] ಈತನು ರಚಿಸಿದ್ದು ಒಂದು ಕನ್ನಡ ಮತ್ತೊಂದು ಸಂಸ್ಕೃತ ಭಾಷೆಯಲ್ಲಿದೆ. ಈ ಶಾಸನಗಳ ಕವಿ ಈತನೇ ಎಂಬುದು

**ಹರಿಹರದೇವರ ವರದಿಂ**
**ವರಗದ್ಯಂ ಪದ್ಯ[ಂಗ]ಳವಂ ಶಾಸನದೊಳ್**
**ಬರೆದಂ ಮನುಕುಲರತ್ನಾ**
**ಕರಚಂದ್ರಂ ಮಾಚಿದೇವಸುತ ಧರಣೋಜಂ ॥**
**ಹರಿಹರದೇವರಿಗಂ ಭೂ**
**ಸುರತತಿಗಂ ಮುದ್ದಮಂತ್ರಿ ಧಾರೆಯನೆಱೆದಾ**
**ವರದಂಡ ನಾಥಪುರಕಂ**
**ಧರಣೋಜಂ ಬರೆದಮಱೆಶಿಲಾಶಾಸನಮಂ ।**

ಎಂಬ ಪದ್ಯಗಳಿಂದ ವೇದ್ಯವಾಗುತ್ತದೆ. ಕನ್ನಡದಲ್ಲಿ ಬರೆದಿರುವ ಶಾಸನ ವಸ್ತುವು ವಿಶಿಷ್ಟವಾಗಿದೆ. ದೇವರಾಜ ಕ್ಷಿತಿಪನ ಬೆಸದಿಂದ ಬುಳ್ಳರಾಜನು ಹರಿದ್ರಾನದಿಗೆ ಕಟ್ಟೆಯೊಂದನ್ನು ಕಟ್ಟಿಸಿದ್ದನು. ಅದು

ಭಂಗವಾದಾಗ ಮತ್ತೊಮ್ಮೆ ಬುಳ್ಳರಾಜನು ಚಾಮನೃಪಾಲನ ಅನುಮತಿಯನ್ನು ಪಡೆದು ಮತ್ತೆ ಕಟ್ಟೆಯನ್ನು ಕಟ್ಟಿದ ವಿಚಾರವಿದೆ. ಶಾಸನದಲ್ಲಿ ಚಾಮನೃಪಾಲ, ಬುಳ್ಳರಾಜನನ್ನು ಕವಿಯು ಮನಸಾರೆ ಹಾಡಿ ಹೊಗಳಿದ್ದಾನೆ. ಬುಳ್ಳಚಮೂಪನನ್ನು ಬಣ್ಣಿಸಿರುವ ಪದ್ಯ

**ಮುದದೆ ಬುಧಜನರಭೀಷ್ಟ**

**ಪ್ರದನೆಗಳ್ದಂ ರಸೆಯೊಳೆಮ್ಮ ಬುಳ್ಳಚಮೂಪಂ ।**

**ಮೃದು ವಚನಯುತ ದರಸ್ಮಿತ**

**ವದನಂ ಸುಖಸದನನಂಗನಾಜನಮದನಂ ॥**

ಕ್ರಿ.ಶ. ೪೫೦ ರಿಂದ ೧೬೦೦ರವರೆಗಿನ ಅವಧಿಯಲ್ಲಿ ಕನ್ನಡದಲ್ಲಿ ಶಾಸನಗಳನ್ನು ರಚಿಸಿದ ಕೆಲವು ಜನ ಕವಿಗಳ ವಿಚಾರವನ್ನು ಈವರೆಗೆ ಪ್ರಸ್ತಾಪಿಸಲಾಗಿದೆ. ಬಹುಪಾಲು ಶಾಸನಗಳಲ್ಲಿ ಶಾಸನಗಳನ್ನು ರಚಿಸಿದ ಕವಿಗಳ ಉಲ್ಲೇಖವು ಕಂಡುಬಂದಿರುವ ಕಾರಣದಿಂದ ಕಾಲಾನುಕ್ರಮದಲ್ಲಿ ಆಯಾ ಕವಿಗಳ ಪರಿಚಯವನ್ನು ನೀಡಲು ಸಾಧ್ಯವಾಗಿದೆ. ಈ ಕವಿಗಳಲ್ಲದೇ ಇನ್ನೂ ಹಲವಾರು ಜನ ಕವಿಗಳು ಸಣ್ಣಪುಟ್ಟ ಶಾಸನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ತ್ರುಟಿತವಾಗಿರುವ ಸಾಧ್ಯತೆಯೂ ಕಂಡುಬರುತ್ತದೆ. ಆ ಕವಿಗಳ ವಿವರಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

| ಶಾಸನಕವಿ | ಸ್ಥಳ ಮತ್ತು ಕಾಲ | ಶಾಸನಸಂಖ್ಯೆ[೫] |
|---|---|---|
| ೧. ಕಬ್ಬದ ನಾಗಮಯ್ಯ | ಕುರುಬೂರು, ಕ್ರಿ.ಶ.೯೬೦ | E.C.X. 43 & 44 |
| ೨. ಬಲದೇವ | ಅಂಕಣನಾಥಪುರ, ಕ್ರಿ.ಶ.೯೫೦ | E.C.XV.Hn.66 |
| ೩. ಶ್ರೀಧರಯ್ಯ | ಬಸ್ತಿಹಳ್ಳಿ, ಕ್ರಿ.ಶ.೯೫೩ | E.C.V.BL.123 |
| ೪. ಅರ್ಹದ್ಭಕ್ತ | ಕಡೂರು, ಕ್ರಿ.ಶ.೯೭೧ | E.C.VI.Kd -1. |
| ೫. ಕವಿರಾಜವಲ್ಲಭ ಗೋವಿಂದ | ಹೊಸನಗರ, ಕ್ರಿ.ಶ.೧೦೫೩ | M.A.R.1931,74 |
| ೬. ಕಾಮರಾಜ[೬] | ಶಿಕಾರಿಪುರ, ಕ್ರಿ.ಶ.೧೦೭೧ | E.C.VII.129 |
| ೭. ಹರಿಯಣ್ಣ | ಕುಪ್ಪಟೂರು, ಕ್ರಿ.ಶ.೧೦೭೫ | E.C.VIII. Sb 262 |
| ೮. ಮಾದಿರಾಜ | ದಾವಣಗೆರೆ, ಕ್ರಿ.ಶ.೧೧೨೩ | E.C.XI.Dg. 2,3 |
| ೯. ಮಲ್ಲಿನಾಥ | ಹಂತೂರು, ಕ್ರಿ.ಶ.೧೧೨೯ | E.C.VI.Md.22 |

| | | |
|---|---|---|
| ೧೦. ಸೋಮೇಶ್ವರಭಟ್ಟ | ನವಿಲೆಗ್ರಾಮ, ಕ್ರಿ.ಶ.೧೧೩೯ | ಕರ್ನಾಟಕ ಕವಿಚರಿತೆ ೧, ೧೯೬೧, ಪುಟ-೫೨೩ |
| ೧೧. ಮಧುಸೂದನದೇವ | ದಾವಣಗೆರೆ, ಕ್ರಿ.ಶ.೧೧೪೭ | E.C.XI. Dg.41 |
| ೧೨. ನಾಗರಾಶಿಪಂಡಿತ | ಚಿಕ್ಕಕಡಲೂರು, ಕ್ರಿ.ಶ.೧೧೫೬ | E.C.V.Pt ii Hn.85 |
| ೧೩. ಬಿಂದಯ್ಯ | ಕೊಪ್ಪಗ್ರಾಮ, ಕ್ರಿ.ಶ.೧೧೬೦ | E.C.IV.Ng.67 |
| ೧೪. ಹಂಸದೇವ | ಸೀಗೆಬಾಗಿ, ಕ್ರಿ.ಶ.೧೧೬೧ | E.C.XII.Ck.21 |
| ೧೫. ಸೇನುಬೋವಸಿಂಗಣ್ಣ | ಬೈರಾಪುರ, ಕ್ರಿ.ಶ.೧೧೬೪ | ಕರ್ನಾಟಕ ಕವಿಚರಿತೆ-೧, ಅನುಬಂಧ -೧, ೧೯೬೫, ಪುಟ-೨೭ |
| ೧೬. ಶಾರದಿನಾಥಪಂಡಿತ | ಕಲ್ಲಂಗೆರೆ, ಕ್ರಿ.ಶ.೧೧೭೪ | E.C.V.Pt.ii. Ak-112 |
| ೧೭. ಕಲ್ಯಾಣಶಕ್ತಿ ಪಂಡಿತ | ಗಂಗನರಸಿ, ಕ್ರಿ.ಶ.೧೧೭೭ | E.C.XI.Dg.86 & 87 |
| ೧೮. ಜೊಂಬಣ್ಣಪಂಡಿತ | ತರೀಕೆರೆ, ಕ್ರಿ.ಶ.೧೧೮೪ | E.C.V.Tk.20 |
| ೧೯. ಜಾವಣಿಪಂಡಿತ | ಚನ್ನರಾಯಪಟ್ಟಣ,ಕ್ರಿ.ಶ.೧೧೮೪ | E.CV.Cn.152 |
| ೨೦. ತ್ರಿಭುವನಶಕ್ತಿ | ಬೂದಿಹಾಳು, ಕ್ರಿ.ಶ.೧೧೯೦ | E.C.XII.Ck.9 |
| ೨೧. ಬಾಚಯ್ಯ | ಮಾರೇನಹಳ್ಳಿ, ಕ್ರಿ.ಶ.೧೨೦೦ | E.C.V.Bl.140 |
| ೨೨. ಕಲ್ಲಯ್ಯ | ಗಂಜಿಕಟ್ಟೆ, ಕ್ರಿ.ಶ.೧೨೦೫ | E.C.XI.Cd.23 |
| ೨೩. ಬಾಚ | ಕುಪ್ಪಗಡ್ಡೆ, ಕ್ರಿ.ಶ.೧೨೧೬ | M.A.R.1926, P-73 |
| ೨೪. ಸವಣಬಲ್ಲರದೇವ | ಅರಸೀಕೆರೆ, ಕ್ರಿ.ಶ.೧೨೨೦ | E.C.V.Ak.201 |
| ೨೫. ನಾಗದೇವ | ಕೆರೆಸಂತೆ, ಕ್ರಿ.ಶ.೧೨೨೪ | E.C.VI.Kd.65 |
| ೨೬. ಬಾಚಣ್ಣ | ಕಣಿಕಟ್ಟೆ, ಕ್ರಿ.ಶ.೧೨೨೭ | E.C.V.Ak.47 |
| ೨೭. ಶ್ರೀವಿಜಯರ್ ದಶಕೀರ್ತಿದೇವರ್ | ನಲ್ಲುದುರೆ, ಕ್ರಿ.ಶ.೧೨೩೩ | E.C.VII.Ci.52 |
| ೨೮. ಕವಿಕಂದನನಂದ | ಕೇದಗಿಗೆರೆ, ಕ್ರಿ.ಶ.೧೨೭೫ | E.C.VI.Kd.143 |
| ೨೯. ಕವಿರಾಜಸಂಕಣ್ಣ | ಕಲ್ಲೂರು, ಕ್ರಿ.ಶ.೧೨೮೭ | E.C.VIII.Sb.294 |

| | | |
|---|---|---|
| ೩೦. ಪದ್ಮ | ಕಸಬಹಳೆಯಬೀಡು | |
| | ಕ್ರಿ.ಶ.೧೨೯೫ | E.C.XV.Bl.322 |
| ೩೧. ಬೊಮ್ಮಯರಾಯ | ಮತ್ತಿಕೊಪ್ಪ, ಕ್ರಿ.ಶ.೧೩೦೩ | E.C.VIII.Sa.101 |
| ೩೨. ಸುಧಾಕರದೇವ | ಸಂಪಿಗೆ, ಕ್ರಿ.ಶ.೧೩೩೧ | E.C.XII.Gb.30 |
| ೩೩. ದೇವಣ್ಣ | ಚಿತ್ರದುರ್ಗ, ೧೩೫೫ | E.C.XICd . 2 ಮತ್ತು 3 |
| ೩೪. ವಜ್ರ | ಕುಬಟೂರು, ೧೩೯೩ | E.C.VIII Sb.264 |
| ೩೫. ಬಾಯಣಾಚಾರ್ಯ | ಹರಿಹರ, ೧೪೧೦ | E.C.XI Dg.23 |
| ೩೬. ಬಲ್ಲೆಹದ ಮಲ್ಲ | ಸಂಪಿಗೆ, ೧೪೭೦ | E.C.XIIGb 29 |
| ೩೭. ದೇವರಸ | ಮೂಡಬಿದಿರೆ, ೧೪೭೧ | S.I.I.VII No.198 |
| ೩೮. ವರ್ಧಮಾನಮುನೀಂದ್ರ | ಹುಂಚ, ೧೫೩೦ | E.C.VIII No.46 |

ಶಾಸನಗಳಲ್ಲಿ ಹೆಸರಿನ ಉಲ್ಲೇಖವಿರುವ ಕವಿಗಳ ಪರಿಚಯವನ್ನು ಈವರೆಗೆ ನೀಡಲಾಗಿದೆ. ಈ ಕವಿಗಳಲ್ಲದೆ ಇನ್ನೂ ಅನೇಕ ಕವಿಗಳು ಶಾಸನರಚನೆಯಲ್ಲಿ ತೊಡಗಿದ್ದರೆನ್ನಲು ಅವಕಾಶವಿದೆ. ಅಂತಹ ಕವಿಗಳ ಹೆಸರು ಶಾಸನಗಳಲ್ಲಿ ಕಂಡು ಬರದಿರುವುದು ಒಂದು ಕೊರತೆಯೆನ್ನಬಹುದು. ಕನ್ನಡದ ಪ್ರಸಿದ್ಧ ಕವಿಯಾದ ಪೊನ್ನನು ಆತಕೂರು ಶಾಸನ ಮತ್ತು ಮಾವನೂರಿನ ಶಾಸನವನ್ನು ಹರಿಹರ ಕವಿಯು ಬರೆದಿರಬಹುದೆಂಬ ಊಹೆಯನ್ನು ವಿದ್ವಾಂಸರು ಮಾಡಿರುತ್ತಾರೆ.[೯೭]

ವಿಜಯನಗರದ ಅರಸರ ಕಾಲಕ್ಕೆ ಶಾಸನಗಳ ರಚನೆಯಲ್ಲಿ ಸಾಕಷ್ಟು ಬದಲಾವಣೆಗಳು ಉಂಟಾದವು. ಈ ಕಾಲದಲ್ಲಿ ಶಾಸನರಚನೆಯನ್ನು ಮಾಡುವುದರಲ್ಲಿ 'ವೃತ್ತಿಪರ'ರಾದವರು ತೊಡಗಿದರೆನ್ನಲು ಸಾಧ್ಯವಿದೆ. ಇಂತಹವರಿಗೆ ರಾಜಾಶ್ರಯವೂ ಇತ್ತು. ವಿಜಯನಗರದ ಅರಸನಾದ ಕೃಷ್ಣದೇವರಾಯನ ಕಾಲದ ಹಲವಾರು ಶಾಸನಗಳ ಕರ್ತೃ ಸಭಾಪತಿಯೆಂಬುವನು ಕ್ರಿ.ಶ.೧೫೧೩, ೧೫೧೭ ಮತ್ತು ೧೫೨೧ರ (ನಂಜನಗೂಡು ೯೬೮, ಗುಂಡ್ಲುಪೇಟೆ ೧, ಗುಂಡ್ಲುಪೇಟೆ ೧೫೦) ಶಾಸನಗಳನ್ನು ರಚಿಸಿದ್ದಾನೆ. ಈ ಎಲ್ಲಾ ಶಾಸನಗಳೂ ತಾಮ್ರಶಾಸನಗಳಾಗಿದ್ದು, ಸಂಸ್ಕೃತ ಭಾಷೆಯಲ್ಲಿವೆ. ಈತನು ಕೃಷ್ಣದೇವರಾಯನ ಆಸ್ಥಾನಕವಿಯಾಗಿದ್ದು, ಅಚ್ಯುತರಾಯನ ಕಾಲದಲ್ಲೂ ಇದೇ ಹುದ್ದೆಯಲ್ಲಿ ಮುಂದುವರಿದಂತೆ ಕಂಡುಬರುತ್ತದೆ. ಸಲಕರಾಜನ ಮಗ ತಿರುಮಲ ಹಾಕಿಸಿದ ನಂಜನಗೂಡಿನ ೧೧೫ನೆಯ ಕರ್ತೃವೂ ಸಭಾಪತಿಯೇ, ಅದರ ಕಾಲ ಕ್ರಿ.ಶ.೧೫೪೩ ಹೆಸರನ್ನು ಆಧರಿಸಿ ಈತನನ್ನು ಮೇಲೆ ಹೇಳಿದ ಸಭಾಪತಿ ಎಂದು ಗುರುತಿಸಿದರೆ ಈ ಶಾಸನಕವಿ ಮೂರು

ದಶಕಗಳಿಗೂ ಹೆಚ್ಚು ಕಾಲ ಅಧಿಕಾರದಲ್ಲಿದ್ದನೆನ್ನಲಾಗಿದೆ. ನಂಜನಗೂಡಿನ ೧೧೧ನೆಯ ಮತ್ತೊಂದು ತಾಮ್ರಶಾಸನವು ಅರವೀಡು ವಂಶದ ಶ್ರೀರಂಗರಾಯನ ಕಾಲದ್ದಾಗಿದ್ದು ಆ ಶಾಸನದ ಕರ್ತೃವನ್ನು ಸಭಾಪತಿಯ ಮಗನಾದ ಕವಿಶಾಸನ ಸ್ವಯಂಭು ಎಂದು ವರ್ಣಿಸಲಾಗಿದೆ. ಶಾಸನ ಕಾಲ ಕ್ರಿ.ಶ.೧೫೭೫.

**೩.೫ : ಶಾಸನೋಕ್ತ ಕವಿಗಳು :-**

ಕೆಲವು ಶಾಸನಗಳಲ್ಲಿ ಸಾಹಿತ್ಯ ಕೃತಿಗಳನ್ನು ರಚಿಸಿರಬಹುದಾದ ಕವಿಗಳ ಹೆಸರುಗಳು ಉಲ್ಲೇಖಿಗೊಂಡಿವೆ. ಅಂತಹ ಕವಿಗಳ ವಿಚಾರಗಳನ್ನು ಗಮನಿಸಬಹುದು.

**ಮಹಾಪ್ರಭು ಕೇಶಿರಾಜ (ಕ್ರಿ.ಶ.೧೧೨೪) :-**

ಶಿವಮೊಗ್ಗ ಜಿಲ್ಲೆಯ ಚನ್ನಗಿರಿಯಲ್ಲಿರುವ ಚಾಲುಕ್ಯದೊರೆ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯದ ಆಳ್ವಿಕೆಯ ಕಾಲಕ್ಕೆ ಸೇರಿದ ಶಾಸನವೊಂದರಲ್ಲಿ[೯೮] ಈತನನ್ನು ಉಲ್ಲೇಖಿಸಲಾಗಿದೆ. ಈತನಿಗೆ 'ವಿಬುಧಜನವನಜವನಕಳಹಂಸಂ' 'ಸರಸ್ವತೀಕಂಠಾವತಂಸಂ' ಎಂಬ ಬಿರುದುಗಳಿದ್ದವು ಎಂಬುದಾಗಿ ತಿಳಿದುಬರುತ್ತದೆ. ಆದ್ದರಿಂದ ಈತನೊಬ್ಬ ಕವಿಯಾಗಿದ್ದಿರಬಹುದೆಂದು ಕವಿಚರಿತೆಕಾರರ ಅಭಿಪ್ರಾಯವಾಗಿದೆ.[೯೯]

**ಕವಿಕಾಳಿದಾಸ (ಕ್ರಿ.ಶ.೧೧೪೭) :-**

ಚಿಕ್ಕಮಗಳೂರು ಜಿಲ್ಲೆಯ ಕಸಬಾ ತಾಲ್ಲೂಕಿನ ಮರಲೆಗ್ರಾಮದ ಸಿದ್ಧೇಶ್ವರ ದೇವಾಲಯದ ಮುಂದೆ ನಿಂತಿರುವ ಶಾಸನದ[೧೦೦] ಕಡೆಯ ಭಾಗದಲ್ಲಿ ಈ ಕವಿಯ ಹೆಸರು "ಪೆಂಪನೆ ತಾಳಲ್ ಕವಿಕಾಳಿದಾಸನೇ ವಲಂ ಧನ್ಯಂ ಪೆಱರ್ ಧನ್ಯರೇ" ಎಂದು ಪದ್ಯಗಳಲ್ಲಿ ಬಂದಿದೆ. ಈ ಶಾಸನವು ಹೊಯ್ಸಳರ ದೊರೆ ನಾರಸಿಂಹದೇವನ ಕಾಲಕ್ಕೆ ಸೇರಿದುದಾಗಿದೆ.

**ಸುಕರ ಸುಕವಿ ಕಂಠಾಭರಣ (ಕ್ರಿ.ಶ.೧೧೪೭) :-**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಉದ್ರಿ (ಉದ್ದರೆ) ಗ್ರಾಮದ ಕಲ್ಲೇಶ್ವರ ದೇವಾಲಯದ ಬಲಭಾಗದಲ್ಲಿರುವ ಒಂದು ಶಾಸನದಲ್ಲಿ[೧೦೧] ಈತನ ಉಲ್ಲೇಖವಿದೆ. ಶಾಸನವು ಅಪೂರ್ಣವಾಗಿದೆ. "ಕನ್ನಡ ಕವಿಗಳಾದ ನೇಮಿಚಂದ್ರನಿಗೆ (ಕ್ರಿ.ಶ.೧೧೭೦) ಸೋಮನಾಥ ಪಂಡಿತನಿಗೂ (ಕ್ರಿ.ಶ.೧೨೩೪) 'ಸುಕವಿಕಂಠಾಭರಣ' ಎಂಬ ಬಿರುದು ಇದೆ. ಈತನನ್ನು ಅನುಸರಿಸಿ

ಅವರಿಬ್ಬರೂ ಈ ಬಿರುದನ್ನು ಇಟ್ಟುಕೊಂಡಿರಲೂ ಬಹುದು. ಎರಡನೆಯ ನಾಗವರ್ಮನಿಗೆ (ಕ್ರಿ.ಶ.ಸು.೧೧೪೫) 'ಕವಿಕಂಠಾಭರಣ' ಎಂಬ ಬಿರುದುಂಟು ಎಂಬುದು ಕವಿಚರಿತೆಕಾರರ ಅಭಿಪ್ರಾಯವಾಗಿದೆ.[೧೦೨]

**ಶಂಕರವಿಬುಧ (ಕ್ರಿ.ಶ.೧೧೫೦) :-**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಕೊಡಕಣಿ ಗ್ರಾಮದ ಸಿದ್ಧರಾಮೇಶ್ವರ ದೇವಾಲಯದ ಬಳಿಯಿರುವ ಶಾಂತರಸ ಬೊಮ್ಮರಸದೇವನ ಕಾಲಕ್ಕೆ ಸೇರಿದ ಗದ್ಯಾತ್ಮಕವಾದ ವೀರಗಲ್ಲೊಂದರ ಕೊನೆಯಲ್ಲಿ "ಕಡುಜಾಣಂ ಸತ್ಕವೀಂದ್ರ ಶಂಕರವಿಬುಧಂ" ಎಂಬ ಉಲ್ಲೇಖವಿದೆ.[೧೦೩] ಆದರೆ ಕವಿಯ ಸ್ವವಿಷಯ ಹಾಗೂ ಬರೆದ ಕೃತಿಗಳ ಬಗೆಗೆ ಏನೂ ತಿಳಿದುಬಂದಿಲ್ಲ.

**ಬೂಚಿರಾಜ (ಕ್ರಿ.ಶ.೧೧೭೩) :-**

ಹಾಸನ ತಾಲ್ಲೂಕು ಸಾಲಿಗ್ರಾಮ ಹೋಬಳಿ ಮರ್ಕುಲಿಗ್ರಾಮದ ಕೋಟೆಯೊಳಗಣ ಬಸ್ತಿಗುಡಿಯಲ್ಲಿರುವ ಶಿಲಾಶಾಸನದಲ್ಲಿ ಬೂಚರಸನ ಹೆಸರು ಕಂಡುಬಂದಿದೆ'[೧೦೪] ಹೊಯ್ಸಳ ವೀರಬಲ್ಲಾಳನ ಕಾಲದ ಈ ಶಾಸನದಲ್ಲಿ ವೀರಬಲ್ಲಾಳನವರೆಗೆ ಹೊಯ್ಸಳ ವಂಶಾವಳಿ, ಮಂತ್ರಿ ಬೂಚಿರಾಜನ ಸ್ತುತಿ, ಆತನ ಕಾವ್ಯಶಕ್ತಿ, ಕನ್ನಡ ಸಂಸ್ಕೃತ ಭಾಷೆಗಳಲ್ಲಿ ಆತನಿಗಿದ್ದ ಪಾಂಡಿತ್ಯವನ್ನು ಬಣ್ಣಿಸಲಾಗಿದೆ. ಶಾಸನದ ಭಾಗ ಸಾಕಷ್ಟು ತ್ರುಟಿತವಾಗಿದೆ. ಹೊಯ್ಸಳ ಬಲ್ಲಾಳನ ಪಟ್ಟಾಭಿಷೇಕ ಸಂದರ್ಭದಲ್ಲಿ ಮಹಾಪ್ರಧಾನ ಬೂಚಿರಾಜನು ಸೀಗೇವಾಡಿಯಲ್ಲಿ ತ್ರಿಕೂಟ ಜಿನಾಲಯವನ್ನು ನಿರ್ಮಿಸಿ ದಾನದತ್ತಿಗಳನ್ನು ನೀಡಿದ ವಿವರಗಳಿವೆ. ಶಾಸನದ ತ್ರುಟಿತವಾಗಿರುವ ಭಾಗದಲ್ಲಿ ಬೂಚರಸನ ಬಗ್ಗೆ "ಚತುರ್ವ್ವಿಧಪಾಂಡಿತ್ಯ ಮಂಡಿತ, ವಾಚಕವಾಚಸ್ಪತಿ, ಕನ್ನಡದೊಳ್ ಸಂಸ್ಕೃತದೊಳ್ ಚೆನ್ನಂ ...... ಉಭಯಕವಿತೆಯಿಂ ಬೂಚಣನೊಳ್" ಎಂಬ ಮಾತುಗಳಿವೆ.

**ರೇಚಣ ಮಂತ್ರಿ (ಕ್ರಿ.ಶ.ಸು.೧೧೭೪) :-**

ಹಾಸನ ಜಿಲ್ಲೆಯ ಅರಸಿಕೆರೆ ತಾಲ್ಲೂಕು ಕಣಕಟ್ಟೆ ಹೋಬಳಿ ಹಿರೀಕಲ್ಲು ಬೆಟ್ಟದ ಮೇಲಿನ ನಾಗಪುರಿಯ ಶಂಕರೇಶ್ವರ ದೇವಾಲಯದ ಬಳಿ ನೆಟ್ಟಿರುವ ಶಿಲಾಶಾಸನದಲ್ಲಿ ಈತನ ಹೆಸರು ಕಂಡುಬರುತ್ತದೆ.[೧೦೫] ರೇಚಣಮಂತ್ರಿಯನ್ನು ಇಲ್ಲಿ 'ಸಾಹಿತ್ಯವಿದ್ಯಾಧರ'ನೆಂದು ಬಣ್ಣಿಸಿದೆ. ಪ್ರಸ್ತುತ ಶಾಸನದಲ್ಲಿ ರೇಚಣಮಂತ್ರಿಯ ಸ್ತುತಿಯು ಹೀಗೆ ಬಂದಿದೆ.

**ಕುಲಮಂ ಪೇಟಿಳ್ವೊಡೆ ವಾಜಿವಂಶತಿಲಕಂ ಸನ್ಮಂತ್ರಮಂತ್ರಿತ್ವದೊಳ್**
**ಹಲರುಂ ಜೀಯೆನೆದೇವಮಂತ್ರಿಯೊಲವಂ ಸಲ್ಲೀಲೆಯಿಂ ತೋಱುವಂ**
**ಚಲದಿಂದಾಂತರನಿಕ್ಕಿಮೆಟ್ಟಿಪಡೆವಂ ಸತ್ಕೀರ್ತಿಯಂ ಧಾತ್ರಿಯೊಳ್**
**ನಲವಿಂ ರೇಚಣಮಂತ್ರಿಯಾರ್ಗಮಧಿಕಂ ಸಾಹಿತ್ಯವಿದ್ಯಾಧರಂ ॥**

**ಸಿಂಗದೇವ (ಕ್ರಿ.ಶ.೧೧೯೮) :-**

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಉದ್ರಿಗ್ರಾಮದಲ್ಲಿನ ಶಾಸನದಲ್ಲಿ[೧೦೬] ಈತನನ್ನು 'ಸರಸೋದಾರ ಕವಿತ್ವತತ್ವ ಚತುರಾಸ್ಯಂ ಸಿಂಗದೇವಂ' ಎಂದು ಬಣ್ಣಿಸಿದೆ. ಈತನ ತಂದೆ ದಸವಮರಸ, ತಾಯಿ ಎಕ್ಕಲದೇವಮಹೀಪಾಲನ ಸೋದರಿಯಾದ ಚಟ್ಟಲದೇವಿ ಅಣ್ಣಂದಿರು ಎಱಗ ಮತ್ತು ಕೇಶವ. ಪತ್ನಿ ಲಕ್ಷ್ಮಾದೇವಿ ಮತ್ತು ಮಗ ಎಕ್ಕಲಭೂಮಿಪಾಲ. ಈತ ಬನವಾಸಿನಾಡಿಗೆ ಸೇರಿದ ಜಿಡ್ಡುಳಿಗೆ ಪ್ರದೇಶವನ್ನು ಆಳುತ್ತಿದ್ದ ಉತ್ತರ ಗಂಗಮನೆತನಕ್ಕೆ ಸೇರಿದವನು. ಈತನು ರಚಿಸಿರುವ ಕೃತಿಗಳು ಯಾವುದೆಂದು ತಿಳಿದುಬಂದಿಲ್ಲ.

**ಬ್ರಹ್ಮದೇವ (ಕ್ರಿ.ಶ.೧೩೨೦) :-**

ಶಿವಮೊಗ್ಗ ತಾಲ್ಲೂಕು ಕೂಡ್ಲಿಗ್ರಾಮದ ರಾಮೇಶ್ವರ ದೇವಾಲಯದ ಒಂದು ಶಾಸನದಲ್ಲಿ[೧೦೭] 'ಬರೆಸಿದಾತ ಕವೀಶ್ವರ ಬ್ರಹ್ಮದೇವ' ಎಂಬ ಮಾತು ಬಂದಿದೆ. ಆ ಕಾರಣದಿಂದ ಈತನು ಕವಿಯಾಗಿದ್ದಿರಬೇಕೆಂದು ಭಾವಿಸಬಹುದು. ಶಾಸನದ ಬಹುಭಾಗವು ತ್ರುಟಿತವಾಗಿದ್ದು, ಉಳಿದ ಭಾಗದಲ್ಲಿರುವ ಶಾಸನದ ಆಧಾರದ ಮೇಲೆ ಈತನೊಬ್ಬ ಸಾಧಾರಣ ಕವಿಯಾಗಿರಬಹುದೆಂದು ಭಾವಿಸಬಹುದು.

**ವಾದಿವಿದ್ಯಾನಂದ (ಸು.೧೫೩೦) :-**

ಕ್ರಿ.ಶ.೧೬ನೆಯ ಶತಮಾನಕ್ಕೆ ಸೇರಿರಬಹುದಾದ ಶಾಸನೋಕ್ತ ಕವಿ. ಕೃಷ್ಣದೇವರಾಯನ ಕಾಲದಲ್ಲಿದ್ದನೆಂದು ತಿಳಿದುಬಂದಿರುವುದರಿಂದ ಈತನ ಕಾಲ ಕ್ರಿ.ಶ.ಸು.೧೫೩೦ ಎನ್ನಬಹುದು. ಶಿವಮೊಗ್ಗ ಜಿಲ್ಲೆ ನಗರ ತಾಲ್ಲೂಕು ಹುಂಚದ ಶಾಸನವೊಂದರಲ್ಲಿ[೧೦೮] ವರ್ಧಮಾನಮುನೀಂದ್ರನು ಈತನನ್ನು ಸ್ತುತಿಸಿದ್ದಾನೆ.

**ಅರ್ಣವವೇಷ್ಟಿತ ವಸುಧಾ**
**ಕರ್ಣೋಪಮಗುರು ನೃಪಾಲನಾಸ್ಥಾನದೊಳೇಂ**

**ಕರ್ಣಾಟ ದಕ್ಷ ಕೃತಿಯಂ**

**ವರ್ಣಿಸಿ ಜಸವಡೆದ ವಾದಿ ವಿದ್ಯಾನಂದಾ ॥**

ಎಂದಿರುವುದರಿಂದ ಈತನು ಕನ್ನಡದಲ್ಲಿ ಕೃತಿ ರಚಿಸಿರಬಹುದೆಂದು ಭಾವಿಸಬಹುದು. ಆದರೆ ಕೃತಿ ಯಾವುದೆಂದು ತಿಳಿದುಬರುವುದಿಲ್ಲ. ವಿದ್ಯಾನಂದನು ಉಪನ್ಯಾಸ ನೀಡುವುದರಲ್ಲಿ ಸಿದ್ಧಹಸ್ತನು. ಈತನ ವಾಕ್ಪ್ರೌಢಿಮೆಯು ವಿಬುಧರ ಮನಸ್ಸಿನಲ್ಲಿ ಸದಾಕಾಲ ರಂಜಿಸುತ್ತಿತ್ತು. ಈತನು ತನ್ನ ವಾದದಿಂದ ಹಲವು ರಾಜರ ಆಸ್ಥಾನದಲ್ಲಿ ಜಯಭೇರಿ ಬಾರಿಸಿದ್ದ.

ಶಾಸನ ರಚನೆಯಲ್ಲಿ ತೊಡಗಿಸಿಕೊಂಡಿದ್ದ ಹಲವಾರು ಶಾಸನಕವಿಗಳು ಶಾಸನ ಸಾಹಿತ್ಯವನ್ನು ಸಮೃದ್ಧಗೊಳಿಸಲು ಕಾರಣರಾದರು ಎಂಬುದು ವೇದ್ಯವಾಗುತ್ತದೆ. ಹಾಗೆಯೇ ಶಾಸನೋಕ್ತ ಕವಿಗಳ ಕೃತಿಗಳು ಲಬ್ಧವಾಗದಿರುವುದೂ ಸಹ ಸಾಹಿತ್ಯಕ್ಷೇತ್ರಕ್ಕೆ ಉಂಟಾದ ನಷ್ಟವೆನ್ನಬಹುದು.

## ಅಡಿ ಟಿಪ್ಪಣಿಗಳು

೧. ಡಾ.ಎಂ.ಎಂ.ಕಲಬುರ್ಗಿ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೭೩, ಪುಟ-೧೨೮

ಅ) ಮಳವಳ್ಳಿ – ಚುಟುವಂಶದ ಸಾತಕಣ್ಣಿ

ಆ) ಮಳವಳ್ಳಿ – ಕದಂಬ ವಂಶದ ಶಿವಸ್ಕಂದವರ್ಮ

ಇ) ಮ್ಯಾಕದೋಣಿ – ಸಾತವಾಹನ ಸಿರಿಪುಳುಮಾಯಿ

ಈ) ಬನವಾಸಿ – ಸಾತಶಿವಖದ ನಾಗಸಿರಿ (ಚುಟು)

ಉ) ಚಂದ್ರವಳ್ಳಿ – ಕದಂಬ ಮಯೂರವರ್ಮ

ಊ) ಹಿರೇಹಡಗಲಿ – ಪಲ್ಲವ ಶಿವಸ್ಕಂದವರ್ಮ

೨. ಪೂರ್ವೋಕ್ತ, ಪುಟ-೧೨೮

೩. E.C. ( R ) IX ಬೇಲೂರು – ೨೩೬ (ರಿ ೧೯೩೬-೧೬) ಹಲ್ಮಿಡಿ ಕ್ರಿ.ಶ.೪೫೦

ಜಯತಿ ಶ್ರೀಪರಿಷ್ವಜ್ಗಶ್ಯಾರ್ಜ್ಗ[ವ್ಯಾ]ನತಿರಚ್ಯುತಃ

ದಾನವಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾನ್ತು]ಸುದರ್ಶನಃ

೪. ಡಾ.ಎಂ.ಬಿ.ನೇಗಿನಹಾಳ : ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ, ೧೯೯೮, ಪುಟ-೧೬

೫.ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೪ ಸಂಪುಟ-೧, ಪುಟ-೬೮

೬. ಪೂರ್ವೋಕ್ತ : ಪುಟ-೬೯

೭. E.C. ( R ) IX ಬೇಲೂರು ೨೩೬ (ರಿ ೧೯೩೬-೧೬) ಹಲ್ಮಿಡಿ ಕ್ರಿ.ಶ.೪೫೦

೮. E.C. VIII. ಸೊರಬ ೧೦ ಮಾವಳಿ ಕ್ರಿ.ಶ.ಸು ೮೦೦

೯. E.C. ( R ) IV ಚಾಮರಾಜನಗರ ೩೫೨ (IV.ಚಾ.ನ.೧೪೧) ಕೆರೆಹಳ್ಳಿ ಕ್ರಿ.ಶ. ೯ – ೧೦ನೇ ಶತಮಾನ

೧೦.E.C. IX ಬೆಂಗಳೂರು ೮೩ ಬೇಗೂರು ಕ್ರಿ.ಶ.೮೯೦

೧೧.E.C. ( R ) IX ಬೇಲೂರು ೩೮೮ (Vಬೇ ೧೨೩) ಬಸ್ತಿಹಳ್ಳಿ ಕ್ರಿ.ಶ.೯೫೪

೧೨.E.C. ( R ) VII ಮದ್ದೂರು ೪೨ (IIIಮಂ ೪೧) ಆತಕೂರು ಕ್ರಿ.ಶ.೯೫೦

೧೩. E.C. ( R ) II ಶ್ರವಣಬೆಳಗೊಳ ೬೪(೫೯) ಚಿಕ್ಕಬೆಟ್ಟ ಕ್ರಿ.ಶ.೧೦ನೆಯ ಶತಮಾನ

೧೪. E.C. ( R ) II ಶ್ರವಣಬೆಳಗೊಳ ೧೬೩ (೧೩೩)ಚಿಕ್ಕಬೆಟ್ಟ ಕ್ರಿ.ಶ.೯೮೨

೧೫. E.C. ( R ) II ಶ್ರವಣಬೆಳಗೊಳ ೪೭೬ (೩೪೫) ಭಂಡಾರಬಸದಿ ಕ್ರಿ.ಶ.೧೧೫೯

೧೬. E.C. ( R ) II ಶ್ರವಣಬೆಳಗೊಳ ೪೪೪ (೩೨೭) ಅಕ್ಕನಬಸದಿ ಕ್ರಿ.ಶ.೧೧೮೧

೧೭. E.C. ( R ) VII ನಾಗಮಂಗಲ ೭೨ (IV.ನಾಮಂ೫೨)ಅಳೀಸಂದ್ರ ಕ್ರಿ.ಶ.೧೧೮೩

೧೮. E.C. ( R ) II ಶ್ರವಣಬೆಳಗೊಳ ೧೭೬ (೧೪೩)ಚಿಕ್ಕಬೆಟ್ಟ ಕ್ರಿ.ಶ.೧೧೨೩

೧೯. E.C. ( R ) VIII ಹಾಸನ ೧೫೮ (ರಿ ೧೯೪೦ – ೧) ಶಾಂತಿಗ್ರಾಮ

೨೦. E.C. ( R ) XIII ಶಿವಮೊಗ್ಗ ೭ (VIIಶಿವ ೯೭)ಆಲಹಳ್ಳಿ ಕ್ರಿ.ಶ.೧೧೧೨

೨೧. E.C. ( R ) IX ಬೇಲೂರು ೩೮೯ (Vಬೇ ೧೨೪)ಬಸ್ತಿಹಳ್ಳಿ ಕ್ರಿ.ಶ.೧೧೩೩

೨೨. ಬಿಜಾಪುರ ಜಿಲ್ಲೆ ಬಾಗೇವಾಡಿ : ತಾಲ್ಲೂಕು ಹೂವಿನಹಿಪ್ಪರಗಿ ಗ್ರಾಮದ ಶಾಸನವೊಂದು

(S.I.I. Vol xi-1 ಮತ್ತು Bombay Karnataka Inscription No.8)

ಗೋಲೆಯಭಟ್ಟನಿಗೆ ಸಿಪ್ಪರಿಗೆ ಗ್ರಾಮವನ್ನು ಸರ್ವಬಾಧಾ ಪರಿಹಾರವಾಗಿ ನೀಡಿದ ವಿಚಾರವನ್ನು ಒಳಗೊಂಡಿದೆ. ರಾಷ್ಟ್ರಕೂಟದೊರೆ ನೃಪತುಂಗನ ಕಾಲಕ್ಕೆ ಸೇರಿದ (ಕ್ರಿ.ಶ.೮೬೨) ಈ ಶಾಸನದಲ್ಲಿ ಪ್ರಧಾನ ಭಾಗವೆಲ್ಲ ಕನ್ನಡದಲ್ಲಿದ್ದು, ಗ್ರಾಮದ ಮೇರೆಗಳ ವಿವರಗಳು ಸಂಸ್ಕೃತದಲ್ಲಿರುವುದು ವಿಶೇಷವಾಗಿದೆ. ಈ ರೀತಿಯಾದ ಕ್ರಮವಿಪರ್ಯಯವು ಬಹುಶಃ ಕನ್ನಡ ಭಾಷೆಯನ್ನು ಸಂಸ್ಕೃತದಷ್ಟೇ ಪ್ರಮುಖವಾದದ್ದು ಎಂದು ಪರಿಗಣಿಸುವ ಪ್ರಕ್ರಿಯೆಗೆ ನಿದರ್ಶನವೆಂದು ತೋರಿಸಲು ಮಾಡಿರುವ ಪ್ರಯತ್ನವಾಗಿದೆಯೆನ್ನಬಹುದು.

ತಿ.ತಾ.ಶರ್ಮ : ಶಾಸನಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ, ಕನ್ನಡ ನುಡಿ ಪತ್ರಿಕೆ, ಸಂಪುಟ–೯, ಸಂಚಿಕೆ–೩೦ : ೧೯೬೭, ಪುಟ–೯ರಿಂದ ೧೨. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೩. E.C. ( R ) II ಶ್ರವಣಬೆಳಗೊಳ ೭೧ (೬೪) ಚಿಕ್ಕಬೆಟ್ಟ ಕ್ರಿ.ಶ.೧೧೬೩

೨೪. E.C. ( R ) II ಶ್ರವಣಬೆಳಗೊಳ ೭೩(೬೬) ಚಿಕ್ಕಬೆಟ್ಟ ಕ್ರಿ.ಶ.೧೧೭೬

೨೫. E.C. ( R ) II ಶ್ರವಣಬೆಳಗೊಳ ೭೯(೬೯) ಚಿಕ್ಕಬೆಟ್ಟ ೧೨ನೆ ಶತಮಾನ

೨೬. E.C. ( R ) II ಶ್ರವಣಬೆಳಗೊಳ ೮೧(೭೧, ೭೨) ಚಿಕ್ಕಬೆಟ್ಟ ೧೨ನೆ ಶತಮಾನ

೨೭. E.C. ( R ) VI ಕೃಷ್ಣರಾಜಪೇಟೆ ೩೯(IVಕೃಪೇ–೬೩)ಗೋವಿಂದನಹಳ್ಳಿ ಕ್ರಿ.ಶ.೧೨೩೬

೨೮. E.C. ( R ) II ಶ್ರವಣಬೆಳಗೊಳ ೪೭೬(೩೪೫) ಭಂಡಾರಬಸದಿ ಕ್ರಿ.ಶ.೧೧೫೯

೨೯. E.C. ( R ) II ಶ್ರವಣಬೆಳಗೊಳ ೪೪೪(೩೨೭) ಕ್ರಿ.ಶ.೧೧೮೧

೩೦. E.C. ( R ) IX ಬೇಲೂರು ೨೪೪(Vಬೇ೧೪೦)ಮಾರೇನಹಳ್ಳಿ ಕ್ರಿ.ಶ.೧೧೮೯

೩೧. E.C. ( R ) II ಶ್ರವಣಬೆಳಗೊಳ ೬೪(೫೯) ಚಿಕ್ಕಬೆಟ್ಟ, ಕ್ರಿ.ಶ.೧೦ನೆಯ ಶತಮಾನ

೩೨. E.C. ( R ) II ಶ್ರವಣಬೆಳಗೊಳ ೧೬೩(೧೩೩) ಚಿಕ್ಕಬೆಟ್ಟ, ಕ್ರಿ.ಶ.೯೮೨

೩೩. E.C. ( R ) IX ಬೇಲೂರು ೩೦೦ (Vಬೇ೧೧೨) ಹಳೇಬೀಡು ಕ್ರಿ.ಶ.೧೨೨೦

೩೪. E.C. ( R ) III ಹೆಗ್ಗಡದೇವನಕೋಟೆ ೫೯(ಎಕ, IVಹೆಕೋ.೧೭) ಬೆಳತೂರು ಕ್ರಿ.ಶ.೧೦೩೩

೩೫. E.C. ( R ) II ಶ್ರವಣಬೆಳಗೊಳ ೩೩೬ (೨೩೪)ದೊಡ್ಡಬೆಟ್ಟ ಕ್ರಿ.ಶ.೧೨ನೆಯ ಶತಮಾನ

೩೬. ಶ್ರೀದೇಸಾಯಿ ಪಾಂಡುರಂಗರಾಯರು : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ – ಸಂಚಿಕೆ–೪೨, ಸಂ–೧, ಜೂನ್–೧೯೫೭, ಪುಟ–೧೯ ಮತ್ತು ೨೦ ಲೇಖನ : ಕರ್ನಾಟಕದ ಶಾಸನ ಸಂಸತ್ತು

೩೭. ಪೂರ್ವೋಕ್ತ, ಪುಟ–೧೯ ಮತ್ತು ೨೦

೩೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಸಂಪುಟ–೪ ೧೯೭೭, ಪುಟ–೭೦೭

೩೯. E.C. ( R ) II ಶ್ರವಣಬೆಳಗೊಳ ೪೭೫ (೩೪೪) ಭಂಡಾರಬಸದಿ ಕ್ರಿ.ಶ.೧೩೬೮

೪೦. ಡಾ॥ದೇವರಕೊಂಡಾರೆಡ್ಡಿ : ಲಿಪಿಯ ಹುಟ್ಟು ಮತ್ತು ಬೆಳವಣಿಗೆ, ಕನ್ನಡ ಪುಸ್ತಕ ಪ್ರಾಧಿಕಾರ, ಪಂಪಮಹಾಕವಿರಸ್ತೆ, ಚಾಮರಾಜಪೇಟೆ, ಬೆಂಗಳೂರು. ೨೦೦೨ ಪುಟ–೧೮೬

೪೧. E.C. ( R )IV ಚಾಮರಾಜನಗರ೧೪೮ (IV ಚಾನ ೬೪) ಹೊಮ್ಮ ಕ್ರಿ.ಶ.೧೩೮೦

೪೨. S.I.I. VII ಕಾರ್ಕಳ ೧೯೬, ಮೂಡಬಿದರೆ ಕ್ರಿ.ಶ.೧೪೨೬

೪೩. S.I.I. VII ಕಾರ್ಕಳ ೨೦೨ ಮೂಡಬಿದಿರೆ ಕ್ರಿ.ಶ.೧೪೩೦

೪೪. S.I.I. VII ಕಾರ್ಕಳ ೨೦೭ ಮೂಡಬಿದಿರೆ ೧೫ನೇ ಶತಮಾನ

೪೫. ಎಚ್.ಎಂ.ಶಂಕರನಾರಾಯಣರಾವ್ : ಶ್ರೀಹರಿಹರದೇವಾಲಯ, ಶಾರದಾಮಂದಿರ, ಮೈಸೂರು–೪, ೧೯೮೨, ಪುಟ–೩೬೮ರಿಂದ ೩೭೨ರವರೆಗೆ

೪೬. ಪೂರ್ವೋಕ್ತ : ಪುಟ–೩೪೯ ರಿಂದ ೩೫೮ರವರೆಗೆ

೪೭. E.C. ( R ) IX ಬೇಲೂರು ೧೫೯ (V ಬೇ.೭೮) ಕ್ರಿ.ಶ.೧೫೨೪

೪೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ಸಂಪುಟ–೧ ೧೯೭೪, ಪುಟ–೭೧೧

೪೯. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ–೨ : ನರೇಶ್ ಅಂಡ್ ಕಂಪನಿ, ಬೆಂಗಳೂರು. ಮೊದಲ ಮುದ್ರಣ–೧೯೮೮. ಪುಟ–೨೦೪

೫೦. E.C. VIII- II ಸೊರಬ ೨೬೨ ಕುಪ್ಪಟೂರು ಕ್ರಿ.ಶ.೧೦೭೭

E.C. VII- I ಹೊನ್ನಾಳಿ ೨೫ ಚಿಕ್ಕಯೆರಬಳ್ಳಿ ಕ್ರಿ.ಶ.೧೨೦೮

೫೧. E.C. VIII- II ಸೊರಬ ೧೮೪ ಕುಪ್ಪಗಡ್ಡೆ ಕ್ರಿ.ಶ.೧೦೩೩

S.I.I. XI - I ಕೊಪ್ಪ ೧೧೬ ಕ್ರಿ.ಶ.೧೦೭೫

E.C. V II ಚನ್ನರಾಯಪಟ್ಟಣ ೧೭೯ ಆನೇಕೆರೆ ಕ್ರಿ.ಶ.೧೧೯೦

೫೨. E.C. VII -I ಶಿವಮೊಗ್ಗ ೧೦ ತಟ್ಟೆಕೆರೆ ಕ್ರಿ.ಶ.೧೦೮೫

೫೩. E.C. VIII- II ಸೊರಬ೧೭೯ ಕುಪ್ಪಗಡ್ಡೆ ಕ್ರಿ.ಶ.೧೧೮೯

೫೪. ಡಾ.ಎಂ.ಬಿ.ನೇಗಿನಹಾಳ : ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ–೧೯೯೮. ಪುಟ–೭೨ ಮತ್ತು ೭೩

೫೫. . E.C. VIIಶಿಕಾರಿಪುರ ೨೧೯ ಬಂದಳಿಕೆ,

೫೬. E.C. XI ಚಿತ್ರದುರ್ಗ ೭೬ಇಸಾಮುದ್ರ ಕ್ರಿ.ಶ.೯೩೭

೫೭. E.C. VIII ಸೊರಬ ೧೮೪ ಕುಪ್ಪಗಡ್ಡೆ,

೫೮. ಆರ್. ನರಸಿಂಹಾಚಾರ್ಯ – ಕರ್ನಾಟಕ ಕವಿಚರಿತೆ, ಪ್ರಥಮ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೫, ಪುಟ–೯೬

೫೯. E.C. ( R ) III ಹೆಗ್ಗಡದೇವನಕೋಟೆ ೬೦(ಎಕ. VI ಹೆಕೋ೧೮) ಬೆಳತೂರು ಕ್ರಿ.ಶ.೧೦೫೭

೬೦. ಡಾ.ಎಂ.ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೯, ಪುಟ–೩೧೭

೬೧. ಕನ್ನಡ ಸಾಹಿತ್ಯ ಚರಿತ್ರೆ : ೩ನೆಯ ಸಂಪುಟ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೭೬, ಪುಟ–೨೨೪

(ತಿ.ತಾ.ಶರ್ಮ : ವೀರಗಲ್ಲು – ಮಾಸ್ತಿಗಲ್ಲು "ಸಂಭಾವನೆ" ಬೆಂಗಳೂರು. ೧೯೪೧, ಪುಟ–೧೬೭)

೬೨. E.C. VIII ಹೊಸನಗರ ೫೭ ಮತ್ತು ೫೮ಹುಮ್ಮಚ

೬೩. E.C. ( R ) XIII ಶಿವಮೊಗ್ಗ ೫೯( VIIಶಿವ ೧೦) ತಟ್ಟೆಕೆರೆ, ಕ್ರಿ.ಶ.೧೦೮೫

೬೪. ಆರ್. ನರಸಿಂಹಾಚಾರ್ಯ : ಕರ್ನಾಟಕ ಕವಿಚರಿತೆ, ಸಂಪುಟ-೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೫, ಪುಟ-೧೪೫ ರಿಂದ ೧೪೮

೬೫. E.C. ( R ) II ಶ್ರವಣಬೆಳಗೊಳ ೧೫೬ (೧೨೭) ಚಿಕ್ಕಬೆಟ್ಟ ಕ್ರಿ.ಶ.೧೧೧೫ ಮತ್ತು ೧೩೬ (೧೧೮) ಕ್ರಿ.ಶ.೧೧೨೦

೬೬. E.C. ( R ) ಶ್ರವಣಬೆಳಗೊಳ ೧೩೭(೧೧೭) ಚಿಕ್ಕಬೆಟ್ಟ ಕ್ರಿ.ಶ.೧೧೨೩

೬೭. E.C. ( R ) VII ನಾಗಮಂಗಲ ೬೧ (IVನಾಮಂ ೨೮) ಲಾಲನಕೆರೆ ಕ್ರಿ.ಶ.೧೧೩೮

೬೮. E.C. XII ಚಿಕ್ಕನಾಯಕನಹಳ್ಳಿ ೨೧ ಹೆಗ್ಗೆರೆ ಕ್ರಿ.ಶ.೧೧೬೧

೬೯. E.C. ( R ) VII ನಾಗಮಂಗಲ೬೩ (IV ನಾಮಂ ೩೦) ಲಾಲನಕೆರೆ ಕ್ರಿ.ಶ.೧೧೬೫

೭೦. ಎಂ.ಎಂ.ಕಲಬುರ್ಗಿ : ಶಾಸನ ವ್ಯಾಸಂಗ – ೧ ಧಾರವಾಡ, ೧೯೭೪, ಪುಟ-೧೭ ಶಾಸನ ಸಂಖ್ಯೆಗಳು : ೬೯, ೨೧೪ (Vಅಕೆ ೧೫೦), ೨೨೭ (Vಅಕೆ ೧೩೮), ೩೧೯, (Vಅಕೆ ೧೦೬), ೫೧ (Vಚಪ ೧೮೬)

೭೧. E.C. ( R ) VIII ಹಾಸನ ೧೧೬ (V ಹಾ ೫೩)ಚಿಕ್ಕೇನಹಳ್ಳಿ ಕ್ರಿ.ಶ.೧೧೭೦

೭೨. E.C. ( R ) X ಹಾಸನ ೨೩ ಅರಸಿಕೆರೆ

೭೩. E.C. VII ಹೊನ್ನಾಳಿ ೫೦ ಮತ್ತು ೨೫

೭೪. ಶ್ರೀನಿವಾಸ ರಿತ್ತಿ : ಶಿಲಾಶಾಸನಗಳ ಕೆಲವು ಕನ್ನಡ ಕವಿಗಳು, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂಪುಟ-೪೩, ಸಂಚಿಕೆ -೨, ಡಿಸೆಂಬರ್-೧೯೫೮, ಪುಟ- ೧ ರಿಂದ ೮

೭೫. E.C. ( R ) X ಅರಸಿಕೆರೆ ೫೫ ಬಾಣಾವರ

E.C. ( R ) X ಅರಸೀಕೆರೆ ೭ (ರಿ ೧೯೨೮- ೧೦ XVಅಕೆ ೨೦೫) ಕ್ರಿ.ಶ.೧೧೮೯

E.C. ( R ) X ಅರಸೀಕೆರೆ ೪೪ (Vಅಕೆ ೯೦) ಕ್ರಿ.ಶ.೧೧೮೯

೭೬. E.C. ( R ) X ಅರಸೀಕೆರೆ ೧೩೯ ಬೊಮ್ಮೇನಹಳ್ಳಿ

೭೭. E.C. VIII ಸೊರಬ ೧೭೯ ಕುಪ್ಪಗಡ್ಡೆ

೭೮. E.C. VII ಶಿಕಾರಿಪುರ ೧೦೫ ಬಳ್ಳಿಗಾವೆ

೭೯. E.C. ( R ) X ಅರಸೀಕೆರೆ ೧೩೯ ಬೊಮ್ಮೇನಹಳ್ಳಿ

೮೦. ಜನ್ನನು ರಚಿಸಿದ ಶಾಸನಗಳು : E.C. ( R ) X ಚನ್ನರಾಯಪಟ್ಟಣ ೩೩(Vಚಪ ೧೭೯) ಆನೆಕೆರೆ ಕ್ರಿ.ಶ.೧೧೮೯

E.C. ( R ) X ತರೀಕೆರೆ ೧೨ (VIತ ೪೫) ಅಮೃತಾಪುರ ಕ್ರಿ.ಶ.೧೧೯೮

E.C. ( R ) X ತರೀಕೆರೆ ೪೨

E.C. ( R ) X ತರೀಕೆರೆ ೬೮

೮೧. E.C. ( R ) X ತರೀಕೆರೆ ೧೨ (VIತ ೪೫) ಅಮೃತಾಪುರ ಕ್ರಿ.ಶ.೧೧೯೮

೮೨. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ-೩, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೬, ಪುಟ-೪೯೫

೮೩. E.C. ( R ) II ಶ್ರವಣಬೆಳಗೊಳ ೩೩೬ (೨೩೪) ದೊಡ್ಡಬೆಟ್ಟ ಕ್ರಿ.ಶ.೧೨ನೆಯ ಶತಮಾನ

೮೪. ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ : ಶಾಸ್ತ್ರೀಯ ಸಂಪುಟ-೩, ಸಪ್ನ ಬುಕ್ ಹೌಸ್, ಬೆಂಗಳೂರು, ೧೯೯೯, ಪುಟ-೪೯೬

೮೫. ಕನ್ನಡ ಸಾಹಿತ್ಯ ಚರಿತ್ರೆ : ನಾಲ್ಕನೆಯ ಸಂಪುಟ, ಭಾಗ-೨, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೭, ಪುಟ-೯೬೭ (ಅಡಿಟಿಪ್ಪಣಿ-೯೪, ಡಿ.ಎಲ್.ನರಸಿಂಹಾಚಾರ್, ಸಾಹಿತ್ಯ ಚರಿತ್ರೆ ತರಗತಿಯ ಟಿಪ್ಪಣಿಗಳು : ಉದ್ಧೃತ, 'ಕನ್ನಡದಲ್ಲಿ ಭಾವಗೀತೆ' ಮೈಸೂರು, ೧೯೬೬, ಪುಟ-೧೫೬)

೮೬. E.C. ( R ) VII ಮಂಡ್ಯ ೨೯ (IIIಮಂ ೧೨೧) ಬಸರಾಳು ಕ್ರಿ.ಶ.೧೨೩೪

ಮಂಡ್ಯ - ಬಸರಾಳು, ೩೦ (III ಮಂ ೧೨೨) ಕ್ರಿ.ಶ.೧೨೩೭

೮೭. E.C. ( R ) VII ಪೀಠಿಕೆ : ಪುಟ ಸಂಖ್ಯೆ - LX ಮತ್ತು LXi

೮೮. E.C. ( R ) VII ಪೀಠಿಕೆ : ಪುಟ ಸಂಖ್ಯೆ - LXi ಮತ್ತು LXii

೮೯. E.C. ( R ) X ಅರಸೀಕೆರೆ ೨೩೨ ಹಾರನಹಳ್ಳಿ, ಕ್ರಿ.ಶ.೧೨೩೪

೯೦. E.C. ( R ) XI ಚಿಕ್ಕಮಗಳೂರು ೮೭ (VIಚಿಮ-೨೦) ಅಂಬಳೆ ಕ್ರಿ.ಶ.೧೨೪೯

೯೧. E.C. XI ದಾವಣಗೆರೆ ೭೦ ಭಾನುವಳ್ಳಿ,

೯೨. E.C. ( R ) IV ಚಾಮರಾಜನಗರ ೧೪೮(IVಚಾನ ೬೪) ಹೊನ್ನು ಕ್ರಿ.ಶ.೧೩೮೦

೯೩. E.C. ( R ) VII ಮದ್ದೂರು ೮೭ (III ಮವ೨೧) ಅರುವನಹಳ್ಳಿ, ಕ್ರಿ.ಶ.೧೩೮೧

೯೪. E.C. XI ದಾವಣಗೆರೆ ೨೯ ಮತ್ತು ೩೪ ಹರಿಹರ

೯೫. ಈ ಭಾಗದಲ್ಲಿನ ಶಾಸನ ಸಂಖ್ಯೆಗಳನ್ನು ಕನ್ನಡ ಸಾಹಿತ್ಯ ಚರಿತ್ರೆಯ ೩ ಮತ್ತು ೪ನೆಯ ಸಂಪುಟಗಳು, ಕನ್ನಡ ಸಾಹಿತ್ಯ ಚರಿತ್ರೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ಇವುಗಳ ಅಡಿಟಿಪ್ಪಣಿಯನ್ನು ಅನುಸರಿಸಲಾಗಿದೆ.

೯೬. ತಿರುಮಲೆ ತಾತಾಚಾರ್ಯ : ಲೇಖನ:ಶಿಲಾಶಾಸನದ ಕನ್ನಡ ಕವಿಗಳು : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ – ಜೂನ್–ಡಿಸೆಂಬರ್ ೧೯೫೧, ಸಂ:೩೬, ಸಂ–೧–೨, ಪುಟ–೬೯
ಈ ಕಾಮರಾಜನು ಉದಯಾದಿತ್ಯನ ಆಶ್ರಯದಲ್ಲಿದ್ದಿರಬೇಕು. ಶೃಂಗಾರರತ್ನಾಕರ, ಸ್ತನಶತಕ ಇತ್ಯಾದಿ ಗ್ರಂಥಗಳನ್ನು ಬರೆದಿರುವ ಕವಿಕಾಮನು ಇವನೇ ಇರಬೇಕು. ಶಿಕಾರಿಪುರದ ಶಾಸನದಲ್ಲಿ ಗುಣಗಳ್ಳನೆಂಬ ಬಿರುದುಳ್ಳ ನಾಗವರ್ಮ್ಮಾಚಾರ್ಯನ ವಿಚಾರವು ವರ್ಣಿತವಾಗಿದೆ. ಚಂದ್ರಚೂಡಾಮಣಿಶತಕವನ್ನು ಬರೆದ ನಾಗವರ್ಮ್ಮಾಚಾರ್ಯನು ಮೇಲಿನ ಶಾಸನದಲ್ಲಿ ಉಕ್ತನಾದವನೆಂದು ಕವಿಚರಿತ್ರೆಕಾರರನ್ನು ಅನುಸರಿಸಿ ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

೯೭. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ–೨, ನರೇಶ್ ಅಂಡ್ ಕಂಪನಿ, ಬೆಂಗಳೂರು. ೧೯೮೮, ಪುಟ ಸಂಖ್ಯೆ – ೨೧೩

೯೮. E.C.VIII ಸೊರಬ ೬೧

೯೯. ಆರ್.ನರಸಿಂಹಾಚಾರ್ಯ : ಕರ್ನಾಟಕ ಕವಿಚರಿತೆ– ಸಂ–೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೫, ಪುಟ ಸಂಖ್ಯೆ–೧೫೮

೧೦೦. E.C.VI ಚಿಕ್ಕಮಗಳೂರು ೧೪೦

೧೦೧. E.C.VIII. ಸೊರಬ ೧೩೮

೧೦೨. ಆರ್.ನರಸಿಂಹಾಚಾರ್ಯ : ಕರ್ನಾಟಕ ಕವಿಚರಿತೆ : ಸಂ–೧, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೫, ಪುಟಸಂಖ್ಯೆ– ೧೭೨

೧೦೩. E.C.VIII ಸೊರಬ ೧೯

೧೦೪. E.C.(R) VIII ಹಾ ಸನ ೧೭೪ (V ಹಾ೧೧೯) ಮರ್ಕುಲಿ ಕ್ರಿ.ಶ.೧೧೭೩

೧೦೫. E.C. V ; ii ಅರಸಿಕೆರೆ ೬೯

೧೦೬. E.C.VIII ಸೊರಬ ೧೪೦

೧೦೭. E.C.V XIII ಶಿವಮೊಗ್ಗ೩೧ (VIIಶಿವ ೬೯ ) ಕೂಡ್ಲಿ ಕ್ರಿ.ಶ.೧೩೨೦

೧೦೮. E.C.VIII ನಗರ ೪೬ ಹುಂಚ ಕ್ರಿ.ಶ.೧೫೨೦

# ಅಧ್ಯಾಯ – ೪

## ವರ್ಣನೆಗಳು

ವರ್ಣನೆಗಳು ಶಾಸನಗಳ ಜೀವಾಳ. ನೀರಸವಾಗಿ ವಿಷಯ ನಿರೂಪಿಸುವುದಕ್ಕಿಂತ ಜೀವ ತುಂಬುವ ವರ್ಣನೆಗಳ ಕಡೆಗೆ ಶಾಸನಕವಿಗಳು ಸಹಜವಾಗಿ ಒಲಿದರು. ಪರಿಮಿತವಾದ ಅವಕಾಶದಲ್ಲೇ ತಮ್ಮಲ್ಲಿನ ಕವಿತಾಸಾಮರ್ಥ್ಯದಿಂದ, ಪ್ರೌಢಿಮೆಯಿಂದ ಹಲವಾರು ವಿಷಯಗಳ ಬಣ್ಣನೆಗಳನ್ನು ಶಾಸನಗಳಲ್ಲಿ ಶಾಸನಕವಿಗಳು ತಂದಿದ್ದಾರೆ. ಶಾಸನಗಳ ವಿಷಯಾನುಕ್ರಮದಲ್ಲಿ ಕಂಡುಬರುವ ಮಂಗಳಶ್ಲೋಕ, ಆಳ್ವಿಕೆ ಮಾಡುತ್ತಿದ್ದ ರಾಜರು, ಅವರ ಸಾಮಂತರು, ಮಾಂಡಲಿಕರು, ಕೈಕೆಳಗಿನ ಅಧಿಕಾರಿಗಳು, ಶಾಸನದ ಪ್ರಮುಖವಾದ ವಸ್ತು, ವಿಚಾರ, ಸ್ಥಳ, ಪ್ರಕೃತಿ, ಸ್ತ್ರೀಯರು ಹೀಗೆ ಹಲವಾರು ವಿಷಯಗಳನ್ನು ನಿರೂಪಿಸುವಾಗ ಶಾಸನಕವಿಗಳು ತಮ್ಮದೇ ಆದ ಪ್ರೌಢಿಮೆಯನ್ನು ಮೆರೆದಿದ್ದಾರೆ.

ಕನ್ನಡ ಶಾಸನಗಳ ಸಂದರ್ಭದಲ್ಲಿ ಆರಂಭದ ಕಾಲದಲ್ಲಿ ಕೇವಲ ವಿಷಯ ನಿರೂಪಣೆಯ ಕಡೆಗೆ ಗಮನವಿತ್ತಿದ್ದ ಶಾಸನರಚನಾಕಾರರು ಆ ನಂತರದಲ್ಲಿ ಕ್ರಮೇಣ ವಿಸ್ತಾರವಾಗಿ ಸನ್ನಿವೇಶಗಳನ್ನು ನಿರೂಪಿಸತೊಡಗಿದರು. ಹೀಗಾಗಿ ಸಹಜವಾಗಿ ಶಬ್ದಾರ್ಥ ವೈಚಿತ್ರ್ಯಗಳಿಂದ ಕೂಡಿದ ಬಣ್ಣನೆಯು ಅನಿವಾರ್ಯವೂ ಅಗತ್ಯವೂ ಆಯಿತೆನ್ನಬಹುದು. ಜೊತೆಗೆ ಆಳ್ವಿಕೆ ನಡೆಸಿದ ರಾಜಮಹಾರಾಜರು, ಆಡಳಿತಗಾರರ ಆಶ್ರಯದಲ್ಲೇ ಶಾಸನರಚನಾಕಾರರು ಇದ್ದ ಕಾರಣದಿಂದಾಗಿ ಅವರನ್ನು ಹೊಗಳುವುದು ಅನಿವಾರ್ಯ ಆಗಿಬಿಟ್ಟಿತ್ತು. ನಂತರದಲ್ಲಿ ಆ ಪರಿಪಾಠವು ಶಾಸನದ ಇತರ ವಿಷಯಗಳಿಗೂ ಅನ್ವಯವಾಗತೊಡಗಿ ಒಟ್ಟಾರೆ ಶಾಸನಗಳು ಕಾವ್ಯಮಯವಾಗಿ ರಚನೆಯಾಗಲು ಕಾರಣವಾಯಿತು. ಅದರ ಜೊತೆಗೆ ಶಾಸನಗಳು ಚಂಪೂಕಾವ್ಯದ ಮಾದರಿಯನ್ನು ಅಳವಡಿಸಿಕೊಂಡದ್ದು ಸಹ ವರ್ಣನೆಗಳ ಪ್ರಚುರತೆಗೆ ಕಾರಣವಾಯಿತು. ಸಮರ್ಥನಾದ ಕವಿಯು ಸ್ವತಂತ್ರ ಕೃತಿಯನ್ನು ರಚಿಸಲು ಶಕ್ತನಾಗುತ್ತಾನೆ. ಶಾಸನ ಕವಿಯಾದವನಿಗೆ ತಾನೂ ಸಹ ತನ್ನ ಕಲ್ಪನಾವಿಲಾಸವನ್ನು ಪ್ರದರ್ಶಿಸಬೇಕೆಂಬ ಅಭೀಪ್ಸೆಯಿದ್ದರೂ ಸಹ ರಚನೆಯ ಕಟ್ಟುಪಾಡುಗಳಿಗೆ ಒಳಗಾಗಬೇಕಾದ ಅನಿವಾರ್ಯತೆಯಿತ್ತು. ಇವುಗಳ ನಡುವೆಯೂ ಕನ್ನಡದ ಶಾಸನಕವಿಗಳು ಕೆಲವು ಉತ್ತಮವಾದ ವರ್ಣನೆಗಳನ್ನು ನೀಡಿದ್ದಾರೆ. ಅವುಗಳನ್ನು ಪರಿಚಯಿಸುವ ಪ್ರಯತ್ನವನ್ನು ಈ ಮುಂದೆ ಮಾಡಲಾಗಿದೆ. ವರ್ಣನೆಗಳನ್ನು ಗಮನಿಸುವಾಗ ದೇವತಾಸ್ತುತಿ, ರಾಜರ ವರ್ಣನೆ, ವ್ಯಕ್ತಿ ವರ್ಣನೆ, ಸ್ತ್ರೀಯರು, ನಗರವರ್ಣನೆ, ಪ್ರಕೃತಿವರ್ಣನೆ ಸಂಕೀರ್ಣವಿಷಯಗಳನ್ನು ನಿರೂಪಿಸಲಾಗಿದೆ.

## ೪.೧. ದೇವತಾ ಸ್ತುತಿ :-

ಯಾವುದೇ ಬರಹವನ್ನು ಆರಂಭಿಸುವ ಮೊದಲು ಶುಭವಾಚಕ ಚಿಹ್ನೆ ಅಥವಾ ಪದಗಳನ್ನು, ಅಕ್ಷರಗಳನ್ನು, ಶ್ಲೋಕಗಳನ್ನು ಬರೆಯುವ ಸಂಪ್ರದಾಯವು ನಮ್ಮಲ್ಲಿ ಪ್ರಚಲಿತವಿದೆ. ಈ ಸಂಪ್ರದಾಯವು ಸಹಜವಾಗಿ ಶಾಸನಗಳಲ್ಲೂ ಕಂಡು ಬರುತ್ತದೆ. ಆರಂಭ ಕಾಲದ ಶಾಸನಗಳಲ್ಲಿ ಓಂ, ಸಿದ್ಧಂ, ಶ್ರೀ, ಸ್ವಸ್ತಿಶ್ರೀ ಎಂಬವುಗಳು ಬಳಕೆಯಾಗುತ್ತಿದ್ದವು. ಅನಂತರ ಶಾಸನಗಳಲ್ಲಿ ಇವುಗಳ ಜೊತೆಗೆ ಶಾಸನವನ್ನು ಯಾವ ವ್ಯಕ್ತಿಯು ಹಾಕಿಸಿರುತ್ತಾನೆಯೋ ಅಥವಾ ಯಾವ ದೇವಾಲಯಕ್ಕೆ ದತ್ತಿ ಬಿಡುತ್ತಾನೆಯೋ ಅಥವಾ ಯಾವ ಸಂಸ್ಥೆಗೆ ದತ್ತಿ ಬಿಡುತ್ತಾನೆಯೋ ಆ ವ್ಯಕ್ತಿಯ, ದೇವಾಲಯದ, ಸಂಸ್ಥೆಯ ಪ್ರಕಾರ ಯಾವ ದೇವರು ಶ್ರೇಷ್ಠವೆಂದು ಭಾವಿಸಲಾಗಿರುತ್ತದೆಯೋ ಆ ದೇವರನ್ನು ಕುರಿತ ಶ್ಲೋಕವಿರುತ್ತದೆ. ಈ ಕಾರಣದಿಂದಾಗಿ ಶಿವೋಪಾಸಕರ ಶಾಸನಗಳಲ್ಲಿ :

**ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರ ಚಾರವೇ ।**
**ತ್ರೈಲೋಕ್ಯ ನಗರಾರಂಭ ಮೂಲಸ್ತಂಭಾಯ ಶಂಭವೇ ॥**

ಎಂಬ ಶಿವನನ್ನು ಸ್ತುತಿಸುವ ಶ್ಲೋಕವು ಬಂದಿರುತ್ತವೆ. ವೈಷ್ಣವ ಶಾಸನವಾಗಿದ್ದರೆ ವಿಷ್ಣುಪರವಾದ

**ಜಯತ್ಯಾವಿಷ್ಕೃತಂ ವಿಷ್ಣೋರ್ವಾರಾಹಂ ಕ್ಷೋಭಿತಾರ್ಣವಂ**
**ದಕ್ಷಿಣೋನ್ನತದಂಷ್ಟ್ರಾಗ್ರ ವಿಶ್ರಾಂತ ಭುವನಂ ವಪುಃ ॥**

ಎಂಬ ಶ್ಲೋಕವಿರುತ್ತದೆ.

ಜೈನ ಧರ್ಮ ಅನುಯಾಯಿಗಳ ಪರವಾದ ಶಾಸನಗಳಲ್ಲಿ

**ಶ್ರೀಮತ್ಪರಮಗಂಭೀರ ಸ್ಯಾದ್ವಾದಾಮೋಘಲಾಂಛನಂ ।**
**ಜೀಯಾತ್ತ್ರೈಲೋಕ್ಯನಾಥಸ್ಯ ಶಾಸನಂ ಜಿನಶಾಸನಂ ॥**

ಎಂಬ ಶ್ಲೋಕವಿರುತ್ತದೆ. ಪ್ರಾರ್ಥನಾ ಶ್ಲೋಕಗಳನ್ನು ಕುರಿತಂತೆ ಇದು ಸಾಮಾನ್ಯವಾದ ಕ್ರಮವಾದರೂ ಪ್ರತಿಭಾವಂತರಾದ ಕನ್ನಡ ಶಾಸನಕವಿಗಳು ಹಲವಾರು ಸುಂದರವಾದ ಪ್ರಾರ್ಥನಾ ಪದ್ಯಗಳನ್ನು ಕನ್ನಡದಲ್ಲೂ ರಚಿಸಿದ್ದಾರೆ. ಅಂತಹ ಪದ್ಯಗಳನ್ನು ಈಗ ಗಮನಿಸಬಹುದು. ಕನ್ನಡದಲ್ಲಿ ಪ್ರಾರ್ಥನಾ ಪದ್ಯಗಳನ್ನು ರಚಿಸುವ ಪರಂಪರೆಯು ಆರಂಭವಾದದ್ದು ೧೧ನೆಯ ಶತಮಾನದಲ್ಲಿ ಎನ್ನಬಹುದು. ಹಾಗೂ ಈ ಪರಂಪರೆಯು ವಿಜಯನಗರದ ಅರಸರ ಕಾಲದವರೆಗೂ ಮುಂದುವರೆಯಿತು. ಹೆಚ್ಚಾಗಿ ಶಿವಪರವಾದ ಮತ್ತು ವರಾಹವನ್ನು ಸ್ತುತಿಸುವ ಪದ್ಯಗಳು ಕಂಡುಬಂದಿವೆ. ಹಾಗೂ ಕಾವ್ಯಾತ್ಮಕವಾಗಿಯೂ ಗಮನ ಸೆಳೆಯುತ್ತವೆ. ಹೊಯ್ಸಳರ ಕಾಲದ ಶಾಸನಗಳಲ್ಲಿ ಆದಿವರಾಹನನ್ನು

ಕೀರ್ತಿಸಿರುವ ಕನ್ನಡ ಪದ್ಯಗಳು ಕಂಡುಬಂದಿವೆ. ಜನ್ನ ಕವಿಯು ರಚಿಸಿರುವ ಆನೆಕೆರೆಯ[೧] ಶಾಸನದಲ್ಲಿ

**ಶ್ರೀವಧುವಿಂಗೆ ಪೀಲಿದಟಿಯಿರ್ಪವೊಲಿರ್ದುದು ಕೋಡೊಳಿರ್ದ ಧಾ**
**ತ್ರೀವಳಯಂ ಸಮುದ್ರಮದು ಝಲ್ಲರಿಯಿರ್ಪವೊಲಿರ್ದುದಾಂತದಂ ।**
**ಪ್ಪಾವರಶೋಭೆ ಕೆತ್ತಿಸಿದ ಮುತ್ತಿನ ಕಾವುವೊಲಿರ್ದುದಂತು ಸ**
**ದ್ಭಾವಮನಾಳ್ದ ಸೂಕರವರಂ ಪೊರೆಗೀ ಗಿರಿದುರ್ಗಮಲ್ಲನಂ ॥**

ಅಂದರೆ ಲಕ್ಷ್ಮಿಯ ನವಿಲುಗರಿಗಳ ಕೊಡೆಯಂತೆ ಕೋಡಿನಲ್ಲಿರುವ ಭೂಮಿಯೂ, ಸಮುದ್ರವಾದರೋ ಮಕರತೋರಣದಂತೆ ಹಾಗೂ ದಂತಗಳ ಶೋಭೆಯು ಕೆತ್ತಿಸಿದ ಮುತ್ತಿನಕಾವಿನಂತಿರಲು ಭಕ್ತರ ಬಗೆಗೆ ಸದ್ಭಾವವನ್ನು ಹೊಂದಿರುವ ಆದಿವರಾಹನು ಗಿರಿದುರ್ಗಮಲ್ಲನಾದ ಹೊಯ್ಸಳರಾಜನನ್ನು ರಕ್ಷಿಸಲಿ ಎಂದು ಪ್ರಾರ್ಥಿಸಿದೆ.

ಶಾಂತಿಗ್ರಾಮದ ಶಾಸನ ಪದ್ಯವು[೨]

**ಅದಿರದು ಧಾತ್ರಿ ತು[ಂ]ಳ್ಕದು ಕಡಲ್ನೆಲೆದಪ್ಪದು ದಿಗ್ಗಜಬ್ರಜಂ**
**ಬೆದರದು ಮಧ್ಯಲೋಕದ ಜನಂ ಸಲೆ ಕಂಪಿಸದದ್ರಿತೊಟ್ಟನೆ**
**ತ್ತಿದ[ನಿದು] ಚೋದ್ಯವೆಂದು ವಿಬುಧರ್ಪ್ಪರಿಕೀರ್ತ್ತಿಸೆ ಪೊಕ್ಕು ಧಾತ್ರಿಯಂ**
**ಪದುಳದಿನೊಂದೆ ಕೋಡೊಳಿರದೆತ್ತಿದ ಸೂಕರನೀಗೆ ಭೋಗಮಂ ॥**

ಎಂಬ ಪದ್ಯವು ವರಾಹಾವತಾರವನ್ನು ವಿನೂತನವಾಗಿಬಣ್ಣಿಸಿದೆ. ವಿಷ್ಣುವು ವರಾಹಾವತಾರವನ್ನು ಎತ್ತಿ ತನ್ನ ಕೋಡಿನಿಂದ ಭೂಮಿಯನ್ನು ಎತ್ತಿದ ಸಂದರ್ಭದಲ್ಲಿ ಭೂಮಿಯು ಅಲುಗಲಿಲ್ಲ. ಕಡಲು ತುಳುಕಲಿಲ್ಲ. ದಿಗ್ಗಜಗಳ ನೆಲೆಯು ತಪ್ಪಲಿಲ್ಲ, ಮಧ್ಯಲೋಕದ ಜನರು ಬೆದರಲಿಲ್ಲ, ಬೆಟ್ಟಗಳು ಕಂಪಿಸಲಿಲ್ಲ. ಅಂದರೆ ಯಾರಿಗೂ ಯಾವ ರೀತಿಯಾದ ತೊಂದರೆಯುಂಟಾಗದ ರೀತಿಯಲ್ಲಿ ಭೂಮಿಯನ್ನು ಎತ್ತಿದ ಬಗೆಯು ಆಶ್ಚರ್ಯಕರವಾದುದೆಂಬುದಾಗಿ ವಿಬುಧರು ಪರಿಕೀರ್ತಿಸುತ್ತಿರುವಂತೆ ಇದ್ದ ವರಾಹಾವತಾರವು ನಮಗೆ ಭೋಗವನ್ನು ನೀಡಲಿ ಎಂದು ಬಣ್ಣಿಸಿದೆ. ಕೆರೆಸಂತೆಯ ಶಾಸನವು[೩] ಧರೆಯು ವರಾಹನ ದಂತಾಗ್ರದಲ್ಲಿ 'ರುಚಿರಕೇತಕೀಮಧುಕರಿ'ಯಂತೆ ವಿರಾಜಿಸುತ್ತಿತ್ತು ಎಂದು ಬಣ್ಣಿಸಿದೆ. ಹೊನ್ನಮ್ಮನಹಳ್ಳಿಯ ಶಾಸನವು[೪] ವಿಷ್ಣುಪರವಾದ ಪದ್ಯವನ್ನು ಒಳಗೊಂಡಿದೆ. ಈ ಎಲ್ಲಾ ಶಾಸನಗಳು ಹೊಯ್ಸಳರ ಕಾಲಕ್ಕೆ ಸೇರಿದವುಗಳಾಗಿವೆ. ವಿಷ್ಣುವು ವರಾಹಾವತಾರವನ್ನು ತಾಳಿ ಭೂಮಿಯನ್ನು ರಕ್ಷಿಸಿದಂತೆ, ತಾವು ಸಹ ಸಾಮ್ರಾಜ್ಯವನ್ನು ಉದ್ಧರಿಸುವವರೆಂಬ ಭಾವದಿಂದ ಹೊಯ್ಸಳ ದೊರೆಗಳ ಶಾಸನದಲ್ಲಿ 'ಈ ಅವತಾರದ' ಪರವಾದ ಪದ್ಯಗಳು ಬಂದಿರಬಹುದೆನ್ನಬಹುದು.

ಹಲವಾರು ಶಾಸನಗಳಲ್ಲಿ ಶಿವಪರವಾದ ಸ್ತುತಿಗಳು ಕಾಣಿಸಿಕೊಂಡಿವೆ. ಆ ಶಿವನಾದರೋ :–

**ಶ್ರೀಮಚ್ಚಂದ್ರಕಳಾವತಂಶನನಘಂ ಗೋಕ್ಷೀರಶುಭ್ರಪ್ರಭಂ**
**ಸಾಮಾರುಗ್ಯಜಾಥರ್ಪ್ವಣ ಸ್ತುತನಹೀಂದ್ರಸ್ಯೋಪವೀತಂಶಿವಂ**
**ಸೋಮಾರ್ಕ್ಕಾನಳನೇತ್ರನೊಪ್ಪುವಮೃತೇಶದೇವದೇವೋತ್ತಮ'**[೫]

ನೆಂದೂ, **'ಶ್ರೀಶೈಲಾವಸಥಂ ಚತುರ್ದ್ದಶ ಜಗಂ ನಿರ್ಮ್ಮಾಪಕಂ ನಿರ್ಜ್ಜರಾಧೀಶ ಬ್ರಹ್ಮಮುಕುಂದವನ್ದಿತ ಪದಂ ಕುಂದೇನ್ದು ಕರ್ಪ್ಪೂರ ಸಂಕಾಶಾಜ್ಜಪ್ರಭನದ್ರಿರಾಜ ತನಯಾಚಿತ್ತೇಶ್ವರಂ'**[೬] ನೆಂದೂ ಶಾಸನಗಳು ಬಣ್ಣಿಸಿವೆ. ಸಾಂತಮಹಂತ ಕವಿಯು ರಚಿಸಿರುವ ಶಾಸನಗಳಲ್ಲಿ ಬಂದಿರುವ ಶಿವಪರವಾದ ಎರಡು ಕಂದಪದ್ಯಗಳು ಸರಳವಾದ ಭಾಷೆಯಲ್ಲಿ ರಚಿತವಾದವುಗಳಾಗಿ ಗಮನಸೆಳೆಯುತ್ತವೆ.

**ಪತ್ತಿರೆ ಗಂಗೆಯ ಹನಿಗಳು**
**ಮುತ್ತಿನ ಬಾಸಿಗಮಿದೆನಿಸಿ ವಾಸುಗಿ ಸುಖದಿಂ**
**ಸುತ್ತಿರ್ದ್ದ ಜೂಟದಾದೇವೋ**
**ತ್ತಮ ನಮಗೊಸೆದು ಕೊಡುಗೆ ಸುಕಸಂಪದಮಂ**[೭]

ವೆಂಬುದಾಗಿ ಕಲ್ಪನೆಯನ್ನು ಮಾಡಿದ್ದಾನೆ. ಹಾಗೆಯೇ ಭೇದಭಾವವು ದೇವತೆಗಳ ಕಲ್ಪನೆಯಲ್ಲಿ ಮಾತ್ರವಿರುತ್ತದೆಯೋ ಹೊರತು ಪರಮಾರ್ಥತತ್ತ್ವದಲ್ಲಿ ಅಲ್ಲವೆಂಬ ವಿಚಾರವನ್ನು ಶಾಸನಕವಿಯು

**ಭೇದಂ ಮೂರ್ತ್ತಿಯೊಳಲ್ಲದೆ**
**ಆದಂ ಪರಮಾರ್ತ್ಥತತ್ತ್ವದೊಳು ಸಲ್ಲದೆನಲು**
**ಮೂದೇವರಾದ ಭರದಿಂ**
**ಮಾದೇವಂ ದೇವನೀಗೆ ತಾನೆಮಗೊಳ್ವಂ'**[೮]

ಎಂಬುದಾಗಿ ಶಿವನನ್ನು ಸ್ತುತಿಸುವ ಪದ್ಯದಲ್ಲಿ ನಿರೂಪಿಸಿದ್ದಾನೆ.

ಕ್ರಿ.ಶ.೧೫೫೫ರ ಸಿಂಗನಹಳ್ಳಿಯ ಶಾಸನವು[೯] ಅಲ್ಲಿಯ ರಾಮೇಶ್ವರನನ್ನು ಸರಳವಾಗಿ ಹಾಗೂ ಸೊಗಸಾಗಿ ಬಣ್ಣಿಸಿದೆ. ಶಾಸನ ಪದ್ಯವು ಈ ರೀತಿಯಿದೆ.

**ಪಳುಕಿನ ಕಳೆವೆಳಗಿನಮಯಿ**
**ವೊಳಪಿನ ತಿಳಿಜೊಂನನಗೆಯ ಕಱಿಗೊರಲಿಂಕ**
**ಣ್ಗೊಳಿಪ ಪೆಟಿಱದಲೆಯದೇವಂ**
**ಹೊಳೆಯನ ಪಾಲಿಸುಗೆ ಕರುಣದಿಂ ರಾಮೇಸಂ ॥**

ಹರಿಹರದ ಹರಿಹರೇಶ್ವರನನ್ನು ಹಲವಾರು ಶಾಸನಗಳು ಸೊಗಸಾಗಿ ಬಣ್ಣಿಸಿವೆ. ಅವುಗಳಲ್ಲಿ ಕೆಲವು ಪದ್ಯಗಳು ಪ್ರೌಢವಾಗಿದ್ದರೆ, ಮತ್ತೆ ಕೆಲವು ಸರಳವಾದ ರಚನೆಗಳಾಗಿವೆ.

ಕ್ರಿ.ಶ.೧೧೪೮ರ ಕಾಲದ ಶಾಸನದಲ್ಲಿ[೧೦] ಮತ್ತು ಕ್ರಿ.ಶ.೧೧೬೦ ಕಾಲದ ಶಾಸನದಲ್ಲಿ ಬಂದಿರುವ ಪದ್ಯಗಳು[೧೧] ಪ್ರೌಢವಾದ ರೀತಿಯಲ್ಲಿ ಹರಿಹರೇಶ್ವರನನ್ನು ಬಣ್ಣಿಸಿವೆ. ಈ ಪದ್ಯಗಳ ಪ್ರಕಾರ ಹರಿಹರೇಶ್ವರನಾದರೋ "ಶ್ರೀಗೌರಿಪ್ರಿಯರು, ಅಬ್ಜಸೂರ್ಯನಯನರು, ಕೌಶೇಯ ಚರ್ಮಾಂಬರರು, ನಾಗಾರಾತಿವೃಷೇಂದ್ರವಾಹರು, ಶಿತಿಸಿತಚ್ಛವಿಗಳು, ಏಕಮೂರ್ತಿ ಸಂಯೋಗವಿರಾಜಿತರಾದ ಹರಿಹರ ಪ್ರಭು"ವಾಗಿದ್ದಾನೆ.

ಕ್ರಿ.ಶ.೧೨೨೪ರ ಶಾಸನದಲ್ಲಿ[೧೨] ಬಂದಿರುವ ಹರಿಹರೇಶ್ವರನ ಪರವಾದ ಪ್ರಾರ್ಥನಾಪದ್ಯಗಳು ಹೆಚ್ಚು ಅರ್ಥಪೂರ್ಣವೂ ಹಾಗೂ ಧಾರ್ಮಿಕ ಸಾಮರಸ್ಯದ ಸಂಕೇತವೂ ಆಗಿ ಕಂಡುಬರುತ್ತವೆ. ಶಾಸನವು ದೇವಾಲಯದ ನಿರ್ಮಾಪಕನಾದ ಪೋಲಾಳ್ವದಂಡನಾಥನ ಕಾಲಕ್ಕೆ ಸೇರಿದ್ದು, ಶಾಸನವು ಯಥಾಪ್ರಕಾರ "ನಮಸ್ತುಂಗ.................. ಶಂಭವೇ॥ ಪದ್ಯದಿಂದ ಆರಂಭವಾಗಿದೆ. ಆ ನಂತರದಲ್ಲಿ

**ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್‌ಕೆಲಂಬರ್**
**ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇಳ್ವರ್‌ಕೆಲಂಬರ್**
**ನರರಾ ಸಂದೇಹಮಂ ಪಿಂಗಿಸತಿಶಯದಿಂ ಕೂಡಲೂರಲ್ಲಿ ಶೋಭಾ**
**ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಮ್ಮಂ ॥**
**ಸಂದಶಿವಂಗೆ ವಿಷ್ಣುವಿನ ರೂಪಮದಾದುದು ವಿಷ್ಣುವಿಂಗೆ ಪೆಂ**
**ಪೊಂದಿ ನೆಗಳ್ತೆವೆತ್ತ ಶಿವರೂಪಮದಾದುದು ವೇದವಾಕ್ಯದಿಂ**
**ದೆಂದದನೆಯ್ದೆ ನಿಶ್ಚಯಿಸುವಂತಿರೆ ಕೂಡಲೊಳೇಕ ಮೂರ್ತಿಯಿಂ**
**ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ॥**

ಎಂಬ ಪದ್ಯಗಳಲ್ಲಿ ಸುಂದರವಾಗಿ ಬಣ್ಣಿಸಿದ್ದಾನೆ ಶಾಸನಕವಿ. ಇದೇ ಸ್ಥಳದ ಮತ್ತೊಂದು ಶಾಸನದ[೧೩] ಕಂದಪದ್ಯವೊಂದು ಚಮತ್ಕಾರಿಕವಾಗಿ ಹರಿಹರದೇವನನ್ನು ವರ್ಣಿಸುತ್ತದೆ.

**ಸ್ಮರಕರಿವರಮುಖಪಿತನಂ**
**ಮುರಪುರಹರನಂ ನಗೇಂದು ಧರನಂ ವಿಲಸ**
**ದ್ವರದಾಭಯಕರನಂ ಹರಿ**
**ಹರನಂ ಭಜಿಪೆ ಕೃಪಾಸುಧಾಸಾಗರನಂ ॥**

ಎಂಬ ಪದ್ಯದಲ್ಲಿ ಸ್ಮರಪಿತ, ಮುರಹರ, ನಗಧರ ಎಂಬವುಗಳು ಹರಿಪರವಾಗಿದ್ದರೆ, ಕರಿವರಮುಖಪಿತ, ಪುರಹರ, ಇಂದುಧರ ಎಂಬವುಗಳು ಹರನ ಪರವಾಗಿವೆ.

ವಿದ್ಯಾಭಿಮಾನಿದೇವತೆಯಾದ ಸರಸ್ವತಿಯನ್ನು ಸೊಗಸಾಗಿ ಬಣ್ಣಿಸಿರುವ ಪದ್ಯವೊಂದು ಹರಿಹರದ ಶಾಸನವೊಂದರಲ್ಲಿ[೧೪] ಕಂಡುಬಂದಿದೆ. ಸಾಂಪ್ರದಾಯಿಕವಾದ ವರ್ಣನೆಗಿಂತ ವಿಭಿನ್ನವಾಗಿ ಶಾಸನಕವಿಯು ಸರಸ್ವತಿಯನ್ನು ಬಣ್ಣಿಸಿರುವುದು ಈ ಪದ್ಯದ ವಿಶೇಷವಾಗಿದೆ. ಶಾಸನಪದ್ಯವು ಈ ರೀತಿಯಿದೆ.

**ನೀರಜಜಾತ ವಿಸ್ತರಿಸಿದಂಡಮುಮಂ ಮಣಿಮಾಲೆಯಾಗಿ ವಿ**
**ಸ್ತಾರಿಸಿ ಹಸ್ತದಿಂ ಪಿಡಿದು ತನ್ನ ಸರಣ್ಬುಗುವರ್ಗೆ ಲೇಸುಮಂ**
**ಪ್ರೇರಿಸಲೋಸುಗಂ ಜಪಿಸುತಿರ್ಪಳಿರುಳ್ಪಗಲಾವಳೋರ್ವಳಾ**
**ಭಾರತಿ ನಮ್ಮ ಜಿಹ್ವೆಯೊಳನಾವಿಳದಿಂದಿರುತಿರ್ಕೆ ಸಂತತಂ ॥**

ಬ್ರಹ್ಮನು ನಿರ್ಮಿಸಿದ ಬ್ರಹ್ಮಾಂಡವನ್ನೇ ಮಣಿಮಾಲೆಯಾಗಿ ಮಾಡಿಕೊಂಡು ತನ್ನ ಹಸ್ತದಲ್ಲಿ ಧರಿಸಿ ತನಗೆ ಶರಣಾಗತರಾಗಿ ಬಂದವರಿಗೆ ಸದಾಕಾಲ ಒಳಿತನ್ನೇ ಬಯಸುತ್ತಾ ಹಗಲಿರುಳು ಧ್ಯಾನವನ್ನು ಮಾಡುತ್ತಿರುವ ಆ ಭಾರತಿಯು ಅಂದರೆ ವಿದ್ಯಾಭಿಮಾನಿ ಸರಸ್ವತಿಯು ನಮ್ಮ ನಾಲಗೆಯಲ್ಲಿ ಸದಾಕಾಲ ನೆಲಸಿರಲಿ ಎಂಬುದಾಗಿ ವಿಶಿಷ್ಟವಾಗಿ ಕವಿಯು ಬಣ್ಣಿಸಿದ್ದಾನೆ.

ಕ್ರಿ.ಶ.೧೧೮೩ರ ಇಮ್ಮಡಿ ವೀರಬಲ್ಲಾಳನ ಕಾಲದ ಅರಸೀಕೆರೆಯ ಕೆರೆಯಕೋಡಿಯಲ್ಲಿರುವ ಬ್ರಹ್ಮದೇವರ ದೇವಸ್ಥಾನದ ಮುಂದಿರುವ ಶಾಸನವು[೧೫] ವಿಶಿಷ್ಟವಾಗಿ ಆ ದೇವರನ್ನು ವರ್ಣಿಸುತ್ತದೆ. ಶಾಸನ ಪದ್ಯವು ಈ ರೀತಿಯಿದೆ.

**ಕತ್ತುರ್ರಿಯ ಕಂಪು ಕೈಸುರಿಗೆ ಹೊಂನೊಜಿಹಟ್ಟಿಗೆ ಸಂಣಗಗ್ಗರಂ**
**ಮುತ್ತಿನದಂಡೆ ತೋಳಮಣಿ ಬಯಿತಲೆನೆಯ್ದಲೆ ತೂಲ ಜಂನ್ನರಂ**
**ಬೆತ್ತದ ಸೆಂಡು ಕೋಲು ಮೆರೆವ ದಂತದ ಪಾವುಗೆ ಭೃಂಗದೋಲೆಮೆಯಿ**
**ವೆತ್ತಿರೆ ರಾತ್ರಿಯೊಳು ಸುಳಿವ ಬ್ರಹ್ಮೆಯನೀಗೆಮನಿಷ್ಟ ಸಿದ್ಧಿಯಂ ॥**

ಜೈನಧರ್ಮದ ಶಾಸನಗಳಲ್ಲಿ ಅಧಿಕಪ್ರಮಾಣದಲ್ಲಿ 'ಶ್ರೀಮತ್ಪರಮ.......... ಶಾಸನಂ' ಎಂಬ ಪ್ರಾರ್ಥನಾಪದ್ಯವು ಕಂಡುಬರುತ್ತದೆ ಎಂಬುದು ಸರ್ವವಿದಿತವಾಗಿದೆ. ವಿಜಯನಗರದ ಅರಸರ ಕಾಲದ ಕ್ರಿ.ಶ.೧೪೨೬ರ ಮೂಡಬಿದಿರೆಯ ಶಾಸನವು[೧೬] ತ್ರಿಭುವನ ಚೂಡಾಮಣಿ ಬಸದಿಯ ಚಂದ್ರಪ್ರಭ ಜಿನಬಿಂಬವನ್ನು ಪ್ರಾರ್ಥಿಸಿದ ಪದ್ಯವನ್ನು ಒಳಗೊಂಡಿದೆ. ಆ ಚಂದ್ರಪ್ರಭನಾದರೋ **"ಶ್ರೀಚಕ್ರೇಶ ಸುರೇಶ ಭಾಸುರ ಸಭಾ ಶ್ರೀಕಾಂತನೂ, ಏಕಾಂತ ಮಿಥ್ಯಾಚಕ್ರೋದ್ಭವ ಕರ್ಮ್ಮಘರ್ಮ್ಮನವಚಂದ್ರನೂ,ದಿವ್ಯಭಾಷಾಸರಿದ್ವೀಚಿವ್ರಾತವಿನಿರ್ಮ್ಮಲೀ ಕೃತಜನನೂ, ಮುಕ್ತ್ಯಂಗನಾ**

**ವಲ್ಲಭನೂ"** ಆದವನಾಗಿದ್ದು ಆತನು ವಂಶಪುರದ ಭವ್ಯಾಳಿಗೆ ಆನಂದವನ್ನುಂಟು ಮಾಡಲಿ ಎಂದು ಪ್ರಾರ್ಥಿಸಿದೆ.

ಕನ್ನಡದ ಶಾಸನಗಳಲ್ಲಿ ಸಾಂಪ್ರದಾಯಿಕವಾಗಿ ಬಳಕೆಯಾಗುತ್ತಿದ್ದ ಶಿವಪರವಾದ, ವಿಷ್ಣುಪರವಾದ ಶ್ಲೋಕಗಳ ಜೊತೆಗೆ ಕನ್ನಡದ ಶಾಸನಕವಿಗಳು ಕನ್ನಡ ಭಾಷೆಯಲ್ಲೂ ಪ್ರಾರ್ಥನಾಶ್ಲೋಕಗಳನ್ನು ರಚಿಸಲು ಮುಂದಾದುದು ಒಂದು ವಿಶೇಷ ಬೆಳವಣಿಗೆ ಎನ್ನಬಹುದು. ಕನ್ನಡದಲ್ಲೇ ಬರೆದ ಪ್ರಾರ್ಥನಾ ಪದ್ಯಗಳ ಸಂಖ್ಯಾಪ್ರಮಾಣ ಕಡಿಮೆಯಾದರೂ ಸಹ ಸಾಹಿತ್ಯಕವಾಗಿ ಸುಂದರವಾದ ಪದ್ಯಗಳ ರಚನೆಯ ಕಡೆಗೆ ಕವಿಗಳು ಮನಸ್ಸು ಮಾಡಿದ್ದರು ಎಂಬುದು ವಿದಿತವಾಗುತ್ತದೆ. ಸಂಸ್ಕೃತದ ಪ್ರಭಾವದಿಂದ ಹೊರಬರುವ ಪ್ರಯತ್ನದಲ್ಲಿ ಇದೊಂದು ಪ್ರಮುಖವಾದ ಹೆಜ್ಜೆಯಾಯಿತೆನ್ನಬಹುದು.

## ೪.೨ : ರಾಜರ ವರ್ಣನೆ :-

'ರಾಜಾ ಪ್ರತ್ಯಕ್ಷ ದೇವತಾ' ಎಂದು ಭಾವಿಸಿದ್ದ ಸಮಾಜದಲ್ಲಿ ಸಹಜವಾಗಿ ರಾಜರುಗಳಿಗೆ ಪ್ರಮುಖವಾದ ಸ್ಥಾನವಿದೆ. ರಾಜ್ಯದ ಉನ್ನತಿ ಅವನತಿಗಳು ರಾಜನನ್ನೇ ಅವಲಂಬಿಸಿರುತ್ತದೆ. ಹೀಗಾಗಿ ಪ್ರಬಲನಾದ, ದೂರದೃಷ್ಟಿಯನ್ನು ಹೊಂದಿರುವ ರಾಜನು ಆಳ್ವಿಕೆ ನಡೆಸುತ್ತಿದ್ದರೆ ಸಹಜವಾಗಿ ಆ ಸಾಮ್ರಾಜ್ಯವು ಅಭಿವೃದ್ಧಿಯನ್ನು ಹೊಂದಲು ಸಾಧ್ಯವಾಗುತ್ತದೆ. ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಹಲವಾರು ರಾಜಮನೆತನಗಳ ಹಲವಾರು ರಾಜರುಗಳು ಆಯಾ ಸಾಮ್ರಾಜ್ಯಗಳ ಸರ್ವಾಂಗೀಣ ಪ್ರಗತಿಗೆ ಗಮನ ನೀಡಿದ್ದರು ಎಂಬ ಅಂಶಗಳನ್ನು ಅಸಮರ್ಥರಾದವರಿಂದ ಸಾಮ್ರಾಜ್ಯಗಳು ಅವನತಿಯನ್ನು ಕಾಣಬೇಕಾಗಿ ಬಂದ ವಿಚಾರಗಳನ್ನೂ ಶಾಸನಗಳು ದಾಖಲಿಸುತ್ತವೆ. ಶಾಸನ ರಚನಾಕಾರರು ಸಹಜವಾಗಿ ರಾಜಾಶ್ರಯವನ್ನು ಪಡೆದಿದ್ದ ಕಾರಣದಿಂದ ಆಶ್ರಯ ಕೊಟ್ಟ ದೊರೆಯನ್ನು ಬಣ್ಣಿಸುವಾಗ ವಾಸ್ತವಿಕತೆಗಿಂತ ಸ್ವಲ್ಪ ಉತ್ಪ್ರೇಕ್ಷೆಯು ಬಂದಿರುವುದು ಸಹಜ. ಆದರೂ ಶಾಸನಗಳು ನಿರೂಪಿಸಿರುವ ರಾಜರುಗಳ ವ್ಯಕ್ತಿತ್ವವು ಕೆಲವೊಮ್ಮೆ ವಾಸ್ತವ ವಿಚಾರಕ್ಕೆ ಸಮೀಪವಾದವುಗಳಾಗಿ ಕಂಡುಬಂದಿವೆ ಎನ್ನಲು ಸಾಧ್ಯವಿದೆ.

ಕರ್ನಾಟಕವನ್ನು ಆಳಿದ ಹಲವಾರು ರಾಜಮನೆತನಗಳಿಗೆ ಸೇರಿದ ರಾಜರುಗಳ ವ್ಯಕ್ತಿತ್ವವನ್ನು ಪರಾಕ್ರಮವನ್ನು ಹಾಗೂ ಜನಪರವಾದ ಕಾಳಜಿಯನ್ನು ಶಾಸನಗಳು ಸಾಹಿತ್ಯಕವಾಗಿ ದಾಖಲಿಸಿವೆ. ಅಂತಹ ವರ್ಣನೆಯನ್ನು ಒಳಗೊಂಡ ಭಾಗಗಳನ್ನು ಈಗ ಗಮನಿಸಬಹುದಾಗಿದೆ.

**ಸುಭಟರ್ಕಳ್ ಕವಿಗಳ್ ಸು**

**ಪ್ರಭುಗಳ್ ಚೆಲ್ವರ್ಕಳಭಿಜನರ್ಕಳ್ ಗುಣಿಗಳ್**

**ಅಭಿಮಾನಿಗಳತ್ಯುಗ್ರರ್**

**ಗಂಭೀರಚಿತ್ತರ್ ವಿವೇಕಿಗಳ್ ನಾಡವರ್ಗಳ್**[೧೭]

ಎಂಬ ಕವಿರಾಜಮಾರ್ಗಕಾರನ ಮಾತು ಕನ್ನಡಿಗರ ಸ್ವಭಾವ ಚಿತ್ರವನ್ನು ನೀಡುತ್ತದೆ. ಆಳ್ವಿಕೆ ನಡೆಸಿದ ರಾಜಮಹಾರಾಜರು, ಸಾಮಂತರು, ಮಾಂಡಲಿಕರು, ಅಧಿಕಾರಸ್ಥರು ಹಾಗೂ ಸಾಮಾಜಿಕ ಧಾರ್ಮಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದ ಎಲ್ಲ ವರ್ಗದವರಿಗೂ ಈ ಮಾತು ಅನ್ವಯಿಸುತ್ತದೆ. ಅಂತಹವರುಗಳಲ್ಲಿ ಮೊದಲಿಗೆ ಕನ್ನಡ ಶಾಸನಗಳಲ್ಲಿ ರಾಜರುಗಳ ಬಗೆಗೆ ಬಂದಿರುವ ವರ್ಣನೆಗಳನ್ನು ಇಲ್ಲಿ ಕಾಣಬಹುದು.

ಶಾಸನಗಳಲ್ಲಿ ದೇವತಾಸ್ತುತಿಯಾದ ನಂತರ ಶಾಸನವು ಯಾವ ಅರಸನ ಕಾಲಕ್ಕೆ ಸೇರಿರುತ್ತದೆಯೋ ಆ ಅರಸನ ಪ್ರಸ್ತಾವನೆ ಬರುತ್ತದೆ. ಅರಸನನ್ನು ಪ್ರಸ್ತಾಪಿಸುವಾಗ ಕೆಲವೊಮ್ಮೆ ಆ ವಂಶದ ಸುದೀರ್ಘವಾದ ವಂಶಾವಳಿಯ ವರ್ಣನೆಯು ಬಂದಿರುತ್ತದೆ. ವಂಶಾವಳಿಯ ನಿರೂಪಣೆಯನ್ನು ಮಾಡುವಾಗ ಸಹಜವಾಗಿ ಪೌರಾಣಿಕ ಪುರುಷನೊಬ್ಬನಿಂದ ಆರಂಭಿಸಿ ಹಲವಾರು ತಲೆಮಾರುಗಳವರೆಗೆ ಹಾಗೂ ಪ್ರಸ್ತುತ ಅರಸನವರೆಗೆ ಶಾಸನಗಳು ವರ್ಣಿಸುತ್ತವೆ. ಗಂಗರ ಕಾಲದ ತಾಮ್ರದ ಶಾಸನಗಳಲ್ಲಿ, ಹೊಯ್ಸಳರ ಕಾಲದ ಶಿಲಾಶಾಸನಗಳಲ್ಲಿ ಈ ರೀತಿಯಾದ ವಂಶಾವಳಿಯ ನಿರೂಪಣೆಯನ್ನು ಕಾಣಬಹುದಾಗಿದೆ. ಕೆಲವೊಮ್ಮೆ ಈ ರೀತಿಯಾದ ನಿರೂಪಣೆಗಳು ಚಿಕ್ಕದಾಗಿ ಒಂದು ಅಥವಾ ಎರಡು ಪದ್ಯಗಳಿಗೆ ಸೀಮಿತವಾಗಿದ್ದರೆ, ಮತ್ತೆ ಕೆಲವೊಮ್ಮೆ ಹತ್ತಾರು ಪದ್ಯಗಳವರೆಗೂ ಹರಡಿರುವ ಸಂದರ್ಭಗಳಿರುತ್ತವೆ. ಇಂತಹ ವಂಶಾವಳಿಯ ನಿರೂಪಣೆಯನ್ನು ಮಾಡಿಕೊಳ್ಳುವ ಪರಿಪಾಠವು ಆರಂಭವಾದದ್ದು ೯-೧೦ನೆಯ ಶತಮಾನದ ನಂತರದಲ್ಲಿ ಎನ್ನಲು ಸಾಧ್ಯವಿದೆ. ಗಂಗರ ವಂಶಾವಳಿಯ ನಿರೂಪಣೆಯ ಭಾಗವನ್ನು ಕಲ್ಲೂರುಗುಡ್ಡ ಮತ್ತು ಪುರಳೆ ಗ್ರಾಮದ ಶಾಸನಗಳಲ್ಲಿ[೧೮] ಕಾಣಬಹುದಾಗಿದೆ.

ಹೊಯ್ಸಳರ ವಂಶಾವಳಿಯನ್ನು ಹಲವಾರು ಶಾಸನಗಳು[೧೯] ಒಳಗೊಂಡಿವೆ. ಅವುಗಳಲ್ಲಿ ಖಾಂಡ್ಯಗ್ರಾಮದ ಶಾಸನಪದ್ಯದಲ್ಲಿ

**ಶ್ರೀಶನನಾಭಿಪದ್ಮಭವಸಂಭವನತ್ರಿತದತ್ರಿಸೂನುತಾ**

**ನಾಶಶಿತತ್ಸುತಂ ಬುಧನವಂಗೆ ಪುರೂರವನಾಯುವಾತ ನಿಂ**

**ದಾಶುಭಲಕ್ಷಣಂಗೆ ನಹುಷಂ ನಹುಷಂಗೆ ಯಯಾತಿಯಾಧರಾ**

**ಧೀಶಸುತಂ ಯದುಕ್ಷಿತಿಪನಾ ಯದುವಂಶದೊಳಾದನಾ ಸಳಂ ॥**

ಎಂಬುದಾಗಿ ಸಂಕ್ಷಿಪ್ತವಾಗಿ ಹಾಗೂ ಸರಳವಾಗಿ ಕವಿಯು ನಿರೂಪಿಸಿದ್ದಾನೆ. ವಂಶಾವಳಿಯ ನಿರೂಪಣೆಯ ನಂತರ ಶಾಸನದಲ್ಲಿ ಆಳ್ವಿಕೆಯನ್ನು ನಡೆಸುತ್ತಿದ್ದ ರಾಜರವರ್ಣನೆ ಕಂಡುಬರುತ್ತದೆ.

ಅಂತಹ ಪದ್ಯಗಳ ಮೂಲಕ ನಾಡನ್ನು ಆಳಿದ ದೊರೆಗಳ ವ್ಯಕ್ತಿತ್ವವನ್ನು ಪರಿಚಯಿಸುವ ಪ್ರಯತ್ನವನ್ನು ಮಾಡಲಾಗಿದೆ.

ರಾಷ್ಟ್ರಕೂಟ ದೊರೆ ಮುಮ್ಮಡಿ ಕೃಷ್ಣನ ಮೊಮ್ಮಗನಾದ ಇಂದ್ರರಾಜನನ್ನು ಕುರಿತ ಶ್ರವಣಬೆಳಗೊಳದ ಪ್ರಶಸ್ತಿ ಶಾಸನವು[೨೦] ಆತನ ದಾನ, ಶೌಚ, ರಣಪರಾಕ್ರಮ ಮತ್ತು ಆತನನ್ನು ಸಮಕಾಲೀನ ರಾಜರುಗಳೊಂದಿಗೆ ಅವನನ್ನು ಹೋಲಿಸಿ ನೋಡುವ ತೌಲನಿಕ ವಿವೇಚನೆ ಈ ಶಾಸನದ ಅಂಶಗಳಾಗಿವೆ.

**ದುಸ್ಥಿತೆಲೋಕಕಲ್ಪತರುವೆಂಬುದು ವೈರಿನರೇಂದ್ರ ಕುಂಭಿಕುಂ**
**ಭಸ್ಥಳ ಪಾಟನ ಪ್ರಣವ ಕೇಸರಿಯೆಂಬುದು ಕಾಮಿನೀಜನೋ**
**ರಸ್ಥಳ ಹಾರಮೆಂಬುದು ಮಹಾಕವಿಚಿತ್ತ ಸರೋರುಹಾಕರಾ**
**ವಸ್ಥಿತ ಹಂಸನೆಂಬುದು ಸಮಸ್ತ ಮಹೀಜನಮಿಂದ್ರರಾಜನಾ ॥**

ಎಂಬ ಈ ಪದ್ಯ ಇಂದ್ರರಾಜನ ತ್ಯಾಗ, ವೀರ, ರಸಿಕತೆ ಹಾಗೂ ಕಾವ್ಯಾಸಕ್ತಿಯನ್ನು ನಿರೂಪಿಸುತ್ತದೆ. ಹಾಗೆಯೇ

**ಪುಸಿವುದೆ ತಕ್ಕು ಕೊಟ್ಟಟೆಪಿಕೊಳ್ವುದೆ ಮನ್ತಣಮನ್ಯನಾರಿಗಾ**
**ಟಿಸುವುದೆ ಚಿತ್ತಮೀಯದುದೆ ಬಿನ್ನಣಮಾರುಮನೆಯ್ದೆಕೂರ್ತುಬಂ**
**ಚಿಸುವುದೆ ಕಲ್ತಕಲ್ಪಿಯೆನೆ ಮತ್ತವರಂ ಪೆಸರ್ಗೊಣ್ಡದೆನ್ತು ಪೋ**
**ಲಿಸುವುದೊ ಪೇಟಿಮೀಗಡಿನ ರಾಜತನೂಜರೊಳಿನ್ದ್ರರಾಜನಂ ॥**

ಎಂಬ ಪದ್ಯದಲ್ಲಿ 'ಈಗಡಿನ' ರಾಜರುಗಳಿಗೆ ಇಂದ್ರರಾಜನನ್ನು ಹೋಲಿಸಲು ಸಾಧ್ಯವೇ? ಎಂದು ಪ್ರಶ್ನಿಸಿದೆ. ಏಕೆಂದರೆ 'ಈಗಡಿನ' ರಾಜರುಗಳಾದರೋ ಸುಳ್ಳು, ಕೊಟ್ಟ ದಾನವನ್ನು ಆಸೆಯಿಂದ ಹಿಂದೆ ಪಡೆಯುವ ಚಿತ್ತ, ದಾನ ಮಾಡದಿರುವುದು, ಅನ್ಯನಾರಿಯರಿಗೆ ಆಸೆಪಡುವ ಚಿತ್ತ, ಅನ್ಯರನ್ನು ವಂಚಿಸುವ ಗುಣಗಳನ್ನು ಹೊಂದಿದ್ದಾರೆ. ಅಂತಹವರ ಜೊತೆಗೆ ಇಂದ್ರರಾಜನನ್ನು ಹೇಗೆ ಹೋಲಿಸಲು ಸಾಧ್ಯ? ಈತನು ಅವರೆಲ್ಲರಿಗಿಂತ ಭಿನ್ನನು; ಈತನಾದರೋ ಸಂಪತ್ತು, ವಿಜಯ, ವಿದ್ಯೆ, ತ್ಯಾಗ, ಪರಾಕ್ರಮ ಪ್ರಸಿದ್ಧಿಗೆ 'ಆಗರ'ನಾದನೆಂಬುದಾಗಿ –

**ಶ್ರೀಗೆ ವಿಜಯಕ್ಕೆ ವಿದ್ದೆಗೆ**
**ಚಾಗಕ್ಕದಟಿಂಗೆ ಜನಕೆ ಪೆಂಪಿಂಗಿನಿತ**
**ಕ್ಕಾಗರಮಿದೆನ್ದು ಕನ್ದುಕ**
**ದಾಗಮದೊಳೆ ನೆಗಟಕ್ಕೆಮಲ್ತೆ ಬೀರರ ಬೀರ ॥**

ಎಂಬ ಪದ್ಯವು ಬಣ್ಣಿಸಿದೆ.

ಕರ್ನಾಟಕವನ್ನು ಆಳಿದ ಪ್ರಮುಖ ರಾಜಮನೆತನಗಳಲ್ಲಿ ಕಲ್ಯಾಣದ ಚಾಲುಕ್ಯರ ವಂಶದಲ್ಲಿ ಅತಿ ಪ್ರಸಿದ್ಧನಾದವನು ಮತ್ತು ಪ್ರಮುಖನಾದವನು ಆರನೆಯ ವಿಕ್ರಮಾದಿತ್ಯ. ಚಾಳುಕ್ಯ ವಿಕ್ರಮಶಕೆಯನ್ನು ಆರಂಭಿಸಿದ ಕೀರ್ತಿಯೂ ಇವನಿಗೆ ಸಲ್ಲುತ್ತದೆ. ಈತನ ಪರಾಕ್ರಮವನ್ನು ಬಳ್ಳಿಗಾವೆಯ ಶಾಸನವು[೨೧] ಹೀಗೆ ಬಣ್ಣಿಸಿದೆ.

**ನರಸಿಂಹಾಕಾರದಿಂ ದಾನವಪತಿಯುರಮಂ ಸೀಳ್ದನಣ್ಮುಣ್ಮುರುದ್ರಂ**
**ಬೆರಸಾಕೈಳಾಸಮಂತೂಗಿದ ನಳವಳವಾರ್ತ್ತರ್ತ್ತಿಯಿಂಚರ್ಮ್ಮಮಂನೆ**
**ಟ್ಟರದಿನ್ದ್ರಂಗಿತ್ತನಾಪ್ರ್ವಾಪ್ರ್ವಖಿಳಪರಿಗತಕ್ಷತ್ರಮಪ್ಪಂತೆ ಧಾತ್ರೀ**
**ಶರನಿಪ್ರ್ವತ್ತೊಂದು ಸೂಳ್ಕೊಂದನಚಲಮೆ ಚಲಂ ವಿಕ್ರಮಾದಿತ್ಯ ನಿನ್ನ ॥**
**ಪುದುವೇಕನ್ಯರ್ಗ್ಗಮಾನೊರ್ಬ್ಬನೆ ತಳೆಯಲದಂ ಸಾಲ್ವೆನೆನ್ದಾಮಹಾಕೂ**
**ರ್ಮದ ಬೆನ್ನಿಂದಾ ಭುಜಂಗಾಧಿಪನ ಪಡೆಗಳಿಂದಾದಿಶಾಕುಂಜರ ಸ್ಕ**
**ನ್ದದಿನಾಭೂಭೃದ್ಧರಿಮೂಳದಿನಖಿಳಧರಾಭಾರಮಂತನ್ದ ವಿಕ್ರಾ**
**ನ್ತದ ಬಲ್ಪಿಂತನ್ನ ತೋಳೊಳ್ಪದುಳಮಿರಿಸಿದಂ ವಿಕ್ರಮಾದಿತ್ಯದೇವಂ॥**

ಚಾಲುಕ್ಯದೊರೆ ವಿಕ್ರಮಾದಿತ್ಯನಲ್ಲಿ ನರಸಿಂಹನ ರೂಪದಿಂದ ದಾನವವನ್ನು ಕೊಂದ ಪರಾಕ್ರಮ, ರುದ್ರನಿಂದ ಕೂಡಿದ ಕೈಲಾಸ ಪರ್ವತವನ್ನೇ ಎತ್ತಿದ ರಾವಣನ ಪರಾಕ್ರಮ, ಪ್ರೀತಿಯಿಂದ ಇಂದ್ರನಿಗೆ ತನ್ನ ದೇಹವನ್ನೇ ಅರ್ಪಿಸಿದ ದಧೀಜಿಯ ತ್ಯಾಗ, ಕ್ಷತ್ರಿಯರಿಲ್ಲದಂತೆ ಮಾಡಲು ಇಪ್ಪತ್ತೊಂದು ಸಲ ಭೂಪ್ರದಕ್ಷಿಣೆಯನ್ನು ಮಾಡಿದ ಪರಶುರಾಮನ ಛಲವು ಕಂಡುಬರುತ್ತದೆ. ಆ ವಿಕ್ರಮಾದಿತ್ಯನಾದರೋ ಭೂಭಾರವನ್ನು ಹೊರುವ ಗೊಡವೆಯು ಇತರರಿಗೆ ಬೇಡವೆಂದು ಮಹಾಕೂರ್ಮನ ಬೆನ್ನಿಂದ, ಆದಿಶೇಷನ ಹೆಡೆಗಳಿಂದ, ದಿಗ್ಗಜಗಳ ಹೆಗಲಿನಿಂದ, ಭೂಭಾರವನ್ನು ಇಳಿಸಿ, ಸಮಸ್ತ ಭೂಮಂಡಲದ ಭಾರವನ್ನು ತನ್ನ ಪರಾಕ್ರಮದಿಂದ ತನ್ನ ತೋಳುಗಳಲ್ಲಿ ಧರಿಸಿದನು ಎಂಬುದಾಗಿ ಶಾಸನವು ಬಣ್ಣಿಸುತ್ತದೆ. ಪರಾಕ್ರಮಿಯಾದ ವಿಕ್ರಮಾದಿತ್ಯನ ಬಗೆಗೆ ಈ ರೀತಿಯಾದ ಬಣ್ಣನೆಯು ಅರ್ಥಪೂರ್ಣವೂ ಆಗಿದೆ ಎನ್ನಬಹುದು. "ಪರಾಕ್ರಮವನ್ನು ಕಳೆದುಕೊಂಡ ಶತ್ರುರಾಜರುಗಳ ಬಳಗವು ತಂದುಕೊಡುವ ಗಜಮದಧಾರಾಜಳ ಮತ್ತು ಹಯಂಗಳ ಲಾಲಾಜಳದ ಹೊನಲು ಈ ರಾಜನ ಅರಮನೆಯಲ್ಲಿ ತುಂಬಿ ಹರಿಯುತ್ತಿತ್ತು" ಎಂಬುದಾಗಿ ಷಿಕಾರಿಪುರದ ಶಾಸನವು[೨೨] ಬಣ್ಣಿಸುವ ಮೂಲಕ ಈತನ ಪರಾಕ್ರಮವನ್ನು ಕೊಂಡಾಡಿದೆ. ಈ ವಿಕ್ರಮಾಂಕನು 'ಅಖಿಳಭೂಚಕ್ರ'ವನ್ನು ಲೀಲೆಯಿಂದ ಪರಿಪಾಲಿಸುತ್ತಿದ್ದನೆಂಬುದಾಗಿ ಹರಿಹರದ ಶಾಸನವು[೨೩] ಪ್ರೌಢವಾಗಿ ಬಣ್ಣಿಸಿದೆ. ಶಾಸನದ ಪದ್ಯವು ಹೀಗಿದೆ.

**ಚತುರಂಭೋರಾಶಿವೇಳಾವಳಯಿತವಸುಧಾ ಭಾರಧೌರೇಯದೋರ್ಮಂ**
**ಡಿತಚಂಡೋ ಗ್ರಾಸಿಕಾಳೋರಗವದನ ನಿಪೀತಾಹಿತಪ್ರಾಣನತ್ಯೂ**
**ರ್ಜಿತತೇಜೋರಾಜಿತಾಜಿಪ್ರಬಳರಿಪು ಮಹೀಪಾಳಕೋಳಾಹಳಕ್ರೀ**
**ಡಿತಲೋಲಂ ಲೀಲೆಯಿಂ ಪಾಲಿಸಿದನಖಿಳಭೂಚಕ್ರಮಂ ವಿಕ್ರಮಾಂಕಂ॥**

ಕಲ್ಯಾಣದ ಚಾಲುಕ್ಯರ ನಂತರದಲ್ಲಿ ಆ ಸಾಮ್ರಾಜ್ಯವನ್ನು ವಶಪಡಿಸಿಕೊಂಡವನು ಕಲಚುರ್ಯ ವಂಶದ ಬಿಜ್ಜಳದೇವ. ಆತನ ಪರಾಕ್ರಮವನ್ನು ಹಲವಾರು ಶಾಸನಗಳು ಕಾವ್ಯಾತ್ಮಕವಾಗಿ ನಿರೂಪಿಸಿವೆ. ಹರಿಹರದ ಶಾಸನವೊಂದು'[೨೪]

**ತೊಡರ್ದೊಡರಾತಿಭೂಭುಜರ ಬೆನ್ನೊಡಲಂ ಹೆಡಮಂಡೆನೆತ್ತಿ ಕೂ**
**ಗಿಡಿಸದೆ ಕೆತ್ತಿ ಮುನ್ನಡಿಗುರುಳ್ಚಿ ಕರುಳ್ಗಳನೆಯ್ದೆ ಸಾರ್ಚಿ ಗೋ**
**ಳಿಡಿಸದೆ ಗಂಟಲಿಂ ನೆಱಿಯೆ ಕಣ್ಪೊಱಸಾಯ್ವಿನಮೆತ್ತಿಮುತ್ತಿ ಬಾ**
**ಯ್ವಿಡಿಸದೆ ಮಾಣ್ಬನೇ ಸಮರದೊಳ್ ಕಲಿಬಿಜ್ಜಳದೇವ ಭೂಭುಜಂ ॥**

ಎಂಬುದಾಗಿ ಬಣ್ಣಿಸಿದೆ. ಈತನಿಗೆ ಚಾಲುಕ್ಯ ಸಾಮ್ರಾಜ್ಯವು ಕೈವಶವಾದ ರೀತಿಯನ್ನು ಮತ್ತೊಂದು ಶಾಸನವು[೨೫] "ಕೊಡದಲ್ಲಿ ಉದಯಿಸಿದ ಅಗಸ್ತ್ಯನು ಸಮುದ್ರವನ್ನೇ ಹೀರಿದ ರೀತಿಯಲ್ಲಿ" ವಶವಾಯಿತೆಂಬುದಾಗಿ ಸೊಗಸಾದ ಉಪಮೆಯ ಮೂಲಕ ಬಣ್ಣಿಸಿದೆ.

ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಶಾಸನವು[೨೬] ಬಿಜ್ಜಳದೇವನ ಪರಾಕ್ರಮವನ್ನು ಮಳೆಗಾಲದ ಜೊತೆಗೆ ಹೋಲಿಸಿ ಸೊಗಸಾಗಿ ಬಣ್ಣಿಸಿದೆ. ಆ ಶಾಸನ ಪದ್ಯವು ಈ ರೀತಿಯಾಗಿವೆ.

**ಕೆದಱಿದರಾತಿಭೂಪಶಿರೋಮಣಿಗಳುನೆಗಲ್ದಾಲಿಕಲ್ಗಳು**
**ರ್ವ್ವಿದ ಭಟಶಸ್ತ್ರಸಂಚಯದ ಮಿಂಚುಗಳೊಪ್ಪುವ ಮಿಂಚುಗಳು ಸಮಂ**
**ತೊದವಿದರಕ್ತಜಾಳಜಳಧಾರೆಗಳಾಗಿರೆ ವರ್ಷಮಿಂತು ಹೋ**
**ಲ್ತುದು ಮಳೆಗಾಲಮಂ ನೆಗಳ್ದ ಬಿಜ್ಜಲದೇವ ಸಂಗರಾಂಗಣ ॥**

ಇದೇ ಶಾಸನದ ಮತ್ತೊಂದು ಪದ್ಯದಲ್ಲಿ ಬಿಜ್ಜಳದೇವನ ಗುಣಗಳನ್ನು, ವ್ಯಕ್ತಿತ್ವವನ್ನು ನಿರೂಪಿಸಲಾಗಿದೆ. ಅದರ ಪ್ರಕಾರ 'ಈತನು ಮಾತನಾಡಿದರೆ ಮೇರುಮಂದರ ಪರ್ವತದಲ್ಲಿನ ಶಿಲಾಕ್ಷರವು, ನೀಡಿದರೆ ಬೇಡಿ ಬಂದವರ ಎಡರುಗಳಿಗೆ ಕೇಡುಂಟಾಗುತ್ತದೆ. ರಕ್ಷಿಸಲು ಮುಂದಾದರೆ ಶರಣಾಗತರಾದ ರಾಜರುಗಳ ವಂಶಕ್ಕೆ ಅಜರಾಮರತ್ವವುಂಟಾಗುತ್ತದೆ ಎಂದಿರುವಾಗ ಬೇರೆಯ ಸಾಧಾರಣ ನಿಕೃಷ್ಟರಾದ 'ನರೇಂದ್ರ'ರನ್ನು 'ಆಹವರೌದ್ರರೂಪ'ನಾದ ಬಿಜ್ಜಳಮಹೀಪನ ಜೊತೆಗೆ ಹೋಲಿಸಲು ಸಾಧ್ಯವೇ? ಎಂದು ಪ್ರಶ್ನಿಸುತ್ತದೆ.

ಕರ್ನಾಟಕದಲ್ಲಿ ಆಳ್ವಿಕೆಯನ್ನು ನಡೆಸಿದ ಮತ್ತೊಂದು ಪ್ರಮುಖವಾದ ರಾಜವಂಶವೆಂದರೆ ಹೊಯ್ಸಳರು. ಕರ್ನಾಟಕದ ಕಲೆ, ಸಂಸ್ಕೃತಿಗೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿದ ಖ್ಯಾತಿಯು ಈ ವಂಶದ ರಾಜರುಗಳಿಗೆ ಸಲ್ಲುತ್ತದೆ. ಶಾಸನಗಳು ಈ ರಾಜರುಗಳ ಗುಣಗಾನವನ್ನು ಸೊಗಸಾಗಿ ಮಾಡಿವೆ. ಈ ವಂಶದ ವಿನಯಾದಿತ್ಯ, ಎರೆಯಂಗನೃಪ, ಒಂದನೇ ಬಲ್ಲಾಳ, ವಿಷ್ಣುವರ್ಧನ, ಒಂದನೇ ನರಸಿಂಹ, ಇಮ್ಮಡಿ ಬಲ್ಲಾಳನನ್ನು ಹಲವಾರು ಶಾಸನಗಳು ಬಣ್ಣಿಸಿವೆ. ಈ ದೊರೆಗಳ ಪರಾಕ್ರಮ, ವ್ಯಕ್ತಿತ್ವ ಬಣ್ಣನೆಗೆ ಒಳಗಾದ ವಸ್ತುಗಳಾಗಿವೆ.

**ಅಱಿಯಂ ಪೆಱರಂಗನೆ[ಯ]ರ**
**ನಱಿಯಂ ಕ್ರಿಪಣತ್ವಮಂ ರಣಾಂಗಣದೊಳು ತಾ**
**ನಱಿಯಂ ಪೊಱಗಡಿಯಿಡುವುದ**
**ನಱಿಯದವರ ಹೊಗಳಲಱಿಯನೆಱಿಯಂಗ[ನೃಪಂ]**[೨೭]

**ಎಱಿಗುವರಿನೃಪರ್ಗ್ಗೆ ಸಿಡಿಲ**
**ವೊಱಿಗುವನೆಱಗಿಸುವನಮರರಮಣಿಯರನದೇ**
**ನೆಱಿಯಂಗ ನೃಪತಿಗುಣಗಣ**
**ದೆಱಿಯನೊ ಮಾಡಿದರ್ಗ್ಗೆ ಮಾಳ್ಪರಿಲ್ಲೀ ಜಗದೊಳ್**[೨೮]

ಎಂಬ ಪದ್ಯಗಳು ಎರೆಯಂಗ ನೃಪನ ಪರಾಕ್ರಮ ಮತ್ತು ವ್ಯಕ್ತಿತ್ವವನ್ನು ಸಹಜವಾಗಿ ನಿರೂಪಿಸಿವೆ. ಎರೆಯಂಗನಾದರೋ ಪೆಱರಂಗನೆಯರನ್ನು ಅರಿಯದವನೂ, ಕ್ರಿಪಣತ್ವವನ್ನು ಅರಿಯದವನೂ, ಯುದ್ಧರಂಗದಿಂದ ಹೊರಗೆ ಹೆಜ್ಜೆಯಿಡುವುದನ್ನು ಅರಿಯದವನೂ ಎಂಬುದಾಗಿ ಶಾಸನವು ಬಣ್ಣಿಸುತ್ತದೆ. ಆ ಮೂಲಕ ಹೊಯ್ಸಳ ದೊರೆಗಳ ಶೌಚಗುಣವನ್ನೂ ಹಾಗೂ ವೀರತನವನ್ನು ಪ್ರಸ್ತುತ ಪಡಿಸಿದೆಯೆನ್ನಬಹುದು.

ಹೊಯ್ಸಳರ ವಂಶದಲ್ಲಿ ಅತಿ ಪ್ರಮುಖನಾದ ಪ್ರಸಿದ್ಧನಾದ ದೊರೆಯೆಂದರೆ ವಿಷ್ಣುವರ್ಧನ. ಹೊಯ್ಸಳರ ಸ್ವತಂತ್ರ ಸಾಮ್ರಾಜ್ಯವನ್ನು ಕಟ್ಟಬೇಕೆಂಬ ಕನಸನ್ನು ಹೊಂದಿದ್ದ ಈತನು ಆ ಪ್ರಯತ್ನದಲ್ಲಿ ಸಾಕಷ್ಟು ಯಶಸ್ಸನ್ನೂ ಸಹ ಪಡೆದನೆನ್ನಬಹುದು. ಈತನು ರಾಜಕೀಯವಾಗಿ ಹೆಸರಾದವನಷ್ಟೇ ಅಲ್ಲದೆ ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲೂ ಸಹ ಸಾಕಷ್ಟು ಕೊಡುಗೆಯನ್ನು ನೀಡಿದವನಾಗಿದ್ದಾನೆ. ಈತನನ್ನು "ವನರುಹನಾಭನ ಪಂನ್ನೊಂದನೆಯವತಾರ"[೨೯] ವೆಂದು ಶಾಸನವು ಬಣ್ಣಿಸಿದೆ. ಹಾಗೆಯೇ ತಳಲೂರಿನ ಶಾಸನವು[೩೦]

**ಶ್ರೀವಿಷ್ಣುವೆ ಪುಟ್ಟಿದ ನಂ**
**ತೀವಸುಧಾತಳದೊಳೆನಿಸುವಂ ವಿಷ್ಣುನೃಪಂ**

ಭಾವಿಸೆ ಲಕ್ಷ್ಮಿಯೆ ಲಕುಮಾ

ದೇವಿಯೆನಲು ನೆಗಳ್ದಳಾ ನೃಪಾಂಗನೆ ಧರೆಯೊಳು

ಎಂಬುದಾಗಿ ನಿರೂಪಿಸಿದೆ. ವಿಷ್ಣುವು ವಿಷ್ಣುವರ್ಧನನಾಗಿ ಮತ್ತು ಲಕ್ಷ್ಮೀದೇವಿಯು ಮಹಾರಾಣಿ ಲಕ್ಷ್ಮಿಯಾಗಿ ಅವತರಿಸಿದರೆಂಬುದಾಗಿ ಶಾಸನವು ಉತ್ಪ್ರೇಕ್ಷಿಸುತ್ತದೆ. ಆ ಕಾರಣದಿಂದಾಗಿ ಈತನು

ಬುಧಲೋಕಾಶ್ರಯನೆಂಬ ತಾರ್ಕ್ಷ್ಯರಥನೆಂಬ ಬ್ಜಾಜಯತಾಕ್ಷಂದಲೆಂ

ಬಧರಾಧಾರಕನೆಂಬ ಭೋಗಯುತನೆಂಬುದ್ಯದ್ ಬಲಾನ್ವಿತನೆಂ

ಬಧರಿತ್ರೀವರನೆಂಬ ಲೋಕಸುತನೆಂಬೀ ಪೆರ್ಮ್ಮೆಯಿಂ ನೋಡೆ ವಿ

ಷ್ಣುಧರೇಶಂ ಸಲೆ ವಿಷ್ಣುವೋಲ್ ಸೊಗಯಿಪಂ ಲಕ್ಷ್ಮೀಮನೋವಲ್ಲಭಂ[೩೧]

ನೆಂಬುದಾಗಿ ಶಾಸನವು ಬಣ್ಣಿಸುತ್ತಾ "ವಿಷ್ಣು ವೋಲ್ ಸೊಗಯಿಪಂ ಲಕ್ಷ್ಮೀಮನೋವಲ್ಲಭಂ" ಎಂದಿದೆ. ಆ ವಿಷ್ಣುವರ್ಧನನಾದರೋ "ಅಶ್ರಮದಿಂ ಭೂಚಕ್ರಮಂ ವಿಕ್ರಮದೊಳೆ ಭುಜದೊಳ್ ವಿಷ್ಣು ಭೂಕಾನ್ತನಾನ್ತಂ" ಅದಕ್ಕೆ ಕಾರಣವೇನೆಂದರೆ "ಕಮಠನಿಗೆ ಸಕಲ ಉರ್ವಿಯನ್ನು ಹೊರುವ ಭಾರ, ಆದಿಶೇಷನಿಗೆ, ದಿಗ್ದಂತಿಗಳಿಗೆ ಭೂಮಿಯನ್ನು ಹೊರುವ ಭಾರವೇತಕ್ಕೆ'[೩೨] ಎಂಬುದಾಗಿತ್ತು. ಆದ್ದರಿಂದ ಈ ವಿಷ್ಣುಭೂಪಾಲಕನು "ಧಾತ್ರಿಯನ್ನು ತನ್ನ ಕಯ್ಯಲ್ಲಿ ಧರಿಸಿದ ಕಾರಣದಿಂದ ಸ್ಥಿರನೆಂದೂ, ಅಗ್ನಿಯನ್ನು ಮೀರಿಸುವ ತೇಜಸ್ವಿಯೆಂದೂ, ದಾನಗುಣದಲ್ಲಿ ಕನಕಶೈಲವನ್ನು ದೂರವಾಗಿಸುವವನೆಂದೂ, ಶೌಚಗುಣದಲ್ಲಿ ಪ್ರಮುಖನೆನಲು ನೋಡಿದವರು ನಿಃಪಾಪಿಗಳೆಂದೂ, ಸೌಂದರ್ಯದಲ್ಲಿ ಶಿವನೂ ಸಹ ಮನಸೋಲುವ ರೂಪವನ್ನು ಹೊಂದಿದವನೆಂಬುದಾಗಿ 'ಶ್ರೀರೂಪ ನಾರಾಯಣ' ನೆಂದೂ ಶಾಸನವು[೩೩] ಬಣ್ಣಿಸಿದೆ. ಯುದ್ಧರಂಗದಲ್ಲಿ ಈತನು

"ಮಹದೇವಕಾಳಾಗ್ನಿರುದ್ರಂಗೆ ಉರಿಗಣ್ಬಂದಂತೆ, ಮಾಕಾಳಿಗೆ

ಗರುವಡೆದರ್ಂತೆ, ಇಂದ್ರದಿಗುದಂತಿ ಸೊಕ್ಕಿಂಪರಿಪುಂಗೊಂಡಂತೆ"

ಶತ್ರುಗಳನ್ನು ಎದುರಿಸುತ್ತಿದ್ದನು.[೩೪] ಈ ವಿಷ್ಣುವರ್ಧನನ ರೂಪವನ್ನು ಬಣ್ಣಿಸುವಾಗ ಶಾಸನವು ವಿಷ್ಣುವಿನ ಹತ್ತು ಅವತಾರಗಳ ಕಲ್ಪನೆಯನ್ನು ಮೇಳೈಸಿಕೊಂಡಿದೆ. ಆ ಪದ್ಯವು ಇಂತಿದೆ.

ಪದದೊಳ್ಕೂರ್ಮ್ಮಸ್ವರೂಪಂ ನಯನಯುಗಳದೊಳುಮತ್ಸ್ಯರೂಪಂ ಘನಗ್ರೀ

ವದೊಳಾದಿಕ್ರೋಡರೂಪಂ ನಡುವಿನೊಳು ನೃಸಿಂಹತ್ವಮಾತ್ಮ ಪ್ರಭಾವಾ

ಸ್ಪದದಲು ರಾಮತ್ರಯತ್ವಂ ಮರೆ ವಿಕಸನದಲು ಬುದ್ಧರೂಪಾಗಿ ಗು

ಜ್ಜಲ್ಲದೆ ಕಲ್ಕಿತ್ವಕ್ಕೆ ಮೆಯ್ದಾರದ ಹರಿಯ್ದೆನಿಪಂ ವಿಷ್ಣುಜಿಷ್ಣುಕ್ಷಿತೀಷಂ[೩೫]

ಈ ವಿಷ್ಣುವರ್ಧನನು ಸಾಧಿಸಿದ ವಿಜಯಗಳಾದರೋ ಹಲವಾರು. ಆದ್ದರಿಂದ ಅವುಗಳನ್ನು 'ಪಟ್ಟಿಮಾಡುವುದಾದರೂ ಹೇಗೆ? ಅದಕ್ಕೆ

**ಪೆಸರ್ಗೊಂಡಾವಾವದೇಶಂಗಳ ನೆಣಿಸುವುದಾವಾವದೇಶಂಗಳಂ ಬ**

**ಣ್ಣಿಸಿಪೇಳುತ್ತಿರ್ಪ್ಪುದಾವಾವವನಿಪತಿಗಳು ಲೆಕ್ಕಿಸುತ್ತಿರ್ಪ್ಪುದೆಂಬೊಂ**

**ದೆಸಕಂ ಕೈಗಣ್ಮೆನಾಲ್ಕುಂ ಕಡಲತಡಿಯವರಂ ದಿಗ್ವಯಕ್ರೀಡಿಯೊಳು ಸಾ**

**ಧಿಸಿದಂ ಭೂಲೋಕಮಂ ಕ್ಷತ್ರಿಯಕುಳತಿಳಕಂ ವೀರವಿಷ್ಣುಕ್ಷಿತೀಶ ॥**

ಎಂಬುದಾಗಿ'[೩೬] ಶಾಸನಕವಿಯು ಕೈವಾರಿಸಿದ್ದಾನೆ.

ಈ ವಿಷ್ಣುವರ್ಧನನ ವಿಕ್ರಮ ವಿಜಯವು ಶೋಭಿಸುತ್ತಿದ್ದ ಬಗೆಯನ್ನು

**ಜವನುಂತಂನಯ ಗಂಡುಲಚ್ಚಣಮೆನಿಪ್ಪಾಮೀಸೆಯಂತಿರ್ದ್ದಲಂ**

**ಜುವಿನಂ ಕಂದುಗುವೆಂದು ಕಾಲುಗುರ್ಗಳಾನಮ್ರಾರಿಗಳು ಸುಯ್ಯಲಂ**

**ಜುವಿನಂ ತೇಜದ ಸೋಂಕಿನಿಂದವೆಮೆಸೀಗೆಂದುದ್ಧತನ್ಕೋರ್ಡಲಂ**

**ಜುವಿನಂ ವಿಕ್ರಮವಿಭ್ರಮಂಸೊಗಯಿಸಿತ್ತೀ ವಿಷ್ಣುಭೂಪಾಳನೊಳು ॥**

ಎಂಬ ಪದ್ಯವು ಬಣ್ಣಿಸಿದೆ. ವಿಷ್ಣುವಿಗೆ ಸಮಾನನಾದ ಈತನನ್ನು 'ನೆನೆಯಲು ಪಾಪಕ್ಷಯವಾಗುವುದೆಂದೂ, ದರ್ಶನ ಮಾಡಿದರೆ ಅಭಿಮತಸಂಸಿದ್ಧಿಯೆಂದೂ, ಭಕ್ತಿಯಿಂದ ಈತನನ್ನು ಆಶ್ರಯಿಸಿದರೆ ಪುಣ್ಯಪ್ರಾಪ್ತಿಯೆಂದೂ, ಶಾಸನಗಳು ಬಣ್ಣಿಸಿವೆ. ಆದ್ದರಿಂದ ಈತನು 'ಜಗತ್ಪಾವನ ಸತ್ಯತ್ಯಾಗಶೌಚಾಚರಪರಿಣತ' ನಾದವನೆಂದು ಶಾಸನಪದ್ಯಗಳು ಬಣ್ಣಿಸಿವೆ.[೩೭] ಒಟ್ಟಿನಲ್ಲಿ ವಿಷ್ಣುವರ್ಧನನ ಆಕರ್ಷಕ ವ್ಯಕ್ತಿತ್ವ ಶಾಸನಕವಿಗಳ ಬಣ್ಣನೆಯ ವಸ್ತುವಾಗಿತ್ತು ಎನ್ನಬಹುದು.

ವಿಷ್ಣುವರ್ಧನನ ಮಗ ಒಂದನೆಯ ನರಸಿಂಹ. ಈತನ ಬಣ್ಣನೆಯನ್ನು ಹಲವಾರು ಶಾಸನಗಳು ಒಳಗೊಂಡಿವೆ. ಈ ನರಸಿಂಹನು ಕಲಿಯುಗದೊಳಗೆ ಕ್ಷತ್ರಿಯ ಧರ್ಮವನ್ನು ಬೆಳಗಲು ಅವತಾರವೆತ್ತಿದನೆಂಬುದಾಗಿ ಹುಲ್ಲೇಕೆರೆಯ ಶಾಸನವು ಬಣ್ಣಿಸಿದೆ.[೩೮] ಶಾಸನ ಪದ್ಯವು ಈ ರೀತಿಯಿದೆ.

**ನಳನಾಭಾಗಾಂಬರೀಶ ಪ್ರಥಿತಪ್ರಿಥುಹರಿಶ್ಚಂದ್ರತಚ್ಚಂದ್ರಗುಪ್ತೋ**

**ಜ್ವಳಕೀರ್ತ್ಯಾರ್ರಾಮರಾಮಾರ್ಜ್ಜುನ ಪುರುಸಗರಖ್ಯಾತದುಷಂತ ಧಾತ್ರೀ**

**ತಳಪಾಳರ್ಕ್ಕೂಡಿಬಂದೀ ಕಲಿಯುಗದೊಳಗೊಂದಾದವ್ರೋಲು ಕ್ಷತ್ರಧರ್ಮ್ಮಂ**

**ತೊಳಗಲು ವಿಖ್ಯಾತಿವೆತ್ತಂ ಯದುಕುಳತಿಳಕಂ ನಾರಸಿಂಹಕ್ಷಿತೀಶಂ ॥**

ಪುರಾಣಪ್ರಸಿದ್ಧರಾದ ನಳ, ನಾಭಾಗ[೩೯], ಪೃಥು, ಹರಿಶ್ಚಂದ್ರ, ಚಂದ್ರಗುಪ್ತ, ರಾಮ, ಅರ್ಜುನ, ಪುರು, ಸಗರ, ದುಷ್ಯಂತ ಮೊದಲಾದ ಪ್ರಖ್ಯಾತರಾದವರು ಈ ಕಲಿಯುಗದಲ್ಲಿ ಒಂದಾಗಿ ಕ್ಷತ್ರಧರ್ಮವನ್ನು ಬೆಳಗುವುದಕ್ಕಾಗಿ ಯದುಕುಲದಲ್ಲಿ ನರಸಿಂಹ ಕ್ಷಿತೀಶನು ಜನಿಸಿದನೆಂದು ಶಾಸನವು ಬಣ್ಣಿಸಿದೆ.

ಈತನ ಹೆಸರೇ ನಾರಸಿಂಹನಾಗಿರುವುದರಿಂದ, ಸಹಜವಾಗಿ ಶಾಸನಗಳು ಈತನನ್ನು ನರಸಿಂಹಾವತಾರದೊಂದಿಗೆ ಸಮೀಕರಿಸಿ ಬಣ್ಣಿಸಿವೆ. ಬ್ರಹ್ಮಸಮುದ್ರದ ಶಾಸನವೊಂದು[೪೦]

**ಅರಿದೈತ್ಯಾಧಿಪ ವಕ್ಷಮಂ ಖರನಖಾನೀಕಂಗಳಿಂ ಪೋಳ್ದು ಬ**

**ಲ್ಗರುಳಂ ತೋಡಿದ ನಾರಸಿಂಹನೆನಲಕ್ಕುಂ ವೈರಿವೀರಾವನೀ**

**ಶ್ವರವಕ್ಷಸ್ಥಳಮಂ ಸ್ವಖಡ್ಗನಖರವ್ಯಾಘಾತದಿಂ ಪೋಳ್ದು ಬ**

**ಲ್ಗರುಳಂ ತೋಡುವ ನಾರಸಿಂಹನೃಪನಂ ಸಂಗ್ರಾಮರಂಗಾಗ್ರದೊಳ್ ।**

ಎಂಬುದಾಗಿ ಬಣ್ಣಿಸಿದೆ. "ರಾಮನಂಬಿನ ಮೊನೆಯೊಳು ಬಿಂದುವಿನಂದದೆ ಮುನ್ನ ಅಂಬೋಧಿ ನಿಂದವೋಲ್" ಈತನ ಸಬಳದ ಮೊನೆಯಲ್ಲಿ ಶತ್ರುಗಳೆಂಬ ಸಮುದ್ರವು ನಿಂತಿತೆಂದು ಮತ್ತೊಂದು ಶಾಸನವು[೪೧] ಅಲಂಕಾರಿಕವಾಗಿ ಬಣ್ಣಿಸಿದೆ. ನರಸಿಂಹನ ಅಸಿಲತೆಯು(ಖಡ್ಗವು) ವೈರಿಗಳ ಹೃದಯದಲ್ಲಿ ನಾಟಿ, ಚಿಗುರಿ, ಬೆನ್ನಿನಲ್ಲಿ ಬೆಳೆಯುವುದು ಎಂಬುದಾಗಿ ಹೇಳಿರುವ ಶಾಸನದ[೪೨] ಪದ್ಯವು ಈತನ ಪರಾಕ್ರಮವನ್ನು 'ಪೊಸತೊಂದಚ್ಚರಿ'ಯೆಂದು ಬಣ್ಣಿಸಿದೆ. ಜಯಸಿರಿಗೆ ಮುತ್ತಿನ ಹಾರವನ್ನು ತೊಡಿಸಲು ಈತನು "ಇದಿರಾದ ಅರಿಭೂಪಾಳರ ಮದದಾನೆಯ ಕೊಂಬನುಡಿದ"ನೆಂದು ಹಲವಾರು[೪೩] ಶಾಸನಗಳು ಬಣ್ಣಿಸಿವೆ. ಹೊಯ್ಸಳರ ಒಂದನೇ ನರಸಿಂಹನ ಪರಾಕ್ರಮವನ್ನು ಬಣ್ಣಿಸಿರುವ ಪದ್ಯಗಳಲ್ಲಿ ಅತಿಪ್ರಮುಖವಾದ ಹಾಗೂ ಕಾವ್ಯಸತ್ವವನ್ನು ಒಳಗೊಂಡಿರುವ ಪದ್ಯವೆಂದರೆ

**ಪಡೆಮಾತೇಂ ಬಂದು ಕಂಡಂಗಮೃತಜಳಧಿ ತಾಂಗರ್ಬ್ಬದಿಂ ಗಂಡವಾತಂ**

**ನುಡಿವಾತಂಗೆನ್ನನೆಂಬೈ ಪ್ರಳಯಸಮಯದೊಳ್ಮೀರೆ ಮೀರಿ ಬರ್ಪಾ**

**ಕಡಲನ್ನಂ ಕಾಳನನ್ನಂ ಮುಳಿದ ಕುಳಿಕನನ್ನಂ ಯುಗಾನ್ತಾಗ್ನಿಯನ್ನಂ**

**ಸಿಡಿಲನ್ನಂ ಸಿಂಹದನ್ನಂ ಪುರಹರನುರಿಗಣ್ಣನ್ನನೀ ನಾರಸಿಂಹಂ[೪೪]**

ಎಂಬುದಾಗಿದೆ. ದೊರೆ ನರಸಿಂಹನ ರೌದ್ರ-ಪ್ರತಾಪಗಳನ್ನು ಬಣ್ಣಿಸಲು ಶಾಸನಕವಿಯು ಹಲವಾರು ಪ್ರತಿಮೆಗಳನ್ನು ಬಳಸಿ ಕಾವ್ಯಗುಣವನ್ನು ಅಭಿವ್ಯಕ್ತಿಸಿದ್ದಾನೆ.

ಒಂದನೆಯ ನರಸಿಂಹನ ಪರಾಕ್ರಮವನ್ನು ಹಲವಾರು ಶಾಸನಗಳು ಬಣ್ಣಿಸಿದ್ದರೂ ಸಹ ಇತಿಹಾಸದ ದೃಷ್ಟಿಯಿಂದ ಗಮನಿಸಿದಾಗ ಈತನೊಬ್ಬ ಅಸಮರ್ಥನಾದ ದೊರೆಯೆಂದು ತಿಳಿದುಬರುತ್ತದೆ. ಬಹುಶಃ ಹೊಯ್ಸಳರ ಕಾಲದ ಶಾಸನಗಳಲ್ಲಿ ವಿಷ್ಣುವರ್ಧನನಿಗೆ ನೀಡಿದ್ದ ಪ್ರಾಮುಖ್ಯತೆಯ ಕಾರಣದಿಂದಾಗಿ ಈತನನ್ನು ಹೊಗಳಿರುವ ಸಾಧ್ಯತೆಗಳಿವೆ. ಅದಲ್ಲದೆ ರಾಜಾಶ್ರಯದಲ್ಲಿರುವ ಕವಿಯು ವಾಸ್ತವಿಕತೆಗಿಂತ ಉತ್ಪ್ರೇಕ್ಷೆಯನ್ನು ಬಳಸುವುದು ಅನಿವಾರ್ಯ ಮತ್ತು ಅಗತ್ಯವಾಗಿತ್ತು ಎನ್ನಬಹುದು. ಅದೂ ಅಲ್ಲದೆ ಯುವರಾಜನಾಗಿದ್ದ ಸಂದರ್ಭದಲ್ಲಿ ಒಂದನೆಯ ನರಸಿಂಹನು ವಿಷ್ಣುವರ್ಧನನ ಜೊತೆಯಲ್ಲಿ ಹಲವಾರು ಹೋರಾಟಗಳಲ್ಲಿ ಪಾಲ್ಗೊಂಡಿದ್ದಾಗ ಪರಾಕ್ರಮ ತೋರಿರುವ ಸಾಧ್ಯತೆಯಿದೆ. ಆದರೆ ಅಧಿಕಾರಕ್ಕೆ ಬಂದಾಗ ಉತ್ತಮ ಆಡಳಿತ ನೀಡುವಲ್ಲಿ ವಿಫಲನಾಗಿರಬಹುದು.

ಒಂದನೆಯ ನರಸಿಂಹನನ್ನು ಪದಚ್ಯುತಗೊಳಿಸಿ ಅಧಿಕಾರಕ್ಕೆ ಬಂದ ಇಮ್ಮಡಿ ಬಲ್ಲಾಳನನ್ನು ಹಲವಾರು ಶಾಸನಗಳಲ್ಲಿ ಪ್ರಸ್ತಾಪಿಸಲಾಗಿದೆ. ವೀರಲ್ಲಾಳನಾದರೋ,

**ಫಣಿನಾಥಂ ಪಾಟಿ ಭೋಗಕ್ಕಮರಪತಿಸಮಂ ರೂಪಸಂಪತ್ತಿಗಜ್ಜೇ**
**ಕ್ಷಣನುದ್ಯದ್ ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾ ವಿಶೇಷ**
**ಕ್ಕೆಣೆಧೀರೋದಾತ್ತ ಚಿತ್ತಕ್ಕಮಮ ಸರಿದಶಾಸ್ಯಾರಿ ದಾನಕ್ಕೆ ಮತ್ತೆ**
**ತೊಣೆಕರ್ಣ್ನಂ ತಾನೆನಲ್ಕೀ ವಸುಧೆಯೊಳೆಸೆದಂ ವೀರಬಲ್ಲಾಳಭೂಪಂ**[೪೫]

ಭೋಗದಲ್ಲಿ ಫಣಿನಾಥನಿಗೆ, ರೂಪಸಂಪತ್ತಿನಲ್ಲಿ ಅಮರಪತಿಗೆ, ವಿಕ್ರಮಾಡಂಬರದಲ್ಲಿ ವಿಷ್ಣುವಿಗೆ, ನಿಜಾಜ್ಞಾವಿಶೇಷದಲ್ಲಿ ಮಹೇಶನಿಗೆ, ಧೀರೋದಾತ್ತ ಚಿತ್ತಕ್ಕೆ ದಶಾಸ್ಯಾರಿಗೆ ಅಂದರೆ ಶ್ರೀರಾಮನಿಗೆ, ದಾನಗುಣದಲ್ಲಿ ಕರ್ಣನಿಗೆ ಸಮಾನನಾದವನಾಗಿ ಭೂಮಿಯಲ್ಲಿ ಪ್ರಸಿದ್ಧನಾದವನು. ಹಾಗೆಯೇ "ಅನುಪಮ ರಣನಿಸ್ತಾರಗನೂ, ಅನೂನ ಸತ್ವಾನ್ವಿತನೂ, ವಿಚಾರ ಕ್ಷಮನೆಂಬ ಪ್ರಸಿದ್ಧಿಯಿಂದ ಈತನು "ಕಾರ್ತಿಕೇಯನಂತೆ" ಶೋಭಿಸುತ್ತಿದ್ದನು. ಹಾಗೆಯೇ ಮತ್ತೊಂದು ಶಾಸನವು

**"ದಿಗಧಿಪರಂ ಪಣಂಚಲೆವ ವಿಕ್ರಮದೇಳ್ಗೆ ನಗಂಗಳೇಳುಮಂ**
**ನೆಗಪಲೊಡರ್ಚ್ಚುವುಜ್ಜುಗದ ತೋಳ್ವಲವಾನೆಗಳರ್ಕ್ಕಬಿಂಬಮಂ**
**ಸು[ಗಿ]ಯಿಪತೀಬ್ರತೇಜಮಿವು ತಂನೊಳು ಸಮಂತಮಾದುವು"**

ಎಂಬ ಕಾರಣದಿಂದ ನೃಗ, ನಹುಷ ಮೊದಲಾದ ದೊರೆಗಳು ಈತನಿಗೆ ಸಮನಾಗಲು ಸಾಧ್ಯವೇ ಎಂದು ಪ್ರಶ್ನಿಸಿದೆ[೪೫] "ಈ ದೊರೆಯು ಕೋಪದಿಂದ ಮೇಲೇರಿ ಬಂದು ಮುತ್ತಿದರೆ ಈತನ ಜೊತೆಗೆ ಕಾದಲು ನಮಗೆ ಸಾಧ್ಯವಿಲ್ಲ ಎಂದು ಭಾವಿಸಿದ ರಿಪುನೃಪರು ಆ ಕ್ಷಣದಲ್ಲೇ ಅಲ್ಲಿಂದ ಕಾಲ್ತೆಗೆಯುತ್ತಿದ್ದರು. ಹಾಗೂ ಈತನಿಗೆ 'ಹಸ್ತ್ಯಶ್ವರತ್ನಾವಳಿ'ಯನ್ನು ತಂದಿತ್ತು. ಈತನ ಪಾದಕ್ಕೆ ಎರಗುತ್ತಿದ್ದರೆಂಬುದಾಗಿ ಮತ್ತೊಂದು ಶಾಸನವು ಬಣ್ಣಿಸಿದೆ."[೪೬] ಪರಾಕ್ರಮಿಯಾದ ಈತನ ಮುಂದೆ ಗಿರಿವನಜಲದುರ್ಗಗಳು ನಿರ್ನಾಮವಾಗುತ್ತಿದ್ದುದನ್ನು

**ಗಿರಿವನಜಲದುರ್ಗ್ಗಂಗಳ**
**ನುರವಣೆಯಿಂಪವಿವೋಲಗ್ನಿವೊಲ್ ಗ್ರೀಷ್ಮದವೋ**
**ಲಿರದೊಡೆವುದು ಸುಡುವುದು ಪುಡಿ**
**ವರೆತವಿಪುದು ಯದುನೃಪಾಳಕೋಪಾಟೋಪಂ**[೪೭]

ಎಂಬುದಾಗಿ ಬಣ್ಣಿಸಿದೆ. ಈತನಲ್ಲಿ ತೋರಿಕೆಯ ನುಡಿಯಾಗಲೀ, ಯುದ್ಧಕ್ಕೆ ತೊಡಗಿದರೆ ಗೆಲ್ಲುವ ಶೌರ್ಯ, ಬುಧಶ್ರೇಣಿಗೆ ಸಂತೋಷದಿಂದ ನೀಡುವ ಗುಣ ವಸುಧೆಯನ್ನು ನೀತಿಯನ್ನು ಮೀರದೆ ಕಾಪಾಡುವ ಗುಣವು ಇತ್ತೆಂದು

**ಅಸದಾಳಾಪಕ್ಕೆ ಪಕ್ಕಾಗದ ನುಡಿ ತೊಡರ್ದಂದಾರುಮಂ ಯುದ್ಧದೊಳ್ ಭಂ**
**ಗಿಸಿಗೆಲ್ಲಂಗೊಳ್ವ ಶೌರ್ಯಂ ನೆರೆದೆರೆಯೆ ಬುಧಶ್ರೇಣಿಪೂರ್ಣ್ದೇವ ದಾನ**
**ಬ್ಯಸನಂ ಮರ್ಯ್ಯಾದೆಯಂ ದಾಂಟದೆ ವಸುಮತಿಯಂ ಕಾವ ಕಾರುಣ್ಯಮಾವೊಂ**
**ಗೆಸೆಗುಂ ಬಲ್ಲಾಳದೇವಂಗೆಸೆಗುವಮವು ಭೂಪಾಳರಿಂತಾಗವೇಡಾ॥**

ಎಂಬ ಪದ್ಯವು ನಿರೂಪಿಸಿದೆ.[೪೮] ಈ ವೀರಬಲ್ಲಾಳನು

**"ಕಲಿಕಾಲ ಕ್ಷತ್ರಪುತ್ರಪ್ರಬಳತರದುರಾಚಾರಸಂದೋಹದಿಂದ ।**
**ಹೊಲೆಹೊದ್ದಲ್ ಹೇಸಿ ಬೇಸತ್ತಳವಟಿದ ಮಹೀಕಾಂತೆಯಂ ರಕ್ಷಿಸಲ್ಕೆ"**

'ಜಲಜಾಕ್ಷ'ನು ತಾನೇ ಅವತರಿಸಿದನೆಂದು[೪೯] ಇನ್ನೊಂದು ಶಾಸನದ ಬಣ್ಣನೆಯಾಗಿದೆ.

ಇಮ್ಮಡಿ ಬಲ್ಲಾಳನ ಮಗನಾದ ಇಮ್ಮಡಿ ನರಸಿಂಹನ ಪರಾಕ್ರಮವನ್ನು ಬಣ್ಣಿಸುವಾಗಲೂ ಸಹ ನರಸಿಂಹಾವತಾರದ ಕಲ್ಪನೆಯನ್ನೇ ಶಾಸನಕವಿಯು ಬಳಸಿದ್ದಾನೆ.[೫೦] ಇದೇ ಶಾಸನದ ಮತ್ತೊಂದು ಪದ್ಯವು

**ಧುರದೊಳು ಬಂದುಐದೊಡ್ಡಿನಿಂದರಿಬಳಬ್ರಾತಕ್ಕೆ ಕೈಯಾಂತು ನಿಂ**
**ದೆರಿದರ್ತ್ಥಿಪ್ರಕಾರಕ್ಕೆ ವಾಕವನಿತಾನೀಕಕ್ಕೆ ಗಂಭೀರಸಾ**
**ಗರನೀ ನಾರಸಿಂಹನೃಪಾನಾನ್ತಿಚಿಯಲೀಯಲು ಸೋಲಿಸಲು ಬಲ್ಲನಾ**
**ಹರಿಪುತ್ರಂ ಹರಿಪುತ್ರನಾ ಹರಿಸುತಂ ತಾನೆಂದಡೇಂ ವಣ್ಣಿಪಂ॥**

ಎಂಬುದಾಗಿ ಈತನ ಶೌರ್ಯ, ಔದಾರ್ಯ ಮತ್ತು ಸೌಂದರ್ಯವು ಹರಿಪುತ್ರನಿಗೆ ಸಮಾನವಾದುದೆಂಬುದಾಗಿ ಚಮತ್ಕಾರಿಕವಾಗಿ ಬಣ್ಣಿಸಿದೆ. ಹಾರನಹಳ್ಳಿಯ ಶಾಸನವು ಸಮುದ್ರಮಥನದ ಪ್ರಸಂಗವನ್ನು ಬಳಸಿಕೊಂಡು ಈತನು ಶತ್ರುಗಳನ್ನು ನಿರ್ಮೂಲನ ಮಾಡಿದ ಬಗೆಯನ್ನು ಬಣ್ಣಿಸಿದೆ. ಈ ಶಾಸನ ಪದ್ಯವು ಇಂತಿದೆ.[೫೧]

**ಕರವಾಳ್ವಾಸುಗಿ ತೋಳ್ಮಂ**
**ದರಮಾಗೆ ವಿರೋಧಿಮಗರ ಬಳಜಳನಿಧಿಯಂ**
**ಭರದಿಂ ಕಡೆದಂ ಪಡೆದಂ**
**ಕರಿರತ್ನಮನಶ್ವರತ್ನಮಂ ನರಸಿಂಹಂ॥**

ಈತನ ಮಗನಾದ ಸೋಮೇಶ್ವರನ ಪರಾಕ್ರಮವನ್ನು ಹಿರಿಯೂರಿನ ಶಾಸನವು[೫೨] ಚಮತ್ಕಾರಿಕವಾಗಿ "ಧರೆಯಿಂದ ಅನ್ಯ ನೃಪಾಳಕರು ಬಹಳ ಭಾರಗ್ರಸ್ತರಾದರೆಂದು ತಾನೇ ಇಳಾಭಾರವನ್ನು ಧರಿಸಿ ಆ ನೃಪಾಳಕರ ಭೂಭಾರವನ್ನು ಭರದಿಂದ ಇಳಿಸಿದನು. ಆದ್ದರಿಂದ ಈ

ವೀರಸೋಮೇಶ್ವರನಲ್ಲಿ ಪರಾಕ್ರಮದಿಂದ ಕೂಡಿದ ಕರುಣೆಯನ್ನು ಕಾಣಬಹುದಾಗಿತ್ತು" ಎಂದು ನಿರೂಪಿಸಿದೆ. ಅದೇ ಶಾಸನದ ಮತ್ತೊಂದು ಪದ್ಯದಲ್ಲೂ ಸಹ ಪರಾಕ್ರಮವನ್ನು ಬಣ್ಣಿಸುವಾಗ –

**ಅರಿರಾಯರ ಶಿರಮಂ ನಿಜ**
**ಕರಪತ್ರಂ ಕೊಳ್ವುದರಿದೆ ಸೋಮನೃಪಾಳಂ**
**ಕರುಣಿಸದಟ್ಟಿದ ಪತ್ರಂ**
**ಶಿರಮಂ ಕೊಳ್ವುದು ವಿರೋಧಿಭೂಪಾಳಕರಾ ॥**

ಎಂಬಲ್ಲಿ ಸೋಮನೃಪಾಳನ 'ನಿಜಕರಪತ್ರ'ವು ಅಂದರೆ ಖಡ್ಗವು ಅರಿರಾಯರ ಶಿರವನ್ನು ಕೊಂಡರೆ, ಅವನು ಕರುಣಿಸದೆ ಕಳುಹಿಸಿದ ಪತ್ರವೂ ಸಹ ವಿರೋಧಿಗಳ ಶಿರವನ್ನು ಕೊಲ್ಲುತ್ತಿತ್ತು ಎಂದು ನಿರೂಪಿಸಿದೆ.

ರಾಜರ ವರ್ಣನೆಯ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ಹೆಚ್ಚಿನ ಶಾಸನಗಳು ಹೊಯ್ಸಳ ರಾಜಮನೆತನಕ್ಕೆ ಸೇರಿದವುಗಳಾಗಿವೆ. ರಾಷ್ಟ್ರಕೂಟರ ಇಂದ್ರರಾಜ, ಕಲ್ಯಾಣ ಚಾಲುಕ್ಯರ ಆರನೆಯ ವಿಕ್ರಮಾದಿತ್ಯ ಮತ್ತು ಕಲಚುರಿಗಳ ಬಿಜ್ಜಳನನ್ನು ಬಣ್ಣಿಸಿರುವ ಕೆಲವು ಶಾಸನಗಳನ್ನು ಹೊರತುಪಡಿಸಿದರೆ ಬಹುತೇಕ ಶಾಸನಗಳೆಲ್ಲಾ ಹೊಯ್ಸಳ ದೊರೆಗಳ ಗುಣಗಾನವನ್ನು ಒಳಗೊಂಡಿವೆ. ಹೊಯ್ಸಳರ ಕಾಲದ ಶಾಸನಪದ್ಯಗಳಲ್ಲಿ ರಾಜರುಗಳನ್ನು ಬಣ್ಣಿಸುವಾಗ ಶಾಸನಕವಿಗಳು ಹೆಚ್ಚಾಗಿ ಪೌರಾಣಿಕವಾದ ಸನ್ನಿವೇಶಗಳನ್ನು ಪರಿಣಾಮಕಾರಿಯಾಗಿ ಬಳಸಿಕೊಂಡಿದ್ದಾರೆ. ಅದರಲ್ಲೂ ವಿಶೇಷವಾಗಿ ವಿಷ್ಣುವಿನ ಅವತಾರಗಳನ್ನು ಹೋಲಿಕೆಯ ಸಂದರ್ಭದಲ್ಲಿ ಬಳಸಿರುತ್ತಾರೆ. ಬಹುಶಃ ಅದಕ್ಕೆ ಆ ರಾಜವಂಶೀಯರಲ್ಲಿದ್ದ ವೈಷ್ಣವಧರ್ಮದ ಪರವಾದ ಒಲವು ಕಾರಣವಾಗಿರಬಹುದು. ಜೊತೆಗೆ ತ್ರಿಮೂರ್ತಿಗಳಲ್ಲಿ ವಿಷ್ಣುವು ಭೂಮಂಡಲವನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಹೊಂದಿದ್ದಾನೆಂಬ ಭಾವವೂ ಇರಬಹುದು. ವಿಶೇಷವಾಗಿ ವಿಷ್ಣುವಿನ ನರಸಿಂಹನ ಅವತಾರದೊಂದಿಗೆ ಹೊಯ್ಸಳ ದೊರೆಗಳ ವ್ಯಕ್ತಿತ್ವ ಮತ್ತು ಪರಾಕ್ರಮವನ್ನು ಸಮೀಕರಿಸಿ ಬಣ್ಣಿಸಿರುವ ಪದ್ಯಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಈ ವಂಶದಲ್ಲಿ ಬಂದಿರುವ ಹಲವಾರು ದೊರೆಗಳ ಹೆಸರೂ ಸಹ 'ನರಸಿಂಹ'ನೆಂದೇ ಆಗಿದೆ ಎಂಬುದನ್ನು ಗಮನಿಸಿದಾಗ, 'ನರಸಿಂಹಾವತಾರ'ವು ಕವಿಗಳ ಮನಸ್ಸಿಗೆ ಆಪ್ಯಾಯಮಾನವಾಗಿ ಕಂಡಿರಲೂಬಹುದು. ಉಳಿದಂತೆ ಪೌರಾಣಿಕ ಸನ್ನಿವೇಶಗಳಾದ ಅಗಸ್ತ್ಯನು ಸಮುದ್ರದ ನೀರನ್ನು ಆಪೋಷನ ತೆಗೆದುಕೊಂಡದ್ದು, ಸಮುದ್ರಮಥನದ ಸನ್ನಿವೇಶಗಳನ್ನು ವರ್ಣನೆಯ ಸಂದರ್ಭದಲ್ಲಿ ಕವಿಗಳು ಬಳಸಿದ್ದಾರೆ. ಬಿಜ್ಜಳನ ಪರಾಕ್ರಮವನ್ನು ಮಳೆಗಾಲದೊಂದಿಗೆ ಸಮೀಕರಿಸಿ ಬಣ್ಣಿಸಿರುವ ಪದ್ಯ ವಿಶಿಷ್ಟವಾಗಿದೆ. ಪೌರಾಣಿಕ ಪಾತ್ರಗಳು ಮತ್ತು ಸನ್ನಿವೇಶಗಳನ್ನು ಬಳಸಿಕೊಂಡು ಬಣ್ಣಿಸಿರುವ ಪದ್ಯಗಳಲ್ಲಿ ಸಹಜವಾಗಿ ವಾಸ್ತವಿಕತೆಗಳಿಗಿಂತ ವಿಶೇಷವಾಗಿ ಅತಿಶಯಕ್ಕೆ,

ಉತ್ಪ್ರೇಕ್ಷೆಗೆ ಹೆಚ್ಚಿನ ಪ್ರಮಾಣದ ಮಹತ್ವ ದೊರೆತಿದೆ ಎನ್ನಬಹುದು. ಆದರೆ ಇಂದ್ರರಾಜನ ಪ್ರಶಸ್ತಿಶಾಸನ ಮೊದಲಾದವುಗಳು ಅಂದಿನ ಸಮಾಜದ ಜನಜೀವನ ಮತ್ತು ಜನರ ಮೌಲ್ಯಗಳ ಬಗೆಗೆ ಪ್ರಸ್ತಾಪಿಸುತ್ತಾ ವಿಭಿನ್ನವಾದ ರಚನೆಗಳಾಗಿ ಕಂಡುಬರುತ್ತವೆ. ಹೊಯ್ಸಳರ ಕಾಲದ ಬಹುತೇಕ ಶಾಸನಗಳಲ್ಲಿ ಒಂದೇ ರೀತಿಯಾದ ನಿರೂಪಣಾ ವಿಧಾನ ಮತ್ತು ರಾಜರುಗಳ ವರ್ಣನೆಗಳು ಕಂಡುಬರುತ್ತವೆ. ಆದ್ದರಿಂದ ಆರಂಭದಲ್ಲಿ ರಚನೆಯಾದ ಸೊಗಸಾದ ಪದ್ಯಗಳು ಮುಂದಿನ ಕಾಲದ ಶಾಸನಗಳಲ್ಲಿ ಯಥಾವತ್ತಾಗಿ ಅಥವಾ ಅಲ್ಪಸ್ವಲ್ಪ ಮಾರ್ಪಾಡುಗಳೊಂದಿಗೆ ಬಂದಿರುವ ಸಾಧ್ಯತೆಯನ್ನು ಕಾಣಬಹುದು. ಒಟ್ಟಿನಲ್ಲಿ ಕನ್ನಡದ ಶಾಸನಕವಿಗಳು ರಾಜರುಗಳನ್ನು ಬಣ್ಣಿಸುವಾಗಲೂ ಸಹ ಕಾವ್ಯಾತ್ಮಕವಾದ ಒಲವನ್ನು ಪ್ರದರ್ಶಿಸಿದರು ಮತ್ತು ಆ ವಿಚಾರದಲ್ಲಿ ಯಶಸ್ಸನ್ನು ಪಡೆದರೆನ್ನಬಹುದು.

### ೪.೩. ವ್ಯಕ್ತಿವರ್ಣನೆ :-

ಸಾಮ್ರಾಜ್ಯಗಳನ್ನು ಕಟ್ಟಿ ಆಳ್ವಿಕೆ ನಡೆಸಿದ ರಾಜರುಗಳಿಗೆ ಸಹಾಯಕರಾಗಿ ಅಭಿವೃದ್ಧಿಯ ಪಥದಲ್ಲಿ ಸಾಮ್ರಾಜ್ಯವನ್ನು ನಡೆಸಲು ನೆರವಾದವರು ಹಲವಾರು ವರ್ಗದ ಜನರು ಸುಸೂತ್ರವಾಗಿ ಆಡಳಿತ ನಡೆಸಲು ಸಾಮಂತರು, ಮಹಾಸಾಮಂತರು, ಮಹಾಮಂಡಳೇಶ್ವರರು, ಅಮಾತ್ಯರು, ಪ್ರಧಾನರು, ದಂಡಾಧೀಶರು, ಅಧಿಕಾರಿಗಳು ಹೀಗೆ ಹಲವಾರು ಪ್ರಮುಖವರ್ಗದ ಜನರು ತಮ್ಮದೇ ಆದ ಕೊಡುಗೆಯನ್ನು ನೀಡಿರುತ್ತಾರೆ. ಸಮಾಜದ ಧಾರ್ಮಿಕ ವಲಯದಲ್ಲಿ ಹಲವಾರು ಧಾರ್ಮಿಕ ಮುಖಂಡರು ತಮ್ಮಲ್ಲಿರುವ ವಿದ್ವತ್, ಪ್ರೌಢಿಮೆ, ಸಮಾಜದ ಬಗೆಗಿನ ಕಳಕಳಿಯಿಂದ ಜನಮನ್ನಣೆಯನ್ನು ಗಳಿಸಿರುತ್ತಾರೆ. ರಕ್ಷಣೆಯ ವಿಚಾರ ಬಂದಾಗ ಹಲವಾರು ಜನ ವೀರರು ವೀರಾವೇಶದಿಂದ ಹೋರಾಡಿ ಪ್ರಾಣವನ್ನು ಅರ್ಪಿಸಿದ್ದಾರೆ. ಇವರೆಲ್ಲರ ವ್ಯಕ್ತಿತ್ವ, ಪರಾಕ್ರಮ, ವಿದ್ಯಾಪ್ರೌಢಿಮೆ, ಸಾಹಸಗಳನ್ನು ಶಾಸನಗಳು ಕಾವ್ಯರೂಪದಲ್ಲಿ ದಾಖಲಿಸಿವೆ.

ರಾಜರುಗಳನ್ನು ಬಣ್ಣಿಸಿರುವ ಸಂದರ್ಭದಲ್ಲಿ ವಂಶಾವಳಿಯನ್ನು ಕಾವ್ಯಾತ್ಮಕವಾಗಿ ಶಾಸನಗಳು ಹೇಗೆ ನಿರೂಪಿಸಿವೆಯೋ ಅದೇ ರೀತಿಯಲ್ಲಿ ಹಲವಾರು ಶಾಸನಗಳು ಸಾಮಂತರ, ಮಂಡಳೇಶ್ವರರ ವಂಶಾವಳಿಯನ್ನು ಕಾವ್ಯಾತ್ಮಕವಾಗಿ ನಿರೂಪಿಸಿವೆ. ಇಲ್ಲಿ ಸಮಸ್ತಾಧಿಕಾರಿ ಹೆಗ್ಗಡೆ ಚಾವುಂಡಮಯ್ಯ, ಸೂಜಿ ಮಾದೆಯನಾಯಕ, ಬೆಟ್ಟರಸ, ಮರಿಯಾನೆ ದಂಡನಾಯಕ, ಅಮಿತದಣ್ಣಾಯಕ, ಬೋಕಿಮಯ್ಯನ ವಂಶಾವಳಿಯನ್ನು ನಿರೂಪಿಸಿರುವ ಶಾಸನಗಳನ್ನು,[೫೩] ಉದಾಹರಿಸಬಹುದಾಗಿದೆ. ಇವುಗಳಲ್ಲಿ ಸಹಜವಾಗಿ ಆಯಾ ವಂಶದಲ್ಲಿ ಬಂದ ಹಿರಿಯರು, ಪ್ರಮುಖರು ಅವರ ಹಿರಿಮೆಗಳನ್ನೂ ನಿರೂಪಿಸಿ ಆ ನಂತರ ಪ್ರಧಾನ ವಿಚಾರದ ನಿರೂಪಣೆಯ ಕಡೆಗೆ ಶಾಸನಕವಿಗಳು ಗಮನವಿತ್ತಿದ್ದಾರೆ.

### ೪.೪ : ಸಾಮಂತರು – ಮಹಾಮಂಡಳೇಶ್ವರರು :–

ರಾಜರುಗಳ ಆಡಳಿತದ ಸುಭದ್ರತೆಯು, ರಾಜ್ಯದ ಅಭಿವೃದ್ಧಿ ಏಳಿಗೆ, ಜನಾನುರಾಗ ಮೊದಲಾದವುಗಳೆಲ್ಲಾ ಅವರುಗಳ ಕೈಕೆಳಗೆ ವಿವಿಧ ಪ್ರಾಂತ್ಯಗಳಲ್ಲಿ ಆಳುತ್ತಿರುವ ಸಾಮಂತರು, ಮಹಾಮಂಡಳೇಶ್ವರರು, ಮಂಡಳೇಶ್ವರರ ಸಹಾಯ, ಸಹಕಾರಗಳನ್ನು ಅವಲಂಬಿಸಿರುತ್ತದೆ. ಅಂತೆಯೇ ಅವರುಗಳು ಪರಾಕ್ರಮಿಗಳು, ಸಾಹಸಿಗಳೂ ಹಾಗೂ ಉತ್ತಮವ್ಯಕ್ತಿತ್ವ ಗುಣಗಳನ್ನು ಹೊಂದಿದವರಾಗಿದ್ದಲ್ಲಿ ಆ ಸಾಮ್ರಾಜ್ಯದ ಕೀರ್ತಿಯು ಮತ್ತಷ್ಟು ಪಸರಿಸಲು ಸಾಧ್ಯವಾಗುತ್ತದೆ. ಅಂತಹ ಸಾಮಂತರು, ಮಂಡಳೇಶ್ವರರು ಮೊದಲಾದವರ ಗುಣಗಾನವನ್ನು ಶಾಸನಗಳು ಮಾಡಿವೆ. ಅವುಗಳಿಂದ ಒಂದಷ್ಟು ಭಾಗಗಳನ್ನು ಗಮನಿಸಬಹುದಾಗಿದೆ.

ಕಲ್ಯಾಣದ ಚಾಲುಕ್ಯರ ಆಳ್ವಿಕೆಯ ಕಾಲದಲ್ಲಿ ಮಹಾಮಂಡಳೇಶ್ವರನಾಗಿದ್ದ ನಂನಿಸಾನ್ತರದೇವನನ್ನು ಹಲವಾರು ಶಾಸನಗಳು ಬಣ್ಣಿಸಿವೆ. ಈತನಲ್ಲಿದ್ದ ಗುಣಗಳನ್ನು ಶಾಸನವೊಂದು[೫೪] ಈ ರೀತಿಯಾಗಿ ಬಣ್ಣಿಸಿವೆ.

**ದೇವಸಮುದ್ರಮುದ್ರಿತ ವಸುಂಧರೆಯೊಳ್ ನೃಪರಾದರೆಲ್ಲರಂ**
**ಭಾವಿಸಿಕಂಡೆನಾನ್ತರಿಪುಸಂತತಿಯಂ ನೆಲೆಗೆಟ್ಟು ಪೋಪಿನಂ**
**ಸೋವಬುಧಾಳಿಗಾರ್ತ್ತುಪಿರಿದೀವ ಶರಣ್ಬುಗೆ ಕಾವಸದ್ಗುಣ**
**ಕ್ಕಾವನೋ ನಿನ್ನವೊಲ್ನೆಱೆದಮಣ್ಡಳಿಕಕರ್ಕ್ಕಲಿ ನನ್ನಿಶಾನ್ತರಾ ॥**

ಅಂದರೆ ಎದುರಾದ ರಿಪು ಸಂತತಿಯನ್ನು ನೆಲೆಗೆಡಿಸುವ, ಬುಧಜನರಿಗೆ ಅತಿಶಯವಾಗಿ ನೀಡುವ ಮತ್ತು ಶರಣಾಗತರಾದವರಿಗೆ ರಕ್ಷಣೆ ನೀಡುವ ಸದ್ಗುಣಗಳನ್ನು ಹೊಂದಿರುವ ಮತ್ತೊಬ್ಬ ಮಂಡಳಿಕನನ್ನು 'ದೇವಸಮುದ್ರಮುದ್ರಿತ ವಸುಂಧರೆಯೊಳ್' ಕಾಣಲು ಸಾಧ್ಯವಿಲ್ಲವೆಂದು ಶಾಸನಕವಿ ಬಣ್ಣಿಸಿದ್ದಾನೆ.

ಅದೇ ಶಾಸನದ ಮತ್ತೊಂದು ಪದ್ಯದಲ್ಲಿ ನನ್ನಿಶಾನ್ತರದೇವನು ಸೃಷ್ಟಿಯ ಎಲ್ಲಕ್ಕಿಂತ 'ಪಿರಿಯ'ನಾದವನೆಂದು ಬಣ್ಣಿಸಿದೆ.

**ಪಿರಿದೆತ್ತಂಮೇರುಗಂ ಸಾಗರಮೆ ಜಗದೊಳಾಮೇರುಗಂ ಸಾಗರಕ್ಕಂ**
**ಧರಣೀಚಕ್ರಂಕರಂ ಭಾವಿಸುವಡೆ ಪಿರಿದಾಮೇರುಗಂ ಸಾಗರಕ್ಕಂ**
**ಧರಣೀ ಚಕ್ರಕ್ಕಮಾಶಾಳಿಯೆಕಡುವಿರಿದಾಮೇರುಗಂ ಸಾಗರಕ್ಕಂ**
**ಧರಣೀಚಕ್ರಕ್ಕಮಾಶಾಳಿಗಮೆಲೆ ಪಿರಿಯಂ ಶಾನ್ತರಾದಿತ್ಯದೇವ॥**

ಮೇರುಪರ್ವತ, ಸಾಗರ, ಧರಣೀಚಕ್ರ, ಆಶಾಳಿಯು ಒಂದಕ್ಕಿಂತ ಒಂದು ಮೇಲಾದವುಗಳು. ಆದರೆ ಈ ನನ್ನಿಶಾನ್ತರದೇವರ ವ್ಯಕ್ತಿತ್ವವು ಮಾತ್ರ ಅವುಗಳಿಗಿಂತ ಪಿರಿದಾದುದಾಗಿದೆ ಎಂಬುದು ಹೆಚ್ಚಿನ ಮಾತಾಗಿದೆ. ಈತನು ಸೌಂದರ್ಯದಲ್ಲಿ ಭಾವೋದ್ಭವನಿಗೆ, ಪರಾಕ್ರಮದಲ್ಲಿ ಭೀಮನಿಗೆ, ದಾನಗುಣದಲ್ಲಿ ಕರ್ಣನಿಗೆ, ಸಮಾನನಾದವನೆಂದು ಮತ್ತೊಂದು ಶಾಸನವು ಬಣ್ಣಿಸುತ್ತದೆ.[೫೫] ಆದ್ದರಿಂದ

**ಬಿರುಗನದೊರೆಗೆ ದೊರೆ ಪೆಱ**
**ರಾರುಂಬಂದಪರೀಕ್ಷಿತಯುಗಂ ತ್ರೇತೆದ್ವಾ**
**ಪಾರಂಕಲಿಯುಗದೊಳಗಣ**
**ಬೀರರುದಾರಪ್ರತಾಪಿಗಳ್ ಧರ್ಮ್ಮಪರರ್[೫೬]**

ಎಂಬ ಪದ್ಯವು ಸಾನ್ತರರಸನಿಗೆ ಸಮಾನನಾದವನು ಕೃತ, ತ್ರೇತೆ, ದ್ವಾಪರ ಮತ್ತು ಕಲಿಯುಗದಲ್ಲಿ ಮತ್ತೊಬ್ಬನಿಲ್ಲ ಎಂಬುದಾಗಿ ಅತಿಶಯವಾಗಿ ಬಣ್ಣಿಸಿದೆ.

ಬಿಜ್ಜಳದೇವನ ಸಾಮಂತನಾದವನು ಕಸಪಯ್ಯನಾಯಕ. ಆತನ ಹೆಸರನ್ನು ಶಾಸನಕವಿಯು ಚಮತ್ಕಾರಿಕವಾಗಿ ಶ್ಲೇಷೆಯಲ್ಲಿ ಬಣ್ಣಿಸಿದ್ದಾನೆ. ಆ ಶಾಸನ ಪದ್ಯವು ಹೀಗಿದೆ.[೫೭]

**ಕಸವೆನಿತಿರ್ದ್ದಡಂ ನಿಜನಿರೀಕ್ಷಣಮಾತ್ರದೆ ತತ್ಕ್ಷಣಂಕರಂ**
**ಕಸವರಮಾಗಿತೋರ್ಪ್ಪುದು ನಿಜೇಷ್ಟವಿಶಿಷ್ಟ ಜನಕ್ಕೆ ಸತ್ಕುಲ**
**ಪ್ರಸವಜನಕ್ಕೆ ತದ್ಗ್ರಿಹಗ್ರಿಹಂಗಳೊಳಂತದಱಿಂದವೆಲ್ಲಿಯುಂ**
**ಕಸಪಯನಾಯಕಾಖ್ಯೆಪೆಸರ್ವ್ವೆತ್ತುದು ವಾರ್ದ್ಧಿಪರೀತಧಾತ್ರಿಯೊಳ್ ॥**

ಬನವಾಸಿ ಮಂಡಲದ ಅಧಿಪತಿಯಾದವನು ಎಕ್ಕಲದೇವ. ಹೊಯ್ಸಳರ ಇಮ್ಮಡಿ ವೀರಬಲ್ಲಾಳನ ಕಾಲದ ಶಾಸನದಲ್ಲಿ ಈತನನ್ನು "ಪರವಧೂವಿನುತೋದರ ಪದ್ಮಗರ್ಭ'ನೆಂಬುದಾಗಿ ಬಣ್ಣಿಸಲಾಗಿದೆ. ಶೌಚಗುಣಕ್ಕೆ ಪ್ರಮುಖವಾದ ಮಾನ್ಯತೆಯಿದ್ದ ಆ ಕಾಲದಲ್ಲಿ ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುತ್ತಿದ್ದ 'ಮಹಿಪ'ರನ್ನು ವಿಡಂಬಿಸುತ್ತಾ ಶಾಸನವು ಅಂತಹವರ ಜೊತೆಗೆ ಈತನನ್ನು ಹೋಲಿಸಲು ಸಾಧ್ಯವೇ? ಎಂದು ಪ್ರಶ್ನಿಸುತ್ತದೆ. ಶಾಸನಪದ್ಯದ ಪ್ರಕಾರ "ಮೋಸದ ಭಾವದಿಂದ ಪರಕಾಮಿನಿ'ಯರನ್ನು ತಮ್ಮ ಅಕ್ಕತಂಗಿಯರೆಂದು ಕರೆದು 'ನಂಬಿಸಿ ಅವರೊಡನೆ ಕೂಡಲು ಬಯಸುವ 'ಸಾಧುಗಳ್ಳ'ರೂ ಅಯೋಗ್ಯರೂ ಆದ 'ಮಹಿಪರ' ಜೊತೆಗೆ 'ಪರವಧೂ' ವಿನುತೋದರ ಪದ್ಮಗರ್ಭ'ನಾದ ಎಕ್ಕಲಭೂಪನನ್ನು ಹೋಲಿಸಲು ಸಾಧ್ಯವಿಲ್ಲವೆಂಬುದು ಕವಿಯ ಮಾತಾಗಿದೆ. ಶಾಸನ ಪದ್ಯವು ಈ ರೀತಿಯಿದೆ.

ತಕ್ಕತನಕ್ಕೆ ಮಿಕ್ಕಪರಕಾಮಿನಿಯರ್ಕ್ಳನೆಮ್ಮತಂಗಿಯೆಂ
ಮಕ್ಕೆನೆನುತ್ತೆ ನಂಬೆಮೊಱಗೊಂಡೊಡಗೂಡುವ ಸಾಧುಗಳ್ಳರೇ
ತಕ್ಕುವಯೋಗ್ಯವಾಮಹಿಪರೇಂಗಳ ಪೋಲ್ವರೆ ಶೌಚದೇಳ್ಗೆಯಿಂ
ದೆಕ್ಕಲ ಭೂಪನಂ ಪರವಧೂವಿನುತೋದರ ಪದ್ಮಗರ್ಭನಂ[೫೮]

ಅದೇ ಶಾಸನದ ಮತ್ತೊಂದು ಪದ್ಯವು 'ಸುಭಟೋತ್ತಮ ನೆಕ್ಕಲದೇವನ್ ಇಷ್ಟರೊಳ್ ನಂಬುಗೆದಪ್ಪಿದಂದು, ಪರಕಾಂತೆಯೊಳ್ ಒಡಗೂಡಿದಂದು, ಲೋಭಂಬಿಡಿದು ಅರ್ತ್ಥದ ತಳಿಪಿದಂದು, ಇದಿರಾಂತಡೆಕೊಲ್ಲದಂದು; ಅಂಬುಧಿಯು ಮೇರೆಯನ್ನು ಮೀರುತ್ತದೆ. ಸುರಾಚಳವು ತನ್ನ ನೆಲೆಯನ್ನು ಬದಲಿಸುತ್ತದೆ. ಅಂದರೆ ಸಮುದ್ರ ಮೇರೆ ಮೀರುವುದು, ಸುರಾಚಳವು ನೆಲೆಯನ್ನು ಬದಲಾಯಿಸುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಎಕ್ಕಲದೇವನ ಪರಾಕ್ರಮ, ಶೌಚಗುಣ, ದಾನಗುಣಗಳಲ್ಲಿ ವ್ಯತ್ಯಯ ಉಂಟಾಗಲು ಸಾಧ್ಯವಿಲ್ಲವೆಂಬುದು ಕವಿಯ ಅಚಲವಾದ ನಂಬಿಕೆಯಾಗಿದೆ.

ಹೊಯ್ಸಳರ ಮತ್ತೊಬ್ಬ ಸಾಮಂತನಾದ ವೀರಸಾಮಂತ ಮುದ್ದನನ್ನು ಬಣ್ಣಿಸಿರುವ ಶಾಸನಪದ್ಯವು "ಮುದ್ದ"ನೆಂಬ ಹೆಸರನ್ನು ಶ್ಲೇಷಾರ್ಥದಲ್ಲಿ ಸೊಗಸಾಗಿ ಬಳಸಿದೆ. ಆ ಪದ್ಯವು ಈ ರೀತಿಯಾಗಿದೆ.[೫೯]

ಕವಿಗಳ ಮುದ್ದನಾಶ್ರಿತರಮುದ್ದನನಾಥರಮುದ್ದನಿಷ್ಟನ
ಪ್ಪವರ್ಗಳಮುದ್ದನರ್ತ್ಥಿಗನಮುದ್ದನೆಡರ್ನ್ನೆಲೆಗೊಂಡಶಿಷ್ಟ ಬಾಂ
ಧವರೆಸೆವೊಂದು ಮುದ್ದನೆನಸುಂ ಪರಿವಾರದ ಮುದ್ದನಂಗನಾ
ನಿವಹದಮುದ್ದನೆಯ್ದೆ ಸಲಿಪಂ ಪ್ರಭುಮುದ್ದನಿಳಾತಳಾಗ್ರದೊಳ್ ॥

ವಿಷ್ಣುವರ್ಧನ ಹಾಗೂ ಒಂದನೆಯ ನರಸಿಂಹನ ಕಾಲದಲ್ಲಿ ಸಾಮಂತನಾಗಿದ್ದವನು. ಗೂಳಿಬಾಚಿಗಯ್ಯ "ಸಿಂಗದ ಸೌರ್ಯ್ಯ, ಅಂಗಜನ ರೂಪು, ಮುರಾರಿಯ ಶಕ್ತಿ, ಕರ್ಣ್ನನೀವಗುಣ, ಇಂದ್ರನಲೀಲೆ, ಭುಜಂಗರಾಜನೊಳು ಸಂಗಳಿಸಿದ್ದ ಪೆರ್ಮ್ಮೆ, ಸುರಶೈಳದ ಬಿಣ್ಪು, ಈ ಗುಣಗಳೆಲ್ಲಾ "ಸುಭಟಬಾಚಿಯೊಳು, ಊರ್ಜ್ಜಿತ ಸವ್ಯಸಾಚಿಯಲ್ಲಿ" ನೆಲೆಸಿದ್ದವೆಂದು ಕೈದಾಳದ ಶಾಸನವು[೬೦] ಬಣ್ಣಿಸಿದೆ.

ಮತ್ತೊಬ್ಬ ಸಾಮಂತನಾದ ಗೋವಿಯನ ಬಣ್ಣನೆಯನ್ನು ಶಾಸನವೊಂದು[೬೧] ರೂಪಕದಲ್ಲಿ ಸೊಗಸಾಗಿ ಬಣ್ಣಿಸಿದ್ದು, ಆ ಶಾಸನ ಪದ್ಯವು ಈ ರೀತಿಯಿದೆ.

ಅತಿಶಯಸೂರನೇ ಜಗವನಂಡಲೆವಂ ಸತತ ಪ್ರತಾಪಿಯೇ
ಶಿತಕರಗಂಡರೂಪು ನಿಧಿಯೇ ಸಿರಿದೇವಿಯಸೂನು ದಾನಿಯೇ

ಸತದಳಮಿತ್ರಪುತ್ರನೆನಿಪುಂನತಿಸಂನುತತಂನೊಳೆಂದಾರು
ಪ್ರತಿಧರಣೀತಳಾಗ್ರದೊಳು ಬಲ್ಲನೊಳನ್ಯಕಪೋಳನಲ್ಲರೊಳು ॥

ಹೊಯ್ಸಳ ದೊರೆ ಒಂದನೆಯ ನರಸಿಂಹನ ಸಾಮಂತನಾಗಿದ್ದವನು ಚಟ್ಟನೆಂಬುವನು. ಆತನ ವಂಶಾವಳಿಯನ್ನು ನಿರೂಪಿಸುವ ಜೊತೆಗೆ ಹುಲಿಕೆರೆಯ ಶಾಸನವು[೬] ಚಟ್ಟಸಾಮಂತನ ಗುಣಗಾನವನ್ನು ಸೊಗಸಾಗಿ ಮಾಡಿದೆ. ಈ ಚಟ್ಟನಾದನೋ

ಕೂಸನೊಡನಾಡುವೆಡೆಯೊಳ್
ಭಾಸುರಸುರಮಂತ್ರಿ ಮಂತ್ರದೊಳ್ ರಿಪುತಂತ್ರೋ
ಗ್ರಾಸುರರಣರಂಗಾಗ್ರದೊ
ಳಾಸುರ ಕೇಸರಿ ವಿಳಾಸಿ ನೆಟ್ಟನೆ ಚಟ್ಟಂ ॥

ಈತನ ಶೌಚಗುಣವನ್ನು ಬಣ್ಣಿಸುವ ಪದ್ಯವು ಈ ರೀತಿಯಾಗಿದೆ.

ರಂಬೆಗವುರ್ವ್ವಸಿಗಂ ಮಿಗಿ
ಲೆಂಬವಳೇಕಾಂತದಲ್ಲಿ ಪರವಧು ಸಲೆ ತಂ
ನಂಬಯಸಿಬಂದು ನಿಲಲವ
ಳಂಬಗೆಯಂ ನೋಡನಳಿಪಿ ಮುಟ್ಟಂಚಟ್ಟಂ ॥

ದಾನಿಯೆನಿಸಿದ ಕರ್ಣನಾದರೋ ಎಣಿಕೆ ಮಾಡುತ್ತಾ ದಾನ ನೀಡುತ್ತಾನೆ. ಆದರೆ ಆತನನ್ನು ಮೀರಿಸಿದ ಈ ಚಟ್ಟನಾದರೋ "ಧನಕನಕರಾಶಿಯನೆಣಿಸದೆ ಕುಡುತಿರ್ಪ್ಪನೀತನೊಲ್ದಾಪೊರ್ತ್ತುಂ". ಆದ್ದರಿಂದ ಈ ಚಟ್ಟನು "ಕಲಿಯುಗಬಲಿ ಕಲಿಯುಗಶಿಬಿ ಕಲಿಯುಗವಿದ್ಯಾಧರೇಶಿ ಕಲಿಯುಗ ಕರ್ಣ ಕಲಿಯುಗಕಳ್ಪಕ್ಷ್ಮಾಜಂ ಕಲಿಯುಗ ಸುರಧೇನು"ವೆನಿಸಿದ್ದಾನೆ. ಈ ಎಲ್ಲಾ ಕಾರಣಗಳಿಂದಾಗಿ ಚಟ್ಟನಿಗೆ ಸಮಾನವಾದ ಮತ್ತೊಬ್ಬನನ್ನು ತಾನು ಕಾಣನೆಂಬ ವಿಚಾರವನ್ನು ಶಾಸನಕವಿಯು ಈ ರೀತಿಯಾಗಿ ಹೇಳುತ್ತಾನೆ.

ಪಿರಿದುಂ ಭ್ರಾಂತಿದೆ ನಾಲ್ಕುಂ ಕಡಲಕಡೆವರಂ ನೋಡಿದೆಂ ನೋಡಿಬಂದೆಂ
ಸಿರಿಯಿಂದಂ ಶೀಲದಿಂದಂ ಸನಯವಿನಯದಿಂದಾನದಿಂ ಧರ್ಮ್ಮದಿಂದಂ
ಗುರುದೇವಬ್ರಾಹ್ಮಣಾಳೀ ಪರಿಚರಣಭವದ್ಭಕ್ತಿಯಿಂ ಶಕ್ತಿಯಿಂದಂ
ದೊರೆಯಂ ಚಟ್ಟಂಗೆ ಕಾಣೆಂಗಳ ಪಲಱಿಯೆನಾಂ ಚಾಗದಿಂ ಭೋಗದಿಂ ॥

ವಿಜಯನಗರದ ಅರಸನಾದ ಎರಡನೆಯ ದೇವರಾಯನ ಕಾಲದಲ್ಲಿ ನಗಿರೆದೊರೆ ಮಹಾಮಂಡಳೇಶ್ವರನಾದ ಭೈರವ ರಾಜನ ಕಾಲದ ಕ್ರಿ.ಶ.೧೪೩೦ರ ಮೂಡುಬಿದಿರೆಯ ಶಾಸನವೊಂದು ೪೮ ಪದ್ಯಗಳಿಂದ ಕೂಡಿದ್ದು ಒಂದು ಪುಟ್ಟ ಚಂಪೂಕಾವ್ಯದಂತಿದೆ. ಈ

ಶಾಸನದಲ್ಲಿ[೬೩] ಭೈರವ ದೊರೆಯ ಶೌರ್ಯವನ್ನು ಬಣ್ಣಿಸಿರುವ ಪದ್ಯವು ಒಂದು ಸಾಂಸ್ಕೃತಿಕ ದಾಖಲೆಯೂ ಆಗಿದೆ.

**ಅರಿಭೂಪಾಲರ ದೇಶಮಂ ನಗರಮಂ ಭಂಡಾರಮಂ ಕೊಂಡು ಸಂ**
**ಗರದೊಳ್ಜೀವವನಿತ್ತೊಡಾ ರಿಪುನೃಪರ್ದ್ದೇಶಾಂತರಂ ಪೋಗಿ ಸಂ**
**ಚರಿಪರ್ದಂಡಕಮಂಡಲಾಜಿನ ಜಟಾಭಸ್ಮಾಂಗದಿಂದಾವಗಂ**
**ತಿರಿವರ್ ಭೈರವ ಭೈರವೆಂದು ಭಯದಿಂ ಶ್ರೀಭೈರವಕ್ಷೋಣಿಪಾ ॥**

ಭೈರವರಸನಿಂದ ಸೋಲನ್ನು ಅನುಭವಿಸಿದ ರಿಪುನೃಪರು 'ದಂಡಕಮಂಡಲ ಅಜಿನ ಜಟಾಭಸ್ಮಾಂಗರಾಗಿ' ಯಾವಾಗಲೂ ಭಯದಿಂದ 'ಭೈರವ ಭೈರವ'ನೆಂದು ನಾಮಸ್ಮರಣೆಯನ್ನು ಮಾಡುತ್ತಾ ಸಂಚರಿಸುತ್ತಿದ್ದರೆಂಬುದು ಒಂದು ವಿಶಿಷ್ಟವಾದ ಕಲ್ಪನೆಯಾಗಿದೆ.

೧೫ನೆಯ ಶತಮಾನದ ವಿಜಯನಗರದರಸರ ಕಾಲದ ಮೂಡಬಿದಿರೆಯ ಶಾಸನವೊಂದು[೬೪] ಸಾಮಂತ ಸಾಳ್ವಮಲ್ಲನನ್ನು ಬಣ್ಣಿಸುವ ಹಲವಾರು ಪದ್ಯಗಳನ್ನು ಒಳಗೊಂಡಿದೆ. ಈ ಸಾಳ್ವಮಲ್ಲನಾದರೋ ಭಾವಜ್ಞನಾಗಿದ್ದನು. ಅಂದರೆ ಜನರನ್ನು ಕಂಡೊಡನೆಯೇ ಅವರ ಗುಣಾವಳಿಯನ್ನು ಅರಿಯುವ ಸಾಮರ್ಥ್ಯವನ್ನು ಹೊಂದಿದ್ದನೆಂದು –

**ಪುರುಳೀತಂ ಮರುಳೀತನೀತ ನುರುಶಾಸ್ತ್ರೋತ್ತುಂಗನೀತಂನಿರ**
**ಕ್ಷರನೀತಂ ಸುಚರಿತ್ರನೀತನುಱಿದುಶ್ಚಾರಿತ್ರ ನೀತಂ ಗುಣೋ**
**ತ್ಕರನೀತಂ ಗುಣಹೀನನನೆಂದವರ್ಗ್ಗಳಂ ಕಂಡಾಕ್ಷಣಂ ಬಲ್ಲನೀ**
**ಧರೆಯೊಳ್ಸಾಳುವ ಮಲ್ಲರಾಯನೆವಲಂ ಭಾವಜ್ಞ ಚಕ್ರೇಶ್ವರಂ।**

ಈತನು ಬಲಿ, ಕರ್ಣ, ಭೋಜ, ಮಾಂಧಾತ ಮೊದಲಾದವರಿಗಿಂತ ಚಾಗದಲ್ಲಿ ಅಗ್ಗಳನಾದವನೆಂದು ಈ ಪದ್ಯವು ಬಣ್ಣಿಸಿದೆ.

**ಬಲಿಯಿಂಕರ್ಣನೆ ಚಾಗಿಯಾ ಬಲಿಯಿನುದ್ವತ್ಕರ್ಣನಿಂ ಭೋಜನಾ**
**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನಿಂ ಲೋಕದೊಳ್**
**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನಿಂ ಭೋಗದ**
**ಗ್ಗಲನಾದಂ ಕಲಿ ಸಾಳ್ವಮಲ್ಲನವನಂ ತಾನೋಂತರೀ ಧಾತ್ರಿಯೊಳ್ ।**

ಸಾಳ್ವಮಲ್ಲನಾದರೋ "ಕಾಳಗದಲ್ಲಿ ಶಕ್ರಸುತ, ಈವೆಡೆಯಲ್ಲಿ ಇನಸೂನು, ಮೇದಿನೀಪಾಳನದಲ್ಲಿ ರಾಮ' ನೆಂಬುದಾಗಿ ಪ್ರಸಿದ್ಧನಾದವನು. ಈ ಸಾಳ್ವಮಲ್ಲನಿಗೆ ಅನ್ಯ ಅರಸುಗಳು ಎಣೆಯಾಗಲು ಸಾಧ್ಯವಿಲ್ಲವೆಂಬುದನ್ನು ಕವಿಯು **"ಗರುಡಂಗೀಡಕ್ಕುಮೇ ಚಿಟ್ಟೆಯಮರಿ ಮೃಗರಾಜಂಗೆ ಸಾದೃಶ್ಯಮೇ ಕೀಳ್ನರಿ ಶೇಷಂಗಕ್ಕಟಾ ಪಾಟಿಯೆ ಜಲದೊಳಿರ್ದ್ದೊಳ್ಳೆ ಸೂರ್ಯಂಗೆ ಪೆಂಪಿಂಸರಿಯೇ**

**ಖದ್ಯೋತವಾಪಾಂಗಂ"** ಎಂಬುದಾಗಿ ಸೊಗಸಾದ ಉಪಮೆಗಳ ಮೂಲಕ ನಿರೂಪಿಸಿದ್ದಾನೆ. ಈ ಸಾಳ್ವಮಲ್ಲನು ನುಡಿದ ಮಾತಿಗೆ ತಪ್ಪುವವನಲ್ಲನೆಂಬುದನ್ನು ಕವಿಯು

**ಪೊಡವಿ ರಸಾತಳಕಿಳಿದೊಡೆ**
**ಪಡೆಮಾತೇಂ ಮೇರುವೆಳ್ದು ನಡೆದಾಡಿದೊಡಂ**
**ಪಡುವಲೆ ರವಿ ಮೂಡಿದೊಡಂ**
**ನುಡಿದಡೆ ತಪ್ಪುವನೆ ಸಾಳ್ವಮಲ್ಲ ನರೇಂದ್ರ॥**

ಎಂಬುದಾಗಿ ಸೊಗಸಾಗಿ ನಿರೂಪಿಸಿದ್ದಾನೆ. ಸಕಳ ಗುಣಾನ್ವಿತವಾದ ಸಾಳ್ವಮಲ್ಲನನ್ನು ಹಾಡಿ ಹೊಗಳಿದ ನಂತರ ಅನ್ಯರನ್ನು ಹೊಗಳಬಾರದು ಎಂಬುದು ಕವಿಯ ಅಭಿಮತವಾಗಿದೆ. ಹಾಗೆ ಮಾಡಿದರೆ "ಪಾಲುಂಡು ಮೇಲುಂಬಂತೆ" ಆಗುತ್ತದೆ ಎನ್ನುತ್ತಾನೆ ಶಾಸನಕವಿ. ಈ ಶಾಸನವು "ಎಲ್ಲ ಬಗೆಯ ಅಲಂಕಾರಗಳು, ಉಚಿತಪದ ಪ್ರಯೋಗ, ಹಾಗೂ ಸುಲಲಿತವಾಗಿ ಓದಿಸಿಕೊಂಡು ಹೋಗುವ ನಿರೂಪಣೆಯಿಂದ ಕೂಡಿದ ಈ ಶಾಸನ ಅಪೂರ್ಣವಾಗಿ ಲಿಖಿತವಾಗಿರುವುದು ಒಂದು ಕೊರತೆ. ಪ್ರಸಿದ್ಧರಾಗಿರುವ ಆದರೆ ಕಾವ್ಯಶಕ್ತಿಯಲ್ಲಿ ಅಷ್ಟೇನೂ ಸಮರ್ಥರಲ್ಲದ ಕವಿಗಳಿಗಿಂತ ಈ ಶಾಸನದ ಅವ್ಯಕ್ತ ಕವಿ ಕಾವ್ಯ ಪ್ರತಿಭೆಯುಳ್ಳವನಾಗಿ ಕಾಣಿಸುತ್ತಾನೆ"[೬೫] ಎಂಬ ಅಭಿಪ್ರಾಯವು ಈ ಶಾಸನದಲ್ಲಿನ ಸಾಹಿತ್ಯಕ ಅಂಶಗಳನ್ನು ಸಮರ್ಥವಾಗಿ ಗುರುತಿಸಿದೆ.

ಈ ಭಾಗದಲ್ಲಿ ಪ್ರಮುಖರಾದ ಕೆಲವು ಸಾಮಂತರು, ಮಂಡಳೇಶ್ವರರನ್ನು ಕುರಿತು ಶಾಸನಗಳಲ್ಲಿ ಬಂದಿರುವ ಸಾಹಿತ್ಯಗುಣವುಳ್ಳ ಕೆಲವು ಪದ್ಯಗಳನ್ನು ಗಮನಿಸಲಾಯಿತು. ಅವರುಗಳ ವ್ಯಕ್ತಿತ್ವವನ್ನು ಈ ಪದ್ಯ ಭಾಗಗಳು ಸಮರ್ಥವಾಗಿ ನಿರೂಪಿಸಿವೆ ಎಂದರೆ ತಪ್ಪಾಗದು.

### ೪.೫ : ಅಮಾತ್ಯರು – ದಂಡಾಧೀಶರು – ಅಧಿಕಾರಿಗಳು :–

ಕರ್ನಾಟಕದ ದೊರೆಗಳು ದೇಶವನ್ನು ಆಳುತ್ತಿದ್ದುದು ಸೈನ್ಯದ ಬಲದಿಂದಲ್ಲ, ಬದಲಾಗಿ ನಾಗರೀಕ ಅಧಿಕಾರಿಗಳ ಬೆಂಬಲದಿಂದಾಗಿ. ಅಂದರೆ ರಾಜನು ತನ್ನ ಮಂತ್ರಿಗಳ ನೆರವಿನಿಂದ ಆಡಳಿತವನ್ನು ನಡೆಸುತ್ತಿದ್ದನು. ರಾಜನಾದವನು ತನ್ನ ಸಹಪಾಠಿಗಳನ್ನು, ತನಗೆ ಆಪ್ತರಾದವರನ್ನು, ಕಷ್ಟಕಾಲದಲ್ಲಿ ತನ್ನನ್ನು ಸಂರಕ್ಷಿಸಿದವರನ್ನು, ಪ್ರಾಮಾಣಿಕರೂ, ಮೇಧಾವಿಗಳಾದವರನ್ನು, ಉತ್ತಮವಂಶ ಸಂಭೂತರೂ, ವಿವೇಕಿಗಳೂ, ಧೀರರೂ ಆದವರನ್ನು ತನ್ನ ಮಂತ್ರಿಗಳನ್ನಾಗಿ ನೇಮಕ ಮಾಡಿಕೊಳ್ಳುತ್ತಿದ್ದನು. ಅಂತಹವರು ಸೌಜನ್ಯಶೀಲರೂ, ಶೌಚಗುಣಸಂಪನ್ನರೂ, ಉದಾರಚರಿತರೂ, ಕೀರ್ತಿಶಾಲಿಗಳೂ ಆಗಿರುತ್ತಿದ್ದರು. ಮಂತ್ರಿಗಳನ್ನು ಮಹಾಪ್ರಧಾನಿ, ಮಹಾಮಾತ್ಯ, ದಂಡನಾಥ, ಮಹಾದಂಡನಾಥ, ಸಂಧಿವಿಗ್ರಹಿ, ದಂಡಾಧೀಶ, ಚಮೂಪ ಮುಂತಾದ ಪದಗಳಿಂದ ಶಾಸನಗಳು

ಕರೆದಿವೆ. ಅಂದರೆ ಕೆಲವರು ಮಂತ್ರಿ ಅಥವಾ ಅಮಾತ್ಯರಾಗಿಯೂ, ದಂಡಾಧೀಶರಾಗಿಯೂ ಸೇವೆ ಸಲ್ಲಿಸಿರುವ ಸಂಭವವಿರುತ್ತದೆ. ಆಡಳಿತದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದ ಈ ವರ್ಗದ ಜನರ ಗುಣಗಾನವನ್ನು ಕನ್ನಡದ ಶಾಸನಗಳು ಮುಕ್ತಕಂಠದಿಂದ ಮಾಡಿವೆ. ಅವುಗಳನ್ನು ಇಲ್ಲಿ ಗಮನಿಸಬಹುದಾಗಿದೆ.

ಕರ್ನಾಟಕವನ್ನು ಆಳಿದ ವಿವಿಧ ರಾಜಮನೆತನಗಳ ಆಳ್ವಿಕೆಯ ಸಂದರ್ಭದಲ್ಲಿ ಕಾರ್ಯ ನಿರ್ವಹಿಸಿ ಕೀರ್ತಿಗಳಿಸಿದ ಅಮಾತ್ಯರು ಅಥವಾ ಪ್ರಧಾನರು ಹಲವಾರು ಜನರು. ಅವರುಗಳಲ್ಲಿ ಚಾವುಂಡರಾಯ, ಗಂಗರಾಜ, ಹುಳ್ಳಚಮೂಪ, ಕರ್ಣ್ನಮಾತ್ಯ, ಸಚಿವ ಚಂದ್ರಮೌಳಿ, ಕಾಂತಿಮಯ್ಯ, ಮಂತ್ರಿ ಚೂಡಾಮಣಿ ಹೆಗ್ಗಡೆ ಮಾರ, ಮಂತ್ರಿ ರೇಚಣ ಚಮೂಪ, ನೊಕ್ಕಯ್ಯ ಮಹಾಮಾತ್ಯ, ಮಹಾಪ್ರಧಾನ ಹಿರಿಯಹಡವಳ ಚಾವಿಮಯ್ಯ, ಅಮಾತ್ಯ ಕಾಳಿಮಯ್ಯ, ಬಲ್ಲಪ ಮಂತ್ರಿ ಮೊದಲಾದವರನ್ನು ಹೆಸರಿಸಬಹುದು.

ತಲಕಾಡು ಗಂಗ ಅರಸರಾದ ಇಮ್ಮಡಿ ಮಾರಸಿಂಹ ಹಾಗೂ ನಾಲ್ಮಡಿ ರಾಚಮಲ್ಲನ ಮಂತ್ರಿಯಾಗಿದ್ದವನು ಚಾವುಂಡರಾಯನು. ಕವಿಯೂ, ಕಲಿಯೂ ಆಗಿದ್ದ ಈತನು ನಿರ್ಮಿಸಿದ ಗೊಮ್ಮಟನ ಭವ್ಯ ಕಲಾಕೃತಿಯು ಶಿಲ್ಪಕಲಾಪ್ರಪಂಚದ ಒಂದು ವಿಶಿಷ್ಟವಾದ ಕೊಡುಗೆಯಾಗಿದೆ. ಬೊಪ್ಪಣನ ಗೊಮ್ಮಟಸ್ತುತಿಯು ಈತನು ಕೈಗೊಂಡ ಮಹಾಕಾರ್ಯವನ್ನು ಸಕಾರಣವಾಗಿ ನಿರೂಪಿಸಿದೆ. ಪೌದನಪುರದಲ್ಲಿ ಭರತಚಕ್ರಿಯು ನಿರ್ಮಿಸಿದ್ದ 'ಬಾಹುಬಲಿ'ಯ ವಿಗ್ರಹವು ಕುಕ್ಕುಟಸರ್ಪಗಳ ಹಾವಳಿಯಿಂದಾಗಿ 'ಪ್ರಾಕೃತ'ರಿಗೆ ಅಗೋಚರವಾದಾಗ ಅದರ ಪ್ರತಿಕೃತಿಯನ್ನು ಶ್ರವಣಬೆಳಗೊಳದಲ್ಲಿ ನಿರ್ಮಿಸಿದವನು ಚಾವುಂಡರಾಯನು. ಈತನು

**ಜನದಿಂ ತಜ್ಜಿನ ವಿಶ್ರುತಾತಿಶಯಮಂ ತಾಂ ಕೇಳ್ದುನೋಟ್ಟಿಷ್ಟಿ ಚೇ**
**ತನೆಯೊಳ್ಪುಟ್ಟಿರೆ ಪೋಗಲುದ್ಯಮಿಸೆ ದೂರಂದುರ್ಗ್ಗಮಂತತ್ಪುರಾ**
**ವನಿಯೆನ್ದಾರ್ಯ್ಯಜನಂ ಪ್ರಬೋಧಿಸಿದೊಡನ್ತಾದಂದುತದ್ದೇವಕ**
**ಲ್ಪನೆಯಿಂ ಮಾಡಿಪೆನೆನ್ದು ಮಾಡಿಸಿದ ನಿನ್ತೀದೇವನಂ ಗೋಮಟಂ**[६६]

ಚಾವುಂಡರಾಯನಿಗೆ 'ಗೊಮ್ಮಟ'ನೆಂಬ ಹೆಸರು ಇದ್ದ ಕಾರಣದಿಂದ ಆತನು ನಿರ್ಮಿಸಿದ ಭವ್ಯಕಲಾಕೃತಿಗೂ ಸಹ 'ಗೊಮ್ಮಟ'ನೆಂಬ ಹೆಸರೇ ಚಿರಪರಿಚಿತವಾಗಲು ಕಾರಣವಾಯಿತು.

ಹೊಯ್ಸಳ ವಿಷ್ಣುವರ್ಧನನ ದಂಡನಾಯಕನಾದ ಗಂಗರಾಜ ಮಹಾಯೋಧನೂ ಆದವನು. ಈತನ ಕಾಲದಲ್ಲಿ ಬೆಳ್ಗೊಳದ ಬಸದಿಗಳು ಶ್ರೀಮಂತವಾದವು. ಈತನು ಕೈಗೊಂಡ ಧಾರ್ಮಿಕ ಚಟುವಟಿಕೆಗಳನ್ನು ಶ್ರವಣಬೆಳಗೊಳದ ಚಿಕ್ಕಬೆಟ್ಟದ ಶಾಸನಬಸದಿಯಲ್ಲಿರುವ ಶಾಸನದಿಂದ

ತಿಳಿದುಬರುತ್ತದೆ. ಶಾಸನ ಪದ್ಯವು[೬೭] ಈ ವಿಚಾರವನ್ನು ಹೀಗೆ ನಿರೂಪಿಸಿದೆ. **"ಗಂಗವಾಡಿಯ ಬಸದಿಗಳೆನಿತೊಳವನಿತಂ ತಾನೆಯ್ದೆ ಪೊಸಯಿಸಿದಂ ಗಂಗವಾಡಿಯ ಗೊಮ್ಮಟದೇವರ್ಗ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ".**

ಚಾವುಂಡರಾಯ, ಗಂಗರಾಯನ ನಂತರ ಪ್ರಸಿದ್ಧನಾದವನೆಂದರೆ ಹುಳ್ಳರಾಯ ಅಥವಾ ಹುಳ್ಳಚಮೂಪ. ಈತನ ವ್ಯಕ್ತಿತ್ವನ್ನು ಶಾಸನಗಳು ಸಹಜವಾಗಿ ಬಣ್ಣಿಸಿವೆ. ಶ್ರವಣಬೆಳಗೊಳದ ಭಂಡಾರಿ ಬಸದಿಯ ಶಾಸನವು[೬೮] ಈತನು "ನೆಗಳ್ದ ನಾರಸಿಂಹಧರಾನಾಥಂಗೆ ಅಮರ ಪತಿಗೆ ವಾಚಸ್ಪತಿವೋಲ್" ಮಾನ್ಯಮಂತ್ರಿಯಾಗಿ ತಾನೆಸೆದನು. ಅತಿಶಯದ ಅಂಶಗಳನ್ನು ಹೆಚ್ಚಾಗಿ ಒಳಗೊಂಡಿದ್ದರೂ, 'ಹುಳ್ಳವನ್' ಎಂಬುದಕ್ಕೆ ಸಪ್ರಾಸವಾಗಿ ಹೊಂದಿಕೊಳ್ಳುವಂತೆ 'ಉಳ್ಳನನ್' ಎಂಬ ಪದಗಳನ್ನು ಪ್ರಯೋಗಿಸಿ ಚಮತ್ಕಾರವಾಗಿ 'ಹುಳ್ಳ'ನ ವ್ಯಕ್ತಿತ್ವವನ್ನು ಬಣ್ಣಿಸಿರುವ ಈ ಕೆಳಗಿನ ಪದ್ಯವು ಗಮನಾರ್ಹವಾಗಿದೆ.

**ಧರೆಯಂ ಗೆಲ್ದಿರ್ದ್ದ ತಿಣ್ಪುಳ್ಳನನುದಧಿಯನೇನೆಂಬಗುಣ್ಪುಳ್ಳನಂ ಮಂ**
**ದರಮಂ ಮಾರ್ಕ್ಕೊಳ್ವ ಪೆಂಪುಳ್ಳನನಮರಮಹೀಜಾತಮಂಮಿಕ್ಕಲೋಕೋ**
**ತ್ತರಮಪ್ಪಾರ್ಪ್ಪುಳ್ಳನಂ ಪುಳ್ಳನನೆಸೆವ ಜಿನೇಂದ್ರಾಂಘ್ರಿಪಂಕೇಜಪೂಜೋ**
**ತ್ಕರದೊಳ್ ತಳ್ಪೊಯ್ದುಲಂಪುಳ್ಳನನುಕರಿಸಲ್ಮರ್ತ್ತ್ಯನಾವೊಂ ಸಮರ್ತ್ಥಂ ॥**

ಹುಳ್ಳಚಮೂಪನ ಗುಣಗಾನವನ್ನು ಬಣ್ಣಿಸಲು ಸಾಧ್ಯವಿಲ್ಲವೆಂಬ ವಿಚಾರವನ್ನು ಶಾಸನಕವಿಯು ಹೀಗೆ ಹೇಳಿದ್ದಾನೆ.

**ಹುಳ್ಳಚಮೂಪನ ಗುಣಗಣ**
**ಮುಳ್ಳನಿತುಮನಾರೊ ನೆಱೆಯೆ ಪೊಗಳಲ್ನೆಱೆವರ್**
**ಬಳ್ಳದೊಳಳೆದುದಧಿಯ ಜಳ**
**ಮುಳ್ಳನಿತುಮನಾರೊ ಪವಣಿಸಲ್ ನೆಱೆವನ್ನರ್ ॥**

ಹೊಯ್ಸಳ ಇಮ್ಮಡಿ ಬಲ್ಲಾಳನ ಮಂತ್ರಿಯಾಗಿದ್ದವನು ಚಂದ್ರಮೌಳಿ ಸಚಿವ. ಈತನು "ಪತಿಭಕ್ತನೂ, ವರಮಂತ್ರ ಶಕ್ತಿಯುತವಾಗಿ, ಇಂದ್ರಗೆಂತು ಭಾಸ್ವದ್ಬೃಹಸ್ಪತಿ ಮಂತ್ರೀಶ್ವರನಾದಂತೆ ವಿಳಸದ್ಬಲ್ಲಾಳದೇವಾವನಿಪನಿಗೆ ಮಂತ್ರಿಯಾದ'ನೆಂದು ಶಾಸನವೊಂದು[೬೯] ಬಣ್ಣಿಸಿದೆ. ಮಂತ್ರಿಯಾದವನಿಗೆ ಇರಬೇಕಾದ ಎಲ್ಲಾ ಅರ್ಹತೆಗಳೂ ಈತನಲ್ಲಿ ಇದ್ದವು ಎಂಬುದನ್ನು ಈ ಶಾಸನದ ಮತ್ತೊಂದು ಪದ್ಯವು ಬಣ್ಣಿಸಿದೆ. ಆ ಪದ್ಯವು ಹೀಗಿದೆ.

**ವರತರ್ಕ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿ ಚಂದ್ರಂಸಮು**
**ದ್ಧುರಸಾಹಿತ್ಯಲತಾಲವಾಲನೆಸೆದಂ ನಾನಾಕಳಾಕೋವಿದಂ**

ಸ್ಥಿರಮಂತ್ರಂ ದ್ವಿಜವಂಶಶೋಭಿತನಶೇಷಸ್ತುತ್ಯನುದ್ಯದ್ಯಶಂ
ಧರೆಯೊಳ್ವಿಶ್ರುತ ಚಂದ್ರಮೌಳಿಸಚಿವಂ ಸೌಜನ್ಯಜನ್ಮಾಲಯಂ ॥

ಮಂತ್ರಿ ಚೂಡಾಮಣಿ ಹೆಗ್ಗಡೆ ಮಾರನ ಸೌಂದರ್ಯ, ಪರಾಕ್ರಮವನ್ನು ಶಾಸನ ಪದ್ಯವೊಂದು[೨೦] ಈ ರೀತಿ ಬಣ್ಣಿಸುತ್ತದೆ.

ಮಾರಂಗೆ ಸಾಂಗಮದನಾ
ಕಾರಂಗೆ ಪರಾಂಗನಾವಿದೂರಂಗೆ ಸದಾ
ಧೀರಂಗೆ ಸಕಳ ವಿಬುಧಾ
ಧಾರಂಗೆ ಸಮಾನರೆನಿಪ ಮಾನವರೊಳರೇ ॥

ಮತ್ತೊಬ್ಬ ಮಂತ್ರಿಯಾದ ರೇಚಣಚಮೂಪನಾದರೋ 'ವಸುಧೈಕಬಂಧು'ವೆಂಬ ಹೆಸರನ್ನು ಪಡೆದವನಂತೆ. ಅದು ಹೇಗೆನ್ನುವುದನ್ನು ಶಾಸನ ಪದ್ಯವು[೨೧] ಹೀಗೆ ನಿರೂಪಿಸುತ್ತದೆ.

ಒಸೆದವರಿವರೆಂನದೆ ಸ
ನ್ತೊಸಮಪ್ಪಿನವಿತ್ತು ಪಡೆದನೀ ವಸುಮತಿಯೊಳ್
ವಸುಧೈಕ ಬಂಧುವೆಂಬೀ
ಪೆಸರಂ ರೇಚರಸನುಂತು ದೇಸಿಯಿನಾಯ್ತೇ ॥

ಈತನಿಗೆ 'ವಸುಧೈಕ ಬಾಂಧವ'ನೆಂಬ ಹೆಸರು ಬಂದಿರುವುದು ಕೇವಲ ತೋರಿಕೆಯಿಂದಲ್ಲ. ಬದಲಾಗಿ ಬಂದು ಬೇಡಿದವರಲ್ಲಿ ಅವರಿವರೆಂದು ಬೇಧವನ್ನು ಮಾಡದೆ ಯಾಚಕರಿಗೆ ತೃಪ್ತಿ, ಸಂತೋಷವಾಗುವಷ್ಟರ ಮಟ್ಟಿಗೆ ದಾನವನ್ನು ನೀಡುತ್ತಿದ್ದ ಗುಣ ಈತನಲ್ಲಿತ್ತು.

ಮಹಾಪ್ರಧಾನ ಹೆಗ್ಗಡೆ ಕಾಳಿಮಯ್ಯ, ಒಂದನೆಯ ನರಸಿಂಹನ ಕಾಲದಲ್ಲಿದ್ದವನು. ಈತನನ್ನು "ಜನವಿನುತ, ವಿವೇಕನಿಧಿ, ಸಚ್ಚರಿತಾಸ್ರಯ, ಆತ್ಮವಂಶವರ್ಧನ, ಅಭಿಮಾನ ಮೇರು, ಸುಜನಾಗ್ರಣಿ, ದಾನವಿನೋದಿ, ಪುಣ್ಯಭಾಜನ, ಅನವದ್ಯನೆಂದು ಧರೆ ಬಣ್ಣಿಸುತ್ತಿತ್ತು. ಈತನಲ್ಲಿ ವನಧಿಯ ಗುಣ್ಪು, ಮೇರುವಿನ ಪೆಂಪು ಮತ್ತು ಸುರದ್ರುಮದ ಆರ್ಪು" ಯಾವಾಗಲೂ ನೆಲೆಸಿತ್ತು ಎಂಬುದನ್ನು ಈ ರೀತಿಯಾಗಿ ನಿರೂಪಿಸಲಾಗಿದೆ.

ವನಧಿಗದೊಂದೆ ಗುಣ್ಪು ಸಹಜಂ ಕನಕಾದ್ರಿಗದೊಂದೆ ಪೆಂಪು ಮ
ತ್ತನುಪಮದಾನವೊಂದೆ ನಿಜವಾ ದಿವಿಜಕ್ಷಿತಿಜಕ್ಕೆ ನೋರ್ಪ್ಪಡಾ
ವನದಿಯ ಗುಣ್ಪು ಮೇರುವಿನ ಪೆಂಪು ಸುರದ್ರುಮಮದಾರ್ಪ್ಪದಾವಗಂ
ತನಗೆನಲೀ ಧರಾತಳದೊಳಾರ್ದ್ದೊರೆ ಹೆಗ್ಗಡೆ ಕಾಳಿಮಯ್ಯನೊಳ್[೨೨]

ಈತನ ಕೀರ್ತಿಯಾದರೋ,

**ಮಿಸುಗುವ ತಾರಕಾದ್ರಿರುಚಿಯಿಂ ದುಗ್ಧಾರ್ಣ್ನವಫೇನರೋಚಿಯಿಂ**

**ದೆಸೆಗಳನಾವಗಂ ಬೆಳಗುತಿರ್ಪ್ಪ ಹಿಮಾಕರಬಿಂಬದಿಂ ವಿರಾ**

**ಜಿಸುವಮರೇಂದ್ರದಂತಿಯ ತನುಚ್ಛವಿಯಿಂ ಮಿಗಿಲಾಗಿಪರ್ವ್ವಿರಂ**

**ಜಿಸುವುದು"**

ಎಂಬುದಾಗಿ ಅದೇ ಶಾಸನದ ಮತ್ತೊಂದು ಪದ್ಯವು ಬಣ್ಣಿಸಿದೆ.

ಕರ್ಣ್ನಮಾತ್ಯ ಅಥವಾ ಕನ್ನನೆಂಬುವನು ಕಲ್ಯಾಣದ ಚಾಲುಕ್ಯರ ಅರಸರ ಕಾಲದಲ್ಲಿ ಪ್ರಮುಖನಾದವನು. ಈತನ ಸತ್ಯಸಂಧತೆ, ಪರನಾರೀ ಸೋದರತ್ವವನ್ನು ಕವಿಯು ಅತಿಶಯವಾಗಿ ಬಣ್ಣಿಸುತ್ತಾನೆ. ಶಾಸನದ ಪ್ರಕಾರ[೭೩] ಒಂದು ವೇಳೆ ಕರ್ಣ್ನಮಾತ್ಯನು 'ಇಳಾತಳಾಗ್ರ'ದಲ್ಲಿ ಅಸತ್ಯ ಪರನಾದರೆ, ಅನ್ಯಸತೀಜನಕ್ಕೆ ಕೈವಾರದೆ ಸೋತರೆ ಆಗ

**ವಾರಿಧಿ ಬತ್ತುಗುಂ ವಸುಧೆಪೊತ್ತುಗು ದಿಗ್ಗಜಮಳ್ಕಿಬಳ್ಕುಗುಂ**

**ಮೇರುನಗಾದ್ರಿ ನೀರ ನೆಳಲಂತತಿ ಸಂಚಳಮಾಗಿತೋರ್ಕ್ಕುಂ**

ಕವಿಯ ಪ್ರಕಾರ ಕರ್ಣಮಾತ್ಯನ ಉನ್ನತ ಗುಣದಲ್ಲಿ ಬದಲಾವಣೆಯಾಗಲು ಸಾಧ್ಯವಿಲ್ಲವಾದ್ದರಿಂದ ಪ್ರಕೃತಿಯಲ್ಲೂ ಸಹ ಈ ರೀತಿಯಾದ ಏರುಪೇರಾಗುವುದು ಅಸಂಭವಾಗುತ್ತದೆ. ಈ ಕನ್ನನಾದರೋ "ಉದಾತ್ತವೀರಗುಣಕನ್ನನ್, ಉದಾರತೆ ಕನ್ನನ್, ಒಂದು ಸೌಜನ್ಯತೆ ಕನ್ನನ್, ಒಂದು ಮಹಿಮೋನ್ನತೆಕನ್ನನ್" ಆದ್ದರಿಂದ "ಕನ್ನನ ಭದ್ರಲಕ್ಷಣ, ಕರ್ನ್ನನಕೀರ್ತ್ತಿ, ಕನ್ನನ ಅಭಿಮಾನತೆ, ಕನ್ನನ ಸಚ್ಚರಿತ್ರೆ"ಗೆ ಸಮಾನರಾದವರು ಯಾರೆಂಬುದಾಗಿ ಶಾಸನಕವಿಯು ಪ್ರಶ್ನಿಸುತ್ತಾನೆ.

ಹಾಗೆಯೇ ಹಲವಾರು ಜನ ದಂಡನಾಯಕರು, ದಂಡಾಧೀಶರೂ, ತಮ್ಮ ವಿಶಿಷ್ಟವಾದ ಸಾಧನೆಗಳಿಂದ, ಪರಾಕ್ರಮದಿಂದ, ವ್ಯಕ್ತಿತ್ವದಿಂದ ಗಮನಸೆಳೆದಿದ್ದಾರೆ. ಇಂತಹವರುಗಳಲ್ಲಿ ಕಾಳಿದಾಸ ಚಮೂಪ, ಕೇಶಿರಾಜ ದಂಡಾಧೀಶ, ಮಹಾದೇವ ದಂಣ್ಣಾಯಕ, ಪೋಲಾಳ್ವ ದಂಡನಾಯಕ, ಬುಳ್ಳ ಚಮೂಪ, ತೈಲದಂಡಾಧಿಪ, ಅಮಿತಯ್ಯ ದಂಣಾಯಕ, ರಾಯ ದಂಡಾಧಿಪ, ಮರಿಯಾನೆ ದಂಡನಾಯಕ, ಸೇನಾಧಿಪತಿ ಬೋಕಣ ಮೊದಲಾದವರನ್ನು ಹೆಸರಿಸಬಹುದಾಗಿದೆ.

ಬಿಜ್ಜಳದೇವನ ಚಮೂಪತಿಯಾದವನು ಕೇಶಿರಾಜ ದಂಡಾಧೀಶ. ಈತನ ಉದಾತ್ತತೆಯನ್ನು ಬಳ್ಳಿಗಾವೆಯ ಶಾಸನವು ಹೀಗೆ ನಿರೂಪಿಸುತ್ತದೆ.[೭೪]

**ಪುಸಿಯಲ್ಲುತ್ತು ಬೇಟಿಪ್ಪರಂ ಪು**

**ಟ್ಟಿಸುವ ಬೆಸಂ ಬರ್ಮ್ಮನದು ಸಮನ್ತವರಂ ರ**

**ಕ್ಷಿಸುವ ದೆಸಂ ತನ್ನದು ಗಡ**

**ನಿಸದಂ ಕೇಶವನಿದೇನುದಾತ್ತನೋ ಧರೆಯೊಳ್"**

ಬೇಡುವವರನ್ನು ಹುಟ್ಟಿಸುವ ಕಾರ್ಯವು ಬ್ರಹ್ಮನದು ಆದರೆ ಅವರನ್ನು ರಕ್ಷಿಸುವ ಕಾರ್ಯವು ತನ್ನದೆಂದು ಭಾವಿಸಿದ ಕೇಶವನು ನಿಜವಾಗಿಯೂ ಉದಾತ್ತನೇ ಸರಿ. ಈ ಕೇಶವನಾದರೋ ಅರ್ಥಿಗಳಿಗೆ ಸದಾಕಾಲ ಹೊನ್ನುಗಳನ್ನೇ ನೀಡುತ್ತಿದ್ದನಂತೆ. ಕಾರಣವೇನೆಂದರೆ "ಇನಜಂಕೊಟ್ಟ ತೊವಲ್, ಶಿಬಿಮುನಿ ಕೊಟ್ಟ ಅಡಗು, ಆ ದಧೀಚಿಕೊಟ್ಟ ಎಲ್ವುಗಳ್ ಏಂ ಧನದನ್ತೆ ಸೇವ್ಯವೆ" ಎಂದು ಕವಿಯು ಪ್ರಶ್ನಿಸಿದ್ದಾನೆ.

ತೈಲದಂಡಾಧಿಪನೆಂಬುವನು ಹೊಯ್ಸಳರ ಒಂದನೆಯ ನರಸಿಂಹನ ಕಾಲದವನು. ಈತನ ರೂಪ, ಪರಾಕ್ರಮ, ದಾನಗುಣವನ್ನು ಬಣ್ಣಿಸುವಾಗ ಕವಿಯು 'ಹರಿತನಯ'ನೆಂಬ ಪದವನ್ನು ಚಮತ್ಕಾರಿಕವಾಗಿ ಬಳಸಿದ್ದಾನೆ. ಆ ಪದ್ಯವು ಈ ರೀತಿಯಾಗಿದೆ.

**ವರವನಿತೆಯರ್ಗ್ಗೆ ರಿಪು ಗ**
**ಳ್ಗೆರೆದರ್ತ್ಥಿಜನಕ್ಕೆ ತೈಲದಂಡಾಧೀಶಂ**
**ಹರಿತನಯಂ ಹರಿತನಯಂ**
**ಹರಿತನಯಂ ಧರೆಯೊಳೆಂದು[ಂ] ಪೊಗಳದರೊಳರೇ**[೭೫]

ಈತನು "ವರವನಿತೆಯರಿಗೆ ಹರಿತನಯ ಅಂದರೆ ಮನ್ಮಥ, ರಿಪುಗಳಿಗೆ ಹರಿತನಯ ಅಂದರೆ ಅರ್ಜುನ ಮತ್ತು ಅರ್ತ್ಥಿಜನಕ್ಕೆ ಹರಿತನಯ ಅಂದರೆ ಕರ್ಣನೆಂಬುದಾಗಿ ಪ್ರಸಿದ್ಧನಾಗಿದ್ದಾನೆ. 'ಹರಿತನಯ'ವೆಂಬ ಪದಕ್ಕೆ ಮನ್ಮಥ, ಅರ್ಜುನ ಮತ್ತು ಕರ್ಣನೆಂಬ ಅರ್ಥವಿರುವುದನ್ನು[೭೬] ಕವಿಯು ಸೊಗಸಾಗಿ ಬಳಸಿಕೊಂಡಿದ್ದಾನೆ.

ಜನ್ನ ಕವಿಯು ರಚಿಸಿರುವ ಅಮೃತಾಪುರದ ಶಾಸನವು ಅಮಿತ ದಂಡನಾಯಕನ ಗುಣಗಾನವನ್ನು ಮಾಡಿದೆ.[೭೭] ಈತನಾದರೋ 'ಯಾದವೇಶ್ವರ ಸಭಾರತ್ನ ಪ್ರದೀಪಂ ಜಗತ್ಪ್ರಸ್ತುತ್ಯಾಕೃತಿ ಮಂತ್ರಿ ಮಂಡಳಿಕದಂಡಾಧೀಶ ಗಂಭೀರರತ್ನಾಕರ'ನೆಂದು ಪ್ರಸಿದ್ಧನಾದವನು. ಹರಿಯಮಸೆಟ್ಟಿ ಮತ್ತು ಸುಗ್ಗಲೆಗೆ ಮಗನಾದ ಅಮಿತ ದಂಡಾಧೀಶನನ್ನು ಸೃಷ್ಟಿಸುವ ಮೂಲಕ ಪದ್ಮಜನು ಅಂದರೆ ಬ್ರಹ್ಮನು ತನ್ನ 'ದೋಷ'ವನ್ನು ನಿವಾರಿಸಿಕೊಂಡನಂತೆ ಅದೇಕೆಂದರೆ

**ಜಡರಂ ಜಾತಿವಿಹೀನರಂ ವಿಕಳರಂ ನಾಣೊಕ್ಕರಂ ಮಿಕ್ಕರಂ**
**ಪಡೆದಾ ದೋಷನಿವಾರಣಕ್ಕಮೃತದಂಡಾಧೀಶನಂ ಪುಣ್ಯದಿಂ**
**ಪಡೆದಂ ಪದ್ಮಜನಲ್ಲದಂದು ನೆಗಟ್ದೀ ಗಾಂಭೀರ್ಯ್ಯಮೀಧೈರ್ಯಮಿ**
**ಕ್ಕುಡುವಾರ್ಪ್ಪಕಡುನೇರ್ಪ್ಪು ಭೂಭುವದೊಳ್ ಪೇಳಂನ್ಯ ಸಾಮಾನ್ಯಮೇ ॥**

ಹೆಸರಿಗೆ ಮಾತ್ರ ಪರಾಕ್ರಮಿಗಳೆಂದು ತೋರಿಸಿಕೊಳ್ಳುವವರನ್ನು ವಿಡಂಬಿಸುವಂತೆ ಅಮಿತ ದಂಡಾಧೀಶನು ನಿಜವಾದ ಪರಾಕ್ರಮಿಯಾಗಿದ್ದನೆಂದು ಈ ಶಾಸನದ ಮತ್ತೊಂದು ಪದ್ಯ ನಿರೂಪಿಸಿದೆ.

ಅಮಿತಂ ದಂಡೇಶರತ್ನಂ ಪ್ರಭುದಿಟಕೆ ಕೆಲರ್ದ್ದೂರದಿಂ ಪರ್ವ್ವತಂರ
ಮ್ಯಮೆನಿರ್ಪ್ಪರಂತಿರ್ಪ್ಪರಾರಯ್ದೊಳಪುಗೆ ಪುರುಳಿಲ್ಲಂ ನರೋಪಾದೀಯೇಯು
ದ್ಧ ಮುಖಂ ತಳ್ತಲ್ಲಿ ಕೂರಾಳಧನರಿಲಮೆಗಂದಲ್ಲಿ ಮಾದಾನಿನಿಷ್ಠೋ
ದ್ಯಮರೆಂತಂದಲ್ಲಿ ನಂಟಂ ವಿಷಮ ಸಮಯಮಾದಲ್ಲಿ ತಾನೇಕವಾಕ್ಯಂ॥

ಸಿರಿ ಮತ್ತು ಶೌರ್ಯವಿದ್ದಾಗ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಅಮಿತದಂಡನಾಯಕನು ತೋರಿಸಿಕೊಟ್ಟಿದ್ದಾನೆ. ಹೇಗೆಂದರೆ –

ಸಿರಿಯುಂಟೇ ಪೆಱರ್ಗ್ಗಿತ್ತು ತೋಱುವುದು ಬಲ್ಪುಂಟೇ ಮನಂಮೆಚ್ಚದಾಂ
ತರನುಗ್ರಾಜಿಯೊಳಿಕ್ಕಿ ತೋಱುವುದು ತಾನುಂಡುಟ್ಟು ಚಿರ್ಮ್ಮಂದು ಕೊಂ
ಡಿರೆಮಾಣೆಂತಟಬಲ್ಪದಾವಸಿರಿಯೆಂದಾತ್ತಣ್ಮೆಕೂರ್ತ್ತಿರ್ತ್ತು ಮ
ಚ್ಚರಿಪಂಗರ್ತ್ಥಿಸುವಂಗೆ ಸಲ್ವನಮಿತಂ ದಂಡೇಶದಿಕ್ಕುಂಜರಂ ॥

ನೀಡಿದ ತಾಮ್ರಶಾಸನವಾಗಲೀ, ನಿಲ್ಲಿಸಿದ ಶಿಲಾಶಾಸನವಾಗಲೀ ಬಾಯ್ಬಿಟ್ಟು ನೀಡಿದ ದಾನವನ್ನು ಹಾಗೂ ತೋರಿಸಿದ ಪರಾಕ್ರಮವನ್ನು ಹೇಳುವುದಿಲ್ಲ. ಆದರೆ ಅಮಿತ ದಂಡಾಧೀಶನ ಪರಾಕ್ರಮ, ದಾನಗುಣಗಳನ್ನು ಬಣ್ಣಿಸುವ ಶಾಸನಗಳೇ ಬೇರೆ ಎಂಬುದನ್ನು ಜನ್ನನು ಹೀಗೆ ನಿರೂಪಿಸುತ್ತಾನೆ.

ಮಡಗಿದ ತಾಂಬ್ರಶಾಸನಮದೊಂದೆಡೆಗೆತ್ತಿದ ಕಲ್ಲಶಾಸನಂ
ನುಡಿವುವೆ ಮಂತ್ರಿಮುಖ್ಯನಮಿತಂನೆಱಿಕಾವುದನೀವುದಂ ತೊಡ
ರ್ಪ್ಪಡಪಿರೆ ಕಾದ ಮಾನಸರ ಮೆಯ್ಸಿರಿಗಳ್ ನರಶಾಸನಂಮನಂ
ಬಡೆವಿನಮಿತ್ತುದಂ ಪೊಗಟ್ವನಾಲಗೆ ತಾಂಬ್ರಶಾಸನಂ ॥

ಹೊಯ್ಸಳ ಕಾಲದಲ್ಲಿ ಪ್ರಮುಖರಾಗಿದ್ದ ಮತ್ತಿಬ್ಬರು ದಂಡನಾಯಕರೆಂದರೆ ಮರಿಯಾನೆ ದಂಡನಾಯಕ ಮತ್ತು ಭರತರಾಜದಂಡನಾಯಕರು. ಇವರಿಬ್ಬರ ಗುಣಗಾನವನ್ನು ಸಿಂಧಗಿರಿಯ ಶಾಸನವು[21] ಒಳಗೊಂಡಿದೆ. ಇವರಿಬ್ಬರು "ಭೀಮಾರ್ಜ್ಜುನ ಲವಕುಶ ರಿವರೀಮಾಳ್ಕೆಯೆನಲ್ಕೆ ತಂಮುತಿರ್ವ್ವರುಮೆಸೆದರು" ಮರಿಯಾನೆ ದಂಡನಾಯಕನು

ಮಱುವಕ್ಕಮನೋಡಿಸಲುಂ
ನೆಱಿರಾಜ್ಯ ಶ್ರೀವಿಳಾಸಮಂಮೆಱಿಯಲುಮೀ

ಮಱಿಯಾನೆ ನೆಱಗುಮೆಂ

ದರ್ಕ್ಕಱೆನೊಳು ಪತಿಮೆಚ್ಚಿಪಟ್ಟದಾನೆಯುಮಾದ

ಹಾಗೆಯೇ ಭರತರಾಜದಂಡನಾಯಕನು –

ಸಿರಿಪೊಸಮುತ್ತಿನೆಕ್ಕಸರದಂತಿರೆ ನಿಂನ ವಿಶಾಳವಕ್ಷದೊಳು

ಸರಸತಿವಕ್ತ್ರದೊಳು ತಿಳಕದಂತಿರೆ ವೀರರ ವೀರಲಕ್ಷ್ಮಿ ತೋ

ಳ್ವೆರಗಿನೊಳೊಪ್ಪೆರಕ್ಕೆ ವಣಿಯಂತಿರೆ ನಿರ್ಮ್ಮಳವಪ್ಪ ಕೀರ್ತ್ತಿಯಂ

ಭರತಚಮೂಪತಾಳ್ದು ಶಶಿಸೂರ್ಯ್ಯಕುಳಾದ್ರಿಚಯಂಗಳುಳ್ಳಿನಂ

ಎಂದು ಪ್ರಸಿದ್ಧನಾದನು. ಈ ಭರತ ದಂಡನಾಯಕನು ಮನೆ ಮತ್ತು ಮೊನೆ ಎರಡರಲ್ಲೂ ವಿಖ್ಯಾತನಾದವನೆಂದು ಈ ಕೆಳಗಿನ ಪದ್ಯವು ಬಣ್ಣಿಸಿದೆ.

ಮನೆಯೊಳು ಚಾಣಕ್ಯನಿನ್ದಂ ಮಿಗಿಲೆನಿಪ ಮಹಾಮಂತ್ರಿನಾನಾನಯಜ್ಞಂ

ಮೊನೆಯೊಳು ಸೌಪರ್ನ್ನನಿಂದಗ್ಗಳಮೆನಿಪಮಹಾವೀರನಭ್ಯಸ್ತಶಸ್ತ್ರಂ

ಮನೆಗಂ ಮಾಱಾನ್ತುನಿಂದೊಡ್ಡಿದ ಮೊನೆಗಮಿದೇಂ ದಕ್ಷನೆಂದರ್ಕ್ಕಱೆಂದಾ

ಳ್ದನೆ ತಂನಂ ಬಂಣಿಸಲ್ಕೇಂ ನೆಗರ್ದ್ದ[]ನೊ ಭರತಂ ಖಳ್ಗಕಾರ್ಯ್ಯಾತಿ ಧುರ್ಯ್ಯಾ॥

ಉತ್ತಮ ಗುಣಸಂಪನ್ನನಾದ ಈ ಭರತರಾಜನನ್ನು ಸೃಷ್ಟಿಕರ್ತನಾದ ಬ್ರಹ್ಮನು ಮುಂದಿನ ಸೃಷ್ಟಿಯ 'ಬೀಜವೆಂಬಂತೆ ಕಾದುಕೊಂಡಿದ್ದನೆಂದು ಅತಿಶಯವಾಗಿ ಸಿಂಧಗಿರಿಯ ಮತ್ತೊಂದು ಶಾಸನ ಪದ್ಯವು ಬಣ್ಣಸಿದೆ. ಶಾಸನ ಪದ್ಯವು ಹೀಗಿದೆ.[೭೯]

ಮತ್ತೆ ಕ್ರಿತಯುಗಮೆ ಬಂದಂ

ದುತ್ತಮಪುರುಷರನೆ ಪಡೆವಡೆ ನಗದಲೀತಂ

ಬಿತ್ತೆಂದು ಕಾದಪಂ ಬಿದಿ

ಬಿತ್ತರದಿಂ ಭರತರಾಜದಂಡಾಧಿಪನಂ ॥

ಹೊಯ್ಸಳ ವೀರನಾರಸಿಂಹನ 'ತೇಜಕ್ಕೆ ಕಾಯ್ಪಿನಂತೆ ಕಯ್ದುಗೆ ಕೂರ್ಪಿನಂತೆ ಮಂತ್ರಕ್ಕೆ ಶಕ್ತಿಯಂತೆ. ರಾಜ್ಯಕ್ಕೆ ವಜ್ರ ಸನ್ನಾಹದಂತೆ' ಮಹಾಪ್ರಧಾನನೂ ದಂಡಾಧೀಶನೂ ಆಗಿದ್ದವನು ಪೋಲಾಳ್ವ ದಂಡನಾಯಕನು. ಈತನು ಹರಿಹರ ದೇವಾಲಯವನ್ನು ನಿರ್ಮಿಸುವ ಮೂಲಕ ಧಾರ್ಮಿಕ ಚಟುವಟಿಕೆಯಲ್ಲಿ ಪಾಲ್ಗೊಂಡವನು. ಈತನನ್ನು ಹರಿಹರದ ಶಾಸನವು "ಸಂಗೀತ ಸಾರ, ಸಜ್ಜನಧಾರ, ಕಾವ್ಯಕರ್ತಾರ, ಕೀರ್ತಿಭರ್ತಾರ, ಕವಿಜನಾಭರಣ, ಸೂಕ್ತಿಸುಧಾಕಿರಣ, ವಿತರಣವಿಳಾಸ, ಲಕ್ಷ್ಮೀನಿವಾಸ,ಸತ್ಯಸ್ವಭಾವ'ನೆಂದು ಬಣ್ಣಸಿದೆ.[೮೦] ಈ ಪೋಲಾಳ್ವ ದಂಡನಾಥನಲ್ಲಿ

**ಬಗೆಗೇನುಂ ಕವಲಿಲ್ಲ ವಾಕ್ಯವೆರಡಿಲ್ಲೌದಾರ್ಯದೊಳ್ ಮಾಂದ್ಯಮಿ**

**ಲ್ಲಗುಣಪ್ರೀತಿಯೊಳಾತ್ಮಪಕ್ಷ ಪರಪಕ್ಷಾಸಂಗಮಿಲ್ಲಾಳ್ದನು**

**ಜ್ಜುಗದೊಳ್ ಲಾಭದ ಲೋಭಮಿಲ್ಲ ಸಿರಿಯೊಳ್ ಸೊರ್ಕಿಲ್ಲಪೋಲಾಳ್ವನಂ**

**ಪೊಗಳ್ದಿಂದನ್ಯರನಣ್ಣ ಪೇಳ್ ಪೊಗಳ್ವುದೇ ಹಾಲುಂಡುಮೇಲುಂಬುದೇ ॥**

ಎಂಬುದಾಗಿ ಕವಿಯು ಈತನ ಗುಣಾವಳಿಗಳನ್ನು ಪಟ್ಟಿ ಮಾಡಿದ್ದಾನೆ.

ದಂಡಾಧೀಶರಾದವರು ಕೇವಲ ಶೌರ್ಯ ಪರಾಕ್ರಮಗಳಿಗೆ ಮಾತ್ರ ಸೀಮಿತರಾಗಿರದೆ ಸಾಮಾಜಿಕ ಚಟುವಟಿಕೆಗಳಲ್ಲೂ ತೊಡಗಿಕೊಳ್ಳುತ್ತಿದ್ದರೆಂಬುದನ್ನು 'ಬುಳ್ಳಚಮೂಪ' ನೆಂಬುವನು ಕೈಗೊಂಡ ಕಾರ್ಯದಿಂದ ತಿಳಿದುಬರುತ್ತದೆ. ಈತನು ಹರಿದ್ರಾ ನದಿಗೆ ಕಟ್ಟೆಯನ್ನು ಕಟ್ಟಿಸಿದ ವಿಚಾರವನ್ನು ಹರಿಹರದ ಶಾಸನವು ಹೀಗೆ ಬಣ್ಣಿಸುತ್ತದೆ.[೮೧]

**ವೀರಭಗೀರಥಂ ಗಗನಗಂಗೆಯನುರ್ವಿಗೆ ತಂದನಂತದೇಂ**

**ಪೌರುಷಮಲ್ತು ಕೇಳ್ ಗಗನದಿಂ ಕೆಳಗಿರ್ದು ಹರಿದ್ರೆಯೆತ್ತಲುಂ**

**ಬಾರದಿರಲ್ಕೆ ಕಟ್ಟಿ ಪಿಡಿದಟ್ಟಿ ಹರೀಶಪುರಕ್ಕೆ ಕೊಂಡುಬಂ**

**ದೀರಸೆಯೊಳ್ ಪೆಸರ್ವಡೆದ ಬುಳ್ಳಚಮೂಪನಿದೇಂ ಸಭಾಗ್ಯನೋ ॥**

ಭಗೀರಥನು ದೇವಲೋಕದ ಗಂಗೆಯನ್ನು ಧರೆಗೆ ತಂದುದರಲ್ಲಿ ಯಾವ ಅತಿಶಯವೂ ಇಲ್ಲ. ಆದರೆ ಅತ್ತಿತ್ತಲಾಗಿ ಹರಿಯುತ್ತಿದ್ದ ಹರಿದ್ರಾನದಿಯನ್ನು ಕಟ್ಟಿ 'ಹರೀಶಪುರ'ಕ್ಕೆ ತಂದ ಬುಳ್ಳಚಮೂಪನು ಆ ಭಗೀರಥನಿಗಿಂತಲೂ ಮಿಗಿಲು ಎಂಬುದು ಕವಿಯ ಭಾವವಾಗಿದೆ.

ಹೊಯ್ಸಳರ ದೊರೆ ಇಮ್ಮಡಿ ಬಲ್ಲಾಳನ ಮಂತ್ರಿ ದಂಡಾಧೀಶನಾಗಿದ್ದವನು ಕುವರಲಕ್ಷ್ಮ ಅಥವಾ ಕುವರಲಕ್ಷ್ಮೀಧರ. ಆತನ ಗುಣಗಾನವನ್ನು ಬೇಲೂರಿನ ಶಾಸನದಲ್ಲಿ'[೮೨] ವಿಶೇಷವಾಗಿ ಮಾಡಲಾಗಿದೆ. ಹಾಗೂ ಇದೊಂದು 'ಗರುಡಪದ್ಧತಿ'ಯನ್ನು ವಿಶೇಷವಾಗಿ ದಾಖಲಿಸಿರುವ ಶಾಸನವಾಗಿದೆ. ಹೊಯ್ಸಳರ ಕಾಲದಲ್ಲಿ ಬಳಕೆಯಲ್ಲಿದ್ದ ಆತ್ಮಬಲಿಯ ಹಲವು ಪ್ರಕಾರಗಳಲ್ಲಿ 'ಗರುಡಪದ್ಧತಿ'ಯು ಒಂದು. ಈ ಶಾಸನದಲ್ಲಿ ವೀರಬಲ್ಲಾಳ ಮತ್ತು ಕುವರಲಕ್ಷ್ಮನ ನಡುವೆಯಿದ್ದ ಆತ್ಮೀಯ ಸಂಬಂಧವನ್ನು, ಕುವರಲಕ್ಷ್ಮನ ಪತಿಭಕ್ತಿಯನ್ನು ಕಾಣಬಹುದಾಗಿದೆ. ಈ ಕುವರಲಕ್ಷ್ಮನು "ನೆಗಳ್ದ ಆ ನೃಪೋತ್ತಮನ ಮಂತ್ರಿಸಿಖಾಮಣಿ ವಂದಿಬೃಂದನಂದನವನಮಾಧವಂ ಖರಕರಪ್ರತಿಮೋರ್ಜ್ಜಿತತೇಜನ್, ಆಹವಾವನಿಯೊಳ್ ಅರಾತಿ ಭೂಭುಜರನಿಕ್ಕುವ ವಿಕ್ರಮಾರ್ಜ್ಜುನಂ ಮನುಜಮಹೇಶ್ವರ"ನೆಂದು ಪ್ರಸಿದ್ಧನಾದವನು ಹಾಗೂ ಈತನು ಬಲ್ಲಾಳನು "ಪೊರೆದಮಗಂ" ಕುವರಲಕ್ಷ್ಮನಿಗೆ "ಅರಮನೆ ನೆರಮನೆ ನರಪತಿ ತನಗೆ ಆಪ್ತ ಪರಿಜನಂ ಸಚಿವರ್"ಎಂಬಂತೆ ಇದ್ದರು.

ವೀರಬಲ್ಲಾಳ ಮತ್ತು ಕುವರಲಕ್ಷ್ಮನ ನಡುವೆ ಆಳರಸರೆಂಬ ಭೇದಭಾವಕ್ಕೆ ಅವಕಾಶವಿರಲಿಲ್ಲವೆಂಬುದನ್ನು ಈ ಕೆಳಗಿನ ಪದ್ಯವು ಸೊಗಸಾಗಿ ನಿರೂಪಿಸಿದೆ.

**ಆಳರಸರೆಂಬ ಭೇದಮಿನಿತಪ್ಪೊಡಮಿಲ್ಲಿವರಲ್ಲಿ ತೇಜಮುಂ**
**ಲೀಳೆಯರಾಜ್ಯಚಿಹ್ನೆಮುಮವೀರ್ವ್ವರೊಳಂಸಮನೆಂದುವೆಂಬಿನಿಂ**
**ಪಾಳಿಸುವರ್ದ್ಧರಾವಳಯಮಂ ಪರಮೋತ್ಸವದಿಂದೆ ವೀರ ಬ**
**ಲ್ಲಾಳನೃಪಾಳನುಂ ಕುವರಲಕ್ಷ್ಮಚಮೂಪನುಮೇಂ ಸಪುಣ್ಯರೋ॥**

ಕುವರಲಕ್ಷ್ಮನಾದರೋ ತನ್ನ ಧನ ಮತ್ತು ಪ್ರಾಣವನ್ನು ದೊರೆಯ ಉನ್ನತಿಗೆ ಮೀಸಲಿಟ್ಟಿದ್ದನೆಂಬುದನ್ನು ಕವಿಯು ಹೀಗೆ ಹೇಳುತ್ತಾನೆ.

**ಧನಮುಂ ಪ್ರಾಣಮುವೆಂಬಿವಂ ಕುವರಲಕ್ಷ್ಮಂ ಬಲ್ಲಾಳದೇ**
**ವನದಾನೋನ್ನತಿಗಂ ಜಯೋನ್ನತಿಗಮೀಯಲ್ ಪೋಣ್ದುಮುಂದಿಟ್ಟುರಾ**
**ಮನಬೀಡಿಂಗಣುವಂಯಮಾತ್ಮಜನ ಬೀಡಿಂಗರ್ಜ್ಜುನಂ ಚಂದ್ರಜೂ**
**ಟನಬೀಡಿಂಗೆ ಕುಮಾರನಿರ್ಪ್ಪ ತೆಱದಿಂದ್ದರ್ಪ್ಪನೇಂ ಧೀರನೋ ॥**

ಕುವರಲಕ್ಷ್ಮನು ರಾಮನಿಗೆ ಹನುಮಂತನಂತೆ, ಧರ್ಮರಾಯನ ಬೀಡಿನಲ್ಲಿ ಅರ್ಜುನನೂ, ಶಿವನಪರಿವಾರದಲ್ಲಿ ಕುಮಾರಸ್ವಾಮಿಯು ಇರುವಂತೆ ವೀರಬಲ್ಲಾಳನಿಗೆ ಆಪ್ತನಾಗಿ ಇದ್ದವನು. ಹಾಗೆಯೇ ಈತನು "ಆಳ್ದಯದುವಂಶಮೇರುಗೆ ಕೂಡೆ ದಕ್ಷಿಣಾಂಬೋಧಿವರಂ ಧರಾವಳಯಮಂ ಸಾಧಿಸಿಕೊಟ್ಟನ್" ಆ ಕಾರಣದಿಂದ "ಪತಿಹಿತಕ್ರಮದೊಳ್ ಪಡೆದೀವದಾನದೊಳ್" ಈತನು "ಸರ್ವನಿಧಿ" ಎಂದೆನಿಸಿದನು. ಕುವರಲಕ್ಷ್ಮನಾಡಿದ ಮಾತು "ಕಲ್ಲೊಳಿಟ್ಟಕ್ಕರ"ವಾದರೆ, ಅನ್ಯರ ಮಾತು "ನೀರೊಳಿಟ್ಟಕ್ಕರ"ವೆಂಬುದು ಕವಿಯ ವಿಚಾರವಾಗಿದೆ.

**ಎಕ್ಕವದಂದಲೀ ಕುವರಲಕ್ಕೆಯನಾಡಿದ ಮಾತು ಕಲ್ಲೊಳಿ**
**ಟ್ಟಕ್ಕರದಂತೆ ಸತ್ಯಪರಿಪಾಳನ ಶೀಳಮನುಳ್ಳುವಾವಕಾ**
**ರ್ಯ್ಯಕ್ಕಮನರ್ತ್ಥಕ್ಕಂ ಪೆಱರ ಮಾತು ವಿಚಾರಿಸಿ ನೋಡೆ ನೀರೊ**
**ಳಿಟ್ಟಕ್ಕರದಂತೆ ಸತ್ಯಪರಿಪಾಳನಶೀಳಮನುಳ್ಳವೆಲ್ಲಿಯುಂ॥**

ಕುವರಲಕ್ಷ್ಮನು "ಅಱುವತ್ತು ನಾಲ್ಕುಕಳೆಗಳೊಳ್ ಅಱಿಯದ ಕಳೆಯಿಲ್ಲ." ಹಾಗೆಯೇ ಈತನು "ಎರಡೊಳ್ ಇಲ್ಲೆನಲ್ ಅಱಿಯಂ ಸೊಲ್ಲಱಿಯನ್ ಅರ್ತ್ಥಿಗಂ ಪಗೆವಂಗಂ" ಅಂದರೆ ಬೇಡಿದವರಿಗೆ ಇಲ್ಲವೆನ್ನಲು ಮತ್ತು ಶತ್ರುಗಳಿಗೆ ಇಲ್ಲವೆನ್ನಲು ಈತನು ಅರಿತಿಲ್ಲವೆಂಬುದು ಕವಿಯ ಅಭಿಪ್ರಾಯವಾಗಿದೆ. ಆ ಯುಗದ ಆಶಯವಾಗಿದ್ದ 'ಈವ, ಇಱಿಯ, ಶರಣ್ಬುಗೆ ಕಾವ' ಆದರ್ಶಕ್ಕೆ ಕುವರಲಕ್ಷ್ಮನು ಆದರ್ಶನಾಗಿದ್ದನು.

ದಾನಗುಣದಲ್ಲಿ ಹೆಸರುವಾಸಿಯಾಗಿದ್ದ 'ಹೊಯ್ಸಳ ಗೌವುಂಡ'ನನ್ನು ಯಾವ ಹೆಸರಿನಿಂದ ಕರೆಯಬೇಕೆಂಬ ಸಂದೇಹವನ್ನು ವ್ಯಕ್ತಪಡಿಸುತ್ತಾ ಶಾಸನಕವಿಯು ಚಮತ್ಕಾರಿಕವಾಗಿ 'ಹೊಯ್ಸಳಗವುಂಡ'ನ ದಾನಗುಣವನ್ನು ಈ ರೀತಿಯಾಗಿ ಬಣ್ಣಿಸುತ್ತಾನೆ.[೮೩]

**ಪದನಱಿದಾಸೆದಪ್ಪಿಸದೆ ಬೇಳ್ಪರ ಬೇಳ್ಪುದನಿತ್ತು ಸದ್ಗುಣಾ**
**ಸ್ಪದನೆನಿಸಲ್ಕೆ ನಿಂನ ಪೆಸರೇಂಗಳ ಹೊಯ್ಸಳ ಗೌವುಂಡನೆಂ**
**ಬುದೇಶಿಬಿಯೆಂಬುದೇ ಖಚರನಾಯಕನೆಂಬುದೇ ಚಾರುದತ್ತನೆಂ**
**ಬುದೇ ಬಲಿಯೆಂಬುದೇ ರವಿತನೂಭವನೆಂಬುದೇ ಗುತ್ತನೆಂಬುದೇ ॥**

ಬಾಳೆಯಂಮ್ಮವೆರ್ಗ್ಗಡೆಯ ಪರಾಕ್ರಮವನ್ನು ವಿನೂತನವಾಗಿ ಶಾಸನವೊಂದು ವರ್ಣಿಸಿದೆ. ಆ ಮೂಲಕ ಶಾಸನದ ಪದ್ಯವು ಯುದ್ಧರಂಗದ ಸಹಜಚಿತ್ರವನ್ನು ನೀಡುತ್ತದೆ. ಶಾಸನ ಪದ್ಯವು ಈ ರೀತಿಯಾಗಿದೆ[೮೪]

**ಸೂಸುವನೆತ್ತರುಂಣ್ಮವನೆಣಂಪೊರಪೊಂಣ್ಮವಕೊಳ್ಮಿದುಳುಪೊದ**
**ಳ್ದಾಸುರಮಾಗೆ ಸೋರ್ವ್ವಕರುಳಾಕರುಳ್ಗಾಟಿಪಬಳ್ಳುಬಳ್ಳುವಂ**
**ಸೋಸುವ ವೀರರಟ್ಟೆ ಭಟರಟ್ಟೆಯನಟ್ಟುವ ಭೂತಕೋಟಿ ಇಂ**
**ದಾಸುರಮಾಯ್ತು ಮಂಡಳಿಕಬಾಳೆಗನಾಂತಿಱಿದಾಹವಾರಣಂ ॥**

ಈ ಬಾಳೆಯಂಮ್ಮವೆರ್ಗ್ಗಡೆಯ ಪರಾಕ್ರಮವನ್ನು 'ಆಹವರಂಗ'ದಲ್ಲಿದ್ದ ಮರುಳುಗಳು ತಮ್ಮದೇ ಆದ ರೀತಿಯಲ್ಲಿ ಉಗ್ಗಡಿಸುತ್ತಿದ್ದವು ಎಂಬುದಾಗಿ ಇದೇ ಶಾಸನದ ಮತ್ತೊಂದು ಪದ್ಯವು ಬಣ್ಣಿಸಿದೆ. ಬೀಭತ್ಸರಸವನ್ನು ಪ್ರತಿಪಾದಿಸುತ್ತಿರುವ ಈ ಪದ್ಯವು ಹೀಗಿದೆ.

**ಮೂಳೆಯ ಸಂನ್ನೆಗಾಳವಿಡಿಯಲು ನೆಱೆನೆತ್ತರನೀಂಟಿ ಸೊಕ್ಕಿಕಂ**
**ಣಾಲಿಯ ಮಾಲೆಯ ಸೂಡಿ ಬಲುಗಂಡದ ದಂಡಯನೊಪ್ಪೆಕಟ್ಟಿಕೊಂ**
**ಡಾಳಿಸಿ ಉಟ್ಟುಪಂದೊವಲನಾಹವದೊಳು ನಲಿದಾಡಿ ಪಾಡಿದರು**
**ಸೂಳೆಮರುಳಗಳುಘೃಡಿಸಿಹೆಗ್ಗಡೆಬಾಳೆಗನಂಕಮಾಲೆಯಂ ॥**

ವಿಜಯನಗರದರಸನಾದ ಬುಕ್ಕರಾಯನ ಮಂಡಲಿಕನಾದ ಮಲ್ಲಿನಾಥನನ್ನು 'ನಡೆಗೋಂಟೆ' ಯೆಂಬುದಾಗಿ ಬಣ್ಣಿಸಿರುವ ಪದ್ಯವು ಆತನ ಪರಾಕ್ರಮವನ್ನು ಕೋಟೆಗೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು ಬಳಸಿಕೊಂಡು ಈ ರೀತಿಯಾಗಿ ಬಣ್ಣಿಸುತ್ತದೆ.

**ಅಗಳುಗಳಾಳುವೇರಿಗಳುಡೆಂಕಣೆಅಟ್ಟಳೆಕೊತ್ತಣಂಗಳೊ**
**ಡ್ಡುಗಳೊಳುಕೋಂಟೆಯೆಂದೆನಿಸಿಕೊಂಡಿಹಕೋಂಟೆಯನೇನಬಂಣಿಸಲು**

**ಬಗವಡೆಮಾರ್ಬ್ಬಲಕ್ಕೆ ನಿಜಸೇನೆಗೆ ವಜ್ರದಕೋಂಟೆಯಾಗಿ ತೋ**

**ಱುಗುನಡೆಗೋಂಟೆಕೆಲ್ಲನಭುಜಾಬಳವೀಅವನೀತಳಾಗ್ರದೊಳೂ**[೮೫]

ಅಗಳು, ಆಳುವೇರಿ, ಡೆಂಕಣಿ, ಅಟ್ಟಳೆ, ಕೊತ್ತಳ, ಒಡ್ಡುಗಳನ್ನು ಒಳಗೊಂಡಿರುವುದನ್ನು ಕೋಟೆಯೆಂದು ಬಣ್ಣಿಸುವುದರಲ್ಲಿ ವಿಶೇಷವೇನಿಲ್ಲ. ಆದರೆ ಶತ್ರುಸೇನೆಗೆ ಅಭೇದ್ಯವಾದ 'ವಜ್ರದಕೋಟೆ' ಹಾಗೂ ತನ್ನ ಪಡೆಯನ್ನು ಕಾಪಾಡುತ್ತಿರುವ 'ವಜ್ರದಕೋಟೆ'ಯಾಗಿ ಮೆರೆಯುತ್ತಿರುವ 'ನಡೆಗೋಂಟೆ'ಯಾದ ಮಲ್ಲಿನಾಥನನ್ನು ಬಣ್ಣಿಸುವುದೇ ಸರಿಯೆಂಬುದು ಕವಿಯ ಮಾತಾಗಿದೆ.

ಸೇನುಬೋವ ವೃತ್ತಿಯನ್ನು ಅವಲಂಬಿಸಿದ್ದವರಲ್ಲಿ ಕೆಲವರು ಶಾಸನ ಪಾಠಗಳನ್ನು ರಚಿಸುತ್ತಿದ್ದರು. ಅಂತಹವರುಗಳಲ್ಲಿ ಸೇನುಬೋವ ಮುದ್ದಣನು ಒಬ್ಬನು. ಶಾಸನಕಾರನಾದ ಈತನು ತನ್ನ ಬರವಣಿಗೆಯ ಶೈಲಿಯನ್ನು ಈ ರೀತಿಯಾಗಿ ಬಣ್ಣಿಸಿಕೊಂಡಿದ್ದಾನೆ.[೮೬] ಈತನ ಪ್ರಕಾರ "ಕೆಲವರು ಒಂದೊಂದು ಅಕ್ಷರಗಳನ್ನು ಹೊರಳಿಸಿ ಅರ್ಥವಾಗದ ರೀತಿಯಲ್ಲಿ ಬರೆಯುತ್ತಾರೆ" ಹಾಗೆ ಭರೆಯದೆ ಈತನು 'ಪಲರ್ಗ್ಗಂ ಸನ್ದೇಹ ವಲ್ಲದನ್ತಿರೆ ಜಿನಭಕ್ತಮುದ್ದಿಗಾಂಕಂ' ಬರೆಯುತ್ತಾನೆ. ಈತನ ಬರವಣಿಗೆಯ ವಿಧಾನವನ್ನು –

**ಪೊಕ್ಕುಳು ತಲೆಕಟ್ಟುಮನ**

**ನ್ತಕ್ಕರದವಯವಮನಱಿದು ಖಣ್ಡರಿಸಲುಕೀ**

**ಇಕ್ಕುದನೆ ಬಲ್ಲನಱಿಯ**

**ರ್ಮ್ಮಿಕ್ಕವರೆನ್ದೊಸೆದು ಧರಣಿ ಬಣ್ನಿಸುತಿರ್ಕ್ಕುಂ"**

ಎಂಬುದಾಗಿ ಪದ್ಯವು ಬಣ್ಣಿಸುತ್ತದೆ.

ವಿವಿಧ ರಾಜಮನೆತನಗಳ ಆಳ್ವಿಕೆಯಲ್ಲಿ ಬಂದ ಹಲವಾರು ಜನ ಅಮಾತ್ಯರು, ದಂಡಾಧೀಶರು ಹಾಗೂ ಅಧಿಕಾರಿಗಳು ತಮ್ಮ ಉನ್ನತವಾದ ಆದರ್ಶಗಳು, ವ್ಯಕ್ತಿತ್ವದ ಕಾರಣದಿಂದಾಗಿ ಜನಜೀವನದಲ್ಲಿ ಮನ್ನಣೆಯನ್ನು ಪಡೆದಿದ್ದರು. ಹೀಗಾಗಿ ಶಾಸನಕವಿಗಳು ಅವರುಗಳ ಗುಣಗಾನವನ್ನು ಶಾಸನಗಳಲ್ಲಿ ಮುಕ್ತಕಂಠದಿಂದ ಮಾಡಿದ್ದಾರೆ. ಹೇಗೆ ಆದರ್ಶದಿಂದ ಬದುಕಬೇಕು ಎಂಬುದನ್ನು ಕಾವ್ಯಾತ್ಮಕವಾಗಿ ನಿರೂಪಿಸಿದ್ದಾರೆ. ವಿಶೇಷವಾಗಿ ರಾಜರುಗಳನ್ನು ಬಣ್ಣಿಸುವಾಗ ಇದ್ದಂತಹ ಬಿಗುವು ಇವರುಗಳ ಬಣ್ಣನೆಯ ಸಂದರ್ಭದಲ್ಲಿ ಕಡಿಮೆಯಾಗಿ ಒಂದು ರೀತಿಯಾದ ಆತ್ಮೀಯಭಾವವು ವ್ಯಕ್ತವಾಗಿರುವುದನ್ನು ಗಮನಿಸಬಹುದು. ರಾಜರು ಮತ್ತು ಅವರ ವಂಶದವರನ್ನು ದೇವರೆಂಬ ಭಾವನೆಯಿಂದ ಕಾಣುತ್ತಿದ್ದ ಕಾರಣದಿಂದ ಅಲ್ಲಿ ಆತ್ಮೀಯತೆಗಿಂತ ಭಯವೇ ಪ್ರಧಾನವಾಯಿತು. ಆದರೆ ಮಂತ್ರಿ, ದಂಡಾಧೀಶ, ಅಧಿಕಾರಿ ವರ್ಗದ ಜನರಲ್ಲಿ ಸಹಜವಾಗಿ ಶಾಸನಕವಿಗಳಿಗೆ ಒಂದು ರೀತಿಯಾದ ಆತ್ಮೀಯ ಭಾವ, ತಮ್ಮವರೆಂಬ ಭಾವವೂ ಮೂಡಿರಲೂ

ಸಾಧ್ಯ. ಹೀಗಾಗಿ ಪುರಾಣ ಕಲ್ಪಿತವಾದ ಪಾತ್ರಗಳು ಮತ್ತು ಸನ್ನಿವೇಶಗಳನ್ನು ವರ್ಣನೆಯ ಸಂದರ್ಭದಲ್ಲಿ ಬಳಸಿಕೊಂಡಿದ್ದರೂ ಸಹ ಸಮಾಜವು ಅಧಿಕಾರದಲ್ಲಿರುವವರಲ್ಲಿ ನಿರೀಕ್ಷಿಸುವ ಗುಣಗಳನ್ನು ಪ್ರತಿಪಾದಿಸಲು ಮುಂದಾದರು ಎನ್ನಬಹುದು. ಆ ಮೂಲಕ ಪರೋಕ್ಷವಾಗಿ ಉನ್ನತ ಅಧಿಕಾರದಲ್ಲಿ ಇರಬೇಕಾದವರಲ್ಲಿ ಇರಬೇಕಾದ ಆದರ್ಶಗುಣಗಳನ್ನು ಮನವರಿಕೆ ಮಾಡಿಕೊಡುವ ಪ್ರಯತ್ನವನ್ನು ಶಾಸನಕವಿಗಳು ಮಾಡಿದ್ದಾರೆ ಎನ್ನಬಹುದು.

**೪:೬ : ವೀರರು :-**

ಯಾವುದೇ ಹೋರಾಟದಲ್ಲಿ ಮಡಿದ ವೀರನ ಸ್ಮಾರಕವಾಗಿ ನೆಟ್ಟಕಲ್ಲುಗಳೇ ವೀರಗಲ್ಲುಗಳು. ವೀರಗಲ್ಲುಗಳಲ್ಲಿ ಶಿಲ್ಪದ ಜೊತೆಗೆ ಬರಹವನ್ನು ಕಾಣಬಹುದಾಗಿದೆ. ವೀರಗಲ್ಲುಗಳ ರಚನಾಕ್ರಮವು ದಾನಶಾಸನದ ರಚನಾವಿಧಾನವನ್ನೇ ಅನುಸರಿಸಿರುತ್ತದೆ. ಆದರೆ ಇಲ್ಲಿಯ ವಿಶೇಷತೆಯೆಂದರೆ ವೀರನ ಬಗ್ಗೆ ಮತ್ತು ಆತನ ಹೋರಾಟದ ಬಗ್ಗೆ ಹೆಚ್ಚಿನ ಗಮನವನ್ನು ನೀಡಿರುವುದಾಗಿರುತ್ತದೆ. ವೀರಗಲ್ಲುಗಳಲ್ಲಿ ಪ್ರಾರ್ಥನಾಪದ್ಯದ ಜೊತೆಗೆ ವೀರತ್ವ ಪ್ರತಿಪಾದಕವಾದ ಎರಡು ಶ್ಲೋಕಗಳು ಸಹಜವಾಗಿ ಕಾಣಿಸಿಕೊಳ್ಳುತ್ತವೆ. ಅವುಗಳೆಂದರೆ,

**ದ್ವಾವಿಮೌ ಪುರುಷೌಲೋಕೇ ಸೂರ್ಯಮಂಡಲಭೇದಿನೌ**
**ಪರಿವ್ರಾಡ್ಯೋಗ ಯುಕ್ತಾಶ್ಚ ರಣೇಚ ಅಭಿಮುಖೇಹತಃ ।**
**ಜಿತೇನಲಭ್ಯತೇ ಲಕ್ಷ್ಮೀರ್ಮೃತೇನಾಪಿ ಸುರಾಂಗನಾ**
**ಕ್ಷಣವಿಧ್ವಂಸನೀ ಕಾಯೇ ಕಾ ಚಿಂತಾ ಮರಣೇರಣೇ ॥**

ವೀರಗಲ್ಲುಗಳಲ್ಲಿ ಪ್ರಾರ್ಥನಾಶ್ಲೋಕ, ಅರಸನ ಪ್ರಸ್ತಾಪ, ತೇದಿಯ ವಿವರಗಳು ಬಂದ ನಂತರ ಆ ವೀರಗಲ್ಲಿನ ವೀರನು ಭಾಗವಹಿಸಿದ ಹೋರಾಟದ ಹಿನ್ನೆಲೆ, ಸ್ವರೂಪ, ಆ ವೀರನ ಪಾತ್ರ ಮುಂತಾದವುಗಳ ಬಗ್ಗೆ ಕಾವ್ಯಮಯವಾದ ಬಣ್ಣನೆಗಳು ದೊರೆಯುತ್ತವೆ. ಆ ನಂತರದಲ್ಲಿ ಮಡಿದ ವೀರನ ಸೇವೆಯನ್ನು ಮನ್ನಿಸಿ, ಆತನ ವಂಶಜರಿಗೆ ನೀಡಿದ ದಾನದತ್ತಿಗಳ ವಿವರಗಳು ಕಂಡುಬರುತ್ತವೆ. ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯಲ್ಲಿ ಕಂಡುಬಂದಿರುವ ವೀರಗಲ್ಲುಗಳಲ್ಲಿನ ಸಾಹಿತ್ಯವನ್ನು ವಿಶೇಷವಾಗಿ ವೀರರ ಬಣ್ಣನೆಯನ್ನು ಈಗ ಗಮನಿಸಬಹುದು.

ಕ್ರಿ.ಶ.ಸು.೫೦೦ರ ಚಿತ್ರದುರ್ಗ ಜಿಲ್ಲೆಯ ತಮಟಕಲ್ಲಿನ ಗುಣಮಧುರನ ಶಾಸನವು[೮೭] "ಕನ್ನಡದ ಮೊದಲನೆಯ ಪದ್ಯಶಾಸನ ಮತ್ತು ಮೊಟ್ಟಮೊದಲನೆಯ ವೀರಗಲ್ಲು ಎಂದು ಭಾವಿಸಲಾಗಿದೆ".[೮೮] ಈ ಶಾಸನವು ಗುಣಮಧುರನ ವೀರಜೀವನ ಮತ್ತು ವ್ಯಕ್ತಿತ್ವವನ್ನು ಕಾವ್ಯಾತ್ಮಕವಾಗಿ ಬಣ್ಣಿಸಿದೆ.

ಫಣಮಣಿಅನ್ತು ಭೋಗಿ ಫಣದುಳ್ಮಣಿವಿಲ್ಮನದೋನ್
ರಣಮುಖದುಳ್ಳಿಕಾಲನರಿಯರ್ಕ್ಕುಮನಿನ್ದ್ಯಗುಣನ್
ಪ್ರಣಯಿಜನಕ್ಕೆ ಕಾಮನಸಿತೋತ್ಪಲವರ್ಣನವನ್
ಗುಣಮಧುರಾಂಕ್ಕ ದಿವ್ಯಪುರುಷನ್ ಪುರುಷಪ್ರವರನ್[19]

ಈ ಗುಣಮಧುರನು ಭೋಗಿಯೂ, ಹೃದಯವಂತನಷ್ಟೇ ಅಲ್ಲ, ಯುದ್ಧಭೂಮಿಯಲ್ಲಿ ಯಮಸ್ವರೂಪಿಯಾದವನೂ ಹಾಗೂ ಶತ್ರುಗಳು ಸಹ ಇವನನ್ನು ನಿಂದಿಸದ ವ್ಯಕ್ತಿತ್ವವನ್ನು ಹೊಂದಿದವನಾಗಿದ್ದನು. ಪ್ರಣಯಿಜನಕ್ಕೆ ಮನ್ಮಥನಂತಿದ್ದ ಇವನು 'ಅಸಿತೋತ್ಪಲವರ್ಣ'ನು. ಗುಣಮಧುರನೆಂಬ ಹೆಸರಿನ ಈತನು ದಿವ್ಯಪುರುಷನೂ, ಪುರುಷಪ್ರವರನೂ ಎಂಬುದಾಗಿ ಶಾಸನವು ಬಣ್ಣಿಸಿದೆ. "ತೀರ ಹಳೆಯ ಕನ್ನಡದಲ್ಲಿದ್ದು ಸಾಹಿತ್ಯಗುಣದಿಂದ ಕೂಡಿದ ಚೊಕ್ಕಾದ ಸ್ವಭಾವಚಿತ್ರ"[20] ಎಂಬ ಅಭಿಪ್ರಾಯವು ಈ ಶಾಸನಕ್ಕೆ ಯಥಾರ್ಥವಾಗಿದೆ.

ರಾಷ್ಟ್ರಕೂಟದೊರೆ ಗೋವಿಂದನ ಕಾಲಕ್ಕೆ ಸೇರಿದ ಮಾವಳಿಯ ಶಾಸನವು[21] ಕುಲಮುದ್ದನೆಂಬುವನ ಪರಾಕ್ರಮವನ್ನು ಸುಂದರವಾದ ಗದ್ಯದಲ್ಲಿ ನಿರೂಪಿಸಿದೆ. ರಾಷ್ಟ್ರಕೂಟದೊರೆ ಗೋವಿಂದನ ಆಳ್ವಿಕೆಯ ಸಂದರ್ಭದಲ್ಲಿ ಬನವಾಸಿಮಂಡಲವನ್ನು ರಾಜಾದಿತ್ಯ ಅರಸನು ಆಳುತ್ತಿದ್ದಾಗ ಆಳುವ ಖೇಡವನ್ನು ಆಳುತ್ತಿದ್ದ ಚಿತ್ರವಾಹನನೊತ್ತಿ ಬಂದಾಗ ನಡೆದ ಹೋರಾಟದಲ್ಲಿ ವೀರನಾಗಿ ಕುಲಮುದ್ದನು ಪಾಲ್ಗೊಳ್ಳುತ್ತಾನೆ. ಹಾಗೂ ಹೋರಾಡುತ್ತಲೇ ಯುದ್ಧದಲ್ಲಿ ಮಡಿದ ಕುಲಮುದ್ದನ ಪರಾಕ್ರಮವನ್ನು ಶಾಸನವು "... ಎಯ್ದಿ ಕಿಟ್ಟಿ ಕಾದಿ ಮಱುವಕ್ಕದವರ ಮೆಯ್ಮೆಯ್ಯಮ್ಬಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು ತಾನುಂ ಪಲವುಂ ಎಸುವೆತ್ತು ಎಯ್ವೊದೊದಪ್ಪಿದಪ್ಪೊಲ್ಕಣೆ ಪಂಜರದೊಳೆಱಗಿ ಭೀಷ್ಮನ್ನಿಟ್ಟನ್ತೆ ನೆಲಮುಟ್ಟದೆ ಬಿಟ್ಟೋದನ್" ಎಂದು ಬಣ್ಣಿಸಿದೆ. ಅಂತಹ ಪರಾಕ್ರಮಿಯನ್ನು "ದೇವಗಣಿಕ್ಕೆಯರಾರ್ಗ್ಫಮ್ಬಿಡಿದು ಬನ್ದಿದಿರ್ಗ್ಗೊಣ್ಡುಯೆ ವೀರಲೋಕಕ್ಕೆ ಸನ್ದೋನ್" ಎಂಬುದಾಗಿ ಅತಿಶಯವಾಗಿ ಆತನು ವೀರಲೋಕಕ್ಕೆ ಹೋದ ಸಂದರ್ಭವನ್ನು ನಿರೂಪಿಸುತ್ತದೆ.

ಕಲ್ಯಾಣದ ಚಾಲುಕ್ಯರ ಕಾಲದ ಕುರುಕೋಡಿನ ವೀರಗಲ್ಲು[22] ನಿರೂಪಣಾ ವಿಧಾನ ಹಾಗೂ ಸಾಹಿತ್ಯಕವಾಗಿ ಸಹ ಪ್ರಮುಖವಾಗಿದೆ. 'ತುರುಗೋಳ್', 'ಪೆಣ್ಬುಯ್ಯಲ್'ನ್ನು ಪ್ರಸ್ತಾಪಿಸುವ ಈ ಶಾಸನದಲ್ಲಿ ಬಾವಗಾವುಂಡನ ಮಕ್ಕಳಾದ ದೇವಗಾವುಂಡ, ಮಲ್ಲಗಾವುಂಡ ಬೊಪ್ಪಗಾವುಂಡರ ವೀರಾವೇಶದ ಹೋರಾಟದ ಬಣ್ಣನೆಯಿದೆ. ನಡೆದ ಹೋರಾಟದ ಬಣ್ಣನೆಯು ಮನಸೆಳೆಯುತ್ತದೆ.

'ದೇವಗಾವುಂಡನುಂ ಮಲ್ಲಗಾವುಂಡನುಂ ಬಿಲ್ಲಮಂಬುಮಂಕೊಂಡೀರ್ವ್ವರುಂ
ಹೆಬ್ಬಾಗಿಲಡ್ಡಂನಿಂದು ಗುಹೆಯ ಬಾಗಿಲೊಳು ಸಿಂಹನಿಪ್ಪಂತೆ ತಾಗಿತಳ್ತೆಸು
ವಾಗಳು ಕಾರಮಳೆಕಱೆದಂತೆಯುಂ ಕಡಂದುಱುಹುಟ್ಟಿಯ

**ಕೆಣಕಿದಂತೆಯುಂ ಕವಿದಕಾಲಬಾಯೊಳಂ ಕಾಲಬಾಯೊಳಂ ಜವನೊಕ್ಕಿ ಲಿಕ್ಕಿದಂತೆ ತೊತ್ತಳದುಳಿದವ್ರೋಲುತಂ"........ ಕುಱಿಯಹಿಂಡಂ ತೋಳಂಪೊಕ್ಕಂತೆಯುಂ ಕಬ್ಬ ದೋಂಟವನಾನೆಪೊಕ್ಕಂತೆಯುಂ ನಿಕ್ಕುರಳಿಲುಪೊಕ್ಕುದೊಳಹಿಂಡು ಕುತ್ತಿನೂಂಕುತ್ತ ಬಪ್ಪಾಗಳು"**

ಎಂಬುದಾಗಿ ಆ ವೀರರಿಬ್ಬರ ಹೋರಾಟವನ್ನು ಬಣ್ಣಿಸಿದೆ. ಹೋರಾಡುತ್ತಲೆ ವೀರಮರಣವನ್ನು ಹೊಂದಿದ ಅವರಿಬ್ಬರ ಕಳೇಬರವನ್ನು ಕಂಡ ಕಿರಿಯವನಾದ ಬೊಪ್ಪಗಾವುಂಡನು "ನಿಮ್ಮಾದುದನ್ ಅಪ್ಪೆನ್ ಅಲ್ಲದೊಡೇಂ ತುಱುವಂಮಗಳ್ಚಿ ಬಪ್ಪೆನ್" ಎಂದು ನಿಶ್ಚಯಿಸಿ 'ಹಾಲ್ಗಟ್ಟಿದ ಬಯಲೊಡ್ಡನೊಡ್ಡದರಿಬಲವಂ' ಎದುರಿಸಿ 'ತುಱುವಂ ಮಗಳ್ಚಿಕೊಂಡು ಬಂದನ್' ಎಂಬುದಾಗಿ ಶಾಸನವು ನಿರೂಪಿಸುತ್ತದೆ. ವೃತ್ತವೊಂದನ್ನು ಬಿಟ್ಟು ಉಳಿದಂತೆ ಗದ್ಯದಲ್ಲೇ ನಿರೂಪಿತವಾಗಿರುವ ಈ ಶಾಸನವು ಸಾಹಿತ್ಯಕವಾಗಿಯೂ ಸಹ ಗಮನೀಯವಾಗಿದೆ.

ಕ್ರಿ.ಶ.೯೫೦ರ ಆತಕೂರು ಶಾಸನವು[೩] ರಾಷ್ಟ್ರಕೂಟರ ಮುಮ್ಮಡಿಕೃಷ್ಣನ ಕಾಲಕ್ಕೆ ಸೇರಿದ್ದು, 'ಕಾಳಿ'ಯೆಂಬ ನಾಯಿಯ ಸ್ಮಾರಕವಾದುದಾಗಿದೆ. ಇದು ಒಂದು ವೀರಗಲ್ಲಾಗಿದ್ದು 'ಮನಾಲರ'ನೆಂಬುವನು ಹೋರಾಟದಲ್ಲಿ ಪಾಲ್ಗೊಂಡಿದ್ದ ಸನ್ನಿವೇಶವನ್ನು ನಿರೂಪಿಸಿದೆ. ಈ ಶಾಸನದಲ್ಲಿ ಬಂದಿರುವ ಎರಡು ಪದ್ಯಗಳು ಸಾಹಿತ್ಯಕವಾಗಿಯೂ ಸಹ ಗಮನಾರ್ಹವಾಗಿವೆ. ಆ ಪದ್ಯಗಳು ಈ ರೀತಿಯಾಗಿವೆ.

**ಉಱದಿದಿರಾನ್ತ ಚೋಟಚತುರಙ್ಗಬಲಙ್ಗಳನಟ್ಟಿಮುಟ್ಟಿತ**
**ಳ್ತಿಱಿವೆಡೆಗೊರ್ವ್ವರಪ್ಪೊಡಮಿದಿರ್ಚ್ಚುವಗಣ್ಡರನಾಮ್ಪೆವೆನ್ದುಪೊ**
**ಟ್ಟಳಿಸುವ ಬೀರರಂ ನೆಱಿಯೆಕಾಣೆಮೆ ಚೋಟನೆಸಕ್ಕಿಯಾತ**
**ಳ್ತಿಱಿದುದನಾಮೆಕಣ್ಡೆವೆನೆ ಮೆಚ್ಚದೊರಾರ್ಸ್ಸಗರತ್ರಿಣೇತ್ರನಂ ॥**

**ನರಪತಿ ಬೆನ್ನೊಳಿಟಿರ್ದ್ದನಿದಿರಾನ್ತುದು ವೈರಿಸಮೂಹಮಿಲ್ಲಿಮ**
**ಚ್ಚರಿಸುವರೆಲ್ಲರುಂ ಸೆರಗುವಾಟಿಪ್ಪೊರಿನ್ನಿರೆನೆನ್ದು ಸಿಙ್ಗದ**
**ನ್ತಿರೆಹರಿಬೀರಲಕ್ಷ್ಮಿನೆರವಾಗಿರೆ ಚೋಟನಕೋಟೆಯೆಮ್ಬ ಸಿ**
**ನ್ಧುರದ ಶಿರಾಗ್ರಮಂ ಬಿರಿಯೆ ಪೊಯಿದಂ ಕದನೈಕಸೂದ್ರಕಂ ॥**

ಗಂಗರ ಬೂತುಗನ ಅಂಕಕಾರನಾದ 'ಕದನೈಕಸೂದ್ರಕ'ನೆಂದು ಪ್ರಸಿದ್ಧನಾಗಿದ್ದ 'ಮನಾಲರ'ನು "ಅರಸನು ಹಿಂದೆ ಇದ್ದಾನೆ. ಮುಂದೆ ವೈರಿಸಮೂಹವು ಇದೆ. ಅಸೂಯೆ ಪಡುವವರೆಲ್ಲರೂ ಸಹ ಅಭಿಮಾನಪಡುವಂತೆ ಹೋರಾಡಬೇಕೆಂದು ತಾನೇರಿದ ಕುದುರೆಯು

'ಸಿಂಹದಂತಿರುವಾಗ 'ವೀರಲಕ್ಷ್ಮಿ'ಯ ಬೆಂಬಲವು ಇರುವ ಸಂದರ್ಭದಲ್ಲಿ ಚೋಳನ ಕೋಟೆಯಂತಿರುವ 'ಸಿನ್ಧುರ'ದ (ಆನೆ) ತಲೆಯನ್ನು ಸೀಳಿದನೆಂದು' ಪದ್ಯವು ಬಣ್ಣಿಸಿದೆ. 'ಈ ಶಾಸನದ ಪದ್ಯಗಳನ್ನು ಪೊನ್ನನು ಬರೆದಿರಬಹುದೆಂಬ ಊಹೆಯಿದೆ.[೧೪]

ವೀರರ ಹೋರಾಟವನ್ನು ಕೆಲವು ಶಾಸನಗಳು ಸಾಹಿತ್ಯಕವಾಗಿಯೂ ಸಹ ಬಣ್ಣಿಸಿವೆ. ಅವುಗಳಲ್ಲಿ ಏಚಯನೆಂಬುವನ ಪರಾಕ್ರಮವನ್ನು ಬಣ್ಣಿಸುವ ಬೆಳಗುತ್ತಿ. ಹೋಬಳಿ ಕುಳ್ಳಹಳ್ಳಿ ಗ್ರಾಮದ ಶಾಸನವನ್ನು ಗಮನಿಸಬಹುದು.[೧೫.] ಏಚಯನೆಂಬ ಪರಾಕ್ರಮಿಯು ತನ್ನ ದೊರೆಯಾದ 'ಬೀರರಸ'ನಿಗೆ ಕೊಟ್ಟ 'ಭಾಷೆ'ಯ ಪ್ರಕಾರ "ಪ್ರಳಯವಾರಿಧಿಯಂತೆ ಲಯಾಗ್ನಿಯಂತೆ ಕಾಮಾರಿಯ ಮೂರಿಯಂತೆ" ವೈರಿಸಂಹಾರವನ್ನು ಮಾಡಲು ಮುಂದಾದನು. ಈತನು ನಡೆಸಿದ ಹೋರಾಟದ ಪರಿಯನ್ನು ಶಾಸನಕವಿಯು ಹೀಗಿ ನಿರೂಪಿಸಿದ್ದಾನೆ.

**ಪಲರಂ ಕುಱಿದಱಿದಱಿದಂ**
**ಪಲರಂ ಸೀಳ್ದೊಟ್ಟಿ ಕಡಿದುದೆಸೆವಲಿಗೆಯ್ದಂ**
**ಪಲರಂ ಬಾಳ್ದಲೆವಿಡಿದಂ**
**ಕಲಿಚಲದಿಕಟಾರದೆ ಬೇಗಂರಣಧೀರಂ ।**
**ಕುಱುಹಿನ ಕುದುರೆಗಳಂ ಸಂ**
**ದಱಿಸೆಯ ನಾಯಕರನಿಱಿದು ಬಳೆದಂ**
**ಮೆಱಿದಂ ನೆಱಿಗಲಿಕಟಾರದೇಚಂ**
**ಕಱಿವಲರ್ವ್ವಳೆ ಮೇಲೆ ಸುರಿಯೆ ಸಗ್ಗಕೆ ಸಂದಂ ॥**

ಈತನ ಆಯುಧವು 'ಕಟಾರಿ'ಯಾಗಿದ್ದು 'ವೈರಿ ಸಂಹಾರಮನೀಕಟಾರದೊಳೆ ಮಾಡುವೆನ್' ಎಂದು ಹೇಳಿದ್ದ ಪ್ರಕಾರ ಅದರಂತೆಯೇ ಈತನು ಹೋರಾಟವನ್ನು ನಡೆಸಿದನು.

'ಚಿಣ್ನೆಯ ಸಾಹಣಿ'ಯೆಂಬ ವೀರನು 'ತುರುಗೋಳ್' ಹೋರಾಟದಲ್ಲಿ ತೋರಿಸಿದ ವೀರಪರಾಕ್ರಮವನ್ನು ಬೆಳಗುತ್ತಿ ಗ್ರಾಮದ ವೀರಗಲ್ಲು[೧೬] ಮನಮುಟ್ಟುವಂತೆ ಬಣ್ಣಿಸಿದೆ.

**ಭರದಿಂದಂ ಪರಿದೆಯ್ದಿಬೇಡವಡೆಯಂ ಕಂಡಾದ್ರ್ದುಬೆಂಕೊಂಡು ತ**
**ತ್ತುರಗಂವಾಯುಜವಾಧಿಕಂ ಪರಿಯಿಸುತ್ತಂ ಕುತ್ತಿಕೊಂದಿಕ್ಕಿ ತ**
**ಚ್ಚಿರಮಂತಾಂಪೊಡೆಸೆಂಡನಾಡೆ ಪದಪಿಂದಾಳಂಕರಂ ಮೆಚ್ಚಲ**
**ಚ್ಚರಿಯಾಗಲ್ತುಱಿವಂ ಮಗುಳ್ಚಿಪಗೆಯಂ ಪರ್ದ್ದಿಂಗೆ ಬಿರ್ದ್ದಿಕ್ಕಿದಂ ॥**

ಎದುರಾದ ಬೇಡಪಡೆಯನ್ನು ಕಂಡು ಪರಾಕ್ರಮದಿಂದ 'ವಾಯುವೇಗ'ಕ್ಕಿಂತಲೂ ಅಧಿಕವಾದ ವೇಗವನ್ನು ಹೊಂದಿರುವ ತುರಗವನ್ನೇರಿ ಶತ್ರುಗಳನ್ನೂ ಸಂಹರಿಸುತ್ತಾ ಶತ್ರುಗಳ ಶಿರಗಳಿಂದಲೇ

'ಪೊಡೆಸೆಂಡ'ನಾಡುತ್ತಾ ತುರಗಳನ್ನು ಹಿಂದಿರುಗಿಸಿದ ಈತನು 'ಪಗೆಯಂ ಪರ್ದಿಂಗೆ ಬಿರ್ದ್ದಿಕ್ಕಿದಂ. ಅದೇ ಗ್ರಾಮದ ಮತ್ತೊಂದು ವೀರಗಲ್ಲು[೯೭] ಐಚುಗನೆಂಬುವನ ಸಾಹಸವನ್ನು ಬಣ್ಣಿಸುತ್ತಾ ಆತನ ಹೋರಾಟದಿಂದ 'ಸಂಗರರಂಗ'ವು ಹೇಗೆ ಭೀಕರವಾಯ್ತು ಎಂಬುದನ್ನು ನಿರೂಪಿಸಿದೆ.

**ಪರೆದಕರುಳ್ಳಿದುಳಿಂಗಳಿಂ ।**
**ನೊರೆನೆತ್ತರ ಪೊನಲ್ಗಳಿಂದೆ ಕಂಡದ ಕೆಸಱಿಂ**
**ಸಿರಮುರುಳ್ವಮುಂಡದಿಂ ।**
**ಭೀಕರವಾಯ್ತುಂದ್ಯೈಚನಿಜಿದ ಸಂಗರರಂಗ ॥**

ಈತನು "ಸಿಡಿಲಡಸಿಪೊಡೆವ ತೆಱದಿಂ" ವೈರಿಬಲವನ್ನು ಕೊಂದನು. ಹಾಗೆ ಹೋರಾಡುತ್ತಲೇ ಮಡಿದ ಈತನನ್ನು ಖೇಚರಿಯರೊಯ್ಯೆ ಸಗ್ಗಂ ಪೊಕ್ಕಂ" ಎಂಬುದಾಗಿ ಕವಿಯು ಬಣ್ಣಿಸಿದ್ದಾನೆ.

ಮಾಚಗವುಡನ ಮಗನಾದ ಬೊಮ್ಮೆಯನಾಯಕನು "ಬಱಸಿಡಿಲೆಱಗುವ ತೆಱದಿಂದ ಉಱದಾಂತರನಿಕ್ಕಿ ಪೊಕ್ಕು ಸಂಗರಧರೆಯೊಳು ಪಲವರನು ಕುಱಿದಱಿದಱಿದಂ"[೯೮] ಎಂಬಂತೆ ಹೋರಾಟ ನಡೆಸಿದನು. ಹಾಗೆಯೇ ಬೆಲ್ಲರಸನ ಕುಮಾರ ತೈಲರಸನು "ಚಕ್ರವ್ಯೂಹದೊಳಗಿರಭಿಮನ್ಯುವಿನ ಪರಿಯಲು ಆ ಬಲಮೆಲ್ಲನಂತವೆಕೊಂದು ಕಲಿಗಳೆಲ್ಲರ ಕಯ್ದುವಿಂಗೆ ತನದೇಹವೆಡೆಯಾಗಲು" ಹೋರಾಡಿ ಮಡಿದನೆಂದು ಪಟ್ಟುಗುಪ್ಪೆಯ ವೀರಗಲ್ಲು ಬಣ್ಣಿಸುತ್ತದೆ.[೯೯]

ಕಸಲಗೆರೆಯ ವೀರಗಲ್ಲು ಗುಜ್ಜನೆಂಬ ವೀರನನ್ನು ಮನದುಂಬಿ ಬಣ್ಣಿಸುತ್ತದೆ. ಈತನ ಪರಾಕ್ರಮವನ್ನು ಬಣ್ಣಿಸುತ್ತಲೇ ಈತನ ವ್ಯಕ್ತಿತ್ವದ ಪರಿಚಯವನ್ನು ಮಾಡಿಕೊಡುವ ರೀತಿಯಲ್ಲಿ ಶಾಸನಪಾಠವಿದೆ.[೧೦೦] ಈ ಗುಜ್ಜನಾದರೋ "ಯಾಚಕ ಸಮುದಯಕೆಲ್ಲಂ ಭೂಚಕ್ರದೊಳಿವನು ಕಲ್ಪತರುವೆನಿಸಿರ್ದ್ದ" ಸಾಮಂತ ಮಾಚ ಮತ್ತು "ರತಿ ಎಸೆವ ರೂಪುನಿಂ ಮತ್ತತಿಸಯ ಲಾವಣ್ಯಭರಿತೆ ಕೇತಲದೇವಿ"ಯ ಮಗನಾದ ಈತನು "ವೀರವಾರಿಧಿ" ಅವನ ಸಾಹಸಮದೆಂತೆಂದಡೆ –

**ಅರಿ ಎಂಬಂಬುಜವನಮಂ**
**ಕರಿ ಮದದಿಂದೊಕ್ಕಲಿಕ್ಕಿ ತುಳಿವಂತೆವೋಲ್**
**ಅರಿಗಳೆನಿಪದಟಮಲಹರ**
**ಪರಿಭವಿಪಂ ಭುಜದ ಬಲದೆ ಗುಜ್ಜಂ ಧರೆಯೊಳು ॥**

ಈತನು "ಅಂಗನೆಯರ್ಗ್ಗೆ ಅಂಗಜನ್ ಇವ ಸಂಗರದೊಳಗೆ ಇದಿರಾಂತವ ಇರಿಮದಗಜಮಲ್ಲ ಭಂಗಿಪನ್" ಈತನು "ಅರಿಕುಲತಿಮಿರ ಸಶಾಂಕ ಅರಿಮದಕರಿಹರಿ ಅರಿಗಿರಿವಜ್ರ"

ನೆಂಬುದಾಗಿ ಹೆಸರಾದವನು. ಗುಜ್ಜನನ್ನು ಹೊಗಳುವಾಗ ಕವಿಯು ಸರಳವಾದ ಭಾಷೆಯನ್ನು ಬಳಸುವ ಜೊತೆಗೆ ಸಮರ್ಥವಾದ ಉಪಮೆಯನ್ನು ರೂಪಕಗಳನ್ನು ಬಳಸಿದ್ದಾನೆ.

ಮಹಾಪ್ರಧಾನ ಚೇಲರಸನ ಮಗನಾದ ಕೂರುಕನಾಯಕನ ಪರಾಕ್ರಮವನ್ನು ಹೊಸಕೋಟೆಯ ವೀರಗಲ್ಲು[೧೦೧] ಸೊಗಸಾಗಿ ನಿರೂಪಿಸಿದೆ. ಕಕ್ಕಲನೆಂಬುವನು ಆಕ್ರಮಣ ಮಾಡಿದಾಗ ಕೂರುಕನು ಸಾಹಸದಿಂದ ಕುದುರೆಯ ಶಿರವನ್ನು ತಿವಿದನು. ಉರವಣಿಸಿದ ರಾವುತರ ಕರುಳು ಹೊರಬರುವಂತೆ ತಿವಿದನು. ಈತನ ಪರಾಕ್ರಮವನ್ನು ಸಮರಾಂಗಣದೊಳಿದ್ದ ಮರುಳುಗಳು

**ಮರುಳುಗಳು ಕರುಳಮಾಲೆಯ ಕೊರಳೊಳು ಸರವಿಟ್ಟು ರುಧಿರತಿಳಕಮನಿಟ್ಟು**

**ಹರಸುತಿದರೀ ಕೂರಕನುರವಣಿಯೊಳು ತನಕೆ ಮೆಚಿಸಮರಾಂಗಣದೊಳು ॥**

ಎಂಬಂತೆ ಈತನ ಪರಾಕ್ರಮವನ್ನು ಕೊಂಡಾಡುತ್ತಿದ್ದವು. ಈ ಕೂರುಕನು "ಪಿತಚೇಲಮಾತೆನಾಗಲೆ"ಯ ಸುತನಾಗಿ ಉಭಯಕುಲವನ್ನು ಉದ್ಧರಿಸಿದನೆಂದು "ಅತಿಮುದದಿಂ ದೇವಾಂಗನೆಯರು" ಈತನನ್ನು ಸ್ವರ್ಗಕ್ಕೆ ಒಯ್ದರೆಂಬುದಾಗಿ ಶಾಸನವು ಬಣ್ಣಿಸಿದೆ.

ವೀರರ ಸ್ವರ್ಗಾರೋಹಣವನ್ನು ವೀರಗಲ್ಲುಗಳ ಪಾಠಗಳು ನೀಡುತ್ತವೆ. ಉತ್ಪ್ರೇಕ್ಷೆಯಿಂದ ಕೂಡಿದ್ದರೂ ಸಹ ಈ ಬಣ್ಣನೆಗಳು ಮನಸೆಳೆಯುತ್ತವೆಯೆಂಬುದನ್ನು ಬೇಡರ ಜಕ್ಕನೆಂಬುವನ ವೀರಗಲ್ಲಿನ ಪಾಠದಿಂದ ಗಮನಿಸಬಹುದು.

**ಹೂವಿನವಿಮಾನವೇಜೆಸಿ**

**ತೀವಿದ ಜೌವನೆಯರೆಸೆವರತಿಚೆಂನೆಯರು**

**ದೇವಾಂಗನೆಯರ್ಪ್ವಲರುಂ**

**ಭಾವಿಸಿಸುರಲೋಕಕೆಸೆಯೆ ಜಕ್ಕನನುಯ್ದರು ॥**

**ಸುರವನಿತೆಯರುಯ್ಯಲೊಡಂ**

**ಸುರದುಂದುಭಿ ಪೊಯ್ಯೆಸುರಿಯೆ ಪೂವಿನ ಮೞೆಯುಂ**

**ಸುರಲೋಕದಲ್ಲಿ ಜಕ್ಕನ**

**ನಿರ್ಸಿಯೆ ತಾಂ ವೀರರಸವ ಪಾಡಿದರಾಗಳು ॥**'[೧೦೨]

ವೀರಗಲ್ಲುಗಳ ಪಾಠವನ್ನು ಸಿದ್ಧಪಡಿಸುತ್ತಿದ್ದ ಶಾಸನ ರಚನಾಕಾರರು ಅಥವಾ ಶಾಸನಕವಿಗಳು ಆ ವೀರಗಲ್ಲುಗಳ ವೀರರನ್ನು ಪ್ರತ್ಯಕ್ಷವಾಗಿ ಕಂಡಿರಲೂ ಸಾಕು. ಏಕೆಂದರೆ ಆ ವೀರನು ಇನ್ನೆಲ್ಲಿಯವನೋ ಆಗಿರದೆ ತನ್ನ ಗ್ರಾಮ ಅಥವಾ ಪರಿವಾರದ ವ್ಯಕ್ತಿಯಾಗಿದ್ದಿರಬಹುದು. ಹೀಗಾಗಿ ಅವರುಗಳ ಹೋರಾಟವನ್ನು ಬಣ್ಣಿಸುವಾಗ ಶಾಸನಕವಿಗಳು ಸಹಜತೆಯನ್ನು ಮೆರೆಯುತ್ತಾರೆ. ಉತ್ಪ್ರೇಕ್ಷೆಯು ಕೆಲವೊಮ್ಮೆ ನುಸುಳಿದರೂ ಸಹ ವಿಶೇಷವಾಗಿ ವರ್ಣನೆಯ ಸಂದರ್ಭದಲ್ಲಿ

ಸಹಜೋಕ್ತಿಯ ಕಡೆಗೆ ಹೆಚ್ಚಿನ ಒಲವನ್ನು ತೋರಿಸುತ್ತಿದ್ದರೆಂಬುದನ್ನು ಗಮನಿಸಬಹುದು. ಹೀಗಾಗಿ ನಡೆದ ಹೋರಾಟದ ಪರಿಣಾಮಕಾರಿಯಾದ ಚಿತ್ರಣವು ವೀರಗಲ್ಲುಗಳ ಪಾಠದಿಂದ ದೊರೆಯಲು ಸಾಧ್ಯವಾಗುತ್ತದೆ ಎನ್ನಬಹುದು.

**೪.೭ : ಧಾರ್ಮಿಕ ಮುಖಂಡರು :–**

ಕರ್ನಾಟಕದಲ್ಲಿ ಪ್ರಸಿದ್ಧವಾಗಿದ್ದ ಧರ್ಮಗಳಾದ ಜೈನಧರ್ಮ, ಶೈವಧರ್ಮ,ವೀರಶೈವಧರ್ಮ, ವೈದಿಕಧರ್ಮಗಳಲ್ಲಿ ಪ್ರಮುಖರಾದ ಧಾರ್ಮಿಕ ಮುಖಂಡರನ್ನು ಕನ್ನಡದ ಹಲವಾರು ಶಾಸನಗಳು ಬಣ್ಣಿಸಿವೆ. ಆ ಧಾರ್ಮಿಕ ಪ್ರಮುಖರ ಗುಣಶೀಲತೆಗಳು ವಿದ್ವತ್ತು, ವೈರಾಗ್ಯಪರತೆಯನ್ನು ಕನ್ನಡ ಶಾಸನಗಳು ಕಾವ್ಯಾತ್ಮಕವಾಗಿ ವರ್ಣಿಸಿವೆ. ಅಂತಹವರ ವಿಚಾರಗಳನ್ನು ಜೈನ–ಶೈವ–ವೀರಶೈವ–ವೈದಿಕ ಯತಿಗಳೆಂದು ವಿಭಾಗಿಸಿಕೊಂಡು ಪರಿಶೀಲಿಸಬಹುದು. ಜೊತೆಗೆ ಧಾರ್ಮಿಕ ಪರಿಸ್ಥಿತಿಯ ಸ್ಥೂಲಪರಿಚಯವನ್ನು ಮಾಡಿಕೊಡಲು ಪ್ರಯತ್ನಿಸಲಾಗುವುದು.

**ಜೈನಯತಿಗಳು :–**

ಜೈನಯತಿಗಳನ್ನು ಕುರಿತು ಪ್ರಸ್ತಾಪಿಸುವಾಗ ವಿಶೇಷವಾಗಿ ಶ್ರವಣಬೆಳಗೊಳದ ಶಾಸನಗಳನ್ನು ಗಮನಿಸಲೇಬೇಕಾಗುತ್ತದೆ. ಈ ಶಾಸನಗಳಲ್ಲಿ ಜೈನಯತಿಗಳ ವಿದ್ವತ್ತು, ತಪಸ್ಸು ಹಾಗೂ ಅವರು ಪರೀಷಹಗಳನ್ನು ಜಯಿಸಿ ಸಂನ್ಯಸನ ವಿಧಿಯಿಂದ ಮುಡುಪಿದ ಸಂಗತಿಗಳನ್ನು ವರ್ಣಿಸಿರುವ ವಿಚಾರಗಳನ್ನು ಕಾಣಬಹುದಾಗಿದೆ. ಜಿನಮುನಿಗಳ ನಿಸದಿಗೆ ಸಂಬಂಧಿಸಿದ ಹಲವು ಶಾಸನ ಪದ್ಯಗಳು, ತಮಗೆ ತಾವೇ ಸೊಗಸಾದ ಬಿಡಿ ಬಿಡಿ ಕಾವ್ಯಗಳಂತಿವೆ. ಈ ಪದ್ಯಗಳಲ್ಲಿ ಕಂಡುಬರುವ ಶಾಂತರಸಪ್ರತಿಪಾದಕವಾದ ಅಭಿವ್ಯಕ್ತಿಗಳು ಗಮನಾರ್ಹವಾಗಿವೆ.

ಕೊಲ್ಲಾಪುರದ ಮಾಘನಂದಿ ಯತಿಯಿಂದ ಕೊಂಡಕುಂದಾನ್ವಯಕ್ಕೆ ಒದಗಿದ ಶೋಭೆಯನ್ನು "ಎಳಮಾವಿಂ ಬನಂ ಅಬ್ಜದಿಂ ತಿಳಿಗೊಳಂ ಮಾಣಿಕ್ಯದಿಂ ಮಂಡನಾವಳಿ ತಾರಾಧಿಪನಾ ನಭಂ ಶುಭದಮಾಗಿರ್ಪಂತಿರಿರ್ದತ್ತು ನಿರ್ಮಳಮೀಗಳ್"[೧೦೩] ಎಂಬುದಾಗಿ ಬಣ್ಣಿಸಿದೆ. ಇಲ್ಲಿ ಬಳಕೆಯಾಗಿರುವ ಪ್ರತಿಯೊಂದು ಉಪಮೆಯೂ ಸಹ ತನ್ನದೇ ಆದ ಹೊಸತನದಿಂದ ಗಮನ ಸೆಳೆಯುತ್ತದೆ. ದಿವಾಕರ ನಂದಿ ಮತ್ತು ಮೇಘಚಂದ್ರವ್ರತಿಯನ್ನು ಕುರಿತ ವರ್ಣನೆಗಳಲ್ಲಿ ಶಾಸನ ಕವಿಯು ಸೂರ್ಯ ಮತ್ತು ಚಂದ್ರನ ಉದಯವನ್ನು ಆಧರಿಸಿ ಮಾಡಿರುವ ವರ್ಣನೆಗಳು ಗಮನಸೆಳೆಯುತ್ತವೆ.

ಸೂರ್ಯೋದಯದಿಂದ ಭೂಭಾಗವು ಬೆಳಗುವ ರೀತಿಯಲ್ಲಿ ದಿವಾಕರ ನಂದಿಯ ಮಾತುಗಳು ಪರಿಣಾಮಕಾರಿಯೆಂಬುದನ್ನು –

ವರಭವ್ಯಾನನಪದ್ಮಮುಳ್ಳಲರಲಜ್ಞಾನೀಕ ನೇತ್ರೋತ್ಪಳಂ
ಕೊರಗಲ್ಪಾಪತಮಸ್ತಮಂ ಪರಿಯಲೆತ್ತಂ ಜೈನಮಾರ್ಗ್ಗಾಮಳಾಂ
ಬರಮತ್ಯುಜ್ವಳಮಾಗಲೇಂ ಬೆಳಗಿತಾ ಭೂಭಾಗಮಂ ಶ್ರೀದಿವಾ
ಕರಣಂದಿಬ್ರತಿವಾಕ್ ದಿವಾಕರಕರಾಕಾರಂ ಬೊಲುಬ್ಬೀನುತಂ[೧೦೪]

ಎಂಬ ಪದ್ಯವು ನಿರೂಪಿಸಿದೆ.

ಹಾಗೆಯೇ ಮೇಘಚಂದ್ರವ್ರತಿಯನ್ನು ಕುರಿತ ಪದ್ಯದಲ್ಲಿ ಚಂದ್ರೋದಯವಾದಾಗ ಉಂಟಾಗುವ ಪರಿಣಾಮಗಳು ಈತನ ಕೀರ್ತಿಯಿಂದಲೂ ಆಯಿತೆಂಬ ವರ್ಣನೆಯು ಚಮತ್ಕಾರಿಕವಾಗಿ ತೋರುತ್ತದೆ. ಆ ಪದ್ಯವು ಈ ರೀತಿಯಾಗಿದೆ.

ಇದೆ ಹಂಸೀಬೃಂದಮೀಂಟಲ್ಬಗೆದಪುದು ಚಕೋರಿಚಯಂ ಚಂಚುವಿಂದಂ
ಕದುಕಲ್ಸಾರ್ದ್ದಪ್ಪುದೀಶಂ ಜೆಡೆಯೊಳಿರಿಸಲೆಂದಿರ್ದ್ದಪಂ ಸೆಜ್ಜೆಗೇಱ
ಲ್ವದೆದಪ್ಪಂ ಕೃಷ್ಣನೆಂಬನ್ತೆಸೆದು ಬಿಸಲಸತ್ಕಂದಳೀಕನ್ದಕಾನ್ತಂ
ಪುದಿದತ್ತೀ ಮೇಘಚಂದ್ರವ್ರತಿತಿಳಕ ಜಗದ್ವರ್ತ್ತಿಕೀರ್ತ್ತಿಪ್ರಕಾಶ[೧೦೫]

ಅಂದರೆ ಮೇಘಚಂದ್ರವ್ರತಿಗಳ ಕೀರ್ತಿಪ್ರಕಾಶದ ವರ್ಣನೆಯನ್ನು ಮಾಡುವಾಗ ಅದನ್ನು ಚಂದ್ರನ ಬೆಳದಿಂಗಳನ್ನು ಹಂಸೀಬೃಂದವು ಈಂಟಲು, ಚಕೋರಿಚಯವು ಚಂಚುವಿನಿಂದ ಸೇವಿಸಲು, ಈಶ್ವರನು ತನ್ನ ಮುಡಿಗೇರಿಸಲು ಆಸೆ ಪಡುವಂತೆಯೂ, ಕೃಷ್ಣನು ಅದನ್ನು ಹಾಸಿಗೆಯನ್ನಾಗಿ ಮಾಡಿಕೊಳ್ಳಲು ಅಪೇಕ್ಷಿಸಿದಂತೆಯೂ ಬಣ್ಣಿಸಿರುವುದು ವಿಶೇಷವಾಗಿ ಕಾವ್ಯಮಯವಾಗಿ ತೋರುತ್ತದೆ. ಪ್ರತಿಮಾವಿಧಾನದಲ್ಲಿ ಇದನ್ನು ನಿರೂಪಿಸಿರುವುದು ಕವಿಯ ಹೆಗ್ಗಳಿಕೆಯೆನ್ನಬಹುದು.

ಜೈನಯತಿಗಳು ಕೈಗೊಳ್ಳುತ್ತಿದ್ದ ಕಠಿಣವಾದ ತಪಸ್ಸುಗಳನ್ನು ಶಾಸನಪದ್ಯಗಳು ತಮ್ಮದೇ ಆದ ರೀತಿಯಲ್ಲಿ ಬಣ್ಣಿಸುತ್ತವೆ. ತಪಸ್ವಿಯಾದವನಿಗೆ ಮುಖ್ಯವಾಗಿ ಆತ್ಮಸಂಯಮವಿರಬೇಕಾಗುತ್ತದೆ ಎಂಬುದನ್ನು ಅಲಂಕಾರಿಕವಾಗಿ ಮಳಧಾರಿದೇವನ ಚಿತ್ರಣದ ಮೂಲಕ ಈ ಕೆಳಗಿನ ಪದ್ಯವು ನಿರೂಪಿಸಿದೆ.

ಬಳಯುತರಂ ಬಳಲ್ಚುವ ಲತಾಂತಶರಂಗಿದಿರಾಗಿ ತಾಗಿ ಸಂ
ಚಳಿಸೆಪಳಂಚಿತೂಳ್ದವನನೋಡಿಸಿ ಮೆಯ್ವಗೆಯಾದ ದೂಸಱಿಂ
ಕಳೆಯದೆ ನಿಂದ ಕರ್ಬ್ಬುನದ ಕರ್ಗ್ಗಿದ ಸಿಪ್ಪಿನ ಮಕ್ಕೆವೆತ್ತ ಕ
ತ್ತಳಮೆನಿಸಿತ್ತು ಪುತ್ತಡರ್ದ್ದಮೆಯ್ಯಮಳಂ ಮಳಧಾರಿದೇವರಂ[೧೦೬]

ಅಂದರೆ ಮಳಧಾರಿದೇವನ 'ಮೆಯ್ಯಮಳ'ವು ಅಂಗರಕ್ಷಕವಾದ ಕವಚದಂತೆ ಇತ್ತಂತೆ. ಆ ಕವಚವಾದರೋ ಬಲಯುತರಾದವರನ್ನೂ ಬಳಲಿಸುವ ಲತಾಂತಶರ ಅಂದರೆ ಮನ್ಮಥನ ವಿರುದ್ಧ ಹೋರಾಡಿ ಆತನನ್ನು ಗೆದ್ದ ಕಾರಣದಿಂದ ಮೈಗಂಟಿದ ಅಂಗರಕ್ಷಣೆಯ ಕವಚವೆಂಬಂತೆ ತೋರುತ್ತಿತ್ತು. ಎಂದು ಬಣ್ಣಿಸುವ ಮೂಲಕ ಆ ವ್ರತಿಯ ಸಂಯಮಯುತವಾದ ತಪಸ್ಸನ್ನು ಬಣ್ಣಿಸುತ್ತಾನೆ ಶಾಸನಕವಿ.

ನಂದಿಸೇನ ಮುನಿವರನು ಸಂನ್ಯಸನ ವಿಧಿಯಿಂದ ಮುಡುಪಿದ ವಿಷಯವನ್ನು ನಿರೂಪಿಸುವ ಪದ್ಯದಲ್ಲಿ ಕಾವ್ಯೋಚಿತವಾದ ಉಪಮೆಗಳ ಮೂಲಕ ಈ ಲೋಕದ ಸಂಪತ್ತು, ಸೌಂದರ್ಯ, ವೈಭವಗಳು ಕ್ಷಣಿಕವಾದವುಗಳೆಂಬುದನ್ನು ಶಾಸನಕವಿಯು ಸೊಗಸಾಗಿ ನಿರೂಪಿಸಿದ್ದಾನೆ. ನಂದಿಸೇನಮುನಿವರನನ್ನು ಕುರಿತು ಪದ್ಯ ಹೀಗಿದೆ.

**ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೋಲ್ತೋಱಿಬೇಗಂ**

**ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ನಿಲ್ಲವಾರ್ಗ್ಗಂ**

**ಪರಮಾರ್ತ್ಥಂ ಮೆಚ್ಚೆ ನಾನೀಧರಣಿಯುಳಿರವಾನೆನ್ದು ಸನ್ಯಾಸನಂಗೆ**

**ಯ್ದುರುಸತ್ವನ್ನನ್ದಿಸೇನ ಪ್ರವರ ಮುನಿವರನ್ದೇವಲೋಕಕ್ಕೆಸನ್ದಾನ್**[೧೧೭]

'ಶ್ರೀರೂಪಲೀಲಾಧನವಿಭವಗಳು' ಯಾರಲ್ಲಿಯೂ ಶಾಶ್ವತವಾಗಿ ನಿಲ್ಲುವುದಿಲ್ಲವೆಂದು ಅರಿತ 'ನಂದಿಸೇನಪ್ರವರ ಮುನಿವರ'ನು ಅವುಗಳನ್ನು 'ಸುರಚಾಪ, ವಿದ್ಯುಲ್ಲತೆ, ಮಂಜುವಿನಂತೆ' ಕ್ಷಣಿಕವಾದವುಗಳೆಂದು ಭಾವಿಸಿ ತಪಸ್ಸನ್ನು ಆಚರಿಸುವ ಮೂಲಕ "ದೇವಲೋಕಕ್ಕೆ ಸನ್ದಾನ್" ಎಂಬುದಾಗಿ ಶಾಸನವು ಬಣ್ಣಿಸುತ್ತದೆ.

ಶ್ರವಣಬೆಳಗೊಳದ ಶಾಸನಗಳ ಹಾಗೆಯೇ ದಕ್ಷಿಣ ಕರ್ನಾಟಕದ ವಿವಿಧ ಭಾಗಗಳಲ್ಲಿ ದೊರೆತಿರುವ ಶಾಸನಗಳಲ್ಲಿಯೂ ಸಹ ಜೈನಯತಿಗಳ ಗುಣಗಾನ ಮಾಡಿರುವ ಪದ್ಯಗಳು ಕಂಡುಬರುತ್ತದೆ. ಅವುಗಳಲ್ಲಿ ಶುಭಚಂದ್ರಮುನೀಂದ್ರನನ್ನು ಬಣ್ಣಿಸಿರುವ ಬಂದಲಿಕೆಗ್ರಾಮದ ಶಾಂತೀಶ್ವರ ಬಸದಿಯ ಶಾಸನವು[೧೧೮] ಶುಭಚಂದ್ರದೇವಮುನಿಯನ್ನು "ಕಾನೂರ್ಗ್ಗಣೋದ್ಧಾರಕ" ನೆಂದು ಕರೆದಿದೆ. ಈತನು "ಕುಸುಮಬ್ರಾತದೊಳ್ ಅಂಬುಜಂ, ಜಳಧಿಯೊಳ್ ದುಗ್ಧಾಬ್ಧಿ, ತಾರಾಳಿಯೊಳ್ ಸಸಿ, ಕಲ್ಗಳೊಳ್ ಚಿಂತಾಮಣಿ, ತರುಗಳೊಳ್ ಕಲ್ಪೋರ್ಬ್ಬಿಪಂ, ರತ್ನದೊಳ್ ಮಿಸುಪ ಆ ಕೌಸ್ತುಭಂ ಒಪ್ಪುವಂತೆ ಜಿನಯೋಗಿ ಭ್ರಾತದೊಳ್ ರಂಜಪಂ" ಎಂದು ಬಣ್ಣಿಸಿದೆ. ಈ ಶುಭಚಂದ್ರಮುನೀಂದ್ರನಾದರೋ –

**ಮಳಿನತೆ ಇಲ್ಲದ ಕುಂದಂ**

**ತಳೆಯದ ಸಲೆ ರಾಹುಪಿಡೆಯ್ದೆದದ ದೋಷಾ**

**ವಳಿಯೊಳ್ಪರಿಯಿಸದಸ್ತಾ**

**ಚಳಕೆಳಸದ ಚಂದ್ರನೆನಿಸುವಂ ಶುಭಚಂದ್ರಂ**

ಎಂದು ವರ್ಣಿತನಾಗಿದ್ದಾನೆ.

ವಿಮಳಭಟ್ಟಾರಕರ ಶಿಷ್ಯರಾದ ವಾದಿರಾಜಮುನಿಯು ಪರಮತದವರನ್ನು ತನ್ನ ವಾದದಿಂದ ಸೋಲಿಸುವಷ್ಟು ಸಮರ್ಥನಾಗಿದ್ದನೆಂಬುದನ್ನು ಶಾಸನಕವಿಯು ಸೊಗಸಾದ ಉಪಮೆಯ ಮೂಲಕ ಬಣ್ಣಿಸುತ್ತಾನೆ. ಪದ್ಯವು ಈ ರೀತಿಯಾಗಿದೆ.

**ಆದಿತ್ಯನ ಕೆಲದೊಳ್ ಚಂ**

**ದ್ರೋದಯಮೆಸೆಯದವೊಲೀಧರಾಮಣ್ಡಲದೊಳ್**

**ವಾದಿಗಳೆಂಬೀಟುಂಟುಕ**

**ವಾದಿಗಳೆಸೆದಪರೆ ವಾದಿರಾಜನ ಕೆಲದೊಳ್**[೧೧೯]

ಸೂರ್ಯನ ಮುಂದೆ ಚಂದ್ರೋದಯವಾಗಲು ಹೇಗೆ ಸಾಧ್ಯವಿಲ್ಲವೋ ಅದೇ ರೀತಿಯಲ್ಲಿ ಹೆಸರಿಗೆ ಮಾತ್ರ ವಾದಿಗಳೆನಿಸಿಕೊಂಡಿರುವವರು ಈ ವಾದಿರಾಜನ ಮುಂದೆ ಶೋಭಿಸುತ್ತಾರೆಯೇ? ಎಂದು ಪ್ರಶ್ನಿಸುವ ಕವಿಯು ಈತನನ್ನು "ಪರಮತಕುಭೃತಾಭೀಳ ವಾಗ್ವಜ್ರಪಾತ" ಎಂದು ಕರೆದಿದ್ದಾನೆ.

ಸಮುದ್ರದ ಗುಣಾವಗುಣಗಳನ್ನೇ ಆಧರಿಸಿ ಸಿದ್ಧಾಂತ ರತ್ನಾಕರಮುನಿಯನ್ನು ಯಾವುದಕ್ಕೆ ಹೋಲಿಸಿ ಹೊಗಳಬೇಕೆಂದು ಹುಮ್ಮಚದ ಶಾಸನವೊಂದು[೧೧೦] ಎರಡು ಪದ್ಯಗಳಲ್ಲಿ ಚಮತ್ಕಾರಿಕವಾಗಿ ನಿರೂಪಿಸಿದೆ. ಈ ಸಿದ್ಧಾಂತ ರತ್ನಾಕರಮುನಿಯು "ಸಮ್ಯಕ್ತವಾರಾಸಿ"ಯೆನಿಸಿ ಕೊಂಡವನು. ಇಂತಹವನನ್ನು "ಹರಿಸಂಘಾತದೆ ಕಟ್ಟು ಪೆತ್ತ ಬಡವಜ್ವಾಳಾಳಿಯಿಂ ಬೆನ್ದ ಭೀಕರ ಪಾಠೀನತಿಮಿಂಗಳಾಳಿಂ ಅತಿಕ್ಷೋಭಕ್ಕೆ ಸನ್ದಿಜ್ದ್ ಅಗಸ್ತ್ಯರಿಂ ಅಪ್ರಾಸನಕೆಯ್ದು ಅತಿತೀಕ್ಷ್ಣಕ್ಷಾರವಾರಿಪ್ರಭ"ವಾದ "ವಾರಾಸಿ"ಯ ಜೊತೆಗೆ ಅಂದರೆ ಸಮುದ್ರದ ಜೊತೆಗೆ ಹೋಲಿಸಬಾರದು. ಬದಲಾಗಿ ಉತ್ತಮ ಅಂಶಗಳಿಂದ ಕೂಡಿದ 'ವಾರಾಸಿ'ಯ ಜೊತೆಗೆ ಹೋಲಿಸಬೇಕು. ಆ ಉತ್ತಮ ಅಂಶಗಳು ಹೀಗಿವೆ.

**ಸಿರಿಗಾವಾಸಮನೇಕರತ್ನ ನಿಚಯೋತ್ಪತ್ತ್ಯಾಶ್ರಯಂ ಭೀರುರ**

**ಕ್ಷರತಂ ಚಂದ್ರಕಳಾಪ್ರವರ್ಧನಮುದಂ ಪೀಯೂಷಪಿಣ್ಡಾಸ್ಪದಂ**

**ವರವೇಳಾವಳಯಾವೃತಂ ಸಮತೆಯಿಂ ವಾರಾಸಿಪೋಲ್ತುಂ ಮನೋ**

**ಹರದಾನತ್ವದಿನೆಯ್ದೆ ಪೋಲದೆವಲಂ ಸಮ್ಯಕ್ತವಾರಾಸಿಯಂ ॥**

ಎಂದು ಕವಿಯು ಅಭಿಪ್ರಾಯಪಡುತ್ತಾನೆ.

ನಯಕೀರ್ತಿದೇವ ಮುನಿಯಿಂದ ಜೈನಧರ್ಮವು ಪರಿಶೋಭಿಸಿತು ಎಂಬುದನ್ನು ಹಟ್ಟಣದ ಶಾಸನವು[೧೧೧] ಸುಂದರವಾದ ಉಪಮೆಗಳಿಂದ ಈ ರೀತಿಯಾಗಿ ಬಣ್ಣಿಸಿದೆ.

**ಸಸಿಯಿಂದಂಬರಮಬ್ಜದಿಂತಿಳಿಗೊಳಂನೇತ್ರಂಗಳಿಂದಾನನಂ**

**ಪೊಸಮಾವಿಂ ಬನಮಿಂದ್ರನಿಂತ್ರಿದಿವಮಾಶೇಷಂಮಣಿವ್ರಾತದಿ**

**ದೆಸೆವಂತೀ ನಯಕೀರ್ತಿದೇವಮುನಿಯಿಂ ರಾದ್ಧಾಂತ ಚಕ್ರೇಶನಿಂ**

**ದೆಸೆಗುಂ ಶ್ರೀಜಿನಧರ್ಮ್ಮಮೆಂದೊಡೆ ಬಳಿಕ್ಕೇವರ್ಣ್ಣಿಪೊಂಬಣ್ಣಿಪೊಂ ॥**

ಶ್ರೀಮೂಲ ಸಂಘದ ಕೊಣ್ಡಕುನ್ದಾನ್ವಯದ ಕಾಣೂರ್ಗ್ಗಣ ಮೇಷಪಾಷಾಣಗಚ್ಛದ ಶ್ರೀಮತು ಪ್ರಭಾಚನ್ದ್ರಸಿದ್ಧಾನ್ತದೇವರು ಅವರ ಶಿಷ್ಯರನ್ನು ಕಲ್ಲೂರು ಗುಡ್ಡದ ಶಾಸನವು[೧೧೨] ಈ ರೀತಿಯಾಗಿ ಬಣ್ಣಿಸುತ್ತದೆ. ಪ್ರಭಾಚಂದ್ರಸಿದ್ಧಾನ್ತ ದೇವನಾದರೋ,

**ಚತುರಾಸ್ಯಂಚತುರೋಕ್ತಿಯಿಂ ಪ್ರಭುತೆಯಿಂದೀಶಂ ಗುಣವ್ಯಾಪಕ**

**ಸ್ಥಿತಿಯಿಂ ವಿಷ್ಣುಸುಬುದ್ಧಿವಿಸ್ತರತೆಯಿಂ ಬೌದ್ಧಂದಲೀಜೈನಪ**

**ದ್ಧತಿಯಿಂದಿರ್ದ್ದುಮಿದೇಂ ವಿಚಿತ್ರತರಮೋಚಾತುರ್ಯ್ಯಮಾದೀ ಸಮು**

**ನ್ನತಸಿದ್ಧಾನ್ತವಿಭೂಷಣಂಗೆನಿಸಿದಂ ಶ್ರೀಮತ್ಪ್ರಭಾಚಂದ್ರನುಂ ॥**

ಎಂಬುದಾಗಿ ಪ್ರಸಿದ್ಧನಾಗಿದ್ದರೆ ಆತನ ಶಿಷ್ಯಪರಂಪರೆಯಲ್ಲಿ ಬಂದ "ಸದ್ಬುಧಸೇವ್ಯನಪ್ಪ ಬುಧಚಂದ್ರ ಖ್ಯಾತಯೋಗೀಂದ್ರನ ನುಡಿಗಳು ಸತ್ಯಸುವರ್ಣಭೂಷಣಗಣಂ ಚಿತ್ತಂ ಸುರತ್ನಂಗಳ ಮಡಗಿಟ್ಟಿರ್ಪ್ಪ ಕರಂಡಕಂ ತನುತಪಶ್ರೀಭಾಮಿನೀಭಾಸಿ"ಯೆಂಬಂತೆ ಇದ್ದವು. ಈತನಿಗೆ "ದುಃಕೀರ್ತ್ತಿಯನಾನ್ತ ಮತ್ತಿನ ಶಠರ್ ದುರ್ಬ್ಬೋಧರ್ ಅಸ್ಪೃಶ್ಯರ್" ಸಮನಾಗಲು ಸಾಧ್ಯವೇ? ಎಂದು ಪ್ರಶ್ನಿಸಿದೆ. "ಸುರಧೇನು ಪ್ರತಿರೂಪಮಂ ತಳೆದೋ ಗೀರ್ವ್ವಾಣ ಭೂಜಾತವೀಧರೆಯೊಳು ತಾಪಸರೂಪದಿಂ ನೆಲಸಿತೋ ಪೇಳೆಂಬಿನಂ" ವಾತ್ಸಲ್ಯರತ್ನಾಕರನಾದ ಶ್ರೀಬುಧಚಂದ್ರದೇವಮುನಿಪನು "ಬರ್ಪ್ಪುದಂ ಕರೆದರ್ತ್ಥಿ ಪ್ರಕರಕ್ಕೆ ಕೊಟ್ಟು ವಿಪುಳಶ್ರೀಕೀರ್ತ್ತಿಯಂ ನಿರುತಂ ತಾಳ್ದಿದ"ನೆಂದು ಶಾಸನವು ಬಣ್ಣಿಸಿದೆ.

ವಿದ್ಯಾನಂದಮುನಿಯು ತನ್ನ ಪಾಂಡಿತ್ಯದ ಮೂಲಕ ನಂಜರಾಯಪಟ್ಟಣ, ಶ್ರೀರಂಗನಗರ, ಸಾತವೇಂದ್ರರಾಜ, ಸಾಳ್ವಮಲ್ಲ, ಕಾರ್ಕಳದ ಭೈರರಸ, ಬಿದಿರೆ, ಕೃಷ್ಣದೇವರಾಯನ ಆಸ್ಥಾನದ ಪ್ರತಿವಾದಿಗಳನ್ನು ಗೆದ್ದನೆಂಬ ವಿಚಾರವನ್ನು ಹುಮ್ಮಚ ಗ್ರಾಮದ ಶಾಸನವೊಂದು[೧೧೩] ನಿರೂಪಿಸಿದೆ. ಈತನ ಪಾಂಡಿತ್ಯವನ್ನು ಶಾಸನವು ಹಲವಾರು ಕಂದಪದ್ಯಗಳ ಮೂಲಕ ಬಣ್ಣಿಸಿದೆ. ಈತನ "ಹೃದ್ಯೋಪನ್ಯಾಸವಾಣಿ ಧರೆಯೊಳು" ವಾದಿಗಜೇಂದ್ರರ ಭೇದ್ಯೋದ್ಧುರ ಸಿಂಹವಿರುತಿಯಂತೆ ವೋಲೆಸೆಗುಂ ಹಾಗೆಯೇ "ವಿದ್ಯಾನಂದ ಪ್ರತಿಪತಿ ಮುಖಜಾತವಾಣಿ"ಯು ವಿಬುಧರ ಮನದೊಳು" ಬ್ರತಿರಹಿತ ಕಾಂತರಚಿತ ಭಾಷ್ಯದ ತೆರದಿಂ ಸಂತತಂ ರಂಜಿಸುತ್ತಿರ್ಕ್ಕುಂ" ಎಂಬುದಾಗಿ ಬಣ್ಣಿಸಿರುವ

ಕವಿಯು ಈತನ ಉಪನ್ಯಾಸದ ವೈಖರಿಯು 'ಬಾಣನ ಗದ್ಯದಂತೆ' ಇತ್ತು ಎಂಬುದಾಗಿ ಈ ಕೆಳಗಿನ ಪದ್ಯದಲ್ಲಿ ನಿರೂಪಿಸಿದ್ದಾನೆ.

**ವಿದ್ಯಾನಂದಸ್ವಾಮ್ಯನ**
**ವದ್ಯೋಪನ್ಯಾಸ ಮುದ್ರೆ ಕವಿಗಳ ಮನದೊ**
**ಳ್ಸದ್ಯಂ ಸುಖಕರ ಬಾಣನ**
**ಗದ್ಯಾತ್ಮಕದಂತೆ ರಂಜಿಸಿತೋರ್ಕ್ಕುಂ**

ಶಾಸನಕವಿಗಳನ್ನು ಜೈನಯತಿಗಳ ವಿದ್ವತ್ತು, ಸಂಯಮಶೀಲತೆ, ವೈರಾಗ್ಯಪರತೆಯು ಸಹಜವಾಗಿ ಆಕರ್ಷಿಸಿದೆ. ಹೀಗಾಗಿ ಅವುಗಳ ಬಣ್ಣನೆಯನ್ನು ಮನಃಪೂರ್ವಕವಾಗಿ ಮಾಡಿದ್ದಾರೆ. ಜೊತೆಗೆ ವರ್ಣನೆಯ ಸಂದರ್ಭದಲ್ಲಿ ಪ್ರಕೃತಿಗೆ ಸಂಬಂಧಿಸಿದ ಉಪಮೆಗಳನ್ನೇ ಹೆಚ್ಚಾಗಿ ಬಳಸಿದ್ದಾರೆ ಎಂಬುದನ್ನು ಗಮನಿಸಬಹುದು.

**ಶೈವಯತಿಗಳು :-**

ಜೈನಧರ್ಮದಂತೆಯೇ ಕರ್ನಾಟಕದಲ್ಲಿ ಪ್ರಮುಖವಾದ ಮತ್ತೊಂದು ಧರ್ಮವೆಂದರೆ ಶೈವಧರ್ಮ. ಶೈವಧರ್ಮಕ್ಕೆ 'ಲಾಕುಳಸಮಯ'ವೆಂಬ ಹೆಸರಿದ್ದು ಮುಂದೆ ಅದನ್ನು 'ಪಾಶುಪತ ಸಮಯ'ವೆಂದು ಕರೆದಿರುವ ಸಾಧ್ಯತೆಯಿದೆ. ಈ ಲಾಕುಳ ಅಥವಾ ಪಾಶುಪತರಿಗೆ ಕಾಳಾಮುಖರೆಂಬ ಹೆಸರೂ ಇದೆ. ಈ ಕಾಳಾಮುಖರದು ಶುದ್ಧ ಸಾತ್ವಿಕಾಚರಣೆಗಳ ಪಂಥವಾಗಿದೆ. ಕರ್ನಾಟಕದಲ್ಲಿ ವೀರಶೈವಧರ್ಮದ ಉದಯಕ್ಕೆ ಮೊದಲು ಜೈನರನ್ನು ಬಿಟ್ಟರೆ ಶೈವಪಂಥವೇ ಹೆಚ್ಚು ಪ್ರಬಲವಾಗಿತ್ತು. ಶೈವಪಂಥದ ಯತಿಗಳು ಪ್ರಭಾವಶಾಲಿಗಳೂ, ರಾಜಪೂಜಿತರೂ, ತಪಸ್ವಿಗಳೂ, ವಿದ್ವತ್ ಪರಿಪೂರ್ಣರೂ, ಸಂಯಮಿಗಳೂ, ಆಗಿದ್ದರೆಂಬುದನ್ನು ಕನ್ನಡದ ಹಲವಾರು ಶಾಸನಗಳು ಬಣ್ಣಿಸಿವೆ.

ಶಿವಯೋಗಿ ನಂನೆಯದೇವರು "ಪ್ರಸಿದ್ಧ ಶಿವಧಂರ್ಮ ಪ್ರಾಭವೋದ್ಧಾರಕ'ರಾಗಿ ಸದಾಕಾಲ 'ಶಿವನ ಸೇವಾಸಕ್ತಿ'ಯಿಂದ ವರ್ತ್ತಿಸುತ್ತಿದ್ದರೆಂಬುದನ್ನು ದೇವನೂರಿನ ಶಾಸನವು[೧೧೪] ಈ ರೀತಿಯಾಗಿ ಬಣ್ಣಿಸುತ್ತದೆ.

**ಶಿವದಿಬ್ಯಾಕೃತಿಯಿಂದೆ ಕಂಣು ಶಿವಪಾದಾಬ್ಜಸ್ಪರ್ಷದಿಂದಂ ಕರಂ**
**ಶಿವಸೇವ್ಯಸ್ತುತಿಯಿಂದೆ ಜಿಹ್ವೆ ಶಿವತತ್ವಾಮೋದದಿಂ ಘ್ರಾಣಮಾ**
**ಶಿವನಾಮಾಮೃತಸೂಕ್ತಿಯಿಂದೆ ಕಿವಿ ನಿಚ್ಚಂ ಪ್ರೀತಿಯಂ ತಾಳ್ದು ತಾಂ**
**ಶಿವಮುಗ್ಧರು ಶಿವಯೋಗಿಗಳು ಶಿವನ ಸೇವಾಸಕ್ತಿಯಿಂ ವರ್ತ್ತಿಪರೂ ॥**

ಆ ಶಿವಯೋಗಿ ನಂನೆಯದೇವರ "ನಯನಂಗಳು ಕರುಣಾರಸಾರ್ದ್ರಮಧುರಂಗಳು ಮಾತುಗಳು ತತ್ವನಿಶ್ಚಯ ದೀಕ್ಷಾಗುರುಗಳು ವಿಶುದ್ಧಚರಿತಂಗಳ್ ಶೈವಯೋಗಿಶ್ವರಾನ್ವಯ ಚೂಡಾಮಣಿಗಳ ಪದಂಗಳವನೀಸೇಬ್ಯಂಗಳೆಂಬಂತೆ" ಇದ್ದವೆಂಬುದಾಗಿ ಕವಿಯು ಅಭಿಪ್ರಾಯಪಟ್ಟಿದ್ದಾನೆ.

ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಶಾಸನವು[೧೧೫] ಕೋಟಿನಾಥ ಅಥವಾ ಕೈಟಭೇಶ್ವರ ದೇವರ ಪಾದ ಪದ್ಮಾರಾಧಕರಾದ ರುದ್ರಶಕ್ತಿದೇವ ಮತ್ತು ಆತನ ತಮ್ಮನಾದ ಚಿಕ್ಕಸವ್ವೇಶ್ವರ ಶಕ್ತಿದೇವನ ನಿರ್ಮಲವಾದ ಚರಿತ್ರೆಯನ್ನು ಸೊಗಸಾಗಿ ಬಣ್ಣಿಸುತ್ತದೆ. ರುದ್ರಶಕ್ತಿ ದೇವನು ಕಾಮಕ್ರೋಧಾದಿ ಅರಿಷಡ್ವರ್ಗಗಳನ್ನು ಮೆಟ್ಟಿ ನಿಂತವನೆಂಬುದನ್ನು –

**ಕಾಮವನೇರ್ವ್ವಿಕ್ರೋಧಮನಡರ್ಪ್ಪಿಸಿಲೋಭಮನೆಯ್ದೆತೂ**
**ಳ್ದಿಮತ್ತಂಮುಳಿಸಿಂದೆ ಮೋಹದಳವಂಪೆಱಪಿಂಗಿಸಿಯುನ್ಮದಂಗಳಂ**
**ಸಾಮದಿನೂಂಕಿಮಾತ್ಸರ್ಯಮಂಬಿಡೆ ಪಾಱಿಸಿದಂನೆನಲ್ಕೆ ಮ**
**ತ್ತಾಮುನಿಪುಂಗವಂಗೆ ಹರಮೂರ್ತ್ತಿಗೆಯಾರ್ದ್ದೊರೆ ರುದ್ರಶಕ್ತಿಯೊಳು**

ಎಂಬ ಪದ್ಯವು ಸಹಜವಾಗಿ ನಿರೂಪಿಸಿದೆ. ಶಿವನಾದರೋ ಗಿರಿಜೆಯ ಸಂಗ, ಗಂಗೆಯ ಒಡನಾಟ, ಸದಾಕಾಲ ಮರುಳುಗಣಗಳ ಸಂಸರ್ಗ, ಕಪಾಲಹಸ್ತ, ರುಂಡಮಾಲೆಗಳಿಂದ ಕೂಡಿದವನಾಗಿ ಶೋಭಿಸುತ್ತಿದ್ದರೆ ಈ ರುದ್ರಶಕ್ತಿದೇವನಾದರೋ ಅವು ಯಾವುವೂ ಇಲ್ಲದೆ "ಶಂಭು, ಈಶ್ವರಮೂರ್ತಿ" ಎಂಬುದಾಗಿ ವಿಖ್ಯಾತನಾಗಿದ್ದನೆಂದು ಈ ಶಾಸನದ ಮತ್ತೊಂದು ಪದ್ಯವು ಈ ರೀತಿಯಾಗಿ ನಿರೂಪಿಸುತ್ತದೆ.

**ಗಿರಿಜೆಯ ಸಂಗವಿಲ್ಲದ ಮರುಂನದಿಯೊಳು ಸಮಸಲ್ಲದಾವಗಂ**
**ಮರುಳಗಣಂಗಳೊಳ್ಬೆರಸಿಯೊಡವೆಡಕವಾಳಹಸ್ತದೊ**
**ಳ್ದರಿಸದಱುಂಡಮಾಳೆಕೊರಳಲ್ಲಿ ನಿಸಿಲ್ಲದ ಶಂಭುವೆಂಬುದೀ**
**ಶ್ವರವರಮೂರ್ತ್ತಿಯಂಬುದು ಯತೀಂದ್ರನತಂದ್ರನರುದ್ರಶಕ್ತಿಯಂ ॥**

ರುದ್ರಶಕ್ತಿದೇವನ ತಮ್ಮನಾದ ಚಿಕ್ಕಸವ್ವೇಶ್ವರ ಯತಿಯಲ್ಲಿ "ಸಿಡಿಲಪೊಡರ್ಪ್ಪು ಉಗ್ರತರ ಮಾರಿಯಮಾಮಸಕ ಗಜಾರಿಯೊಳ್ ತೊಡದ ಪರಾಕ್ರಮಂ ತರಣಿಮಂಡಳದೆಡೆಯ ತೇಜರಾಶಿ ಲಯಕಾಲರುದ್ರನ ಉರುಮೂರ್ತ್ತತೆ ಭೈರವನಾಂತ ರೌದ್ರನೇರ್ಪ್ಪು" ನೆಲೆಗೊಂಡಿದ್ದವು. ಈತನು 'ಕಲಿಕಾಲರುದ್ರ'ನೆಂಬುದಾಗಿ ಪ್ರಸಿದ್ಧನಾಗಿದ್ದನೆಂದು ಶಾಸನವು ಬಣ್ಣಿಸಿದೆ.

ಶೈವಧರ್ಮದ ಯತಿಗಳು ಸಂಯಮಶೀಲರೂ ಆಗಿದ್ದರೆಂಬುದನ್ನು "ಸಿವಶಕ್ತಿದೇವನ" ಕುರಿತ ಪದ್ಯವು ಹೀಗೆ ವಿವರಿಸುತ್ತದೆ.

ಉಱದಾನ್ತೀಶಿವಸಕ್ತಿಯ

ಸೆಱೆಕೋಲಿಂಗಳ್ಕಿಮನ್ಮಥಂ ಸತಿಯರಕಿಕ್ಕಿಱೆ

ದಿಱ್ದ್ದಕುಚದ ಸಾರ್ಕ್ಕೆಯ

ಸೆಱೆಯೊಳಡಂಗಿದನಿದೇಂ ಕರವಿಸ್ಮಯಮೋ[೧೧೬]

ಮನ್ಮಥನಾದರೋ ಈ ಶಿವಶಕ್ತಿದೇವ "ಸೆಱೆಕೋಲಿಂಗಳ್ಕಿ"ದವನು ಸತಿಯರಲ್ಲಿ ಆಶ್ರಯವನ್ನು ಪಡೆದಿದ್ದನೆಂದು ಬಣ್ಣಿಸುತ್ತದೆ. ಶಿವಶಕ್ತಿಪಂಡಿತನೆಂಬುವನು "ಪಿರಿದುಂಶಮೆಯಿಂದಂ ಕರವರಿದೆನಿಪೊಂದು ತಪದಿನಾಗಮದಿಂದಂ ನಿರುತಂ ರಂಜಿಸುತಿರ್ದ್ದಂ" ಎಂಬುದಾಗಿ ಜಕ್ಕೇನಹಳ್ಳಿಯ ಶಾಸನವು[೧೧೭] ಬಣ್ಣಿಸಿದೆ.

ವಾಮಶಕ್ತಿದೇವನು ಅತ್ಯಂತ ಪ್ರಭಾವಶಾಲಿಯೂ ಹಾಗೂ ವಿದ್ವಾಂಸನೂ ಆಗಿದ್ದು, ಕೇದಾರೇಶ್ವರ ಮಠದ ಗುರುವಾಗಿದ್ದನು. ಈತನ ಪಾಂಡಿತ್ಯವನ್ನು ಹಾಗೂ ವ್ಯಕ್ತಿತ್ವವನ್ನು –

ವದನಂ ವಾಣೀ ನರ್ತ್ತನ

ಸದನಂ ನಿಜಹ್ರಿದಯಮಮಳಮಣಿಮಯ

ಸದನಂ ಮದನಹರಂಗೆನೆ

ಭೂತಳವಿದಿತಯಶಂ ವಾಮಶಕ್ತಿಪಣ್ಡಿತದೇವ [೧೧೮]

ಎಂಬುದಾಗಿ ಬಳ್ಳಿಗಾವೆಯ ಕೇದಾರೇಶ್ವರ ಮಠದ ಶಾಸನವು ಬಣ್ಣಿಸುತ್ತದೆ. ಈ ಕೇದಾರಮಠವು ಪ್ರಸಿದ್ಧವಾದ ವಿದ್ಯಾಕೇಂದ್ರವೂ ಆಗಿತ್ತು ಎಂದು ಶಾಸನಗಳು ಬಣ್ಣಿಸಿವೆ. ಶೈವಯತಿಗಳು ಕೇವಲ ವಿದ್ವತ್ತು, ತಪಸ್ಸುಗಳಿಗಷ್ಟೇ ಸೀಮಿತರಾಗಿದ್ದವರಲ್ಲ. ಸಾಮಾಜಿಕ ಚಟುವಟಿಕೆಗಳಾದ ಕೆರೆ ನಿರ್ಮಾಣ, ದೇವಾಲಯಗಳ ನಿರ್ಮಾಣದಲ್ಲೂ ಸಹ ಪಾಲ್ಗೊಳ್ಳುತ್ತಿದ್ದರೆಂಬುದನ್ನು 'ಧರ್ಮ್ಮರಾಸಿಯತಿ'ಯನ್ನು ಬಣ್ಣಿಸಿರುವ ಶಾಸನ[೧೧೯] ಪದ್ಯವು ಹೀಗೆ ನಿರೂಪಿಸಿದೆ.

ನೆಱೆತಪದೊಂದು ಪೆಂಪು ಗುಣದಾಗರಮೆಂಬುದಿದೊಂದು ಪೆಂಪುಪೇ

ರಱೆಕೆಯ ಕೀರ್ತ್ತಿಯಿಂ ಕೆಱೆಯ ಕಟ್ಟಿದ ಪೆಂಪು ಸುರೇಶಭಕ್ತಿಯಿಂ

ತಱೆಸಲವಿಂದೆ ದೇಗುಲಮನೆತ್ತಿದ ಪೆಂಪು ಸಮಸ್ತ ಧಾತ್ರಿಯೊ

ಳ್ಪೆರರನದೇಕೆ ಪೇಳ್ವೊರ್ಗ್ಗದಪ್ಪೈ ಪೊಗಳಿಂ ಸಲೆ ಧರ್ಮ್ಮರಾಸಿಯಂ ॥

**ವೀರಶೈವಯತಿ :-**

ವೀರಶೈವಧರ್ಮದಲ್ಲಿ ಬಂದ ಪ್ರಮುಖಯತಿಗಳಲ್ಲಿ ತೋಂಟದ ಸಿದ್ಧಲಿಂಗಯತಿಯು ನಾಗಣೀ ನದಿಯ ತೀರದ ತೋಟದಲ್ಲಿ ಶಿವಯೋಗದಲ್ಲಿದ್ದವನು. ಎಡೆಯೂರಿನಲ್ಲಿ ಸಮಾಧಿ ಹೊಂದಿದವನು. ಏಳುನೂರು ವಿರಕ್ತರ ನಾಯಕನಾಗಿ ವೀರಶೈವ ಧರ್ಮವನ್ನು ತುಂಗಭದ್ರಾನದಿಯ ದಕ್ಷಿಣದೇಶದಲ್ಲಿ ಪ್ರಸಿದ್ಧಗೊಳಿಸಿದವನು. ಶೂನ್ಯಸಿಂಹಾಸನದ ೧೯ನೆಯ ಅಧಿಕಾರಿಯಾಗಿ ಪಟ್ಟವೇರಿದ ಈತನ ಉನ್ನತ ಚರಿತ್ರೆ ಮತ್ತು ಉಜ್ವಲ ಚಾರಿತ್ರ್ಯವು ಶಾಸನಗಳಲ್ಲಿಯೂ ಸಹ ನಿರೂಪಿತವಾಗಿದೆ. ಬಸವಾದಿ ಪ್ರಮಥರ ನಂತರದಲ್ಲಿ ವೀರಶೈವಧರ್ಮವನ್ನು ಎತ್ತಿಹಿಡಿದ ಈತನು ಎಡೆಯೂರನ್ನು ಕೇಂದ್ರವಾಗಿರಿಕೊಂಡು ಆ ಧರ್ಮವನ್ನು ಸಂಘಟಿಸಿದನು. ವಿಜಯನಗರ ವಂಶದ ಸಾಳುವ ಅರಸರ ಕಾಲದಲ್ಲಿ ವೈಷ್ಣವಮತವು ರಾಜಾಶ್ರಯವನ್ನು ಪಡೆದಾಗ, ವೀರಶೈವವು ಸಹಜವಾಗಿ ಆಸ್ಥಾನದಿಂದ ದೂರ ಉಳಿಯಬೇಕಾಯಿತು. ಅಂತಹ ಸಮಯದಲ್ಲಿ ಎಡೆಯೂರಿನಲ್ಲಿ ವೀರಶೈವವನ್ನು ಸಂಘಟಿಸಿದವರು ತೋಂಟದ ಸಿದ್ಧಲಿಂಗಯತಿಗಳು. ಆದ್ದರಿಂದ ಇವರನ್ನು 'ವೀರಶೈವ'ವ್ಯಾಸರಾಯರು'[೧೨೦] ಎಂಬುದಾಗಿ ವಿದ್ವಾಂಸರು ಗುರುತಿಸಿದ್ದಾರೆ. ಎಡೆಯೂರು ಮಠದ ಆವರಣದಲ್ಲಿರುವ ಶಾಸನವು ಈ ಶಿವಯೋಗಿಯ ದೈವೀವ್ಯಕ್ತಿತ್ವವನ್ನು ಸುದೀರ್ಘವಾಗಿ ನಿರೂಪಿಸಿದೆ.[೧೨೧] ಆ ಸಿದ್ಧಲಿಂಗೇಶ್ವರನು ವೀರಶೈವ ತತ್ವಗಳನ್ನು ಅರಗಿಸಿಕೊಂಡು ಧರ್ಮವೇ ದೇಹಧರಿಸಿ ಬಂದಂತೆ ಶೋಭಿಸುತ್ತಿದ್ದವನು. ಆ ಸಿದ್ಧಲಿಂಗಯತಿಗಳ ವ್ಯೋಮಸದೃಶವ್ಯಕ್ತಿತ್ವವನ್ನು ಶಾಸನವು ಈ ರೀತಿಯಾಗಿ ಅಭಿವ್ಯಕ್ತಿಗೊಳಿಸಿದೆ.

**"ಆ ಸಿದ್ಧಲಿಂಗೇಶ್ವರನ ಮೂರ್ತ್ತಿಕ್ರಮವೆಂತೆಂದಡೆ ಪ್ರಣವವೆ ಸಿರಸು, ನಮಸ್ಕಾರವೇ ಭುಜ, ಶಿಕಾರವೇ ದೇಹ, ವಯಷ್ಕಾರವೇ ಪಾದ, ಅನಂತಕೋಟಿಬ್ರಹ್ಮಾಂಡಗಳೇ ಮಕುಟ, ಸಮಸ್ತ ಲೋಕಂಗಳೇ ದೇಹದ ಜಳವಳೆಯ, ಆಕಾಶವೇ ಮುಖ, ದಶದಿಕ್ಕುಗಳೇ ತೋಳು, ಚಂದ್ರಸೂರ್ಯ್ಯಾದಿಗಳೇ ನಯನ, ಪಾತಾಳವೇ ಹೆದೆ, ಮೇಘಂಗಳೇ ಜಟಾಬಂಧ, ಆ ಜಟಾಬಂಧದಲ್ಲಿ ಶೂನ್ಯಲಿಂಗ, ವೇದಪುರಾಣಂಗಳೇ ಕ್ರೀ, ನಕ್ಷತ್ರಂಗಳೇ ಪುಷ್ಪ, ಚಂದ್ರಪ್ರಕಾಶವೇ ವಿಭೂತಿ, ಅಷ್ಟಕುಲ ಪರ್ವ್ವತಂಗಳೇ ರುದ್ರಾಕ್ಷೆ, ಸಪ್ತಸಮುದ್ರಂಗಳೇ ಕಮಂಡಲ, ಭುವನಸ್ರುಷ್ಟಿಏಕಂತೆ, ದಿವಾರಾತ್ರಿಗಳೇ ಮಠ, ಷಡುರುತುಗಳೇ ಷಡುಸ್ಥಲ, ಮಹಾಸೇಷನೇ ಕಟಸೂತ್ರ, ಪರಿಪೂರ್ನ್ನ ಜ್ಞಾನವೇ ಪಂಚಮುದ್ರೆ, ತ್ರಿಕಾಲಜ್ಞಾನವೇ ಮಹದೈಶ್ವರ್ಯ, ಮಹಾಮೇರುವೇ ದಂಡ, ಸದ್ಗುಣವೇ ಕರ್ಪರ, ಕುಲವೆ ಶಿವಕುಲ"**ವೆಂಬುದಾಗಿ ಇದ್ದ 'ಅನಾದಿಜಂಗಮ'ನು ಜಗಹಿತಾರ್ತ್ಥವಾಗಿ ಚರಿಸಿದನೆಂಬುದಾಗಿ ಶಾಸನವು ನಿರೂಪಿಸುತ್ತದೆ. ಈತನು "ಜ್ಞಾನಕ್ರಿಯಾಸ್ವರೂಪನು ಸರ್ವಾಂಗಲಿಂಗಿ ಷಟ್ಸ್ಥಲಗ್ನಾನಿ ಸರ್ವಾಚಾರಸಂಪನ್ನ ಪಾದೋದಕ ಪ್ರಸಾದ ಪ್ರತಿಷ್ಠಾಚಾರ್ಯರು ಅಷ್ಟಾವರಣಾಲಂಕರಣ ದ್ವೈತಾದ್ವೈತತಿಮಿರ ಮಾರ್ತ್ತಂಡ"ವೆಂಬುದಾಗಿ

ವರ್ಣಿಸಿರುವ ಶಾಸನವು ಗದ್ಯದಲ್ಲಿ ವೀರಶೈವ ಪಾರಿಭಾಷಿಕ ಪದಗಳನ್ನು ಬಳಸಿ ಸಿದ್ಧಲಿಂಗಯತಿಯ ಗುಣಗಾನವನ್ನು ಮಾಡಿದೆ.

**ವೈದಿಕಧರ್ಮಯತಿಗಳು :-**

ವೈದಿಕ ಧರ್ಮದಲ್ಲಿ ಪ್ರಸಿದ್ಧರಾಗಿದ್ದ ನಾಗವರ್ಮಾಚಾರ್ಯನೆಂಬುವನು ಅದ್ವೈತಿಯೂ ದೊಡ್ಡಪಂಡಿತನೂ ಆಗಿದ್ದವನು. ಈತನನ್ನು ಬಳ್ಳಿಗಾವೆಯ ಶಾಸನವು[೧೨೨] "ಶ್ರೀಮನ್ಮುಕ್ತಿವಧೂಲೀಲಾಮಂಗಳತಿಳಕನ್, ಅದ್ವಯಮಹಿಮೋದ್ಧಾಮಂ ವಿದ್ಯಾಮೂರ್ತಿಜಿತಾತ್ಮನ್" ಎಂದು ಬಣ್ಣಿಸಿದೆ. ಈತನಿಗೆ 'ಗುಣಗಳ್ಳ'ನೆಂಬ ಬಿರುದು ಇತ್ತು ಮತ್ತು ಈತನು ನುಡಿದಂತೆ ನಡೆಯುವವನೆಂದು –

**ನುಡಿವ ತತ್ವದ ಮಾತಂ ಬಿಡಲಾರನೇನುಮಂ ।**

**ನುಡಿವಳಿಯಂತೆ ನಡೆವಳಿಯೆನಿಸಿದಂ ।**

**ನುಡಿದಂತೆ ಗಂಡಂ ಗುಣಗಳ್ಳ ॥**

ಎಂಬುದಾಗಿ ತ್ರಿಪದಿಯಲ್ಲಿ ಬಣ್ಣಿಸಿದೆ. ಈ ನಾಗವರ್ಮಾಚಾರ್ಯನು ಕವಿಯಾಗಿರಬಹುದೆಂದೂ, 'ಚಂದ್ರಚೂಡಾಮಣಿಶತಕ'ವನ್ನು ಬರೆದಿದ್ದಾನೆ ಎಂಬುದಾಗಿ ಕವಿಚರಿತೆಕಾರರು ಊಹಿಸಿದ್ದಾರೆ.[೧೨೩]

ಅಚಳಪ್ರಕಾಶ ಮುನಿಯೆಂಬುವನು ಹೊಯ್ಸಳರ ಇಮ್ಮಡಿ ಬಲ್ಲಾಳನ ಮತ್ತು ಇಮ್ಮಡಿ ನರಸಿಂಹನ ರಾಜಗುರುವಾಗಿದ್ದವನು. ಈತನ ವಿದ್ವತ್ತನ್ನು ಕುರಿತ ದೀರ್ಘವರ್ಣನೆಯು ಶಾಂತಿಗ್ರಾಮದ ೧೨೪ ಶಾಸನದಲ್ಲಿ ಬಂದಿದೆ. ಈ ಅಚಳಪ್ರಕಾಶನು ಪರಮಹಂಸನ ಶಿಷ್ಯನು. ಅಚಳಪ್ರಕಾಶನಾದರೋ "ಅನೇಕ ವೇದ ವೇದಾಂತಶಾಸ್ತ್ರತರ್ಕತಂತ್ರವ್ಯಾಕರಣಸ್ಮೃತಿ ಪುರಾಣ, ಕಾವ್ಯ ನಾಟಕ ಭರತ ವಾತ್ಸ್ಯಾಯನಚ್ಛಂದೋಳಂಕಾರಕಳಾಕೋವಿದ"ನೂ "ಹಿರಣ್ಯಗರ್ಭ ಕಾಪಿಳಪಾತಂಜಳಾದ್ಯನೇಕ ಯೋಗ ಯೋಗಾಂಗ ಪಾರಂಗತ"ನೂ ಆಗಿದ್ದವನು. ಈತನ ಅಷ್ಟಾಂಗಯೋಗ ರಾಜ್ಯವು "ಧರಣೀನಾಥರ ಸಪ್ತಾಂಗರಾಜ್ಯಮನ್ ಊನಾಂಗಮೆಂದು" ಏಳಿಸಿ ನಗುತ್ತಿತ್ತಂತೆ. ಈತನ ವಿದ್ವತ್ ಪ್ರೌಢಿಮೆಯನ್ನು –

**ಸಮೆಯಂಗಳ್ಕರಮವುಕ್ತಿಕಕ್ಕೆ ಸಮನೆಲ್ಲಂ ಮಂತ್ರದೊಳೆತಂತ್ರದೊ**

**ಳ್ಸಮ ಸಂದೊಪ್ಪುವ ಯಂತ್ರದೊಳು ಗಣಿತದೊಳು ಗಾಂಧರ್ವ್ವದೊಳು ಮ**

**ನುಮಥಾಗಮದೊಳು ವಾಸ್ತುವಿನೊಳು ಭಿಷಗ್ವಿಷಯದೊಳು ಸಾಹಿತ್ಯದೊಳು ನಾಟಕ**

**ಕ್ರಮದೊಳು ಸಂದಚಳಪ್ರಕಾಶನೆ ವಲಂಬಲ್ಲಂ ಪೆಱರ್ಬ್ಬಲ್ಲರೇ**

ಎಂಬುದಾಗಿ ಬಣ್ಣಿಸಿದೆ. ಹಾಗೆಯೇ ಈತನು "ಯಮ ನಿಯಮಗಳಿಂದ ಪವಿತ್ರಕೃತಗಾತ್ರೇಂದ್ರಿಯನೂ, ಪದ್ಮಸ್ವಸ್ತಿಕಾದಿ ಆಸನದಿಂದ ಜಿತಕಾಯ ಪರಿಶ್ರಮನೂ, ಪ್ರಾಣಾಯಾಮದಿಂದ ಅರಿವಿಜಯಿಯೂ, ಪ್ರತ್ಯಾಹಾರದಿಂದ ನಿಯಮಿತಕರಣಗ್ರಾಮನೂ, ಧಾರಣಶಕ್ತಿಯಿಂದ ವಿಜಿತಭೂತಗ್ರಾಮನೂ, ಧ್ಯಾನದಿಂದ ಪರಿನಿಶ್ಚಿತ ಧ್ಯೇಯನೂ, ಸಮಾಧಿಯಿಂದ ಸರ್ವಾತ್ಮೈಕತ್ವ ತತ್ವನೂ" ಎನಿಸಿ ಪ್ರಸಿದ್ಧನಾದವನೆಂಬುದಾಗಿ ಬಣ್ಣಿಸಿರುವ ಶಾಸನವು

**ಮುದದಿನಚಳಪ್ರಕಾಶರ**
**ಪದಿನಾಲ್ಕು ವಿದ್ದೆಯೆಸಕಮಂ ಸ್ತುತಿಯಿಸಲೀ**
**ಪದಿನಾಲ್ಕುಂ ಲೋಕಮನಾ**
**ಬಿದಿಮುನ್ನಮೆ ಬಗೆದು ಮಾಡಿ ಚದುರಂ ಪಡೆದಂ ॥**

ಎಂಬ ಪದ್ಯವು "ಸೃಷ್ಟಿಕರ್ತನಾದ ಬ್ರಹ್ಮನು ಹದಿನಾಲ್ಕು ಲೋಕಗಳನ್ನು ಈತನ ಹಲವಾರು ವಿದ್ಯೆಯನ್ನು ಬಣ್ಣಿಸಲು ಈ ಮೊದಲೇ ಸೃಷ್ಟಿಸಿದನೆಂದು" ಅತಿಶಯವಾಗಿ ಬಣ್ಣಿಸಿದೆ.

### ೪.೮ : ಮಹಾಜನರು – ವಿಪ್ರರು – ಕೊಯ್ಲಾಳರು :–

ಸಮಾಜದ ವಿವಿಧ ವರ್ಗಗಳನ್ನು ಪರಿಚಯಿಸುವ ಪ್ರಯತ್ನವನ್ನು ಶಾಸನಗಳು ಮಾಡುತ್ತವೆ. ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಶಾಸನವು[೧೨೫] ಅಲ್ಲಿಯ ನಗರ ಜನಗಳ ಗುಣಗಳನ್ನು ಈ ರೀತಿಯಾಗಿ ಬಣ್ಣಿಸುತ್ತದೆ. ಆ ನಗರದ ಜನರಾದರೋ "ಪರಹಿತರ್ ಏಕವಾಕ್ಯರ್ ಅಜಿವಿಂಗೆ ತವರ್ಮ್ಮನೆ ಧರ್ಮ್ಮದ ಆಗರಂ ಸರಸಕವೀಶ್ವರಾವಳಿಗೆ ಕೇಳಿಗೃಹಂ" ಎನಿಸಿದವರು. ಇಲ್ಲಿಯ ಮಹಾಜನರು –

**ಸುರಪತಿಯನ್ತೆ ಸರ್ವ್ವವಿಬುಧಾಶ್ರಯರಿಂದ್ರಗಜೇಂದ್ರದನ್ತೆ ಭಾ**
**ಸುರತರದಾನಸಂಪದಧಿಕೋನ್ನತರಿನ್ದುವಿನನ್ತೆ ಸತ್ಕಳಾ**
**ಧರರಹಿರಾಜನನ್ತೆ ನಿಖಿಳಕ್ಷಮೆಗಾಸ್ಪದರೆನ್ದೊಡೀಗಳಾ**
**ದ್ದೋರೆಯರೊ ಬಳ್ಳಿಗಾವೆ ಮಹಾನಗರಂಗಳೊಳೀಧರಿತ್ರಿಯೊಳ್ ॥**

ಎಂದು ಪ್ರಸಿದ್ಧರಾಗಿದ್ದವರು.

ಷಟ್ಕರ್ಮನಿರತರಾದ ವಿಪ್ರರನ್ನು ತಳಲೂರಿನ ಶಾಸನವು[೧೨೬] "ಚತುರಾಸ್ಯಾಸ್ಯದೊಳಿರ್ದ್ದ

ವಾಕ್ಸತಿಕರಂ ಪ್ರತ್ಯಕ್ಷಮಾಗಿರ್ಪ್ಪವೋಲ್ ಶೃತಿನಾಲ್ಕುಂ ಪಲವುಂ ಸುಶಾಸ್ತ್ರಮನಿತುಂ ಸದ್ವಿಪ್ರರಾಸ್ಯಾದ್ದೊಳ್ ಸತತಂ ವಾಕ್ಸತಿಮೂರ್ತ್ತಿ ಗೊಂಡ ತೆಱದಿಂ" ಪ್ರಸಿದ್ಧರಾದವರೆಂದು ಬಣ್ಣಿಸುತ್ತದೆ. ಮಧುಸೂದನಪುರದ ಬ್ರಾಹ್ಮಣರಾದರೋ –

**ಸರಸಿಜಭವನಿಭವಿದ್ಯಾ**
**ಪರಿಣತರಧಿಕಪ್ರಭಾವಪಟ್ಕರ್ಮರತರ್**
**ನಿರವದ್ಯರ್ಮ್ಮಧುಸೂದನ**
**ಪುರದಧರಾಮರರತರ್ಕ್ಯ ಗುಣಗಳ ನಿಳಯರ್**[೧೨೭]

ಎಂಬುದಾಗಿ ವರ್ಣಿತರಾಗಿದ್ದಾರೆ. ಶ್ರುತಿ, ಸ್ಮೃತಿ, ಶಾಸ್ತ್ರ, ಪುರಾಣಗಳಲ್ಲಿ ಪರಿಣತರಾಗಿದ್ದ ಕೆಲ್ಲಂಗೆರೆಯ ವಿಪ್ರರ ಪದ್ಮಸುಸದ್ಮದಲ್ಲಿ "ವಾಕುಸತಿಸರಸಿಜಗರ್ಭಮುಖಪದ್ಮಸುಸದ್ಮವನೊಲ್ಲದಿಲ್ಲಿ ಸುಸ್ಥಿತಿವೆರಸಿಪ್ಪಳು" ಎಂಬುದಾಗಿ ಶಾಸನವು[೧೨೮] ಬಣ್ಣಿಸುತ್ತದೆ.

ವ್ಯಾಪಕವಾದ ಎಲೆ ವ್ಯವಸಾಯಕ್ಕೆ ಕರ್ನಾಟಕವು ಅತ್ಯಂತ ಪ್ರಸಿದ್ಧವಾಗಿತ್ತು. ಎಲೆಯ ಬೋಜಂಗರು ಅಥವಾ ಐನೂರನಾಲ್ವರು, ಎಲೆದೋಟದ ಒಡೆಯರಾದರೆ, ಉಗುರ ಮೂನೂರ್ವರು, ಉಳಿಯ ಮೂನೂರ್ವರು, ಕೊಯ್ಲಾಳಿಗಳು ಎಲೆ ಕೊಯ್ಯುವ ಕೆಲಸ ಮಾಡುವ ಆಳುಗಳು. ಇಂತಹ ಕೊಯ್ಲಾಳರ ಗುಣಗಾನವನ್ನು ಸೊಗಸಾದ ರೂಪಕಗಳಿಂದ ಹೊಗಳಿದೆ.[೧೨೯]

**ಸ್ಥಿರರೇಮೇರುಗೆ ಸಂನಿಭರ್ಗ್ಗುಣಿಗಳೇಧರ್ಮ್ಮಾತ್ಮಜಪ್ರಖ್ಯರೀ**
**ವರೆಮಿತ್ರಾತ್ಮಜಪಾಟಿಗಳ್ ಕಲಿಗಳೇ ದೇವೇಂದ್ರಪುತ್ರಂಗವ**
**ರ್ದ್ದೊರೆಗಳ್ ಶೌಚಿಗಳೇ ನದೀಜನೆಸಮಂಗುಣ್ಪುಳ್ಳರೇ ಸಾ**
**ಗರಂ ನಿರುತಂ ಪಾಸಟಿಯೆಂದೊಡೇ ವೊಗಳ್ವುದೋ ಕೊಯ್ಲಾಳ್ಗಳೊಂದಂದವಂ ॥**

## ೪.೯ : ಸ್ತ್ರೀಯರು :–

ಸ್ತ್ರೀಯರನ್ನು ಬಣ್ಣಿಸಿರುವ ಶಾಸನಪದ್ಯಗಳು ಹಾಗೂ ಶಾಸನದ ಭಾಗಗಳು ಸಾಕಷ್ಟು ಪ್ರಮಾಣದಲ್ಲಿ ಇವೆ. ಆದರೆ ಈ ವರ್ಣನೆಗಳಲ್ಲಿ ವೈವಿಧ್ಯತೆಗಿಂತ ಹೆಚ್ಚಾಗಿ ಏಕತಾನತೆ ಕಂಡುಬಂದಿದೆ. ಅದರಲ್ಲೂ ಹೆಣ್ಣಿನ ಸೌಂದರ್ಯವನ್ನು ಬಣ್ಣಿಸಿರುವ ಪದ್ಯಭಾಗಗಳಲ್ಲಿ ಆ ಶಾಸನದಲ್ಲಿ ಬರುವ ಸ್ತ್ರೀಯ ಹೆಸರನ್ನು ಹೊರತುಪಡಿಸಿದರೆ ಉಳಿದ ವರ್ಣನೆಗಳೆಲ್ಲಾ ಹೆಚ್ಚುಕಡಿಮೆ ಒಂದೇ ರೀತಿಯಾಗಿರುತ್ತವೆ ಎಂಬುದನ್ನು ಗಮನಿಸಬಹುದು. ಸ್ತ್ರೀಯರ ರೂಪವರ್ಣನೆಯ ಅಲಂಕಾರ ಸಾಮಗ್ರಿಯಂತೂ ಒಂದೇ ಮಾದರಿಯಾಗಿರುವುದು ವಿಲಕ್ಷಣವಾದ ಸಂಗತಿಯಾಗಿದೆ. ಉದಾಹರಣೆಗೆ ಈ ಕೆಳಗಿನ ಪದ್ಯಗಳನ್ನು ಗಮನಿಸಬಹುದು.

ಹರಿಣೀಲೋಚನೆ ಪಂಕಜಾನನೆ ಘನಶ್ರೋಣೀಸ್ತನಾಭೋಗಭಾ
ಸುರೆಬಿಂಬಾಧರೆ ಕೋಕಿಳಸ್ವನೆ ಸುಗಂಧಶ್ವಾಸೆ ಚಂಚತ್ತನೂ
ದರಿಭೃಂಗಾವಳಿನೀಳಕೇಶೆ ಕಳಹಂಸೀಯಾನೆಯೀಕಂಬುಕಂ
ಧರೆಯಪ್ಪಾಚಲದೇವಿ ಕಂತುಸತಿಯಂ ಸೌಂದರ್ಯ್ಯದಿಂದೇಳಿಪಳ್[೧೩೦]

ಪೊಳವಲರ್ಗ್ಗಂಗಳೊಪ್ಪೆ ನಳಿತೋಳುಗಳ ಭಾವಮವೊಪ್ಪೆ ಕೋಮಳಾಂ
ಗುಳಿ(ಗ)ನಖವೊಪ್ಪೆ ದಂನ್ತನಿಕರುಗಳರೋಚಿಗಳೊಪ್ಪೆ ಜಂಘೆಯುಂ
ಸೆಳೆನಡುವುಂ ನಿತಂಬಮಮರ್ದ್ದೊಪ್ಪಿರೆ ದಣ್ಣಲದೇವಿವೊಪ್ಪುತಂ
ಸುಳಿವಳಪೂರ್ವ್ವರೂಪೆಯೆನೆ ಕೇಶವದೇವನ ಲಕ್ಷ್ಮಿಲೀಲೆಯಿಂ[೧೩೧]

ಈ ರೀತಿಯಾದ ವರ್ಣನೆಯನ್ನು ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ರಾಜಲದೇವಿ[೧೩೨], ಲಕ್ಷ್ಮೀಮತಿ[೧೩೩], ಕಾಳವ್ವೆ[೧೩೪] ಮೊದಲಾದವರನ್ನು ಬಣ್ಣಿಸಿರುವ ಪದ್ಯಗಳಲ್ಲಿ ಕಾಣಬಹುದಾಗಿದೆ.

ಹಾಗೆಯೇ ಶಾಸನಗಳಲ್ಲಿ ಉಲ್ಲೇಖಿತರಾಗಿರುವ ಸ್ತ್ರೀಯರನ್ನು ಪುರಾಣಪಾತ್ರಗಳೊಂದಿಗೆ ಹೋಲಿಸಿ ಬಣ್ಣಿಸಿರುವ ಅಸಂಖ್ಯಾತ ಉದಾಹರಣೆಗಳನ್ನು ಗಮನಿಸಬಹುದು. ಹೊಯ್ಸಳ ದೊರೆ ವಿಷ್ಣುವರ್ಧನನ ಹೆಂಡತಿಯಾದ ಲಕ್ಷ್ಮಲದೇವಿಯನ್ನು ಬಣ್ಣಿಸಿರುವ ಈ ಪದ್ಯವನ್ನು ಗಮನಿಸಬಹುದು.

ಧರಣಿಜೆಗಾದಧೈರ್ಯ್ಯಧರೆಗಾದ ನೆಗರ್ತ್ತೆಯಪೆಂಪುಪಾರ್ವ್ವತೀ
ವರವಧುಗಾದರೂಪುಸೊಗಯಿಪ್ಪ ಮಹಾನದಿಗಾದನಿರ್ಮ್ಮಳಂ
ಸುರತರುಗಾದುದಾರತೆ ಸರಸ್ವತಿಗಾದ ಸುವಾಣಿ ವಿಷ್ಣುಭೂ
ವರನ ಮಹಾನುಭಾವೆ ಸತಿ ಸಂನುತೆ ಲಕ್ಷ್ಮಲದೇವಿ ನಲ್ಮೆಯಿಂ[೧೩೫]

ವೀರಬಲ್ಲಾಳನ ಹೆಂಡತಿಯಾದ ಪದ್ಮಲದೇವಿಯನ್ನು

ರತಿಗಮರುಂಧತಿಗಂಸರ
ಸ್ವತಿಗಂರೇವತಿಗಮೆಸೆವ ಪಾರ್ವ್ವತಿಗಂ ಶ್ರೀ
ಸತಿಗಂ ಸಮನೆನಿಸಿ ಮಹಾ
ಸತಿಪದ್ಮಲದೇವಿ ತೊಳಗಿ ಬೆಳಗಿದಳಳೆಳೆಯಂ[೧೩೬]

ಎಂಬುದಾಗಿ ಬಣ್ಣಿಸಿದೆ. ರತಿ, ಅರುಂಧತಿ, ಸರಸ್ವತಿ, ರೇವತಿ, ಪಾರ್ವತಿ ಮೊದಲಾದ ಪುರಾಣದ ಪಾತ್ರಗಳನ್ನು ಶಾಸನಗಳು ಸ್ತ್ರೀಯರನ್ನು ಬಣ್ಣಿಸುವಾಗ ಹೆಚ್ಚಾಗಿ ಬಳಸಿಕೊಂಡಿವೆ ಎನ್ನಬಹುದು. ಈ ರೀತಿಯಾದ ಬಣ್ಣನೆಯ ಪದ್ಯಗಳನ್ನು ಸಂಧಿವಿಗ್ರಹಿ ಕೇಶಿರಾಜನ ಹೆಂಡತಿ ಮಹದೇವಿ[೧೩೭], ಸೋಮಲದೇವಿರಾಣಿ[೧೩೮], ದೇಕಣವೆ[೧೩೯], ಅರಸಿಯಕ್ಕ[೧೪೦], ಗಂಗರಸಿ[೧೪೧], ಚಾಗಲದೇವಿ[೧೪೨],

ಚಂದಲದೇವಿ[೧೪೩] ಮೊದಲಾದವರ ಸಂದರ್ಭದಲ್ಲೂ ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಬಂದಿರುವುದನ್ನು ಕಾಣಬಹುದಾಗಿದೆ.

ಸ್ತ್ರೀಯರ ಗುಣಾವಳಿಯನ್ನು ಪಟ್ಟಿಮಾಡುವ ರೀತಿಯಲ್ಲಿ ಒಂದಷ್ಟು ಪದ್ಯಗಳು ರಚನೆಗೊಂಡಿವೆ. ಉದಾಹರಣೆಗೆ ವೀರಸಾನ್ತರದೇವನ ಹೆಂಡತಿಯಾದ ಚಾಗಲದೇವಿಯನ್ನು ಬಣ್ಣಿಸಿರುವ –

**ಗುಣದೊಳ್ ರೂಪಿನೊಳೊಳ್ಪಿನೊಳ್ ಸುಬಗಿನೊಳ್ ಶೃಂಗಾರದೊಳ್ ಸೌಮ್ಯಲ**
**ಕ್ಷಣದೊಳ್ ಮೈಮೆಯೊಳೋಜೆಯೊಳ್ ವಿಭವದೊಳ್ ಶೀಲಂಗಳೋಳ್ ಭೃತ್ಯಪೋ**
**ಷಣದೊಳ್ ಭೋಗದೊಳಾರ್ಪಿನೊಳ್ ವಿಭುತೆಯೊಳ್ ಕಾರುಣ್ಯದೊಳ್ ಪೋಲಿಸಲ್**
**ಕೆಣೆಯಾರ್ಗ್ಗೆಲ್ಲ ಬೆಡಂಗಿಗೆಂದನುದಿನಂ ವಿದ್ವಜ್ಜನಂ ಬಣ್ನಿಕುಂ**[೧೪೪]

ಪದ್ಯವನ್ನು ಗಮನಿಸಬಹುದು. ಇದೇ ರೀತಿಯಾಗಿ ಕಾಳವೆಗೌಂಡಿ[೧೪೫], ಮುದ್ದಲೆ[೧೪೬], ಭವ್ಯಕಬ್ಬೆ[೧೪೭], ಅರಸವ್ವೆ ನಾಯಕಿತಿ[೧೪೮] ಮೊದಲಾದವರ ಬಣ್ಣನೆಗಳನ್ನು ಉದಾಹರಿಸಬಹುದಾಗಿದೆ.

ಪುರಾಣ ಪಾತ್ರಗಳ ಜೊತೆಗೆ ಸ್ತ್ರೀಯರನ್ನು ಹೋಲಿಸಿ ವರ್ಣಿಸಿರುವ ಶಾಸನಗಳ ಹಾಗೆಯೇ ಕೆಲವು ಶಾಸನಗಳಲ್ಲಿ 'ಅತ್ತಿಮಬ್ಬೆ'ಯ ಜೊತೆಗೆ ಹೋಲಿಸಿರುವುದನ್ನು ಸಹ ಕಾಣಬಹುದು. ಈ ಅತ್ತಿಮಬ್ಬೆಯು ರನ್ನಕವಿಯ ಆಶ್ರಯದಾತಳಷ್ಟೇ ಅಲ್ಲ. ರನ್ನನು ಉದ್ದಾಮ ಕವಿಯಾಗಲು ಪ್ರೇರಣೆಯಾದವಳು. ಅತ್ತಿಮಬ್ಬೆಯು ಸನ್ಯಾಸದ ನಿಷ್ಠುರ ನಿಯಮಗಳನ್ನು ಪಾಲಿಸಿದವಳು. ಆದರ್ಶದ ಬದುಕನ್ನು ಬಾಳಿದವಳು ಅತ್ತಿಮಬ್ಬೆ. ಈ ಅತ್ತಿಮಬ್ಬೆಯ ಭವ್ಯವ್ಯಕ್ತಿತ್ವವನ್ನು ರನ್ನಕವಿಯು ತನ್ನ "ಅಜಿತತೀರ್ಥಂಕರ ಪುರಾಣ ತಿಲಕಂ" ಅಥವಾ "ಅಜಿತಪುರಾಣ"ದಲ್ಲಿ ಮನದುಂಬಿ ಬಣ್ಣಿಸಿದ್ದಾನೆ. "ಅತ್ತಿಮಬ್ಬೆಯನ್ನು ರನ್ನಕವಿಯು "ಕವಿವರಕಾಮಧೇನು", "ತೀರ್ಥಕರಜನನಿ", ಜಿನಶಾಸನದೀಪಕೆ ಎಂಬುದಾಗಿ ಬಣ್ಣಿಸಿದ್ದಾನೆ."[೧೪೯] ಅತ್ತಿಮಬ್ಬೆಯು ತನ್ನ ಜನರ ಕಣ್ಣಲ್ಲೇ ಅದ್ಭುತ ವ್ಯಕ್ತಿಯಾಗಿ ಯಕ್ಷಿ ಮತ್ತು ಜಿನಜನನಿಯರಿಗೆ ಸಮಾನವಾಗಿದ್ದಳು. "ಅಜಿತಪುರಾಣ ಮತ್ತು ಲಕ್ಕುಂಡಿ ಶಾಸನದಲ್ಲಿ ಈಕೆ ಶ್ರಾವಕಿಯರಿಗೆ, ಯಕ್ಷಿಯರಿಗೆ, ಜಿನಜನನಿಯರಿಗೆ ಮತ್ತು ಪುರಾಣ ವ್ಯಕ್ತಿಗಳಿಗೆ ಸಮಾನೆಯಾಗಿದ್ದಳು. ಅತ್ತಿಮಬ್ಬೆಯ ಪ್ರಭಾವ ಮುಂದಿನ ಪೀಳಿಗೆಯ ಮೇಲೆ ಬಿದ್ದುದರ ಪರಿಣಾಮವಾಗಿ ಈಕೆ ಪುರಾಣ ವ್ಯಕ್ತಿಗಳ ಮತ್ತು ದೇವತೆಗಳ ಸಾಲಿನಲ್ಲಿ ಸೇರಿಹೋಗಿದ್ದಾಳೆ. ಇದರಿಂದಾಗಿ ಅತ್ತಿಮಬ್ಬೆ ತನ್ನ ಕಾಲದ ನಂತರ ದೇವತೆಯ ಸ್ಥಾನವನ್ನು ಪಡೆದಿದ್ದಳು'[೧೫೦] ಎಂಬ ಅಭಿಪ್ರಾಯವನ್ನು ಗಮನಿಸಿದಾಗ ಅತ್ತಿಮಬ್ಬೆಯ ವ್ಯಕ್ತಿತ್ವದ ಪ್ರಭಾವವು ಶಾಸನಗಳ ಮೇಲೂ ಆಗಿರುವುದನ್ನು ಮನಗಾಣಬಹುದು. ಹೊಯ್ಸಳರ ವೀರಬಲ್ಲಾಳನ ಕಾಲದ ಶಾಸನವೊಂದರಲ್ಲಿ[೧೫೧] ಮಹದೇವ ಮಂತ್ರಿಯ ಪತ್ನಿ

ಲೋಕಲದೇವಿಯನ್ನು ಬಣ್ಣಿಸುವಾಗ – **"ಚತುರತೆಯೊಳುಸಮಂತು ಜಿನಶಾಸನದೇವತೆ ಜೈನಧರ್ಮ್ಮದುಂನತಿಕೆಯೊಳತ್ತಿಮಬ್ಬೆ"** ಎಂದು ನಿರೂಪಿಸಿದೆ. ಬಮ್ಮಲದೇವಿಯನ್ನು ಬಣ್ಣಿಸಿರುವ

**ಪತಿಭಕ್ತಿಯೊಳಮಳಿನಜಿನ**

**ಪತಿಭಕ್ತಿಯೊಳತ್ತಿಮಬ್ಬೆಯೆಂದೀ ಭುವನಂ**

**ಸತತಂ ಬಮ್ಮಲದೇವಿಯ**

**ನತಿಮುದದಿಂ ಪೊಗಳುತಿರ್ಪ್ಪುದಿರುಳುಂ ಪಗಲುಂ**[೧೫೨]

ಎಂಬ ಪದ್ಯದಲ್ಲಿ ಈಕೆಯನ್ನು 'ಅತ್ತಿಮಬ್ಬೆ'ಯೊಂದಿಗೆ ಹೋಲಿಸಲಾಗಿದೆ. ಈಕೆಯು ಮಹಾಪ್ರಧಾನ ಮತ್ತು ಪಟ್ಟಸದ ಭಂಡಾರಿ ಪಾರಿಸಣ್ಣನ ಹೆಂಡತಿ.

ಸ್ತ್ರೀಯರ ಸೌಂದರ್ಯ, ಸ್ತ್ರೀಯರನ್ನು ಪುರಾಣ ಪಾತ್ರಗಳ ಜೊತೆಗೆ ಸಮೀಕರಿಸಿ ಶಾಸನಗಳು ಬಣ್ಣಿಸಿದ್ದರೂ ಸಹ ಸಮರ್ಥರಾದ ಶಾಸನಕವಿಗಳು ವರ್ಣನೆಯ ಸಂದರ್ಭದಲ್ಲಿ ತಮ್ಮದೇ ಆದ ವಿಶಿಷ್ಟತೆಯನ್ನು ಮೆರೆದಿದ್ದಾರೆ. ಹಾಗೆ ಸೋಪಜ್ಞತೆಯನ್ನು ಮೆರೆದಿರುವ ಕೆಲವೊಂದು ಪದ್ಯಗಳು, ಪದ್ಯಭಾಗಗಳು ಈ ರೀತಿಯಾಗಿವೆ. ವೀರಬಲ್ಲಾಳ ಮತ್ತು ಪದ್ಮಲದೇವಿಯ ಮಗಳಾದ ಸೋಮಲದೇವಿರಾಣಿಯನ್ನು "ಹರಿವೊಡವುಟ್ಟಿದಂದಿನ ಸುಭದ್ರೆಯೊ ರುಕ್ಮೆಯ ತಂಗಿಯಾದಳಾ ಸಿರಿಯೆನೆ ಸನ್ದ ರುಕ್ಮಿಣಿಯೊ ಮದ್ರನೃಪಾನುಜೆಯಾದ ಮದ್ದ್ರಿಯೊ ನಿರುಪಮಮಪ್ಪರೂಪವತಿ ಸಚ್ಚರಿತಾನ್ವಿತೆ"[೧೫೩] ಎಂದು ಬಣ್ಣಿಸಿದೆ.

ಸ್ತ್ರೀಯರ ಸೌಂದರ್ಯ, ಅವರನ್ನು ಪುರಾಣ ಪಾತ್ರಗಳ ಜೊತೆಗೆ ಹೋಲಿಸಿ ವರ್ಣನೆ ಮಾಡುವುದಕ್ಕಷ್ಟೇ ಕನ್ನಡದ ಶಾಸನಗಳು ಸೀಮಿತವಾಗಲಿಲ್ಲ. ಬದಲಾಗಿ ಅವರಲ್ಲಿರುವ ಸಾಮಾಜಿಕ ಕಳಕಳಿ, ಧಾರ್ಮಿಕತೆ, ವೈರಾಗ್ಯಪರತೆ ಮೊದಲಾದ ಉನ್ನತಗುಣ ಆದರ್ಶಗಳನ್ನೂ ಸಹ ಮುಕ್ತಕಂಠದಿಂದ ಹೊಗಳಿವೆ. ಅಂತಹವರುಗಳ ವ್ಯಕ್ತಿತ್ವವನ್ನು ಚಿತ್ರಿಸಿರುವ ಶಾಸನಪದ್ಯಗಳು ಮತ್ತು ಶಾಸನಭಾಗಗಳನ್ನು ಗಮನಿಸಬಹುದು.

ಹೊಯ್ಸಳ ರಾಜಮನೆತನದ ಪ್ರಮುಖ ಸ್ತ್ರೀಯರನ್ನು ಹಲವಾರು ಶಾಸನಗಳು ಉಲ್ಲೇಖಿಸುತ್ತವೆ. ಹೊಯ್ಸಳರಲ್ಲಿ ಅತಿ ಪ್ರಸಿದ್ಧಳಾದವಳು ವಿಷ್ಣುವರ್ಧನನ ಪಟ್ಟದರಸಿಯಾದ ಶಾಂತಲೆ. ಆಕೆಯ ಗುಣಗಾನವನ್ನು ಹಲವಾರು ಶಾಸನಗಳಲ್ಲಿ ಕಾಣಬಹುದಾಗಿದೆ. ಹೊಯ್ಸಳರ ಕಾಲದ ಸಂಸ್ಕೃತಿಯ ಪ್ರತಿನಿಧಿಯಾಗಿದ್ದವಳು ಶಾಂತಲಾದೇವಿ. ಹನ್ನೆರಡನೆಯ ಶತಮಾನದ ಪೂರ್ವಾರ್ಧದಲ್ಲಿ ಹೊಯ್ಸಳ ಸಾಮ್ರಾಜ್ಯದಲ್ಲಿ ಮೆರೆದು ಕನ್ನಡನಾಡನ್ನು ಬೆಳಗಿದ ವ್ಯಕ್ತಿಯಾಗಿದ್ದಾಳೆ. ಮಾರಸಿಂಗಮಯ್ಯ ಮತ್ತು ಮಾಚಿಕಬ್ಬೆಯ ಮಗಳು ಈಕೆ. ಅವಳ ಸೌಂದರ್ಯ, ಕಲಾಪ್ರೌಢಿಮೆ, ಪತಿಭಕ್ತಿ, ಧರ್ಮಸಹಿಷ್ಣುತೆಯನ್ನು ಶಾಸನಗಳು ಉಲ್ಲೇಖಿಸುತ್ತವೆ.

ಗುರುಗಳು ಪ್ರಭಾಚಂದ್ರಸಿದ್ಧಾನ್ತದೇವರೆ ಪೆತ್ತತಾಯಿ ಗುಣನಿಧಿ ಮಾಚಿಕಬ್ಬೆ

ಪಿರಿಯಪೆರ್ಗ್ಗಡೆ ಮಾರಸಿಂಗಯ್ಯಂ ತಂದೆ ಮಾವನುಂ ಪೆರ್ಗ್ಗಡೆಸಿಂಗಿಮಯ್ಯಂ

'ಅರಸಂ ವಿಷ್ಣುವರ್ದ್ಧನನಿಪ್ರ ವಲ್ಲಭಂ ಜಿನನಾಥಂ ತನಗೆಂದುಮಿಷ್ಟದೆಯ್ವಂ'[೧೫೪]

ಎಂಬುದಾಗಿ ಶಾಸನದ ಭಾಗವು ಶಾಂತಲೆಯ ಗುರು, ತಾಯಿ, ತಂದೆ, ಮಾವ, ಕೈಹಿಡಿದ ಪತಿ ಹಾಗೂ ನಂಬಿದ ದೈವವನ್ನು ಉಲ್ಲೇಖಿಸಿದೆ. ಇದೇ ಶಾಸನದ ಮತ್ತೊಂದು ಪದ್ಯವು ಈಕೆಯ ಸೌಂದರ್ಯವನ್ನು ಆ ನೆಗರ್ದ್ದ ವಿಷ್ಣುನ್ರಿಪನ ಮನೋನಯನ ಪ್ರಿಯೆ ಚಳಾಳನೀಳಾಳಕಿ ಚಂದ್ರಾನನೆ ಕಾಮನ ರತಿಯಲು ತಾನೆಣೆ ತೊಣೆ ಸರಿಸಮಾನೆ ಶಾಂತಲದೇವಿ" ಎಂದು ಬಣ್ಣಿಸಿದೆ. "ಕಲಿಕಾಲ ವಿಷ್ಣುವಕ್ಷಸ್ಥಳದೊಳು ಕಲಿಕಾಲಲಕ್ಷ್ಮಿ ನೆಲೆಸಿದಳು" ಎಂಬುದು ಕವಿಯ ಮಾತಾಗಿದೆ. ಈಕೆಯಲ್ಲಿದ್ದ ಸಕಲ ಗುಣಾವಳಿಯನ್ನು

ಸತತಂ ನೋರ್ಪ್ಪಡೆ ಲಕ್ಷ್ಮಿದೇವತೆ ರಣವ್ಯಾಪಾರದೊಳು ಖಳ್ಗದೇ

ವತೆಬಿಣ್ಪೆನ್ದಮೆ ಭೂಮಿದೇವತೆ ಜನಕ್ಕೆಲ್ಲಂದದಿಂದಂ ಪುಣ್ಯದೇ

ವತೆ ವಾಗ್ದೇವತೆ ವಿದ್ದಿಯೊಳು ಸಕಳ ಕಾರ್ಯ್ಯೋದ್ಯೋಗದೊಳು ಮಂತ್ರದೇ

ವತೆ ನಾಥಂಗೆನೆ ಶಾನ್ತಿದೇವಿಯನದಿನ್ನೇ ವಣ್ಣಿಪಂ ಬಣ್ಣಿಪ[೧೫೫]

ಎಂಬ ಪದ್ಯವು ಸೊಗಸಾಗಿ ನಿರೂಪಿಸಿದೆ. "ಶಾನ್ತಲದೇವಿಯ ರೂಪು ಕಲ್ಪವಲ್ಲರಿಯು ವಿಷ್ಣುನ್ರಿಪನೆಂಬ ಸಮುನ್ನತ ಕಲ್ಪವ್ರಿಕ್ಷವನ್ನು" ಆಶ್ರಯಿಸಿದ ಬಗೆಯನ್ನು

ಗಿರಿಜೆಯಪಾದಪದ್ಮವಿಗಳಜ್ಜಳದಿಂದಮೆ ಕೊರ್ಬ್ಬಿನೀತಿ ವಿ

ಸ್ತರಿಸಿರೆ ಸೊಂಪುವೆತ್ತ ಪುರುಷಬ್ರತದಿಂದಳಮೇಱೆಭಾಗ್ಯಮಂ

ಜರಿಗಳನಾನ್ತು ರಂಜಿಸುವ ಶಾನ್ತಲದೇವಿಯ ರೂಪುಕಲ್ಪವ

ಲ್ಲರಿಯಡರ್ದ್ದತ್ತು ವಿಷ್ಣುನ್ರಿಪನೆಂಬ ಸಮುನ್ನತ ಕಲ್ಪವ್ರಿಕ್ಷಮಂ

ಎಂಬುದಾಗಿ ಸೊಗಸಾಗಿ ಬಣ್ಣಿಸಿದೆ.[೧೫೬]

ಬೇಲೂರಿನ ಶಾಸನದಲ್ಲಿನ[೧೫೭] ಪ್ರಶಸ್ತಿ ಗದ್ಯವು ಈಕೆಯ ಸರ್ವಾಂಗೀಣ ಗುಣಾವಳಿಯನ್ನು ಪಟ್ಟಿ ಮಾಡುತ್ತಾ "ಸದರ್ತ್ಥಸರಸ ಸಮಯೋಚಿತ ವಚನ ಮಧುರಸಸ್ಯಂದಿ ವದನಾರವಿಂದೆ, ಕಳಾಕಳಾಪರತ್ನಗರ್ಬ್ಭವಸುಂಧರೆ, ಲಾವಣ್ಯಸಿಂಧುವೇಳಾಲೀಲಾಯಮಾನಕೇಕರಾತಿ ಬಂಧುರೆ, ಭರತಾಗಮಭವನನಿಹಿತ ಮಹನೀಯದುತಿಪ್ರದೀಪೆ, ವಿನಯವಿನಮದ್ವಿಳಾಸನೀ ಕದಂಬಲಂಬಾಳ ಕಾಳಂಬಚರಣನಖಕಿರಣಕಳಾಪೆ, ದಯಾರಸಾಮೃತಾಪೂರ್ಣ್ನವದನ ವಿಧುಬಿಂಬೆ, ಅನೂನದಾನಾಭಿಮಾನಾವಳಂಬೆ, ವಿಚಿತ್ರನರ್ತ್ತನ ಪ್ರವರ್ತ್ತನ ಪಾತ್ರಶಿಖಾಮಣಿ, ಸಕಳಸಮಯ

**ರಕ್ಷಾಮಣಿ, ಸಂಗೀತಸಂಗತ ಸರಸ್ವತಿ, ಪತಿವಿನಯಾವಿದಿತಾರುಂಧತಿ, ಸವತಿ ಗಂಧಹಸ್ತಿ"** ಎಂಬುದಾಗಿ ಬಣ್ಣಿಸುತ್ತದೆ.

"ಹೊಯ್ಸಳರ ಕಾಲದಲ್ಲಿ ಸ್ತ್ರೀಯರು ಸಾಂಸ್ಕೃತಿಕ ಮೌಲ್ಯಗಳನ್ನು ಪ್ರತಿಪಾದಿಸುವ ಮತ್ತು ಎತ್ತಿ ಹಿಡಿಯುವ ಶಕ್ತಿಯಾಗಿದ್ದರು. ಅದರಲ್ಲೂ ಆಳುವವರ್ಗದ ಸ್ತ್ರೀಯರು ಈ ವಿಷಯದಲ್ಲಿ ಇತರರಿಗೆ ಮಾದರಿಯಾಗಲು ಪ್ರಯತ್ನಿಸುತ್ತಿದ್ದರು. ಮತ್ತು ಅವರು ತಮ್ಮ ಪ್ರತಿಭೆಯನ್ನು ವ್ಯಕ್ತಪಡಿಸಲು ಅಂದಿನ ಸಮಾಜ ಯಾವ ರೀತಿಯಲ್ಲೂ ಅಡ್ಡಿ ಆತಂಕಗಳನ್ನುಂಟು ಮಾಡುತ್ತಿರಲಿಲ್ಲವೆಂಬುದಕ್ಕೆ ವಿಷ್ಣುವರ್ಧನನ ಪಟ್ಟದ ರಾಣಿ ಶಾಂತಲೆಯ ಸಾಧನೆಗಳನ್ನು ಉದಾಹರಿಸಬಹುದು'[೧೫೮] ಎಂಬ ಅಭಿಪ್ರಾಯವು ರಾಜಮನೆತನದ ಸ್ತ್ರೀಯರು ಯಾವ ರೀತಿಯಲ್ಲಿ ಸಾಮಾಜಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದರು ಎಂಬುದನ್ನು ಬಿಂಬಿಸುತ್ತದೆ.

ಹೊಯ್ಸಳ ರಾಜಮನೆತನದ ಇನ್ನಿತರ ಪ್ರಮುಖ ಸ್ತ್ರೀಯರಾದ ಕೆಳೆಯಬ್ಬರಸಿ, ಏಚಲದೇವಿ, ಬಮ್ಮಲದೇವಿ, ಗುಜ್ಜಲದೇವಿ, ಮಧುಕಲದೇವಿಯರನ್ನು ಶಾಸನಗಳನ್ನು ವರ್ಣಿಸಿವೆ. ವಿನಯಾದಿತ್ಯನ ಪತ್ನಿಯಾದ ಕೆಳೆಯಬ್ಬರಸಿಯರು ತಮ್ಮ ಹೆಸರಿಗೆ ತಕ್ಕಂತೆ ಇದ್ದರೆಂಬುದಾಗಿ –

**ಕೆಳೆಗಂಗೆಯೊಳಮಳತೆಯಿಂ**
**ಕೆಳೆಸೊಬಗಿಂ ಗಿರಿಜೆಯೊಡನೆ ಸಿರಿಯೊಡನೆಂದು**
**ಕೆಳೆನಿಜಪತಿಯಭಿವೃದ್ಧಿಗೆ**
**ಕೆಳೆಯಬ್ಬೆಗೆ ನಾಮಮಾದುದಿಂ ತನ್ವರ್ಥಂ**'[೧೫೯]

ಎಂಬ ಪದ್ಯವು ಬಣ್ಣಿಸಿದೆ. ಎರೆಯಂಗ ನೃಪನ ಪತ್ನಿಯಾದ ಏಚಲದೇವಿಯು "ಮೇರುಗೆ ಮೇಖಳೆ ಬಹುಖಳೆ ವಾರಿರುಹಭವಂಗೆ ಪೂರ್ಣ್ಣಖಳೆ ಚಂದ್ರಂಗೆ" ಎಂಬಂತೆ ಧೀರನಾದ ಎರೆಯಂಗನೃಪತಿಗೆ ಒಪ್ಪುತ್ತಿದ್ದಳು.[೧೬೦] ವಿಷ್ಣುವರ್ಧನನ ರಾಣಿಯರಲ್ಲಿ ಒಬ್ಬಳಾದ ಬಮ್ಮಲದೇವಿಯು 'ಮದದ್ವಿರದಗಮನೆ, ಬಿಂಬಾಧರೆ ಲಜ್ಜಾವತಿ, ಕಳಾವತಿ, ಲಾವಣ್ಯ, ಪುಣ್ಯವತಿಯೆನಿಸಿ ರತಿ–ಅರುಂಧತಿ ಸರಸ್ವತಿಯರಿಗೆ ಸರಿಸಮಳಾಗಿದ್ದಳು.[೧೬೧] ಒಂದನೆಯ ನರಸಿಂಹನ ಅರಸಿಯಾದ ಗುಜ್ಜಲದೇವಿಯಾದರೋ "ಭಾಗ್ಯವತಿ ರೂಪಗುಣವತಿಯೋಗ್ಯವತಿ ಭೋಗವತಿ ಯಶವತಿ ಪ್ರಭವತಿ ಪ್ರಜ್ಞಾವತಿ ಪತಿಹಿತಸಶ್ಲಾಘ್ಯವತಿ" ಎನಿಸಿದ್ದಳು. ಆ ಕಾರಣದಿಂದ ಅವಳ ಕೀರ್ತಿಯು –

**ಯಿಸೆಗುಂ ಮೂಱುಂ ಜಗದೊಳು**
**ಪಸರಿಸುಗುಂ ದೆಸೆಗಳ್ ನಭಮಂ ತೀವುವಿನಂ।**
**ವಸುಮತಿದಿವಮಣಿಕಿರಣಂ**
**ಸಸಿಯುಳ್ಳಿನಂ ಜಸಂ ನಿಲ್ಕುಂ ಗುಜ್ಜಲದೇವಿಯಾ ॥**[೧೬೨]

ಎಂಬುದಾಗಿ ಶಾಸನವು ಬಣ್ಣಿಸಿದೆ. ಇಮ್ಮಡಿ ಬಲ್ಲಾಳರ ಪತ್ನಿಯರಲ್ಲಿ ಒಬ್ಬಳಾದ ಮಧುಕಲದೇವಿಯು 'ಜಂಗಮ ಸರಸ್ವತಿ' 'ಸಂಗೀತ ಚೂಡಾಮಣಿ' ಎನಿಸಿದ್ದಳು.[೧೬೩] ವಿಷ್ಣುವರ್ಧನನ ಮಗಳಾದ ಹರಿಯಲದೇವಿ ಅಥವಾ ಹರಿಯಬ್ಬೆಯು "ಸರಸ್ವತಿಯಂತೆ ಸತ್ಕಳಾನ್ವಿತೆ ಸೀತೆಯನ್ತೆ ವಿನೀತೆ ಸುಸೀಮಾದೇವಿಯಂತೆ ಸುಶೀಲೆ ರುಕ್ಮಿಣಿಯಂತೆ ಗುಣಾಗ್ರಣಿ ಸಮ್ಯಕ್ತ್ವಚೂಡಾಮಣಿ" ಎನಿಸಿದ್ದಳು.[೧೬೪]

ಸ್ತ್ರೀಯರು ಆಡಳಿತ ನಿರ್ವಹಣೆಯಲ್ಲೂ ಪಾಲ್ಗೊಳ್ಳುತ್ತಿದ್ದರು. ರಾಷ್ಟ್ರಕೂಟ ಆಕಾಲವರ್ಷ (ಕೃಷ್ಣ-೨)ನ ಸಾಮಂತ ಕಲಿವಿಟ್ಟರಸ ಕೈಕೆಳಗೆ ನಾಗರಖಂಡವನ್ನಾಳುತ್ತಿದ್ದ ನಾಳ್ಗಾವುಂಡ ನಾಗಾರ್ಜುನನು ಯುದ್ಧದಲ್ಲಿ ಮಡಿದಾಗ, ಆತನ ಸತಿಯಾದ ಜಕ್ಕಿಯಬ್ಬೆಯು ನಾಳ್ಗಾವುಂಡಿಯಾಗಿ ಪ್ರಜೆಗಳನ್ನು ಸಲಹಿದಳು. ಈಕೆಯ ಜೀವನದ ಕೊನೆಯ ದಿನಗಳನ್ನು ಬಂದಳಿಕೆ ಗ್ರಾಮದ ಶಾಸನವು'[೧೬೫] ಈ ರೀತಿಯಾಗಿ ಬಣ್ಣಿಸುತ್ತದೆ.

**ಉತ್ತಮ ಪ್ರಭುಶಕ್ತಿಯುಕ್ತೆ ಜಿನೇನ್ದ್ರಶಾಸನಭಕ್ತೆ ಕಾ**
**ನ್ತ್ಯಾತ್ತವಿಭ್ರಮೆ ಜಕ್ಕಿಯಬ್ಬೆ ಸಮನ್ತು ನಾಗರಖಣ್ಡಾಮೆ**
**ಪ್ಪತ್ತುಮಂ ವಧುವಾಗಿಯುಂ ನಿಜವೀರವಿಕ್ರಮ ಗರ್ಭದಿಂ**
**ಪೆತ್ತವಂ ಪ್ರತಿಪಾಲಿಸುತ್ತೊಸದಿಟ್ಟಳಿಟ್ಟವಸಾನದೊಳ್ ॥**

**ತನುರುಜೆಯಿಂ ಪುದುಂಜ್ಗಳಿಸೆ ಸಂಸ್ಕೃತಿ ಭೋಗಮಸಾರಮೆನ್ದು ನಿ**
**ಚ್ಚನಿಸಿ ನಿಜಪ್ರಿಯಾತ್ಮಜೆಗೆ ಸನ್ತತಿಯಂ ಕರೆದಿತ್ತು ಮೋಹ ಬ**
**ನ್ಧನದ ತೊಡರ್ಪ್ಪಿನೊಳ್ತೊದಲಿಸ್ದಮೋಹಿಸಿ ನಿ..... ಬಲ್ಲೆಬನ್ದು ಬ**
**ನ್ದನಿಕೆಯ ತೀರ್ಥದೊಳ್ತೊರದುವಚ್ಚರಿಯಂ ....... ಜಕ್ಕಿಯಬ್ಬೆಯಾ ॥**

'ಉತ್ತಮಪ್ರಭುಶಕ್ತಿಯುಕ್ತೆ' ಎಂಬ ಪದ್ಯವು ಜಕ್ಕಿಯಬ್ಬೆಯ ವೀರವಿಕ್ರಮಕ್ಕೆ ಕನ್ನಡಿಯಾದರೆ, 'ತನುರುಜೆಯಂ' ಎಂಬುದು ಅವಳ ವೈರಾಗ್ಯವನ್ನು ಬಣ್ಣಿಸಿದೆ.

ದೇಕಬ್ಬೆಯ ಶಾಸನವು ಮಹಾಸತಿಯನ್ನು ಕುರಿತ ಶಾಸನಗಳಲ್ಲಿ ಗಮನಾರ್ಹವಾಗಿದೆ. ಸಹಗಮನ ಪದ್ಧತಿಯನ್ನು ಕರ್ನಾಟಕದಲ್ಲಿ ಬಲವಂತವಾಗಿ ಆಚರಿಸುತ್ತಿರಲಿಲ್ಲ. ಪತಿಯಾದವನು ಕಾಲವಾದ ನಂತರ ಸ್ವಯಿಚ್ಛೆಯಿಂದ ಆಚರಣೆಯನ್ನು ಮಾಡುತ್ತಿದ್ದರು. ಅಂತಹವರುಗಳಲ್ಲಿ ದೇಕಬ್ಬೆಯು ಆದರ್ಶನೀಯಳಾಗಿದ್ದಳು ಎಂಬುದನ್ನು ಬೆಳತೂರಿನ ಶಾಸನವು[೧೬೬] ಸುದೀರ್ಘವಾಗಿ ಬಣ್ಣಿಸಿದೆ. ಆ ದೇಕಬ್ಬೆಯಾದಳೋ –

ಶ್ರೀರಮಣಿಗೌರಿಸಚಿಧಾರಿಣಿಯಪುತ್ರಿ ರತಿಭೂರಮಣಿಯನ್ದದಸರೂಪವಾಚಿವೊಳ್ವಾ

ದಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತೆ ಧೃತಶಕ್ತೆಯೆನೆಸಂನಿ

ವೀರನಿಧಿಯಂ ಚಲದವಾರಿನಿಧಿಯಂ ಗುಣದ ಚಾರುನಿಧಿಯಂ ನೆಗಳ್ದ ದೇಕಲೆಯನ್ತೀ

ನಾರಿಜನರನ್ನ ಮನದಾರೊಮಚಿವರ್ ಶಕಳಧಾರಿಣಿಯೊಳಿನ್ತು ವರಕಾನ್ತೆ ದೊರೆಯಾವಳ್

ಈ ದೇಕಬ್ಬೆಯು "ಶ್ರೀರಮಣಿ ಗೌರಿಸಚಿಧಾರಣಿಯಪುತ್ರಿ ರತಿಭೂರಮಣಿಯನ್ದದ" ರೂಪವನ್ನು ಗುಣವನ್ನು ಪಡೆದವಳೆಂದು,ಔದಾರೆ, ಜಯಧಾರೆ, ಜಸಧಾರೆ, ನಯಧಾರೆ, ಭಯಹಾರೆ, ಪತಿಭಕ್ತೆ, ಧೃತಶಕ್ತೆಯೆನಿಸಿದವಳೂ, ವೀರನಿಧಿ, ಚಲದವಾರಿನಿಧಿ, ಗುಣದ ಚಾರುನಿಧಿಯೆಂದು ಪ್ರಸಿದ್ಧಳಾದ "ನಾರಿಜನರನ್ನ" ಎನಿಸಿದ್ದ ದೇಕಲೆಯನ್ನು ಯಾರು ತಾನೆ ಮರೆಯುತ್ತಾರೆ? ಎಂಬುದಾಗಿ ಕವಿಯು ಮೆಚ್ಚುಗೆಯ ಮಾತುಗಳನ್ನಾಡಿದ್ದಾನೆ. ಈಕೆಯ ತಾಯಿಯಾದ ಪೊನ್ನಕಬ್ಬೆಯು "ನಿರುಪಮಶೀಳದಿಂ ಗುಣದಿನುತ್ತಮದಾನದಿನಾತ್ಮಭಕ್ತಿಯಿಂ ಗಿರಿಸುತೆರಂಭೆ ಮೇನಕೆ ಸರಸ್ವತಿ ರುಕ್ಮಿಣಿ ಸತ್ಯಭಾಮೆ"ಯರಿಗೆ ಸಮನಾದವಳೆಂದು ಶಾಸನವು ಬಣ್ಣಿಸಿದೆ.

ಹೊಯ್ಸಳರ ಕಾಲದ ಮತ್ತೊಬ್ಬ ಪ್ರಮುಖ ಮಹಿಳೆಯೆಂದರೆ ಕುವರಲಕ್ಷ್ಮನ ಹೆಂಡತಿಯಾದ ಸುಗ್ಗಲದೇವಿ. ಹೊಯ್ಸಳರ ಕಾಲದಲ್ಲಿ ಆಚರಣೆಯಲ್ಲಿದ್ದ 'ಗರುಡಪದ್ಧತಿ'ಯ ಪ್ರತೀಕವಾಗಿದ್ದವನು ಕುವರಲಕ್ಷ್ಮ. ಆತನ ಹೆಂಡತಿಯಾದ ಸುಗ್ಗಲದೇವಿಯು ತನ್ನ ಗಂಡನ ಹಾದಿಯನ್ನು ಅನುಸರಿಸಿ ಮಾದರಿಯೆನಿಸಿಕೊಂಡವಳಾಗಿದ್ದಾಳೆ. ಈ ಸುಗ್ಗಲದೇವಿಯಾದರೋ "ಜಯಸಿಂಹ ಕ್ಷಿತಿಪಾಲಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದು ಭಾಷೆಯನಾ ಸುಗ್ಗಲದೇವಿ ಕೊಟ್ಟ ತೆಱದಿಂ" ಮನಃಪ್ರಿಯೆ ಯೀ ಸುಗ್ಗಲದೇವಿ ಭಾಷೆಯನ್ ಇಳಾಚಕ್ರಂ ಪೊಗಳ್ವನ್ನೆಗಂ ಬಲ್ಲಾಳ ಭೂಪೋತ್ತಮಪ್ರಿಯಪುತ್ರಂಗೆ ಕುಮಾರಲಕ್ಷ್ಮರಥಿನೀ ನಾಥಂಗೆ ಕೊಟ್ಟಳ್[೧೬೭]. ಕೇವಲ ನೆಪಮಾತ್ರಕ್ಕೆ ಪತಿಗೆ ಭಾಷೆಯನ್ನು ನೀಡಿ ಅದರಂತೆ ನಡೆಯದಿರುವ ಸತಿಯರನ್ನು ನಿಂದಿಸುವ ರೀತಿಯಲ್ಲಿ ಸುಗ್ಗಲದೇವಿಯು ತನ್ನ ಎಡದ ಪಾದದಲ್ಲಿ 'ಗಂಡಪೆಂಡಾರ'ವನ್ನು ಧರಿಸಿದ್ದಳು ಎಂಬುದನ್ನು ಇದೇ ಶಾಸನದ ಪದ್ಯವೊಂದು ಈ ರೀತಿಯಾಗಿ ಬಣ್ಣಿಸಿದೆ.

ಎಡಗಾಲೊಳ್ ತೊಡರಂ ತೊಡರ್ಚ್ಚಿ ಪತಿಯಂ ಬೆಳ್ಮಾಡಿನಿಂನೊಂದು ಪಿಂ

ಬಡಿನೊಳ್ ನಿಲ್ವವಳಲ್ಲೆನೆಂದು ಸುಖದಿಂದುಂಡುಟ್ಟು ಕಾಲಂ ಕಱು

ತ್ತಡಸಲ್ ಪುಚ್ಚಳಿವನ್ಯಕಾಮಿನಿಯರಂ ಱಿೋಡಾಡುವಂತ್ತಿಕ್ಕಿದಳ್

ತೊಡರಂ ಸುಗ್ಗಲದೇವಿ ತಂನೆಡದ ಪಾದಾಂಭೋಜದೊಳ್ ಲೀಲೆಯಿಂ ॥

ಮಹಿಳೆಯರು ಧಾರ್ಮಿಕ ಚಟುವಟಿಕೆಯಲ್ಲೂ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ದೇವಾಲಯ ನಿರ್ಮಾಣ, ದಾನದತ್ತಿಗಳನ್ನು ನೀಡುವುದು ಮೊದಲಾದವುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು.

ಮಹಾಪ್ರಧಾನ ಮತ್ತು ಹಿರಿಯಹಡೆವಳ ಚಾವಿಮಯ್ಯನ ಹೆಂಡತಿಯಾದ ಜಕ್ಕವ್ವೆಯು ಹೆರಗಿನಲ್ಲಿ ಜೈನ ಬಸದಿಯನ್ನು ನಿರ್ಮಿಸಿದ ವಿಚಾರವನ್ನು ಹೆರಗು ಶಾಸನವು[೧೬೮] ಒಳಗೊಂಡಿದ್ದು, ಇದರಲ್ಲಿ ಈಕೆಯ ವ್ಯಕ್ತಿತ್ವವನ್ನು ಶಾಸನಕವಿಯು ಈ ರೀತಿಯಾಗಿ ನಿರೂಪಿಸುತ್ತಾನೆ.

**ಕೋಮಳವಾಗಿ ತಾನೆ ಶುಭಲಕ್ಷಣಯುಕ್ತಮೆನಿಪ್ಪ ಮೂರ್ತ್ತಿಯಿಂ**
**ವ್ಯೋಮಮನೆಯ್ದೆ ಪರ್ಬ್ಬಿ ದಿಗ್ದನ್ತಿವರಂ ನಿಮಿರ್ದ್ದಿರ್ದ್ದ ಕೀರ್ತ್ತಿಯಿಂ**
**ಶ್ರೀಮುಖದಿಂದ ಮುದ್ಭವಿಪ ಸತ್ಯದ ಮೆಲ್ನುಡಿಯಿಂದೆ ಗೋತ್ರಚಿ**
**ನ್ತಾಮಣಿ ಜಕ್ಕಿಯವ್ವೆ ಸತಿ ರಂಜಿಸಿದಳು ಶಚಿದೇವಿಯಂದದಿಂ**

**ಬಂದೆರೆಯೆ ವಂದಿಜನಮಾ**
**ನಂದದಿನಾಕ್ಷಣದೆ ಕಲ್ಪಕುಜದಾರವೆಯೀ**
**ವಂದದಿನೀವಳು ಬೇಳ್ಪುದ**
**ನೆಂದುಂ ಜಕ್ಕವ್ವೆದೇವಿ ಜಗತೀತಳದೊಳು ॥**

ಈ ಜಕ್ಕವ್ವೆಯು ರೂಪಿನಿಂದ ರತಿ, ವಾಗ್ವಿಳಾಸದಿಂದ ಭಾರತಿ, ಸೌಷ್ಠವದಿಂದ ಕ್ಷಿತಿ, ಪೆರ್ಮೆಯಿಂದ ಅರುಂಧತಿಯೆನ್ನಿಸಿದ "ಇವಳು 'ಕಾನ್ತಾರತ್ನ'ವೆನ್ನಿಸಿದ್ದಳು ಎಂಬುದಾಗಿ ಶಾಸನವು ಬಣ್ಣಿಸುತ್ತದೆ.

ಕ್ರಿ.ಶ.೧೧೭೪ಕ್ಕೆ ಸೇರಿದ ಕರಡಾಳು ಗ್ರಾಮದ ಶಾಸನವೊಂದು[೧೬೯] ಹಯ್ಯಲೆ ಮಹಾಸತಿಯು ಮುಡುಪಿದ ವಿಚಾರವನ್ನು ಒಳಗೊಂಡಿದೆ. ವಿಶೇಷವೆಂದರೆ ಈಕೆಯು ತನ್ನ ಮಗನಾದ ಬೂವಯನಾಯಕನನ್ನು ಕರೆದು ಆತನಿಗೆ 'ಶಾಶ್ವತಧರ್ಮ'ವನ್ನು ಬೋಧಿಸಿದ ವಿವರಗಳನ್ನು ಒಳಗೊಂಡಿದೆ. "ಅನುಪಮಪುಣ್ಯಭಾಜನೆ, ಜಿನೇಂದ್ರ ಪದಾಬ್ಜವಿಲೀನ ಚಿತ್ತೆ, ಪಾವನ ಸುಚರಿತ್ರೆ, ಹಯ್ಯಲಮಹಾಸತಿ"ಯು ತನ್ನ ಅವಸಾನ ಕಾಲದಲ್ಲಿ ಮನುಜಮನೋಜನಾದ ಬೂವಯ ನಾಯಕನಿಗೆ "ಕೆಮ್ಮಗೆ ಎನ್ನ ನೀಂ ಕನಸಿನೊಳಪ್ಪಡಂ ನೆನೆಯದಿರು ನೆನೆ ಸಾಶ್ವತಮಪ್ಪ ಧರ್ಮ್ಮಮಂ" ಎಂದು ಬೋಧಿಸುತ್ತಾಳೆ. ಹಾಗೆಯೇ –

**ಧರ್ಮ್ಮಮನಾಗಳುಂ ಮುದದೆಮಾಳ್ಪುದು ಮಾಡಿದೊಡಪ್ಪುದಾವುದಾ**
**ಧರ್ಮ್ಮದಿನೆಂಬೆಯಪ್ಪೊಡೆ ಸುರೇಂದ್ರನರೇಂದ್ರ ಫಣೀಂದ್ರರಾಜ್ಯಮಂ**
**ತೊರ್ಮ್ಮದಲಪ್ಪುದಾಗಿ ಕಡೆಯೊಳೆವರಮುಕ್ತಿಯನೀವುದನ್ತಟೆಂ**
**ಧರ್ಮ್ಮದನಾಗು ಸತ್ಯನಿಧಿಬೂವಯನಾಯಕ ಬೇಡಿಕೊಂಡೆ ನಾಂ ॥**

ಎಂಬುದಾಗಿ ಬೋಧಿಸುತ್ತಾಳೆ. ಅದಕ್ಕಾಗಿ ಮಗನಾದ ಬೂವಯ ನಾಯಕನಿಗೆ "ಎನಗನುಮೋದನ ಪುಣ್ಯಂ ನಿನಗಂ ನಿಸ್ಸೀಮಮಪ್ಪ ಪುಣ್ಯಂ ಸಾರ್ಗ್ಗುಂ ಮನಮೊಸೆದು ಮಾಡಿಸೊಂದು ಜಿನಗ್ರಹಮಂ"

ಎಂದು ಹೇಳುತ್ತಾಳೆ. ತಾನಷ್ಟೇ ಧಾರ್ಮಿಕಳಾಗಿರದೆ ತನ್ನ ಮಗನನ್ನೂ ಸಹ ಧರ್ಮಮಾರ್ಗದಲ್ಲಿ ಪ್ರವರ್ತಿಸುವಂತೆ ಬೋಧಿಸಿದ ಹರ್ಯ್ಯಲೆಯ ವ್ಯಕ್ತಿತ್ವ ಘನತೆವೆತ್ತುದಾಗಿದೆ.

ಹರ್ಯ್ಯಲೆದೇವಿಯು ಸಮಾಧಿವಿಧಿಯಿಂದ ಮುಡುಪಿದಾಗ ಆಕೆಯನ್ನು ಸ್ವರ್ಗಕ್ಕೆ 'ಅಮರಾವತೀಪುರದೇವೀಸಂಕುಲ'ವು ಕರೆದೊಯ್ದ ಬಗೆಯು ಅತಿಶಯವಾಗಿದೆ. ಶಾಸನದ ಮತ್ತೊಂದು ಪದ್ಯದಲ್ಲಿ

**ನಿರುಪಮೆಯಂ ಚರಿತ್ರಯುತೆಯಂ ವನಿತಾಜನರತ್ನೆಯಂ ಮನೋ**
**ಹರಜನಮಾರ್ಗ್ಗವಾರಿನಿಧಿ ಚನ್ದ್ರಿಕೆಯಂ ಸುಕ್ರಿತೇಕ ಪೂಜೆಯಂ**
**ಪರಹಿತಚಿತ್ತೆಯಂ ಬಗೆಯದೆ ಅನ್ತಕನೆಂಬ ದುರಾತ್ಮನೊಯ್ದನ್'**

ಎಂಬುದಾಗಿ ಕವಿಯು ವಿಷಾದವನ್ನು ವ್ಯಕ್ತಪಡಿಸಿದ್ದಾನೆ. ಉತ್ತಮ ಗುಣಗಳನ್ನು ಹೊಂದಿ 'ವನಿತಾಜನರತ್ನ'ಳೆನಿಸಿದ್ದ ಈಕೆಯನ್ನು 'ಅನ್ತಕ' ಅಂದರೆ 'ಕಾಲಪುರುಷ'ನೆಂಬ ದುರಾತ್ಮನು ಕೊಂಡೊಯ್ದದ್ದುಕವಿಯ ಮನಸ್ಸಿಗೆ ಸಮ್ಮತವಾಗಲಿಲ್ಲವೆಂಬಂತೆ ಪದ್ಯದಲ್ಲಿ ನಿರೂಪಿತವಾಗಿದೆ.

ಒಟ್ಟಿನಲ್ಲಿ ಕನ್ನಡದ ಶಾಸನಕವಿಗಳು ಸ್ತ್ರೀಯರನ್ನು ಬಣ್ಣಿಸುವ ಸಂದರ್ಭದಲ್ಲಿ ಸಾಂಪ್ರದಾಯಿಕ ಬಣ್ಣನೆಯನ್ನು ಬಳಸಿಕೊಂಡರೂ ಸಹ ಅದಕ್ಕಿಂತ ವಿಶೇಷವಾಗಿ ಆ ಮಹಿಳೆಯರಲ್ಲಿದ್ದ ಉನ್ನತಗುಣಗಳನ್ನು ಗುರುತಿಸಲು ಮುಂದಾಗಿದ್ದರು ಎನ್ನಬಹುದು. ಮಹಿಳೆಯರಲ್ಲಿದ್ದ ರಾಜಕೀಯ ನೈಪುಣ್ಯತೆ, ಧಾರ್ಮಿಕಭಾವನೆ, ಲಲಿತಕಲೆಗಳಲ್ಲಿದ್ದ ಆಸಕ್ತಿ, ಧಾರ್ಮಿಕತೆ, ವೈರಾಗ್ಯಪರತೆ ಮೊದಲಾದ ಗುಣಗಳು ಶಾಸನಕವಿಗಳ ವರ್ಣನೆಗೆ ವಸ್ತುವಾದವು. ಹೀಗಾಗಿ ಕೇವಲ ಹೆಣ್ಣಿನ ಬಣ್ಣನೆಯು ಕೇವಲ ರೂಪು ಲಾವಣ್ಯಗಳ ಬಣ್ಣನೆಗೆ ಸೀಮಿತವಾಗದೆ, ವಾಸ್ತವಿಕತೆಗೆ ಸಮೀಪವಾಗಲು ಸಾಧ್ಯವಾಯಿತು. ಸಾಹಿತ್ಯಕೃತಿಗಳಲ್ಲಿ ಕಂಡು ಬರುವ ವರ್ಣನೆಗಳಿಗಿಂತ ವಿಭಿನ್ನವಾಗಲು ಸಾಧ್ಯವಾಯಿತು. ತನ್ಮೂಲಕ ಶಾಸನಗಳು ಸಮಾಜದಲ್ಲಿ ಸ್ತ್ರೀಯರು ವಹಿಸಿದ್ದ ಪಾತ್ರವನ್ನು ಮನವರಿಕೆ ಮಾಡಿಕೊಡಲು ತಕ್ಕಮಟ್ಟಿಗೆ ಪ್ರಯತ್ನಿಸಿವೆ ಎನ್ನಬಹುದು.

### ೪.೧೦ : ದೇಶ, ನಾಡು, ನಗರ, ಗ್ರಾಮ, ಅಗ್ರಹಾರಗಳು :-

ಸಮುದ್ರದಿಂದ ಆವೃತವಾದ ಭೂಮಂಡಲದಲ್ಲಿ ಜಂಬೂದ್ವೀಪವು ಪ್ರಸಿದ್ಧವಾದುದು. ಇದರ ದಕ್ಷಿಣಭಾಗದಲ್ಲಿ ಭರತವರ್ಷವಿದೆ. ಈ ಭರತವರ್ಷದ ಸಮೃದ್ಧವಾದ ಭೂಮಿ ಕುಂತಳನಾಡು. ಇದನ್ನು 'ಕರ್ಣಾಟದೇಶ'ವೆಂದೂ ಸಹ ಪ್ರಾಚೀನ ದಾಖಲೆಗಳು ಬಣ್ಣಿಸಿವೆ. ಆ ಭರತವರ್ಷವನ್ನು "ಅಂಬುಧಿ ಕಮಲಾಕರದೊಳ್, ಜಂಬೂದ್ವೀಪಾಬ್ಜದೊಂದು ಕರ್ಣಿಕೆಯೆನಿಕುಂ । ಪೊಂಬೆಟ್ಟದದಿಂ

ತೆಂಕಲ್ ಚೆಂಬೆತ್ತಸಳೆನಿಪುದಲ್ತೆ ಭಾರತಕ್ಷೇತ್ರಂ" ಎಂಬುದಾಗಿ[೧೭೦] ಸೊರಬದ ಶಾಸನವು ಬಣ್ಣಿಸಿದೆ. ಆ ಭರತವರ್ಷದ ಹೆಸರು ಹೇಗೆ ಸಾರ್ಥಕವಾಗಿತ್ತು ಎಂಬುದನ್ನು –

**ಬಾಜಿಸೆ ಡಕ್ಕೆಯಂ ಪ್ರಿಯರ ಮೆಲ್ಲೆರ್ದೆ, ತುಂಬಿಗಳಿಂಬುವೆತ್ತಿರಲ್**
**ರಾಜಿಸಿಪಾಡೆ ಕೆಂದಳಿರೆಕೈದಳಮಾಗಿರೆ, ಮಂದಮಾರುತಂ**
**ಯೋಜಿಸೆತಾಳಮಂ ರತಿಯನಾಡಿಸೆ ಮನ್ಮಥನಂತರಂಗದೊಳ್**
**ಸಾಜಮೆನಿಪ್ಪುದಲ್ತೆ ಭರತಾಹ್ವಯಮಾ ಭರತೋರ್ವಿಗುರ್ವಿನಿಂ**

ಎಂಬುದಾಗಿ ಬಳ್ಳಿಗಾವೆಯ ಶಾಸನವು ಬಣ್ಣಿಸಿದೆ[೧೭೧]

**ಅಂತೆನಿಸಿದಮರಗಿರಿಯಿಂ**
**ದಂತೆಂಕಣದೆಸೆಯೊಳೆಸೆವ ಭಾರತವರ್ಷಾ**
**ಭ್ಯಂತರದೊಳಿಳಾಕಾಂತೆಯ**
**ಕುಂತಳವೆನೆ ಮುಖ್ಯವಾಯ್ತು ಕುಂತಳದೇಶಂ**

ಕುಂತಳದೇಶವು "ಇಳಾಕಾಂತೆಯ ಕುಂತಳವೆನೆ ಮುಖ್ಯವಾಯ್ತು" ಎಂಬುದಾಗಿ ಹರಿಹರದ ಶಾಸನವು ಬಣ್ಣಿಸಿದೆ[೧೭೨] ಆ ಕುಂತಳ ದೇಶವಾದರೋ "ವರರತ್ನಾಕರದಿಂದಳಂಕರಿಸಿ ಮೇಯ್ವಿರ್ಚ್ಚಿರ್ದ ಭೂದೇವಿಗಾದರದಿಂ ಕುಂತಳದನ್ತೆ ತೋರ್ಕ್ಕುಂ" ಎಂಬುದು ಉದ್ರಿಗ್ರಾಮದ ಶಾಸನದ[೧೭೩] ಬಣ್ಣನೆಯ ಮಾತಾಗಿದೆ.

ಪ್ರಾಚೀನ ಕರ್ನಾಟಕವನ್ನು ಆಡಳಿತದ ಅನುಕೂಲಕ್ಕಾಗಿ ಹಲವು ವಿಭಾಗಗಳಲ್ಲಿ ವಿಂಗಡಿಸಲಾಗಿದ್ದು, ದಕ್ಷಿಣ ಕರ್ನಾಟಕದ ಶಾಸನಗಳಲ್ಲಿ ಬನವಾಸಿನಾಡು, ನಾಗರಖಂಡ, ನೊಣಂಬವಾಡಿ, ಹೊಯ್ಸಳನಾಡು, ತುಳುವದೇಶ, ಮೊದಲಾದವುಗಳ ಹೃದಯಂಗಮ ವರ್ಣನೆಯನ್ನು ಕಾಣಬಹುದಾಗಿದೆ.

ಬನವಾಸಿ ದೇಶ ಅಥವಾ ಬನವಾಸಿ ಮಂಡಳದ ಬಣ್ಣನೆಯು ಹಲವಾರು ಶಾಸನಗಳಲ್ಲಿ ಕಂಡುಬಂದಿದೆ. ಬನವಾಸಿ ದೇಶವು ಕನ್ನಡದ ಆದಿಕವಿಯಾದ ಪಂಪನ ಮನಸ್ಸನ್ನು ಸಹ ಆಕರ್ಷಿಸಿತ್ತು. ಆ ಬನವಾಸಿದೇಶದ ಪ್ರಾಕೃತಿಕ ಸೊಬಗು, ಅಲ್ಲಿಯ ಜನರ ತುಂಬುಜೀವನ, ಇವೆಲ್ಲವನ್ನು ಪಂಪಕವಿಯು ತನ್ನ ಕೃತಿಯಲ್ಲಿ ಸೊಗಸಾಗಿ ನಿರೂಪಿಸಿದ್ದಾನೆ.[೧೭೪] ಆ ಬನವಾಸಿ ದೇಶದಲ್ಲಿ "ಮಱಿದುಂಬಿಯಾಗಿ ಮೇಣ್ ಕೋಗಿಲೆಯಾಗಿ ಪುಟ್ಟುವುದು" "ಆರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ವನವಾಸಿದೇಶಮಂ" ಎಂಬವುಗಳೆಲ್ಲ ಪಂಪಕವಿಯು ಬನವಾಸಿದೇಶದ ಬಗ್ಗೆ ಆಡಿದ ಅಭಿಮಾನದ ಮಾತುಗಳಾಗಿವೆ.[೧೭೫] ಆದಿಕವಿ ಪಂಪನನ್ನು ಆಕರ್ಷಿಸಿದ್ದ ಬನವಾಸಿದೇಶವನ್ನು ಕನ್ನಡ ಶಾಸನಗಳು ಸಹ ಸೊಗಸಾಗಿ ಬಣ್ಣಿಸಿವೆ. ಬನವಾಸಿ ದೇಶವನ್ನು ಬಣ್ಣಿಸಿರುವ ಶಾಸನಗಳು

ಹೆಚ್ಚಾಗಿ ಕಲ್ಯಾಣದ ಚಾಳುಕ್ಯರ ಕಾಲಕ್ಕೆ ಸೇರಿದವುಗಳಾಗಿವೆ. ಈ ಬನವಾಸಿ ದೇಶ ಅಥವಾ ಬನವಾಸಿ ಮಂಡಳವು

"ಸಾಗರವಾರಿವೇಷ್ಟಿತ ಸಮಸ್ತ ಧರಾರಮಣೀಘನಸ್ತನಾ
ಭೋಗವಿದೆಂಬಿನಂ ವಿದಿತವಿಸ್ತ್ರತ ಸುರತರಾಗ್ರಹಾರದಿಂ
ನಾಗರಖಂಡ ಪತ್ರಪರಿವೇಷ್ಟನದಿಂ ಜನನೇತ್ರಪುತ್ರಿಕಾ
ರಾಗಮನಿತ್ತು ಮಾಣ್ದುದೆ ಮನಸ್ಸುಖದಂ ಬನವಾಸಿಮಂಡಳಂ"

"ಬಳಸಿದ ನನ್ದನಾವಳಿಗಳಿಂ ಶುಕಸಂಕುಳದಿಂ ಪಿಕಾಳಿಯಿಂ
ಬಳೆದೆಜಿಗಿರ್ದ್ದಶಾಳಿವನದಿಂ ಭ್ರಮರಾಳಿಯಿನಿಕ್ಷುವಾಟಿಯಿಂ
ತಿಳಿಗೊಳದಿಂ ಲತಾಭವನದಿಂ ಕಮಳಾಕರದಿಂ ಕುಮುದ್ವತೀ
ಕುಳದಿನಿದೇಂ ಮನಂಗೊಳಿಪುದೊ ಸತತಂ ಬನವಾಸಿ ಮಂಡಳಂ[೧೭೬]

ಸದಾಕಾಲ 'ಮನಸ್ಸುಖದ'ವಾಗಿತ್ತು ಎಂಬುದಾಗಿ ಪದ್ಯಗಳು ಬಣ್ಣಿಸಿವೆ. ಈ ಬನವಾಸಿ ಮಂಡಳವನ್ನು "ಸುಖದಾಗರ, ಸಿರಿಯಪುಟ್ಟಿದ ಸಾಗರ, ಸಮಭ್ಯುದಯದ ಗೊತ್ತು, ಸತ್ಯದ ತವರ್ಮನೆ, ಚಿತ್ತಜನಿಕ್ಕೆದಾಣ, ಉನ್ಮದಯುವತೀಜನಂಗಳ ಎಜಿವೆಟ್ಟು, ಬುಧಾಳಿಯ ಜನ್ಮಭೂಮಿ" ಎಂಬುದಾಗಿ ಹರಿಹರದ ಶಾಸನವು[೧೭೭] ವರ್ಣಿಸಿದೆ. ಈ ಬನವಾಸಿಯನ್ನು ಬಂದಲಿಕೆ ಗ್ರಾಮದ ಶಾಸನವು "ಧರಣೀಕಾಂತೆಯ ಮುಖ"ವೆಂಬುದಾಗಿ[೧೭೮] ಬಣ್ಣಿಸಿದೆ.

ಬನವಾಸಿಮಂಡಲವು "ಧರಣೀಕಾಂತೆಯ ಮುಖದಂತಿರೆ" ಅದರೊಳ್ ನಾಗರಖಂಡವು "ತಿಳಕದವೋಲ್ ಪರಿಶೋಭಿಪುದಾವ ಕಾಲಮಂ ಸಿರಿಯೊದವಿಂ"[೧೭೯] ಎಂಬುದಾಗಿ ನಾಗರಖಂಡವನ್ನು ಬನವಾಸಿಮಂಡಲನೆಂಬ ಧರಣೀಕಾಂತೆಯ ಮುಖದಲ್ಲಿ ಶೋಭಿಸುತ್ತಿರುವ ತಿಳಕವೆಂಬುದಾಗಿ ಶಾಸನವು ಬಣ್ಣಿಸುತ್ತದೆ. "ಪ್ರಾಚೀನ ಬನವಸೆ-೧೨೦೦೦ದಲ್ಲಿಯ ನಾಗರಖಂಡ-೭೦ ಕಂಪಣವು ಸದ್ಯದ ಧಾರವಾಡ ಹಾಗೂ ಶಿವಮೊಗ್ಗ ಜಿಲ್ಲೆಗಳು ಸಂಧಿಸುವ ಗಡಿಗಳಲ್ಲಿರುವ ಹಾನಗಲ್ಲು, ಹಿರೇಕೆರೂರು, ಶಿಕಾರಿಪುರ, ಸೊರಬ ಈ ನಾಲ್ಕು ತಾಲ್ಲೂಕುಗಳ ಮಧ್ಯದಲ್ಲಿ ನೆಲೆಸಿರುವ ಭೂಪ್ರದೇಶಕ್ಕೆ ಸೇರುತ್ತದೆ.[೧೮೦] ಎಂದು ಹೇಳಬಹುದು. ಈ ನಾಗರಖಂಡವು "ಬಸನ್ತದಸೃಷ್ಟಿ" ಎಂಬುದನ್ನು ಚಿಕ್ಕ ಮಾಗಡಿಯ ಶಾಸನವು[೧೮೧] ಈ ರೀತಿಯಾಗಿ ಬಣ್ಣಿಸಿದೆ.

ಕುಸುಮರಜಂ ರಸಾವಳಿತಳಿರ್ಸ್ಸೊವಡಾಡುವ ಕೀರಜಾಳವೆಂ
ಬೆಸಕದೆ ಚೆಲ್ವುವೇಜಿದನೆಲಂ ನೆಲವೆರ್ಚ್ಚಿದಪೂಗೊಳಂ

**ಬಿಸುರ್ಪ್ಸಗದನುಣ್ಚಿಸಲ್ಸುಳಿವ ಕಮ್ಮೆಲರೀಕ್ಷಿಸೆಹಬ್ಬನೊಪ್ಪುವಾ**
**ಗಸವಸೆಯಲ್ಕೆ ನಾಡೆಸೆವುದಸ್ತು ಬಸನ್ತದಶೃಷ್ಟಿಯೆಂಬಿನಂ ॥**

ಆ ನಾಗರಖಂಡಕಂಪಣದ ಪ್ರಕೃತಿಯ ಸೊಬಗನ್ನು ಹರಿಹರದ ಶಾಸನವೊಂದು[೧೮೨] ಈ ಕೆಳಗಿನಂತೆ ವಿನೂತನವಾಗಿ ಬಣ್ಣಿಸುತ್ತದೆ.

**ಮದಮಧುಪಾಳಿ ಸುತ್ತದಲರ್ದೋಂಟ ಮಗುರ್ವಿನ ಗಂಧಶಾಳಿ ಸು**
**ತ್ತದ ಬಯಲಂಚೆವಿಂಡು ನೆಱೆಸುತ್ತದ ಪೂಗೊಳನಿಕ್ಷುವಾಟ ಸು**
**ತ್ತದ ಪುರಮಂಬುಜಪ್ರತತಿ ಸುತ್ತದ ಪೆರ್ಗೆಱೆ ಕಾವನಾಜ್ಞೆ ಸು**
**ತ್ತದ ಬನಮಿಲ್ಲೆನಲ್ ಸೊಗಯಿಸಿರ್ಪುದು ನಾಗರಖಂಡಕಂಪಣಂ ॥**

ಮದಿಸಿದ ದುಂಬಿಗಳು ಸುತ್ತದೆ ಇರುವ ಹೂದೋಟ, ಅತಿಶಯವಾದ ಸುಗಂಧಯುಕ್ತವಾದ ಬತ್ತದ ಗದ್ದೆಗಳು ವ್ಯಾಪಿಸದೆ ಇರುವ ಬಯಲು, ಹಂಸಪಕ್ಷಿಗಳ ಹಿಂಡು ಆವರಿಸದೆ ಇರುವ ಹೂಕೊಳಗಳು, ಕಬ್ಬಿನತೋಟಗಳು ಬಳಸದೆ ಇರುವ ಪಟ್ಟಣಗಳು, ತಾವರೆಯ ಸಮೂಹಗಳು ಸುತ್ತಿಬಳಸದಿರುವ ದೊಡ್ಡಕೆರೆಗಳು, ಕಾಮನ ಅಪ್ಪಣೆ ವ್ಯಾಪಿಸದಿರುವ ವನಗಳು ಇಲ್ಲವೆನ್ನುವಂತೆ ನಾಗರಖಂಡದ ಪ್ರದೇಶವು ಸೊಗಯಿಸುತ್ತಿತ್ತು. ಆ ನಾಗರಖಂಡವು "ಆಗಳುಂ ಎಸೆದಿರ್ಪುದು ಪುನ್ನಾಗವನದಿಂ ಎಸೆವ ನಾಗಚಂಪಕವನದಿಂ ನಾಗಲತಾವನದಿಂ" ನಾಗರಖಂಡವು "ವಿಳಾಸ ರತುನಕರಂಡ"ವೆನಿಸಿತ್ತು ಎಂಬುದಾಗಿ ಬಣ್ಣಿಸಿರುವ ಇದೇ ಶಾಸನದ ಮತ್ತೊಂದು ಪದ್ಯವು "ಸೌರಭಭರಿತವಾದ ಶ್ರೀಗಂಧ. ಹೊಳೆಯುವ ಚಂದ್ರ ಮತ್ತು ಪ್ರಕೃತಿ ಸೊಬಗಿನಿಂದ ಕೂಡಿದ ನಾಗರಖಂಡವು ಯಾರ ಮನಸ್ಸನ್ನು ತಾನೇ ಸೋಲಿಸುವುದಿಲ್ಲ" ಎಂದು ಪ್ರಶ್ನಿಸುತ್ತದೆ. ಆ ಪದ್ಯವು ಈ ಕೆಳಗಿನಂತಿದೆ.

**ಪರಿಕಿಪೊಡನೂನಸೌರಭ**
**ಭರಿತಶ್ರೀಖಂಡಮುಮಂ ದಿಟಂ ಪ್ರತಿಪದ್ವಿ**
**ಸ್ಫುರಿತಶಶಿಖಂಡಮುಂ ನಾ**
**ಗರಖಂಡಮುಮಾರ ಮನಮುಮಂ ಸೋಲಿಸವೇ**

ನಾಗರಖಂಡದ ರಾಜಧಾನಿ ಬಂದಳಿಕೆ. ಈ ಬಂದಳಿಕೆಯು ಪ್ರಕೃತಿಯ ಸಹಜ ಸೌಂದರ್ಯದಿಂದ ಕೂಡಿದುದಾಗಿತ್ತು. ಆ ಪಟ್ಟಣವು "ಬಳಸಿರ್ದನಂದನದಿಂ, ಅಂಬುಜಷಂಡದಿಂ ಒಳ್ಗವುಂಗಿನಿಂ ಪುದಿದ ಎಲೆವಳ್ಳಿಯಿಂ ಬೆಳೆದಶಾಳಿಯಿನೊಪ್ಪುವ ಕೋಂಟೆಯಿಂ ಸಮಂತು ಒದವಿದ ಲಕ್ಷ್ಮಿಯಿಂ ವಿಭವದಿಂ ವಿಳಸಜ್ಜನದಿಂ ಸುದೇವಗೇಹದ ಕಡು ಚೆಲ್ವಿನಿಂ" 'ಅಳಕಾಪುರ'ವನ್ನು ಹೋಲುತ್ತಿತ್ತು.[೧೮೩] ಈ ಬಂದಿಳಿಕೆಯು ನಾಗರಖಂಡದಲ್ಲಿ ಶ್ರೇಷ್ಠ ಪಟ್ಟಣವಾಗಿತ್ತು ಎಂಬುದನ್ನು ಶಾಸನಕವಿಯೊಬ್ಬ –

**ಪರಲೊಳ್ಪರುಸಂಧೇನೂತ್ಕರದೊ**

**ಳ್ಸುರಧೇನು ನಂದನದೊಳಮರಕುಜಂ**

**ಕರಮೆಸೆವಂತಿರೆ ಎಸೆವುದು ಸಲೆನಾ**

**ಗರಖಂಡದೊಳೆಸೆವ ಬಾಂಧವನಗರ** [೧೮೪]

ಎಂಬುದಾಗಿ ನಿರೂಪಿಸಿದ್ದಾನೆ.

ಹೊಯ್ಸಳನಾಡಿನ ವರ್ಣನೆಯನ್ನು ಅರಕೆರೆಯ ಶಾಸನವು[೧೮೫] ಒಳಗೊಂಡಿದೆ. ಶಾಸನದ ಪ್ರಕಾರ ಈ ನಾಡು –

**ಯೋಜನಯೋಜನಂಗಳೊಳಗೂರ್ಪ್ಪಲಊರ್ಗ್ಗಳಸುತ್ತಿನಂದನಂ**

**ಯೋಜನಯೋಜನಂಗಳೊಳನೇಕ ವನೇಕಸರೋಜಷಂಡ ವಾ**

**ಯೋಜನಯೋಜನಕ್ಕುಪವನಂ ಪಥಿಕರ್ಣ್ನಿಲಿಸಲ್ಮನೋಜ ವಿ**

**ಭ್ರಾಜಿತರಾಗದಾಲಯಮೆನಿಪ್ಪುದು ಪೊಯ್ಸಳನಾಡು ನಾಡೆಯುಂ**

ಯೋಜನ ಯೋಜನಗಳಿಗೆ ಒಪ್ಪುವ ಊರುಗಳು, ಊರುಗಳನ್ನು ಸುತ್ತಿದ ನಂದನವನಗಳು, ಒಂದೊಂದು ಯೋಜನದಲ್ಲೂ ಪರಿಶೋಭಿಸುವ ತಾವರೆಯ ಕೊಳಗಳು, ಉಪವನಗಳನ್ನು ಒಳಗೊಂಡು ದಾರಿಹೋಕರ ಮನಸ್ಸಿಗೆ ಆನಂದವನ್ನುಂಟು ಮಾಡುತ್ತಾ ಪರಿಶೋಭಿಸುತ್ತಿತ್ತು.

ಪ್ರೌಢದೇವರಾಯನ ಕಾಲದ ಶಾಸನವೊಂದು[೧೮೬] ತುಳುನಾಡನ್ನು ಈ ರೀತಿಯಾಗಿ ಬಣ್ಣಿಸುತ್ತದೆ.

**ಸಾರತರದ್ರುಮಪ್ರತತಿಯಿಂ ಪರಿಶೋಭಿಪಗೋಪ್ರತಾನದಿಂ**

**ಕೀರಮರಾಳಸಾರದಿನೊಪ್ಪುವ ನಂದನವೃಂದದಿಂ ಪಯಃ**

**ಪೂರ ಸರಃ ಸರೋಜವನದಿಂ ಬಿನದಕ್ಕೆಡೆಯಾದ ತಾಣದಿಂ**

**ದಾರಮನಕ್ಕೆ ಮಾಡದೊಲವಂ ತುಳುದೇಶಮನೇಕದೇಶದೊಳು ॥**

ಆ ತುಳುದೇಶದ 'ಮಂಗಲೂರು' ಸ್ಥಳವು "ಚಲದೊರ್ಮ್ಮಿವ್ರಾತಜಾತ ಪ್ರಹರಣರಣಕೃದ್ವಾರ್ದ್ಧಿಯಿಂ ಮುಂದೆ ಸಾಲಂ ಬಳಸಲ್ಲಾನಾಮಣಿಪ್ರಸ್ಫುರಿತ ಪರಿವೃಢಾಗಾರದಿಂ ವಾರನಾರೀ ಕುಲದಿಂ ಸ್ವರ್ಣ್ನಾದಿ ಪೂರ್ಣ್ನಾಪಣ ಗಡಣದಿಂ" ಪರಿಶೋಭಿಸುತ್ತಿತ್ತು.

ಆಡಳಿತ ವಿಭಾಗದ ಪ್ರಮುಖವಾದ ಘಟಕಗಳೆಂದರೆ ನಗರಗಳು, ಗ್ರಾಮಗಳು. ಇವುಗಳು ಕೇವಲ ಜನರ ವಾಸದ ಸ್ಥಳಗಳಾಗಿರದೆ ಪ್ರಾಕೃತಿಕ, ಭೌತಿಕ ಮತ್ತು ಸಾಂಸ್ಕೃತಿಕ ಸಂಪತ್ತಿನ ಆವಾಸಸ್ಥಾನಗಳಾಗಿದ್ದವು. ಇಂತಹ ಹಲವಾರು ನಗರಗಳು, ಗ್ರಾಮಗಳ ಸೌಂದರ್ಯವನ್ನು ಕನ್ನಡ

ಶಾಸನಗಳು ಬಣ್ಣಿಸಿವೆ. ಅವುಗಳಲ್ಲಿ ಪ್ರಸಿದ್ಧವಾದ ಬಳ್ಳಿಗಾವೆ, ಕುಪ್ಪಟೂರು, ಹುಮ್ಮಚ, ಅರಸೀಕೆರೆ ಮೊದಲಾದವುಗಳನ್ನು ಹೆಸರಿಸಬಹುದು.

ಶಿವಮೊಗ್ಗ ಜಿಲ್ಲೆ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆಯು ಪ್ರಸಿದ್ಧವಾದ ವಿದ್ಯಾಕೇಂದ್ರವಾಗಿತ್ತು. ಸಾಂಸ್ಕೃತಿಕವಾಗಿ ಸಹ ಪ್ರಾಮುಖ್ಯತೆಯನ್ನು ಪಡೆದಿದ್ದ ಬಳ್ಳಿಗಾವೆಯನ್ನು ಕಲ್ಯಾಣದಚಾಲುಕ್ಯರ ಕಾಲದ ಶಾಸನಗಳು ಸೊಗಸಾಗಿ ಬಣ್ಣಿಸಿವೆ. ಇಲ್ಲಿಯ ಕೇದಾರೇಶ್ವರ ದೇವಾಲಯದ ಪ್ರಾಕಾರದಲ್ಲಿರುವ ಶಾಸನವೊಂದು[೧೮೭] ಬಳ್ಳಿಗಾವೆಯ ಸರ್ವಾಂಗೀಣ ಚಿತ್ರಣವನ್ನು ನೀಡುತ್ತದೆ. ಶಾಸನದ ಪ್ರಕಾರ "ಜನಪದಕೋಟಿಯಲ್ಲಿ ಪ್ರಸಿದ್ಧವಾದುದು ಕುನ್ತಳದೇಶ. ಆ ದೇಶದಲ್ಲಿ ಬನವಸೆನಾಡು ಮತ್ತೂ ಪ್ರಸಿದ್ಧ. ಅದರಲ್ಲಿರುವ ಈ ಬಳ್ಳಿಗಾವೆಯು "ಸಜ್ಜನನಿಧಿ ಪಟ್ಟಣಗಳ ತವರ್ಮ್ಮನೆ"ಯಾಗಿ ಶೋಭಿಸುತ್ತಿತ್ತು. ಆ ಬಳ್ಳಿಗಾವೆಯು "ವಿಬುಧರಿಂದ ಕೂಡಿ ಅಮರಾವತಿಯಂತೆ ಭೋಗಿಗಳಿಂದ ಕೂಡಿದ ಕಾರಣದಿಂದ ಭೋಗವತೀಪುರದಂತೆ'[೧೮೮] ಸಂಪತ್ತಿನಿಂದ ಅಳಕಾಪುರದಂತೆ ಶೋಭಿಸುತ್ತಿದ್ದ ಕಾರಣದಿಂದ ಇದಕ್ಕೆ 'ನೆಗರ್ದವಾರ್ಧಿಪರೀತ ಸಮಸ್ತ ಧಾತ್ರಿಯೊಳ್' ಸಮನಾದ ಮತ್ತೊಂದು ಪಟ್ಟಣವಿಲ್ಲವೆಂದು ಶಾಸನವು ಬಣ್ಣಿಸುತ್ತದೆ. ಇದೇ ಶಾಸನವು ಅಲ್ಲಿಯ ಮಹಾಜನರನ್ನು ಮತ್ತು ಕೇದಾರಮಠವನ್ನು ಬಣ್ಣಿಸುತ್ತದೆ.

ಶಿಕಾರಿಪುರ ತಾಲ್ಲೂಕಿನ ಕುಪಟೂರು ಸ್ಥಳವನ್ನು ಶಾಸನಗಳು ಸೊಗಸಾಗಿ ಬಣ್ಣಿಸುತ್ತವೆ. ಈ ಕುಪಟೂರು –

**ತರದಿಂದೊಪ್ಪುವ ದೇವತಾಭವನದಿಂ ಪೊಂಗೋಟೆಯಿಂ ಚೆಲ್ವನಾ**
**ಳ್ದಿರೆ ಸೌಧಗ್ರಹದಿಂ ಲಸದ್ವಿಪಣಿ ವೀಧೀಮಾರ್ಗ್ಗದಿಂ ಖಾತಿಖಾ**
**ಪರಿವೇಷ್ಟ್ಯಂತರದಿಂ ಚಳತ್ಸ.....ವಾಸಳಿಂ ವೇಶ್ಯಮಂದಿರದಿಂದಂ**
**ನೆಱೆಕುಪ್ಪಟೂರ್ಕ್ಕರಮದೇಂಕಣ್ಗೆ ಬೆಡಂಗಾದುದೋ**

ಎಂಬುದಾಗಿ ಶೋಭಿಸುತ್ತಿತ್ತು ಎಂದು ಬಣ್ಣಿಸಿರುವ ಶಾಸನವು[೧೮೯] ಈ ಸ್ಥಳವು ತನ್ನ ಅಭಿರಾಮತೆಯಿಂದ "ಅಳಕಾಪುರವನ್ನು ಅಮರಾವತಿಯನ್ನು ಮತ್ತು ಭೋಗವತಿ ಪಟ್ಟಣವನ್ನು ಏಳಿಸುತ್ತಿತ್ತು" ಎಂದು ಬಣ್ಣಿಸಿದೆ. ಈ ಊರಿನಲ್ಲಿ ಎಲ್ಲಾ ಧರ್ಮಗಳೂ ನೆಲೆಗೊಂಡಿದ್ದವು ಎಂಬುದನ್ನು

**ಜಿನಧರ್ಮ್ಮಾವಾಸವಾದತ್ತಮಳವಿನಯದಾಗಾರವಾದತ್ತು ಪದ್ಮಾ**
**ಸನನಿರ್ಪ್ವಾಸದ್ಮವಾದತ್ತತಿವಿಶದಯಶೋಧಾಮವಾದತ್ತು ವಿದ್ಯಾ**
**ಧನಜನ್ಮಸ್ಥಾನವಾದತ್ತ ಸಮತರದಗಂಭೀರಸದ್ಗೇಹವಾದ**
**ತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ**

ಎಂಬುದಾಗಿ ಮತ್ತೊಂದು ಶಾಸನವು[೧೯೦] ಬಣ್ಣಿಸುತ್ತದೆ.

ಅರಸೀಕೆರೆ ಪಟ್ಟಣವನ್ನು ಹಲವಾರು ಶಾಸನಗಳು ಬಣ್ಣಿಸಿವೆ. ಈ ಅರಸೀಕೆರೆಯು ನಾನಾವೃತ್ತಿಗಳನ್ನು ಅವಲಂಬಿಸಿದ ಜನರಿಂದ ತಟಾಕಗಳಿಂದ ಉದ್ಯಾನಗಳಿಂದ ಕೂಡಿ ಪರಿಶೋಭಿಸುತ್ತಿತ್ತು ಎಂಬುದನ್ನು –

ಪರಮೇಷ್ಠಿಪ್ರಖ್ಯವಿಪ್ರಪ್ರತತಿಗಳಿನಿಳಾಪ್ರಖ್ಯಶೂದ್ರಾಳಿಯಿಂಚೇ
ಚರಕಾನ್ತಪ್ರಖ್ಯರಪ್ಪಾವಣಿಜರಿನಿನಜಪ್ರಖ್ಯಕೊಯ್ಲ್ಯಾಳ್ಗಳಿಂ ಸಾ
ಗರಮಂ ಪೋಲ್ವೀ ತಟಾಕಂಗಳಿನಮರಪುರೋದ್ಯಾನಮಂಪೋಲ್ತು ಶೋಭಾ
ಕರಮಪ್ಪುದ್ಯಾನದಿಂದೀಯರಸಿಯಕೆಱೆ ಭೂಭಾಗದೊಳ್ ಶೋಭಿಸಿರ್ಕ್ಕುಂ ॥

ಎಂಬ ಶಾಸನ ಪದ್ಯವು[೯೧] ನಿರೂಪಿಸಿದೆ. ಈ ಅರಸಿಕೆರೆಯು "ವೇದದ ಪುರಾಣದ ಆಗಮದ ಓದಿನ ಗೇಯರಸ ಕಾವ್ಯ ನಾಟಕ ರಸಸಂಪಾದನೆಯ ಜಾನದವೊಪ್ಪುವ" ಆವಾಸವಾಗಿತ್ತು.[೯೨] ಇದು ಪ್ರಾಕೃತಿಕವಾಗಿ ಹೇಗೆ ಶೋಭಾಯಮಾನವಾಗಿತ್ತು ಎಂಬುದನ್ನು ಈ ಪದ್ಯಗಳು ಸೊಗಸಾಗಿ ನಿರೂಪಿಸುತ್ತದೆ.

ತಂಬುಲವಳ್ಳಿಯ ಕಿತ್ತಲೆ
ಮಾಂಬನದಳದಳಿತ ಸಂಜೆಮಲ್ಲೆಗಳ ಪೂ ।
ವೆಂಬಿನ ಬೆಳುದಿಂಗಳಿಂದೆನೆ
ಕಣ್ಬಯಕೆಯ ಚೆಲುವನೀಉದರಸಿಯಕೆಱೆಯೊಳು[೯೩]
ಬಳಸಿದ ಪೂರ್ಣ್ಣತಟಾಕಾ
ವಳಿಯಿಂ ನುಲಿವಂಚೆಯಿಂ ಬನಂಗಳ ಸೋವಿಂ
ದಳಿಕುಳರುತಿಯಿಂದರಸಿಯಕೆಱೆ
ಯೆಳೆಯೊಳು ಸೊಗಯಿಪುದು ಜನದ ಕಂಗಂಮನಕಂ[೯೪]

ಕಾವೇರಿ ನದೀ ತೀರದಲ್ಲಿರುವ ಸೋಮನಾಥಪುರದಲ್ಲಿ ಶ್ರೀಸೋಮನಾಥ ದಂಡಾಧಿನಾಥನು ಸೋಮನಾಥೇಶ್ವರ ದೇವಾಲಯವನ್ನು ನಿರ್ಮಿಸಿದನೆಂಬ ವಿಚಾರವನ್ನು ಒಳಗೊಂಡಿರುವ ಹರಿಹರದ ಶಾಸನವೊಂದು[೯೫] ಆ ಸೋಮನಾಥಪುರದ ಸೊಬಗನ್ನು ಬಣ್ಣಿಸುತ್ತದೆ. ಆ ಪಟ್ಟಣವು

ಶ್ರೀಕಾವೇರಿ ನದೀ ಶೋಭಿತಪರಿಸರದೊಳ್ ಸುಸ್ಥಿರೌನ್ನತ್ಯಚಾರು
ಪ್ರಾಕಾರಂ ಗುಣ್ಪುವೆತ್ತಾ ಪರಿಖೆ ಮೆರೆಯಲಂತಲ್ಲಿ ಸೋಮಾರ್ಕವಿಥ್ಯಾ
ನೇಕಾಗಾರಂಗಳಿಂದಂ ಸಕಳಜನಾಕೀರ್ಣದಿಂ ಸೇವ್ಯಮಾಗ್ರಾ
ಮಾಕಾರಂ ಕಣ್ಗೆನಿಚ್ಚಂ ಸೊಗಯಿಪುದು ಪುರಂ ಸೋಮನಾಥಾಖ್ಯೆಯಿಂದಂ

ಆ ಸೋಮನಾಥಪುರವು ವಿಪ್ರವರೇಣ್ಯರಿಂದ ಪರಿಶೋಭಿಸುತ್ತಿತ್ತು. ಆ ವಿಪ್ರವರೇಣ್ಯರಾದರೋ –

**ಒದವಿದವೇದಶಾಸ್ತ್ರನಿಖಿಳಾಗಮತತ್ವದ ಮಂತ್ರತಂತ್ರತ**
**ರ್ಕದನಿಜನಿತ್ಯಕರ್ಮಕೃತಪುಣ್ಯದ ಯಜ್ಞವಿಶುದ್ಧತತ್ಪರ**
**ತ್ವದಸುಜನತ್ವದೂರ್ಜಿತವಿಪ್ರವರೇಣ್ಯರಿನಿಂತು ಚೆಲುವುವೆ**
**ತ್ತುದೆನಲು ಸೋಮನಾಥಪುರದುನ್ನತಿ ಬಣ್ಣಿಪೊಡಿನ್ನುವಗ್ಗಳಂ**

ಎಂಬುದಾಗಿ ಪ್ರಖ್ಯಾತರಾಗಿದ್ದರು. ಪ್ರಖ್ಯಾತವಾದ ಸೋಮನಾಥಪುರವು "ಉರ್ವಿಗೆ ಸರ್ವಸಮಗ್ರ ಭೂಷಣ"ವೆನಿಸಿತ್ತು.

ಹರಿಹರದ ದೇವಾಲಯವನ್ನು ಕಟ್ಟಿಸಿದ ಪೋಲಾಳ್ವ ದಂಡನಾಯಕನ ಮೂಲಸ್ಥಳ ಆಂಧ್ರದ ನಾರಣಪುರವಾಗಿದೆ. ಆ ನಾರಣಪುರವು –

**ವಾರವಧೂಕನತ್ಕನಕಕಂಕಣಝುಂಕೃತಿಯಿಂ ಮದೇಭಘಂ**
**ಟಾರವದಿಂ ರಸಂಮಸಗೆ ಪಾಡುವ ಗಾಯಕ ಬೃಂದದೊಂದು ಗೀ**
**ತಾರವದಿಂ ಜಗಜ್ಜನಕೆ ರಾಗಮನಿತ್ತು ಸುಖಕ್ಕೆ ಸಂತತಂ**
**ಕಾರಣವಾಗಿ ನಾರಣಪುರಂ ಪರಿರಂಜಿಪುದಾಂಧ್ರದೇಶದೊಳ್**[೧೯೬]

ನಗರ, ಪಟ್ಟಣ, ಗ್ರಾಮಗಳ ಪ್ರಾಕೃತಿಕ ಸೌಂದರ್ಯವನ್ನು ಬಣ್ಣಿಸುವಾಗ ಸಾಮಾನ್ಯವಾಗಿ ಎಲ್ಲಾ ಪ್ರದೇಶಗಳಲ್ಲೂ ಒಂದೇ ರೀತಿಯಾದ ವರ್ಣನೆಯು ಕಂಡುಬಂದಿದೆ. ಸಾಮಾನ್ಯವಾಗಿ ಆ ವರ್ಣನೆಯಲ್ಲಿ ಪದೇ ಪದೇ ಪುನರಾವರ್ತನೆಯಾಗುವ ಅಂಶಗಳೆಂದರೆ ಗಂಧಶಾಳೀವನ, ತೆಂಗು, ವಕುಳತಿಳಕ ಚಂಪಕಾಶೋಕ, ನಾಗವಲ್ಲೀ, ತಟಾಕ ಮೊದಲಾದವುಗಳಾಗಿವೆ. ಉದಾಹರಣೆಗೆ 'ಉದ್ಧರೆ' ಗ್ರಾಮವನ್ನು ಬಣ್ಣಿಸಿರುವ –

**ಬೆಳೆದಿರ್ದ್ದಾಗಂಧಶಾಳೀವನಪರಿವೃತದಿಂ ತೆಂಗಪಂಕೇಜ ಷಂಡಂ**
**ಗಳಿನೊಪ್ಪಂಬೆತ್ತುತೋರ್ಪ್ಪಾವಕುಳತಿಳಕದಿಂ ಚಂಪಕಾಶೋಕ ಜಂಬೂ**
**ಕುಳದಿಂ ಜಂಬೀರಪೂಗದ್ರುಮಕುರವಕದಿಂ ನಾಗವಲ್ಲೀ ತಟಾಕಂ**
**ಗಳಿನಾದಂಹರ್ಮ್ಯದಿಂದುದ್ಧರೆ ಬುಧಜನಸಂಪ್ರೀತಿಯಂ ಮಾಡುತಿರ್ಕ್ಕುಂ।**[೧೯೭]

ಎಂಬ ಪದ್ಯವನ್ನು ಗಮನಿಸಬಹುದು. ಇದೇ ರೀತಿಯಾದ ಬಣ್ಣನೆಯನ್ನು ಅಲ್ಪಸ್ವಲ್ಪ ವ್ಯತ್ಯಾಸಗಳೊಂದಿಗೆ ಹೊನ್ನವಳ್ಳಿ[೧೯೮], ಕೊತ್ತಂಗೆರೆ[೧೯೯], ಕಯ್ಯಾಡ್ಲ[೨೦೦], ಕೋಳಿಗುಂದ[೨೦೧], ಮಧುಸೂದನಪುರ[೨೦೨] ಮೊದಲಾದ ಸ್ಥಳಗಳ ವರ್ಣನೆಯಲ್ಲೂ ಕಾಣಬಹುದು. ಇಷ್ಟಾಗಿಯೂ ಸಹ ಶಾಸನಕವಿಗಳು ನಗರ ಪಟ್ಟಣಗಳ ವರ್ಣನೆಯ ಸಂದರ್ಭದಲ್ಲಿ ಹೊಸತನವನ್ನು ಮೆರೆದಿದ್ದಾರೆ.

ಅಲ್ಲಿದ್ದ ದೇವಾಲಯಗಳು, ಜಿನಾಲಯಗಳು, ಅಲ್ಲಿನ ಜನರ ವಿದ್ಯಾಪ್ರೌಢಿಮೆ ಮೊದಲಾದವುಗಳನ್ನು ಗುರುತಿಸಿ ವರ್ಣಿಸಿರುವ ಭಾಗಗಳು ಸೊಗಸಾಗಿ ಕಂಡುಬಂದಿವೆ.

**ಅಗ್ರಹಾರಗಳು :-**

'ಸರ್ವಜ್ಞಪುರ'ವೆಂಬುದು ಅರಕೆರೆಯ ಪ್ರತಿನಾಮಧೇಯವಾಗಿತ್ತು. ಹೊಯ್ಸಳರ ಕಾಲದ ಅಗ್ರಹಾರಗಳಲ್ಲಿ ಇದೂ ಸಹ ಒಂದು ಎಂಬುದು ಅರಕೆರೆಯ ಶಾಸನದಿಂದ ತಿಳದುಬರುತ್ತದೆ. ಈ ಅರಕೆರೆಯನ್ನು ಶಾಸನವು[೨೦೩]

**ಆ ನಾಡೊಳತ್ಯಧಿಕಂ**
**ತಾನೆನೆ ಪಿರಿಯಗ್ರಹಾರ ಸುಖಸಂಪದದಿಂ**
**ಶ್ರೀನಾರಿಯಿರ್ಪ್ಪನಿಳಯಂ**
**ಭೂನಾರಿಯೊಳೆಸೆದುದೆನಿಪ ಸರ್ವ್ವಜ್ಞಪುರಂ**

ಎಂದು ಗುರುತಿಸುತ್ತದೆ. ಆ ಪುರದಲ್ಲಿಯಾದರೋ

**ಸತೆಸೆವ ಪಲವು ಬೀದಿಯೊ**
**ಳೆಸೆದೋದುವ ವೇದಶಾಸ್ತ್ರಶಟ್ತರ್ಕ್ಕಂ ಪಲ**
**ರೆಸೆದೊಪ್ಪುತಿರ್ಪ್ಪಮಂಠೆಯ**
**ಪೊಸವೀಕ್ಖಣಸಾಲೆ ಪಲವು ವಿಷ್ಣುಗ್ರಿಹಂಗಳು ॥**

ಮೊದಲಾದವನ್ನು ಕಾಣಬಹುದಾಗಿತ್ತು. ಆ ಸರ್ವಜ್ಞಪುರದಲ್ಲಿ 'ವೇದಮನೋದುತಿರ್ಪ್ಪ ಅಧಿಕಶಾಸ್ತ್ರಮಂ ಒಮ್ಮೆಯು ಕೇಳುತಿರ್ಪ್ಪ ಸಂವಾದಿಪತರ್ಕ್ಕಮಂ ಬಿಡದೆ ತರ್ಕ್ಕಿಸುತಿರ್ಪ್ಪ ಪುರಾಣಮಂ ಮನೋಹ್ಲಾದದೆ ವೇಳುತಿರ್ಪ್ಪ ಸಕಳ ಸ್ಮೃತಿನಾಟಕ ಕಾಬ್ಯದರ್ಥಮಂ ಸಾಧಿಸುತಿರ್ಪ್ಪ ವಿಪ್ರತತಿ"ಯನ್ನು ಕಾಣಬಹುದಾಗಿತ್ತು. ಆ ಕಾರಣದಿಂದ ಬ್ರಹ್ಮನು ತನ್ನ ಸಮಸ್ತಕಲಾಪ್ರೌಢಿಮೆಯನ್ನು ತೋರಿಸಲು ಈ ಪುರದಲ್ಲಿ ನೆಲೆಸಿದನು ಎಂಬುದನ್ನು "ಬೇಱಿಲ್ತೀ ಲೋಕದೊಳ್ತಂನಖಿಳ ಕಲೆಗಳಂ ಧಾತನಾನಂದದಿಂದಂ **ತೋಱಿಲ್** ಪ್ರತ್ಯಕ್ಷರೂಪಂ ಪಲವನೆಸೆಯೆ ತಾಳ್ದಿರ್ದ್ದನೆಂಬಂದದಿಂದಂ ಬೇಱೀನ್ಸರ್ವಜ್ಞಮೆಂಬೀಪುರದೊಳು ಪಲರುಂ ಸೋಭಿಸುತ್ತಿರ್ದ್ದರ್" ಎಂದು ಬಣ್ಣಿಸಿದೆ.

ನಾಗರಖಂಡನಾಡಿನಲ್ಲಿ ಪರಿಶೋಭಿಸುತ್ತಿದ್ದ ಗ್ರಾಮವೆಂದರೆ ಬಾರಂಗಿ ಗ್ರಾಮ. ಆ ಬಾರಂಗಿ ಗ್ರಾಮವನ್ನು ನಾಗರಖಂಡನಾಡಿನ "ಶಿರೋವಿಭೂಷಣ"ವೆಂದು ಅದೇ ಗ್ರಾಮದ ಶಾಸನವೊಂದು[೨೦೪] ಬಣ್ಣಿಸುತ್ತದೆ. ಆ ಬಾರಂಗಿ ಗ್ರಾಮವಾದರೋ "ಸುಜ್ಞಾನ ವ್ಯಾಪಕರಪ್ಪ

ಭವ್ಯಜನದಿಂ ವಿದ್ವಜ್ಜನಾನೀಕದಿಂ ನಾನಾ ನೀತಿವಿದಗ್ಧರಿಂ ಧನಿಕರಿಂತೀವಿರ್ದ್ದುಲಕ್ಷ್ಮೀಮಹಾಸ್ಥಾನಂತಂ ನೊಳಗಿರ್ಪ್ಪುದೆಂಬ ಬಗೆ" ತೋರುತ್ತಿತ್ತು. ಹಾಗೆಯೇ ಆ ಬಾರಂಗಿ ಗ್ರಾಮವು

**ಭವವಸಥಂಗಳಿನಾಗಮ**

**ರವದಿಂಪ್ರಮಥರ್ಕ್ಕಳಿಂದವಿಪ್ರಾದಿಗಳಿಂ**

**ದವನೀ ಸಂಸ್ತುತದಿಂದಂ**

**ಶಿವಪುರಭಾರಂಗಿಯೂರದ ಸದಳಮೆಸೆಗುಂ**[೨೦೫]

ಎಂಬಂತೆ ಶೋಭಿಸುತ್ತಿತ್ತು.

ಮುತ್ತನಹೊಸವೂರು ಎಂಬುದು ಹಿರಿಯೂರಿನ ಪ್ರತಿನಾಮವಾಗಿತ್ತು. ಹೊಯ್ಸಳರ ಕಾಲದ ಶಾಸನವೊಂದು[೨೦೬] ವಿವಿಧ ದೇವಾಗಾರ ವಿಸ್ತಾರಿತವಾದ ಈ ಮುತ್ತಿನಹೊಸವೂರು ಪಟ್ಟಣವು "ದೊರೆ ತಾ ನಿಂದ್ರಪುರಕ್ಕೆ ಪಾಟಿಧನದ ಶ್ರೀಪಟ್ಟಣಕ್ಕೆ ಉರ್ವಿಯೊಳು ಸರಿತೂಕಂ ಬಗೆವಂದು ವಿಷ್ಣುನಗರಕ್ಕೆ" ಎಂಬಂತೆ ಒಪ್ಪುತ್ತಿತ್ತು ಎಂದು ಬಣ್ಣಿಸಿದೆ. ಕಯ್ಯಾಳ ಪಟ್ಟಣವು "ಧನದನನ್ನು ಮೀರಿಸುವ ವ್ಯಾಪಾರಿಗಳಿಂದ, ಮನುವನ್ನು ಮೀರಿಸುವ ಮುನಿಗಳಿಂದ, ಮನಸಿಜನನ್ನೆ ಮೀರಿಸುವ ವಿಟರಿಂದ, ಸುಂದರಸ್ತ್ರೀಯರಿಂದ ಕೂಡಿದುದಾಗಿತ್ತು" ಎಂದು ಬಣ್ಣಿಸಿರುವ ಶಾಸನವು,[೨೦೭] ಆ ನಗರವು"ತಂನುದ್ವಶೌಂದರ್ಯ್ಯದಿಂ ದಿವಿಜೇಂದ್ರೋಂನತ ಲೋಕಮಂ ನಗುವವೊಲ್" ಪರಿಶೋಭಿಸುತ್ತಿತ್ತು.

ಹಾರನಹಳ್ಳಿಗೆ 'ಸೋಮನಾಥಪುರ'ವೆಂಬ ಪ್ರತಿನಾಮಧೇಯವಿತ್ತು. ಈ ಸೋಮನಾಥಪುರವನ್ನು ಶಾಸನವೊಂದು[೨೦೮]

**ವರಭೂದೇವರ್ಚ್ಚಂದ**

**ಪರಿಣತರತಿನಿಖಿತಶಾಸ್ತ್ರಬಲಸಂಪಂನ**

**ಪ್ರ್ವರಮಕವೀಶ್ವರರ**

**ನರೇಶ್ವರರೊಪ್ಪಮನಪ್ಪುಕೆಯ್ವರಂತಾಪುರರೊಳ್**

ಎಂದು ಬಣ್ಣಿಸುವ ಮೂಲಕ ಆ ಸೋಮನಾಥಪುರವು ವೇದವೇದಾಂಗ ಪಾರಂಗತರಾದ ಬ್ರಾಹ್ಮಣರು, ಛಂದಸ್ಸು ಮೊದಲಾದ ಶಾಸ್ತ್ರಗಳಲ್ಲಿ ಪರಿಣತರೂ, ಶಾಸ್ತ್ರಸಂಪನ್ನರೂ, ಶ್ರೇಷ್ಠ ಕವಿಗಳಿಂದ ಕೂಡಿದುದಾಗಿತ್ತು ಎನ್ನುತ್ತದೆ.

ವಿದ್ಯಾವಂತರಿಂದ ಕೂಡಿದ ಹಾರನಹಳ್ಳಿಯ ಸೊಬಗನ್ನು ಕಂಡ ಸರಸ್ವತಿಯು ಇಲ್ಲಿಯೇ ನೆಲೆಸಬೇಕೆಂದು ತೀರ್ಮಾನಿಸಿದಳೆಂಬುದನ್ನು –

ಸರಸಿರುಹಭವನಭವನ

ದೊಳಿರದಾದರದಿಂದೆ ಬಂದು ಸಲೆ ನಿಲೆ ತಂ

ನೊಳ್‌ಸರಸತಿ ನೆಲೆಸಿರೆ

ವಳಭಿಗೆ ಸರಿಯಾದುದು ಸೋಮನಾಥಪುರಮುರ್ವ್ವರೆಯೊಳ್"

ಎಂಬ ಪದ್ಯದಲ್ಲಿ ನಿರೂಪಿಸಲಾಗಿದೆ.

ಒಟ್ಟಿನಲ್ಲಿ ಶಾಸನಕವಿಗಳು ನಗರ, ಪಟ್ಟಣಗಳನ್ನು ವರ್ಣಿಸುವ ಸಂದರ್ಭದಲ್ಲಿ ಒಂದೇ ರೀತಿಯಾದ ಪ್ರಾಕೃತಿಕ ಸಾಮಗ್ರಿಗಳನ್ನು ಬಳಸಿದರೂ ಸಹ ಕೆಲವೊಮ್ಮೆ ಆ ಪ್ರದೇಶಗಳಲ್ಲಿನ ವಿಶೇಷತೆಗಳನ್ನು ಸಹ ಗುರುತಿಸುವ ಪ್ರಯತ್ನವನ್ನು ಮಾಡುತ್ತಿದ್ದರು ಎನ್ನಬಹುದು. ಆ ಮೂಲಕ ವರ್ಣನೆಯಲ್ಲಿ ಹೊಸತನವನ್ನು ತರಲು ಮುಂದಾಗಿದ್ದರು ಎನ್ನಬಹುದು.

## ೪.೧೧ : ಪ್ರಕೃತಿ ವರ್ಣನೆ :-

ಚಂಪೂಕಾವ್ಯಗಳಲ್ಲಿ ಅಷ್ಟಾದಶ ವರ್ಣನೆಗೆ ಹೆಚ್ಚಿನ ಮಹತ್ವವಿದೆ. ಅಷ್ಟಾದಶ ವರ್ಣನೆಗಳಲ್ಲಿ ಸಮುದ್ರದ ವರ್ಣನೆ, ಮೇರು ಮಂದರ ಪರ್ವತಗಳ ವರ್ಣನೆಗೆ ವಿಶೇಷವಾದ ಸ್ಥಾನವಿದೆ. ಬಹುಶಃ ಸಂಸ್ಕೃತ ಕಾವ್ಯ ಪರಂಪರೆಯನ್ನು ಅನುಸರಿಸಿ ಕನ್ನಡದಲ್ಲೂ ಈ ರೀತಿಯಾದ ವರ್ಣನೆಗಳು ನುಸುಳಿರಬಹುದು. ಸಹಜವಾಗಿ ಶಿಷ್ಟಕಾವ್ಯ ಪರಂಪರೆಯನ್ನು ಅನುಸರಿಸಿದ ಕನ್ನಡ ಶಾಸನಗಳು ಚಂಪೂಕಾವ್ಯದ ಮಾದರಿಯಲ್ಲೇ ಸಮುದ್ರವರ್ಣನೆ, ಮೇರುಪರ್ವತ, ಮಂದರಪರ್ವತಗಳ ವರ್ಣನೆಯನ್ನು ಮಾಡುವ ಪರಿಪಾಠವನ್ನು ಬೆಳೆಸಿಕೊಂಡವು.

### ಸಮುದ್ರ: -

ಕೆಲವು ಕನ್ನಡ ಶಾಸನಗಳು ಸಮುದ್ರವರ್ಣನೆಯಿಂದ ಆರಂಭವಾದವು. ಶಾಸನಗಳಲ್ಲಿ ಬಂದಿರುವ ಸಮುದ್ರದ ವರ್ಣನೆಯ ಪದ್ಯಗಳೆಲ್ಲಾ ಒಂದೇ ರೀತಿಯಾಗಿದ್ದು ಏಕತಾನತೆಗೆ ಒಳಗಾಗಿದ್ದವು ಎನ್ನಲು ಅವಕಾಶವಿದೆ. ಸಮುದ್ರವನ್ನು ಬಣ್ಣಿಸಿರುವ ಪದ್ಯಗಳಲ್ಲಿ ಸಂಸ್ಕೃತ ಭಾಷೆಯ ಪ್ರೌಢಿಮೆಯನ್ನು ಮೆರೆಯುವಂತಹ ರಚನಗಳೇ ಹೆಚ್ಚಾಗಿ ಕಂಡುಬಂದಿದೆ.

ಅದು ನಾನಾನಕ್ರಚಕ್ರಕ್ರಮಕರಿಮಕರೋಡ್ಡೀನ ಪಾಠೀನಪುಚ್ಛ

ಚ್ಛದ ವಾತಾಘಾತಭೀತಾಚಳ ಚಳನ ಚಳತ್ತುಂಗರಂಗತ್ತರಂಗೌ

ಘದುರಂತ ಪ್ರಾಂತಮುಜ್ಜೃಂಭಿತ ಬಹಳ ತಡಿಜ್ಜಾಳಲೀಳಾವಿನೀಳಾಂ

ಬುದ ಬಿಂಬಾಡಂಬರಂ ಕಣ್ಗೆಸುವುದು ಲಹರೀಲೋಳ ಬಾಲಪ್ರವಾಳಂ [೨೦೯]

**ಮಕರವ್ರಾತಾಭಿಘಾತೋಚ್ಚಳಿತ ಕಮಠಸಂಘಟ್ಟಸಂಸ್ಪರ್ಧಿಮೀನ**
**ಪ್ರಕರಪ್ರಕ್ಷೋಭಿತೋದ್ವೃತ್ತರಳತರತರಂಗೋತ್ಕರಂ ಕ್ಷಿಪ್ತಮುಕ್ತಾ**
**ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದಂನಿರಳೋತ್ತಾಳ ಕಲ್ಲೋಲ ಮಾಳಾ**
**ಧಿಕ ಸಂಘರ್ಷ ಪ್ರಜಾತಪ್ರಬಳ ಘನಘನಧ್ವಾನ ರೌದ್ರಂ ಸಮುದ್ರಂ ॥**

ಎಂಬ ಪದ್ಯಗಳು ಗಂಭೀರವಾದ ಸಮುದ್ರವನ್ನು ಗಂಭೀರವಾದ ಭಾಷೆಯಲ್ಲೇ ಬಣ್ಣಿಸುವಂತಹ ರಚನೆಗಳಾಗಿವೆ.

ಆದರೆ ಇವುಗಳಿಗಿಂತ ವಿಭಿನ್ನವಾಗಿ, ದೇಸಿಯವಾದ ರೀತಿಯಲ್ಲಿ –

**ತಂನೊಳಗಿರ್ದ್ದ ಮೌಕ್ತಿಕವಿಳಾಧರ ವದ್ರಿಥರಾಂಗರೋಚಿಗ**
**ಳ್ತಂನೊಳಗೊಳ್ಪುವೆತ್ತುಪೊಱಪೊಣ್ಮುವಪೊಲ್ಜಳಶೀಕರಂಗಳಿಂ**
**ದುಂನತಮಾದ ಬಲ್ದೆರೆಗಳಿಂ ತೆರೆಮಾಲೆಯ ನೀಲರೋಚಿಯಿಂ**
**ತಂನತಿಗುಣ್ಪುಘೋಷದೊದವಿ ಲವಣಾಂಬುಧಿ ನಾಡೆರಂಜಿಕುಂ**[೨೧೦]

ಎಂಬ ಪದ್ಯವು ಬಣ್ಣಿಸುತ್ತದೆ. ಮೂಡಬಿದಿರೆಯ ವಿಜಯನಗರದರಸರ ಕಾಲಕ್ಕೆ ಸೇರಿದ ಶಾಸನದಲ್ಲಿ[೨೧೧] ಸಮುದ್ರವು ಸುರಪುರ, ಭೂವರೇಶ್ವರನ ನಿವಾಸ, ಅಹೀಂದ್ರಮಂದಿರವನ್ನು ಹೋಲುತ್ತಿತ್ತು ಎಂಬುದಾಗಿ ಶ್ಲೇಷೆಯಿಂದ ಬಣ್ಣಿಸಿರುವ ಪದ್ಯವು ಈ ರೀತಿಯಾಗಿದೆ.

**ಸುರಪುರದಂದಮಾಯ್ತನಿಮಿಷಾಳಿಗಳಿಂ ವರಶಂಖಚಕ್ರದಿಂ**
**ಹರಿಯಕರಂಗಳಂತಖಿಳವಾಹಿನಿಸಂಗಮದಿಂದ ಭೂವರೇ**
**ಶ್ವರನ ನಿವಾಸದಂತುರುವಿಷಾಕರಮಾದುದಜಿಂದಹೀಂದ್ರಮಂ**
**ದಿರಮನೆಪೋಲ್ತುದೀಲವಣವಾರಿಧಿಯೆಂದೆ ನಲೇನ ಬಣ್ಣಿಪೆಂ ॥**

**ಪರ್ವತಗಳು :–**

ಸಮುದ್ರದ ಬಣ್ಣನೆಯ ನಂತರದಲ್ಲಿ ಕೆಲವು ಶಾಸನಗಳಲ್ಲಿ ಮಂದರಪರ್ವತ, ಮೇರುಪರ್ವತದ ಬಣ್ಣನೆಯ ಪದ್ಯಗಳು ಗೋಚರಿಸುತ್ತವೆ. ಹರಿಹರ[೨೧೨] ಮತ್ತು ಹೊನ್ನಾಳಿಯ ಚಿಕ್ಕಯೆರೆಹಳ್ಳಿಯ[೨೧೩] ಶಾಸನಗಳಲ್ಲಿ ಮಂದರಪರ್ವತವನ್ನು ಬಣ್ಣಿಸಿರುವ ಪದ್ಯವು ಒಂದೇ ರೀತಿಯಾಗಿದ್ದು ಆ ಪದ್ಯವು ಈ ರೀತಿಯಾಗಿದೆ.

**ಸುರವಿದ್ಯಾಧರದಂಪತಿ ಪ್ರಕರದಿಂ ಚಂದ್ರಾರ್ಕತಾರಾಗಣೋ**
**ತ್ಕರಶೋಭಾಂಕಿತಮೇ ಖಳಾವಳಯದಿಂ ಸತ್ಕಾಂಚನೋದೀಪ್ತಿ ಬಂ**

**ಧುರಗೋತ್ರಾಚಳದುನ್ನತಪ್ರತಿಭೆಯಿಂ ಕಲ್ಪಾಂಘ್ರಿಪಾರಾಮ ವಿ**

**ಸ್ತರದಿಂ ರಂಜಿಪುದುಜ್ವಳೋರ್ಜಿತಯಶಃ ಶ್ರೀಸುಂದರಂ ಮಂದರಂ**

ಆ ಮಂದರ ಪರ್ವತವು ದೇವವಿದ್ಯಾಧರ ದಂಪತಿಗಳ ಸಮೂಹದಿಂದ, ಚಂದ್ರಸೂರ್ಯನಕ್ಷತ್ರಗಳ ಸಮೂಹಗಳ ಶೋಭೆಯ ಹೊಳಪಿನ ಉದ್ಯಾಣಪ್ರದೇಶದಿಂದ, ಚಿನ್ನದ ಕಾಂತಿಯಿಂದ ಮನೋಹರವಾದ ಮತ್ತು ಬೆಟ್ಟಗಳ ಒಡೆಯನೆಂಬ ಔನ್ನತ್ಯದಿಂದ ಕಲ್ಪವೃಕ್ಷಗಳ ತೋಟಗಳಿಂದ ಕೂಡಿ ಅತಿಶಯವಾದ ಯಶಸ್ಸನ್ನು ಹೊಂದಿರುವ ಸುಂದರವಾದ ಮಂದರಪರ್ವತವು ರಂಜಿಸುತ್ತಿತ್ತು.

ಅದೇ ಮಂದರಪರ್ವತವನ್ನು ಭಾರಂಗಿ ಗ್ರಾಮದ ಶಾಸನವು[೨೧೪] ಮೇಲಿನಂತೆಯೇ ಬಣ್ಣಿಸಿದ್ದರೂ "ಮಂಗಳ ಗಾಯಕಾನಿವಹದಿಂ ಶ್ರೀರುದ್ರನಾಸ್ಥಾನದಿಂ ಬ್ರತಿ ಸಂಘಾತದಿನಾಸುವರ್ಣ್ನ ವಿಳಸತ್ಸಂವೇದಿಕಾ ಸಂವೃತಾವೃತದಿಂ" ಕೂಡಿ ಪರಿಶೋಭಿಸುತ್ತಿತ್ತು ಎನ್ನುತ್ತದೆ.

ಮಂದರಪರ್ವತದ ವರ್ಣನೆಯಂತೆಯೇ ಕೆಲವು ಶಾಸನಗಳಲ್ಲಿ ಮೇರುಪರ್ವತದ ಬಣ್ಣನೆಯನ್ನು ಕಾಣಬಹುದು. ಕುಪ್ಪಟೂರಿನ ಶಾಸನವೊಂದು[೨೧೫]

**ಆಜಳನಿಧಿಪರಿವೇಷ್ಟಿಸಿ**

**ದಾಜಂಬೂದ್ವೀಪ ಮಧ್ಯದೊಳ್ಮೇರುನಗಂ**

**ರಾಜಿಪುದೆಣ್ದೆಸೆಗಮರಸ**

**ಮಾಜದೆಸುರಧೇನು ದೇವತರು ಪಂಚಕದಿಂ"**

ಎಂದು ಬಣ್ಣಿಸಿದೆ.

ಮೂಡಬಿದರೆಯ ಹೊಸಬಸದಿಯ ಶಾಸನದಲ್ಲಿ[೨೧೬]

**"ಶ್ರೀಜೈನಜ್ಞಾನಮೀನಾಕರಗತತರಣಿ ಪ್ರಾಯದಂತಿರ್ದ್ದ ಲೋಕಕ್ಕೆ**

**ಜಂಬೂದ್ವೀಪಭೂಪಂ ಪರಿವೃತವಿಲಸದ್ವಾಹಿನೀ ನಾಥನಿಂದಂ**

**ರಾಜಿಕ್ಕುಂ ಅಂತು ಅಲ್ಲಿ ನಾನಾಮಣಿನಿಕರಹಟತ್ಕೋಟಿಕೂಟಾರ್ಜ್ಜಿಯಿಂ**

**ಸ್ವರ್ಭೂಜವ್ರಾಂತಗಳಿಂ ಕ್ರೀಡಿಪ ಸುರತತಿಯಿಂದ ಒಪ್ಪುಗಂ ಮೇರುಶೈಲಂ"**

ಎಂಬುದಾಗಿ ಮೇರುಪರ್ವತವನ್ನು ಬಣ್ಣಿಸಿದೆ.

ಮೇರು ಮಂದರಪರ್ವತಗಳನ್ನು ಬಣ್ಣಿಸುವ ಪರಿಪಾಠವು ಕಾವ್ಯಗಳಲ್ಲಿ ಹೇಗೆ ಸಹಜವಾಗಿತ್ತೋ ಅದೇ ಕ್ರಮವನ್ನು ಅನುಸರಿಸಿ ಶಾಸನಗಳು ಅವುಗಳ ಬಣ್ಣನೆಯನ್ನು ಮಾಡಿವೆಯೆನ್ನಬಹುದು. ಅದಕ್ಕಿಂತ ವಿಶೇಷವಾಗಿ ಹೊಯ್ಸಳ ನರಸಿಂಹನ ಕಾಲದ ಮಾವನೂರಿನ ಶಾಸನವು[೨೧೭] ಶ್ರೀಪರ್ವತ ಅಥವಾ ಶ್ರೀಶೈಲವನ್ನು ಸೊಗಸಾದ ಗದ್ಯದಲ್ಲಿ ಬಣ್ಣಿಸುತ್ತದೆ. ಶ್ರೀಶೈಲಪರ್ವತದ ವರ್ಣನೆಯ ಭಾಗ ಈ ರೀತಿಯಾಗಿದೆ.

**"ಸ್ವಸ್ತಿ ಸಮಸ್ತಸಮುದ್ರಮುದ್ರಿತಮಪ್ಪ ಧರಾಕಾಂತೆಯ ಶಿರಃಕಂಜದಂತೆ**
**ಪುರತ್ರಯವಿಪಿನದಹನದಾವಾನಳನ ಸುಕೃತ ಸರ್ವ್ವಸ್ವದಗವಸಣಿಗೆಯಂತೆ**
**ಸಕಳಭಕ್ತರ ಪುಣ್ಯಸಾಲೆಯಂತೆ ಮುಕ್ತ್ಯಾಂಗನೆಯ ತಾಯ್ವನೆಯಂತೆ**
**ಧರ್ಮಾರ್ತ್ಥಕಾಮಮೋಕ್ಷಂಗಳಪ್ಪ ಚತುರ್ವ್ವಿಧಪುರುಷಾರ್ತ್ಥಂಗಳ**
**ಜನ್ಮಕ್ಷೇತ್ರದಂತೆ ಮೆಱೆವ ಶ್ರೀಪರ್ಬ್ಬತ"**

**ನದಿ :-**

ಕರ್ನಾಟಕದಲ್ಲಿ ಹಲವಾರು ಪ್ರಮುಖ ನದಿಗಳು ಪ್ರವಹಿಸುತ್ತಿದ್ದರೂ ಆ ನದಿಗಳನ್ನು ಬಣ್ಣಿಸಿರುವ ಕನ್ನಡ ಪದ್ಯಗಳು ಶಾಸನಗಳಲ್ಲಿ ಕಂಡುಬರದಿರುವುದು ಸೋಜಿಗವೇ ಸರಿ. ಕ್ರಿ.ಶ.೧೧ನೆಯ ಶತಮಾನಕ್ಕೆ ಸೇರಿದ ನರಸಿಂಹರಾಜಪುರದ ಶಾಸನವೊಂದರಲ್ಲಿ[೨೧೮] ತುಂಗಭದ್ರ ನದಿಯನ್ನು ಸಂಸ್ಕೃತದಲ್ಲಿ ರಚಿತವಾದ ಪದ್ಯದಲ್ಲಿ ವರ್ಣಿಸಲಾಗಿದೆ. ಆ ತುಂಗೆಯಾದರೋ "ಸಹ್ಯಾಚಳಸ್ತನತಟೋಜ್ವಳಹಾರಿ" ಎಂಬುದಾಗಿ ಹೊಗಳಲ್ಪಟ್ಟಿದ್ದಾಳೆ.

ಗಂಗಾನದಿಯು ಪುಣ್ಯಪವಿತ್ರವಾದ ಪ್ರಮುಖವಾದ ಭಾರತದ ನದಿಗಳಲ್ಲಿ ಮುಖ್ಯವಾದುದು. ಆ ಗಂಗಾನದಿಯನ್ನು **"ತರಳತರಂಗ ಭಂಗುರಸಮನ್ವಿತೆ, ಝುಷಚಕ್ರವಾಕ ಭಾಸುರ ಕಳಹಂಸಪೂರಿತೆ, ಉದ್ಘಲತಾಂಕಿತ ಗಾತ್ರೆ, ಮನೋಹರ ನವಶೈತ್ಯ ಮಾಂದ್ಯಶುಭಗನ್ಧಸಮೀರನಿವಾಸೆ"** ಎಂಬುದಾಗಿ ಕಲ್ಲೂರುಗುಡ್ಡ ಮತ್ತು ಪುರಲೆ ಗ್ರಾಮದ ಶಾಸನಗಳು,[೨೧೯] ಬಣ್ಣಿಸಿವೆ.

ಪ್ರಕೃತಿಯ ವರ್ಣನೆಯ ಸಂದರ್ಭದಲ್ಲಿ ಹೆಚ್ಚಾಗಿ ಹೊಸತನಕ್ಕಿಂತ ಶಾಸನಕವಿಗಳು ಸಾಂಪ್ರದಾಯಿಕವಾದ ವಿಧಾನವನ್ನು ಅಳವಡಿಸಿಕೊಂಡಿದ್ದರು. ಈ ಕಾರಣದಿಂದಾಗಿ ಸಮುದ್ರ, ಪರ್ವತಗಳನ್ನು ವರ್ಣಿಸಿರುವ ಪದ್ಯಗಳಲ್ಲಿ ಪ್ರೌಢವಾದ ಭಾಷೆಯನ್ನು, ಶಬ್ದಾಡಂಬರವನ್ನು ಕವಿಗಳು ಬಳಸಿದ್ದಾರೆ ಎನ್ನಬಹುದು.

**೪.೧೨ : ದೇವಾಲಯಗಳು :-**

ಭಾರತೀಯರ ಸಾಮಾಜಿಕ ಬದುಕಿನಲ್ಲಿ, ಧಾರ್ಮಿಕ ಜೀವನ ಮತ್ತು ಮೌಲ್ಯಗಳನ್ನು ರೂಪಿಸುವಲ್ಲಿ ದೇವಾಲಯಗಳು ಮಹತ್ವಪೂರ್ಣವಾದ ಪಾತ್ರವನ್ನು ವಹಿಸಿವೆ. ಆಧ್ಯಾತ್ಮ, ಕಲೆ, ಸಾಮಾಜಿಕ, ನ್ಯಾಯ ಮೊದಲಾದ ಚಟುವಟಿಕೆಗಳ ಕೇಂದ್ರವಾದ ದೇವಾಲಯಗಳ ನಿರ್ಮಾಣವನ್ನು ಕನ್ನಡಿಗರು ಅತ್ಯಂತ ಶ್ರದ್ಧೆಯಿಂದ ಮಾಡುತ್ತಿದ್ದರು. ವಿಶೇಷವಾಗಿ ಕರ್ನಾಟಕವನ್ನು ಆಳಿದ ರಾಜಮನೆತನಗಳು ಶಿಲ್ಪಕಲೆಗೂ ಹೆಚ್ಚಿನ ಮಹತ್ವವನ್ನು ನೀಡಿದ ಕಾರಣದಿಂದಾಗಿ ಕರ್ನಾಟಕದಲ್ಲಿ

ನಿರ್ಮಾಣವಾದ ದೇವಾಲಯಗಳು ಕಲಾಪರಿಪೂರ್ಣವಾಗಿ ಜನಮನವನ್ನು ಸೆಳೆಯುತ್ತಾ ಆಕರ್ಷಣೀಯವಾಗಿ ನಿರ್ಮಾಣಗೊಂಡವು. ದಕ್ಷಿಣಕರ್ನಾಟಕದ ಕನ್ನಡ ಶಾಸನಗಳಲ್ಲಿ ಉಲ್ಲೇಖ ಗೊಂಡಿರುವ ದೇವಾಲಯಗಳ ಸೌಂದರ್ಯವನ್ನು ಶಾಸನಗಳ ಪಾಠವನ್ನು ಆಧರಿಸಿ ಈಗ ಗಮನಿಸಬಹುದು.

ಕಲ್ಯಾಣಿಯ ಚಾಲುಕ್ಯರ ಕಾಲದಲ್ಲಿ ಬಳ್ಳಿಗಾವೆಯಲ್ಲಿ ನಿರ್ಮಾಣವಾದ ಸರ್ವ್ವೇಶ್ವರ ದೇವಾಲಯ[೨೨೦], ಹೊಯ್ಸಳರ ಕಾಲದಲ್ಲಿ ನಿರ್ಮಾಣಗೊಂಡ ಬಿದಿರೆಯ ಕಣಿಗಲನಾಥ ದೇವಾಲಯ[೨೨೧], ಬಳಗಟ್ಟೆಯ ಕುಸುವೇಶ್ವರ ದೇವಾಲಯ[೨೨೨], ಹಿರಿಯೂರಿನ ಕುಂಜೇಶ್ವರ ದೇವಾಲಯ[೨೨೩], ಬಸರಾಳಿನ ಮಲ್ಲಿಕಾರ್ಜುನ ದೇವಾಲಯ[೨೨೪], ಹರಿಹರದ ಹರಿಹರೇಶ್ವರ ದೇವಾಲಯ[೨೨೫]ಗಳ ಬಣ್ಣನೆಯು ಶಾಸನಗಳಲ್ಲಿ ಬಂದಿವೆ.

"ಎಳೆಗೆಲ್ಲಂ ಬಲಿರಾಜಧಾನಿನಯನಕ್ಕಾನಂದಮೆಂದಿಂದ್ರನ್ ಈ ಪೊಟಿಲಂ ನೋಡುತಮಿರ್ದ್ದು ಇಲ್ಲಿಯೆ ವಿಮಾನಂ ನಿನ್ದುದು" ಎಂಬಂತೆ ವಿಮಾನಗೋಪುರದಿಂದ ಸರ್ವ್ವೇಶ್ವರ ದೇವಾಲಯವು ಕಂಗೊಳಿಸುತ್ತಿತ್ತು[೨೨೬] ಬಳಗಟ್ಟೆಯ ಕುಸಮೇಶ್ವರ ದೇವಾಲಯವು "ವಸುಧಾದೇವಿಯ ಮಕುಟಮೋ ಹೊಸತೊಂದಿಂದ್ರನ ವಿಮಾನಮಿಳಿದುದೊ ದಿವದಿಂ ವಸುಮತಿಗೆ" ಎಂಬಂತೆ ಮನೋಹರವಾಗಿ ಶೋಭಿಸುತ್ತಿತ್ತು[೨೨೭] ಪಸಾಯಿತ ಬೆಳ್ಳಪ್ಪ ನಾಯಕನು ನಿರ್ಗುಂದನಾಡಿನ ಬಿದಿರೆಯಲ್ಲಿ ನಿರ್ಮಿಸಿದ ಕಲಿದೇವ ಅಥವಾ ಕಣಿಗಲನಾಥ ದೇವಾಲಯವನ್ನು ಬಣ್ಣಿಸುವಾಗ ಶಾಸನಕವಿಯು "ಶಿವಪಾರ್ವತಿ"ಯ ವಿವಾಹಕ್ಕಾಗಿ ವಿಶ್ವಕರ್ಮವೇ ನಿರ್ಮಿಸಿದ ಸೋಭನಮಂಟಪ' ಎಂಬುದಾಗಿ ವಿಶಿಷ್ಟವಾದ ವಿನೂತನ ಕಲ್ಪನೆಯನ್ನು ಮಾಡಿದ್ದಾನೆ. ಶಾಸನಪದ್ಯವು[೨೨೮] ಈ ರೀತಿಯಾಗಿದೆ.

**ಇದು ಮದನಾರಿಗಂ ಸುರಗಣಾಂಬಿಕೆಗಂದು ವಿವಾಹಕಾಲದೊಳು**
**ಮುದದಿ ಸುರರ್ಕ್ಕಳಿಂದ್ರಸಹಿತಂ ನೆರೆದರ್ತ್ತಿಯಿ ವಿಶ್ವಕರ್ಮ್ಮನೆ**
**ಮ್ಮದಿನೆಜಿಮಾಡಲಂತೆಸೆವ ಸೋಭನಮಂಟಪದಂತಿರೊಪ್ಪುವೀ**
**ಬಿದಿರೆಯೊಳೀಸ್ವರಾಲಯಮನೆತ್ತಿಸಿ ಬೆಳ್ಳಪನೇಂಕ್ರತಾರ್ತ್ಥನೋ**

ಪೌರಾಣಿಕವಾದ ಹಿನ್ನೆಲೆಯಲ್ಲಿ, ಉತ್ಪ್ರೇಕ್ಷೆಯಲ್ಲಿಯೇ ದೇವಾಲಯಗಳ ವರ್ಣನೆಯ ಭಾಗಗಳು ಕಂಡುಬರುತ್ತವೆ. ಆದರೆ ಬಸರಾಳು ಹಾಗೂ ಹರಿಹರ ದೇವಾಲಯವನ್ನು ಶಾಸನಕವಿಗಳು ಬಣ್ಣಿಸುವಾಗ ಅವುಗಳ ವಾಸ್ತುವಿನ (ಕಟ್ಟಡದ) ವಿನ್ಯಾಸವನ್ನು ವರ್ಣಿಸಿರುತ್ತಾರೆ. ಬಸರಾಳಿನ ಮಲ್ಲಿಕಾರ್ಜುನ ದೇವಾಲಯವನ್ನು ಹೊಯ್ಸಳರ ಇಮ್ಮಡಿ ನರಸಿಂಹನ ಕಾಲದಲ್ಲಿ ಮಲೆಯನಾಯಕ ಮತ್ತು ಆತನ ಸೋದರರು ನಿರ್ಮಿಸುತ್ತಾರೆ. ಈ ದೇವಾಲಯವು ಹೊಯ್ಸಳ ವಾಸ್ತುಶಿಲ್ಪಕ್ಕೆ

ಅನುಗುಣವಾಗಿ ನಿರ್ಮಾಣವಾಗಿದ್ದು, ಆ ದೇವಾಲಯದ ಬಣ್ಣನೆಯನ್ನು ಶಾಸನಪದ್ಯವು ಹೀಗೆ ಮಾಡಿದೆ.

**ಮೊದಲಿಂದಂ ಕಳಶಂಬರಂ ಮೆಱೆವ ನಾನಾಚಿತ್ರಪತ್ರಂಗಳಿಂ**
**ಮುದಮಂ ಬೀಱುವ ಭಾರತಾದಿ ಕಥೆಯಂ ಮೆಯ್ವೆತ್ತ ಕೂಟಂಗಳಿಂ**
**ದಿದು ಪಾಂಚಾಳಿಕೆ ತಳ್ತ ಮೇರುಗಿರಿಯೋ ಪೇಳೆಂಬಿನಂವಿಭ್ರಮಾ**
**ಸ್ಪದಮಾಗಿಪ್ಪುದು ಮಲ್ಲಿಕಾರ್ಜುನ ದೇ......... ದೇವಾಲಯಂ"**[೨೨೯]

ದೇವಾಲಯದ ಅಧಿಷ್ಠಾನದಿಂದ ಗೋಪುರದವರೆಗೂ ಹಲವಾರು ರೀತಿಯಾದ ಸುಂದರವಾದ ಕೆತ್ತನೆಗಳಿಂದ, ಮನಸ್ಸಿಗೆ ಆನಂದವನ್ನುಂಟು ಮಾಡುವ ಮಹಾಭಾರತದ ಪ್ರಸಂಗಗಳನ್ನು ಒಳಗೊಂಡ ಕೆತ್ತನೆಗಳಿಂದ ಕೂಡಿದುದಾಗಿ 'ಮೇರುಗಿರಿ'ಗೆ ಸಮಾನವೆಂಬಂತೆ ಮನಸ್ಸಿಗೆ 'ವಿಭ್ರಮ'ವನ್ನುಂಟು ಮಾಡುವಂತೆ ಕಂಗೊಳಿಸುತ್ತಿತ್ತು ಮಲ್ಲಿಕಾರ್ಜುನ ದೇವಾಲಯ.

ಹೊಯ್ಸಳರ ಕಾಲದ ಮತ್ತೊಂದು ಪ್ರಮುಖ ದೇವಾಲಯವೆಂದರೆ ಹರಿಹರದ ಹರಿಹರೇಶ್ವರ ದೇವಾಲಯ. ಈ ದೇವಾಲಯವನ್ನು ಪೋಲಾಳ್ವ ದಂಡನಾಯಕನು ಕ್ರಿ.ಶ.೧೨೨೪ರಲ್ಲಿ ನಿರ್ಮಿಸಿದನು. ಈ ಹರಿಹರೇಶ್ವರ ದೇವಾಲಯದ ವಾಸ್ತುವಿನ ವರ್ಣನೆಯನ್ನು ಹರಿಹರದ ಶಾಸನವು[೨೩೦] ಸುದೀರ್ಘವಾಗಿ ಹಾಗೂ ಸೊಗಸಾಗಿ ನಿರೂಪಿಸಿದೆ.

"ಐಶ್ವರ್ಯದಿಂದ ಕೂಡಿದ್ದರೂ ಸಹ ಯಾವ ದೊರೆಗಳೂ ಈ ಹಿಂದೆ ಮಾಡಿಸಲು ಮುಂದಾಗದಿದ್ದ ದೇವಾಲಯ ನಿರ್ಮಾಣ ಕೆಲಸವನ್ನು 'ನರಸಿಂಹಕ್ಷಿತಿಪಾಲ ಮಂತ್ರಿತಿಳಕನಾದ ಪೋಲಾಳ್ವ ದಂಡನಾಯಕ'ನು ತಾನೆ ಶ್ರೀಹರಿಹರದೇವತಾವಾಸವನ್ನು ಮಾಡಿಸಿ 'ಜಗದ್ಭೂಷಣ'ನೆಂದು ಹೆಸರನ್ನು ಪಡೆದನು. ಆ ಹರಿಹರ ದೇವಾಲಯವು "ದೆಸೆವೆಣ್ಗಳ್ ನೆಲೆಗೊಂಡ ಪುತ್ಥಳಿಗಳಿಂ ಗೋತ್ರಾದ್ರಿಗಳ್ ತುಂಗಕೂಟ ಸಹಸ್ರಂಗಳನಿಂದು ಸೂರ್ಯವಳಯಂಗಳ್ ಪೋಲ್ವಿನಂ ಶೋಭಿಸೆ ಚೆಂಬೊಂಗಳ ಸಂಗಳ" ಶ್ರೀಗೇಹವಾಗಿತ್ತು. ಆ ದೇವಾಲಯವು

**ಗಿರಿಯೋಕೂಟಮೋ ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ**
**ದೊರೆವೆತ್ತಾ ದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ**
**ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವದಂಡೇಶನ**
**ಚ್ಚರಿಯಪ್ಪಂತಿರೆ ಮಾಡಿದಂ ಹರಿಹರ ಶ್ರೀದೇವತಾವಾಸಮಂ**

ಎಂಬಂತೆ ಶೋಭಿಸುತ್ತಿತ್ತು. ಈ ಹರಿಹರನ ಶ್ರೀಗೇಹವು "ಇದು ಪದ್ಮಾವಸಥಂ ದಿವಾಕರನವೋಲ್ ಕೀರ್ತ್ಯುನ್ನತಂ ಪಾತ್ರದಾನದವೋಲ್ ಸತ್ಕುಮುದಂ ಸರೋವರದವೋಲ್ ಘಂಟಾನ್ವಿತಂ ದಿಗ್ಗಜೇಂದ್ರದ ವೋಲ್" ಎಂಬಂತೆ ಇತ್ತು. ಈ ದೇವಾಲಯದ ರಂಗಸ್ಥಳವು –

ನಗೆವಾಯಿಂ ಕುಮುದಂಗಳಿಂ ನೆಗೆದ ಜಂಘಾಕಾಂಡದಿಂ ರನ್ನವ
ಟ್ಟಗೆಯಿಂ ದಂಡಲತಾವಿಚಿತ್ರಮಯಪತ್ರವ್ರಾತದಿಂ ಘಂಟೆಯಿಂ
ಬಗೆಯಿಂ ಬಲ್ಸೆರೆಗೆಯ್ವ ಪುತ್ತಳಿಗಳಿಂ ರಂಗಸ್ಥಳೀಸ್ತಂಭಮಾ
ವಗಮೊಪ್ಪುತ್ತಿರೆ ರಂಜಿಕುಂ ಹರಿಹರ ಶ್ರೀದೇವತಾಮಂದಿರಂ"

ಈ ದೇವಾಲಯವನ್ನು "ಹೆರ್ಮಾಡಿರಾಯಂ ಮಾಡಿಸಲ್ವೇಳ್ಕುಮೆಂದಿರ್ಪನ್ನಂ ಮುಂದೊರ್ಬಭಕ್ತಂ ಜನಿಯಿಸಿಯೆನಗಾವಾಸಮಂ ಮಾಡಿದಪ್ಪಂ ನೀಂ ನಿಲ್ಲೆಂದಾತನಂ ಸ್ವಪ್ನದೊಳೆ ನಿಲಿಸಿ ದೇವಾಲ್ಯಮಂ ನೀನೆ ಲೇಸಪ್ಪನ್ನಂ ಪೋಲಾಳ್ವ ಮಾಡೆಂದು" ಹರಿಹರದೇವರೇ ಆಜ್ಞಾಪಿಸಿ ತನಗಾಗಿ ನಿರ್ಮಿಸಿಕೊಂಡನಂತೆ. ಆ ಕಾರಣದಿಂದ "ಪುರುಪುಚ್ಛಂ ಸಗರಂ ಭಗೀರಥನೃಪಾಳಂ ಕಾರ್ತವೀರ್ಯಾರ್ಜುನಂ ಭರತಂ ಸಂದ ಪುರೂರವಂ ಪೃಥುದಿಳೀಪಂ ಮುಖ್ಯಮಾದ ರಾಜರೆ ಮುಂ ಮಾಡಿಸಲಾಱದ ಹರಿಹರಶ್ರೀಗೇಹ"ವನ್ನು ಪೋಲಾಳ್ವ ದಂಡನಾಯಕನು ಮಾಡಿಸಿದನು. ಆದ್ದರಿಂದ ಈ ಪೋಲಾಳ್ವ ದಂಡನಾಯಕನು "ಊರ್ಜಿತ ಪುಣ್ಯ"ನೆನಿಸಿ ಧನ್ಯನಾಗಿದ್ದಾನೆ.

### ೪.೧೩ : ಬಸದಿಗಳು :-

ಕರ್ನಾಟಕದಲ್ಲಿ ಆರಂಭದ ಕಾಲದಲ್ಲಿ ಜೈನಧರ್ಮವು ಪ್ರಮುಖವಾದುದಾಗಿತ್ತು. ಆ ನಂತರದಲ್ಲೂ ಸಹ ಈ ಧರ್ಮವು ವಿಶಿಷ್ಟವಾದ ಸ್ಥಾನಮಾನವನ್ನು ಕಾಪಾಡಿಕೊಂಡಿತು. ಜೈನಧರ್ಮದ ಭಕ್ತಿ ಮತ್ತು ಕಲಾತ್ಮಕತೆಗೆ ಸಾಕ್ಷಿಯಾಗಿ ಸಾವಿರಾರು ಬಸದಿಗಳು ಕರ್ನಾಟಕದ ಗ್ರಾಮ, ಪಟ್ಟಣಗಳಲ್ಲಿ ನಿರ್ಮಾಣಗೊಂಡಿವೆ. ಇಂತಹ ಬಸದಿಗಳ ಸೌಂದರ್ಯದ ಬಣ್ಣನೆಯನ್ನು ಕನ್ನಡ ಶಾಸನಗಳು ಮಾಡಿವೆ.

ಹೊಯ್ಸಳ ದೊರೆ ವಿನಯಾದಿತ್ಯನು ಜಿನಮಂದಿರವನ್ನು ಕಟ್ಟಿಸಿದ ಸಂಗತಿಯನ್ನು ಹೇಳುವ ಶಾಸನದ ಒಂದುಪದ್ಯವು ಅತಿಶಯತೆ, ವಿಸ್ಮಯತೆಯನ್ನು ಒಳಗೊಂಡಿದ್ದು ಪದ್ಯವು ಈ ರೀತಿಯಾಗಿದೆ.

ಇಟ್ಟಿಗೆಗೆಂದಗೞ್ದುಕುಳಿಗಳ್ಕೆಱೆಯಾದವು ಕಲ್ಲುಗೆಗೊಣ್ಡಪೆ
ರ್ವ್ವೆಟ್ಟು ಧರಾತಳಕ್ಕೆ ಸರಿಯಾದವು ಸುಣ್ಣದ ಭಂಡಿ ಬಂದ ಪೆ
ರ್ವ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ
ನೆಟ್ಟನೆ ಪೊಯ್ಸಳೇಸನೆನೆ ಬಣ್ಣಿಪರಾರ್ಮ್ಮಲೆರಾಜರಾಜನಂ"[೨೩೧]

ಬಸದಿಯ ನಿರ್ಮಾಣಕ್ಕಾಗಿ ಇಟ್ಟಿಗೆಯ ತಯಾರಿಕೆಗಾಗಿ ಅಗೆದ ಕಾರಣದಿಂದ ಉಂಟಾದ ಗುಂಡಿಗಳೆಲ್ಲಾ ಕೆರೆಗಳಾದವು. ಕಟ್ಟಡದ ಕಲ್ಲುಗಳಿಗಾಗಿ ಬೆಟ್ಟಗಳನ್ನು ಅಗೆದ ಕಾರಣದಿಂದ ಅವು ನೆಲಕ್ಕೆ

ಸಮನಾದವು. ಬಸದಿಗಾಗಿ ಸುಣ್ಣವನ್ನು ಹೇರಿಕೊಂಡು ಬಂದ ಗಾಡಿಗಳ ದಾರಿಯೆಲ್ಲ ಹಳ್ಳವಾಗಿ ಹೋದುವೆಂದು ಅತಿಶಯವಾಗಿ ಕವಿಯು ಬಣ್ಣಿಸುತ್ತಾನೆ.

ಕ್ರಿ.ಶ.೮ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ ಶಾಂತರರ ರಾಜಧಾನಿ ಹೊಂಬುಜ. ಕ್ರಿ.ಶ.೧೦೬೨ಕ್ಕೆ ಸೇರಿದ ಕಲ್ಯಾಣದ ಚಾಳುಕ್ಯರ ಕಾಲದ ಶಾಸನವೊಂದು'[೨೩೨] ವೀರಸಾನ್ತರದೇವನು ಪಾರ್ಶ್ವನಾಥ ಬಸದಿಯನ್ನು "ಸುರಸ್ಯೈಲೇಂದ್ರಮೊ ಮೇಣ್ಕುಬೇರ
ಗಿರಿಯೋ ಮೇಣ್ತುಂಗ ತಾರಾದ್ರಿಯೋ ದೊರೆಯೆಂಬಂತಿರೆ" ನಿರ್ಮಿಸಿದನೆಂದು ಬಣ್ಣಿಸುತ್ತದೆ.

ಮೂಡಬಿದಿರೆಯ 'ತ್ರಿಭುವನ ಚೂಡಾಮಣಿ ಮಹಾಚೈತ್ಯಾಲಯ'ವನ್ನು ಶಾಸನವು'[೨೩೩] ಅತಿಶಯವಾಗಿ ಬಣ್ಣಿಸುತ್ತದೆ. –

**ಸುರಪತಿಗಂಜಿರೋಹಣನಗಂ ಮರೆವೊಕ್ಕುದೊ ಮೇಣ್ ದಶಾಸ್ಯಗೆ**
**ಳ್ಕಿರದೆ ಹರಾದ್ರಿ ಬಂದು ನೆಲಸಿತ್ತೊ ಕುಬೇರನು ದೈತ್ಯಭೀತಿಯಿಂ**
**ದಿರಿಸಿದ ತನ್ನ ಪುಷ್ಪಕಮಲ್ಲದೊಡಿಂತು ವಿಚಿತ್ರಕೂಟದಿಂ**
**ಕರಂಚೆಲುವಾದ ಚಂದ್ರಜಿನ ಮಂದಿರಮಂ ಪೊಗಳಲ್ಕೆ ಬರ್ಕುಮೆ**

ಈ ಬಸದಿಯ ಒಂದೊಂದು ಭಾಗವನ್ನು ಸಹ ವರ್ಣಿಸಲು ಸಾಧ್ಯವಾಗುವುದಿಲ್ಲ. ಈ ಚೈತ್ಯಾಲಯವನ್ನು ಕಂಡು ವಿಶ್ವಕರ್ಮನೇ ತಲೆದೂಗುತ್ತಾನೆ ಎಂಬುದಾಗಿ ಈ ಕೆಳಗಿನ ಪದ್ಯವು ನಿರೂಪಿಸುತ್ತದೆ.[೨೩೪]

**ಲಲಿತಸ್ತಂಭಕದಂಬಮಂ ಮದನಕಯ್ಯಂ ಲೋವೆಯಂ ದ್ವಾರಚಿ**
**ತ್ರಲತಾಬಂಧ ಮನುದ್ಧಭಿತ್ತಿಯನಧಿಷ್ಠಾನಾದಿಯೆಂ ಬೇಱಿ ಬೇ**
**ಱಿಕೊಲವಿಂ ಬಣ್ಣಿಸಿ 'ಪೇಳಲಾನಱಿಯೆನೊಂದಂ ಬಲ್ಲೆನಾ ಚೈತ್ಯಕೌ**
**ಶಲಮಂ ಭಾವಿಸಿ ವಿಶ್ವಕರ್ಮನಣುಗಿಂದಂ ಶೀರ್ಷಮಂತೂಗುವಂ**

ಆಕರ್ಷಕವಾದ, ಸುಂದರವಾದ ಈ 'ತ್ರಿಭುವನ ಚೂಡಾಮಣಿ ಮಹಾಚೈತ್ಯಾಲಯವನ್ನು' ಬಣ್ಣಿಸುವೆನೆಂದು "ನುಡಿವವಂಮರುಳಲ್ತೇ" ಎಂಬುದಾಗಿ ಶಾಸನಕವಿಯು ಅಭಿಪ್ರಾಯಪಡುತ್ತಾನೆ.

**೪.೧೪ : ಕೇದಾರ ಮಠ :–**

ಕಾಳಾಮುಖ ಶೈವರ ಬಹುಮುಖ್ಯವಾದ ಚಟುವಟಿಕೆಗೆ ಅತ್ಯುತ್ತಮ ನಿದರ್ಶನವೆಂದರೆ ಬಳ್ಳಿಗಾವೆಯ ಕೇದಾರಮಠ ಅಥವಾ ಕೋಡಿಯಮಠ. ಅದು ೧೧ ಮತ್ತು ೧೨ನೆಯ ಶತಮಾನಗಳಲ್ಲಿ ಪ್ರಸಿದ್ಧ ಶೈವಕೇಂದ್ರವಾಗಿ ದಕ್ಷಿಣದ ಕೇದಾರವೆಂದು ಪ್ರಸಿದ್ಧವಾಗಿತ್ತು. ಬ್ರಾಹ್ಮಣರಿಗೆ

ಘಟಿಕಾಸ್ಥಾನದಂತೆ ಕಾಳಾಮುಖರಿಗೆ ‘ಮಠಗಳು ವಿದ್ಯಾಕೇಂದ್ರ’ಗಳಾಗಿದ್ದವು. ಬಳ್ಳಿಗಾವೆಯ ಕೇದಾರಮಠವು ಕೇವಲ ಧಾರ್ಮಿಕ ಶಿಕ್ಷಣ ಸಂಸ್ಥೆಯಾಗಿರದೆ ನ್ಯಾಯಕೇಂದ್ರ, ಆರೋಗ್ಯಕೇಂದ್ರ, ಗ್ರಂಥ ಸಂಗ್ರಹಕೇಂದ್ರವಾಗಿ ಬೆಳೆದಿತ್ತು. ಈ ಕೇದಾರಮಠ ಅಥವಾ ಕೋಡಿಯಮಠವನ್ನು ಹಲವಾರು ಶಾಸನಗಳು ಬಣ್ಣಿಸುತ್ತವೆ. ದಕ್ಷಿಣ ಕೇದಾರೇಶ್ವರಮಠ ಅಥವಾ ಕೋಡಿಯಮಠದ ಬಹುಮುಖವಾದ ಚಟುವಟಿಕೆಯನ್ನು ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆಯ ಶಾಸನವು ಈ ರೀತಿಯಾಗಿ ನಿರೂಪಿಸಿದೆ.[೨೩೫]

**ದಕ್ಷಿಣ ಕೇದಾರಸ್ಥಾನಮುಂ ಶಿವಲಿಂಗ ಪೂಜಾಪುಳಕ ಸಸ್ಯಸರಸಕೇದಾರ ಸ್ಥಾನಮುಂ ನೈಷ್ಠಿಕ ಬ್ರಹ್ಮಚರ್ಯ ಶಿವಮುನಿಜನಾನುಷ್ಠಾನ ನಿಷ್ಠಿತಸ್ಥಾನಮಂ ಕೌಮಾರಪಾಣಿನೀಯ ಶಾಕಟಾಯನ ಶಬ್ದಾನುಶಾಸನಾದಿ ವ್ಯಾಕರಣ ವ್ಯಾಖ್ಯಾನ ಸ್ಥಾನಮುಂ ನ್ಯಾಯ ವೈಶೇಷಿಕ ಮೀಮಾಂಸಾ ಸಾಂಖ್ಯ ಬೌದ್ಧಾದಿ ಷಡುದರ್ಶನ ವ್ಯಾಖ್ಯಾನ ಸ್ಥಾನಮುಂ ಲಾಕುಳಸಿದ್ಧಾಂತ ಪಾತಂಜಳಾದಿ ಯೋಗಶಾಸ್ತ್ರ ವ್ಯಾಖ್ಯಾನ ಸ್ಥಾನಮುಂ ಅಷ್ಟಾದಶಪುರಾಣ ಧರ್ಮಶಾಸ್ತ್ರ ಸಕಳ ಕಾವ್ಯನಾಟಕ ನಾಟಿಕಾದಿ ವಿವಿಧ ವಿದ್ಯಾಸ್ಥಾನಮುಂ ದೀನಾನಾಥ ಪಂಗ್ವಂಧ ಬಧಿರ ಕಥಕ ಗಾಯಕ ವಾದಕ ವಾಂಶಿಕ ನರ್ತಕ ವೈತಾಳಿಕ ನಗ್ನಭಗ್ನಕ್ಷಪಣಕೈಕ ದಂಡಿ ತ್ರಿದಂಡಿ ಹಂಸಪರಮಹಂಸಾದಿ ನಾನಾದೇಶ ಭಿಕ್ಷುಕ ಜನಾನಿವಾರ್ಯನ್ನದಾನಸ್ಥಾನಮುಂ ದೀನಾನಾಥರೋಗಿಜನ ಭೈಷಜ್ಯಸ್ಥಾನಮುಂ ಸಕಲಭೂತಾಭಯ ಪ್ರಧಾನಸ್ಥಾನಮುಮಾಗಿ ಕೋಡಿಯ ಮಠಮಿರ್ಪುದು”.**

ಆ ಕೇದಾರಮಠದ ವೈಭವವನ್ನು ಬಳ್ಳಿಗಾವೆಯ ಇದೇ ಶಾಸನವು ಪುರಾಣದ ಸನ್ನಿವೇಶಗಳೊಂದಿಗೆ ಹೋಲಿಸಿ ಶ್ಲೇಷೆಯಲ್ಲಿ ಈ ರೀತಿಯಾಗಿ ಬಣ್ಣಿಸುತ್ತದೆ.

**“ಮತ್ತಮಾಮಠಂ ಕಮಠನಲ್ತೆ ಸಕಳಜನಾಧಾರಮುಂ । ಪುರುಷ ಸಿಂಹನಲ್ತೆ ಹಿರಣ್ಯಕಶಿಪುದಾನಸಂಶೋಭಿತಮುಂ । ಕುರುಕ್ಷೇತ್ರದನ್ತೆ ಸರಸ್ವತೀವಿಳಸಿತಮುಂ । ಖಚರಲೋಕದನ್ತೆ ವಿದ್ಯಾಧರಾಧೀಶ್ವರ ಪರಿವೃತಮುಂ । ಮನ್ದರ ಮಹಾಮಹೀಧರದನ್ತೆ ಸರ್ವ್ವದಿಕ್ಸಾರಭೂತಮುಂ । ವಾಸುದೇವನನ್ತಕ್ರೂರೋಕ್ತಿ ಶ್ರವಣರಮಣೀಯಮುಂ । ಭವಾನೀಭವನದನ್ತೆ ಬ್ರಹ್ಮಚಾರಿ ಸದಾಚಾರ ಸಂಭಾವಿತಮುಂ । ವಿವೇಕಿಯನ್ತೆ ವಿದ್ಯಾಭರಣವಿರಚಿತ ಸೌನ್ದರ್ಯ್ಯಮಂ । ಗೋದಾವರೀ ತೀರದನ್ತೆ ಗೌತಮಾರ್ಯ್ಯ ಪರಿಚರ್ಯ್ಯಾ ಪರಿಕರಮುಮೆನಿಸಿ ಸೊಗಯಿಸುವುದಾ ಮಠ”**

ಅಪೂರ್ವವಾದ ರೀತಿಯಲ್ಲಿ ಸಾಮಾಜಿಕ ಸಂಬಂಧವನ್ನು ಹೊಂದಿದ್ದ ಧಾರ್ಮಿಕ ಕೇಂದ್ರವಾಗಿದ್ದ ಬಳ್ಳಿಗಾವೆಯ ಕೋಡಿಯಮಠವನ್ನು ಹೊಂದಿದ್ದ ಬಳ್ಳಿಗಾವೆಯನ್ನು “ಶೈವರ ಶ್ರವಣಬೆಳಗೊಳ”[೨೩೬] ಎಂಬುದಾಗಿ ವಿದ್ವಾಂಸರು ಕರೆದಿರುವುದು ಸಮಂಜಸವಾಗಿದೆ.

### ೪.೧೫ : ಗೊಮ್ಮಟಜಿನಶಿಲ್ಪ :–

"ಜೈನರಕಾಶಿ"ಎಂದು ಪ್ರಖ್ಯಾತವಾದ ಶ್ರವಣಬೆಳಗೊಳದಲ್ಲಿರುವ ಗೊಮ್ಮಟಜಿನನ ಪ್ರತಿಮೆಯನ್ನು ಗಂಗಮಂತ್ರಿ ಚಾವುಂಡರಾಯನು ನಿರ್ಮಿಸಿದನು. ೫೭ ಅಡಿ ಎತ್ತರವಿರುವ ಇಂಥ ಬೃಹದಾಕಾರದ ಮೂರ್ತಿ ಭಾರತದಲ್ಲಿ ಬೇರೆಲ್ಲೂ ಇಲ್ಲ. ಇಂತಹ ಸುಂದರವಾದ ಮೂರ್ತಿಯ ಭವ್ಯವೈಭವವನ್ನು ಬೊಪ್ಪಣಕವಿಯು ಮನೋಜ್ಞವಾಗಿ ಶ್ರವಣಬೆಳಗೊಳದ ಶಾಸನವೊಂದರಲ್ಲಿ[೨೩೭] ವರ್ಣಿಸಿದ್ದಾನೆ. ಬೊಪ್ಪಣಕವಿಯ ಕವಿತಾಸಾಮರ್ಥ್ಯವು ಈ ಶಾಸನದಲ್ಲಿ ಅಭಿವ್ಯಕ್ತಿಗೊಂಡಿದೆ. ಕವಿಯು ಗೊಮ್ಮಟಜಿನನನ್ನು ಬಣ್ಣಿಸಿರುವ ವೈಖರಿಯ ಭಾಗವನ್ನು ಈಗಾಗಲೇ ಕವಿಯ ಪರಿಚಯವನ್ನು ನೀಡಿರುವ ಭಾಗದಲ್ಲಿ ವಿವರಿಸಿದೆ. ಶ್ರವಣಬೆಳಗೊಳದ ಗೊಮ್ಮಟೇಶ್ವರ ಪ್ರತಿಮೆಯ ಪರಿಪೂರ್ಣತೆ, ಭವ್ಯತೆ, ಅತಿಶಯತೆಯನ್ನು –

**ಅತಿತುಂಗಾಕೃತಿಯಾದೊಡಾಗದದಱಿೊಳ್ ಸೌಂದರ್ಯ್ಯಮೌನ್ನತ್ಯಮುಂ**
**ನುತಸೌನ್ದರ್ಯ್ಯಮುಮಾಗೆ ಮತ್ತತಿಶಯಂ ತಾನಾಗದೌಂನತ್ಯಮುಂ**
**ನುತ ಸೌನ್ದರ್ಯ್ಯಮುಮೂರ್ಜಿತಾತಿಶಯಮುಂ ತಂನಲ್ಲಿ ನಿನ್ದಿರ್ದ್ದುವೇಂ**
**ಕ್ಷಿತಿಸಂಪೂಜ್ಯಮೊ ಗೊಂಮಟೇಶ್ವರ ಜಿನಶ್ರೀರೂಪಮಾತ್ಮೋಪಮಂ**

ಎಂಬ ಪದ್ಯವು ನಿರೂಪಿಸಿದೆ. "ಪ್ರತಿಮೆಯೊಂದು ತುಂಗಾಕೃತಿಯಾಗಿರಬಹುದು. ಆದರೆ ಅದರಲ್ಲಿ ಸೌಂದರ್ಯವಿಲ್ಲದಿರಬಹುದು. ಒಂದು ವೇಳೆ ಪ್ರತಿಮೆಯು ಎತ್ತರವಾಗಿದ್ದು ಮತ್ತು ಸುಂದರವಾಗಿದ್ದರೂ ಸಹ ಅದರಲ್ಲಿ ಅತಿಶಯತೆ ಇರಲು ಸಾಧ್ಯವಿಲ್ಲದಿರಬಹುದು. ಆದರೆ ಈ ಗೊಮ್ಮಟ ಜಿನನ ಪ್ರತಿಮೆಯಲ್ಲಿ ಔನತ್ಯ, ಸೌಂದರ್ಯ ಮತ್ತು ಅತಿಶಯತೆಯು ಮೇಳೈಸಿರುವ ಕಾರಣದಿಂದ 'ಕ್ಷಿತಿಸಂಪೂಜ್ಯ'ವೇ ಆಗಿರುವ ಗೊಮ್ಮಟೇಶ್ವರನ ಜಿನಶ್ರೀರೂಪಕ್ಕೆ ಸಮಾನವಾದುದು ಮತ್ತೊಂದಿಲ್ಲ. ಬದಲಾಗಿ ಜಿನಶ್ರೀರೂಪಕ್ಕೆ ಜಿನಶ್ರೀರೂಪವೇ ಸಮಾನವಾದುದು" ಎಂಬ ಬೊಪ್ಪಣಕವಿಯು ಮಾತು ಭವ್ಯವಾದ ಗೊಮ್ಮಟನ ಪ್ರತಿಮೆಯ ಭವ್ಯತೆಗೆ ಬರೆದ ಭಾಷ್ಯವಾಗಿದೆ.

### ೪.೧೬ : ಚಂದ್ರಪ್ರಭ ಜಿನಬಿಂಬ :–

ಕಾರ್ಕಳ ತಾಲ್ಲೂಕು ಮೂಡಬಿದಿರೆಯ 'ತ್ರಿಭುವನ ಚೂಡಾಮಣಿ ಮಹಾಚೈತ್ಯಾಲಯ" ಎಂಬ ಬಸದಿಯ ಚಂದ್ರಪ್ರಭ ಜಿನಬಿಂಬದ 'ವಿಭವ'ವನ್ನು ಶಾಸನಪದ್ಯವು[೨೩೮]

**ಪರಮೌದಾರಿಕದಿವ್ಯದೇಹಮಿದು ತಾನೆಂಬಂತೆ ದೇಹಾಂಶು ವಾ**
**ಪರಿಸಲ್ನಾಲ್ದೆಸೆಯಂ ಸ್ಫುರತ್ತರಳತಾರಾನೀಕಮಂ ಬೇಱೆ ಚಿ**

**ತ್ತರಿಸಲ್ಪೂಮಳೆ ಚಾಮರಾಳಿ ಸುರಸಿಂಧೂತ್ಸೇನ ಸಂತಾನ ದಂ**

**ತಿರೆ ಜೈನಪ್ರತಿಬಿಂಬದೊಂದು ವಿಭವಂ ಕಣ್ಗೇಂ ಬೆಡಂಗಾದುದೋ ॥**

ಎಂಬುದಾಗಿ ಬಣ್ಣಿಸಿದೆ.

### ೪.೧೭ : ಕೆರೆಗಳು :–

ಸಮಾಜದಲ್ಲಿ ಗಣ್ಯರಾದ ವ್ಯಕ್ತಿಗಳು ಸಾರ್ವಜನಿಕ ಜನಜೀವನದ ಸುಖ ನೆಮ್ಮದಿಗಾಗಿ ಕೆರೆಗಳನ್ನು ನಿರ್ಮಿಸುತ್ತಿದ್ದರು. ನೀರಾವರಿಯ ಉದ್ದೇಶವೂ ಇದರ ಹಿಂದಿದೆ. ಕೆರೆಯನ್ನು ನಿರ್ಮಿಸುವುದು ಒಂದು ಸಾಮಾಜಿಕ ಚಟುವಟಿಕೆ ಮತ್ತು ಮೌಲ್ಯವಾಗಿತ್ತು.[೩೯] ಹೀಗೆ ನಿರ್ಮಿತವಾದ ಕೆರೆಗಳ ಸೊಬಗನ್ನು ಕನ್ನಡ ಶಾಸನಗಳು ಸೊಗಸಾಗಿ ಬಣ್ಣಿಸಿವೆ. ಏಚಲಸಮುದ್ರ[೪೦], ಚಟ್ಟಸಮುದ್ರ[೪೧], ಭೀಮಸಮುದ್ರ[೪೨], ವಿಷ್ಣುಸಮುದ್ರ[೪೩] ಮೊದಲಾದ ಕೆರೆಗಳನ್ನು ಶಾಸನಗಳು ವರ್ಣಿಸಿರುವುದನ್ನು ಕಾಣಬಹುದಾಗಿದೆ.

ಕದಂಬಕುಲದ ಮೇಚಲದೇವಿಯು ಕಟ್ಟಿಸಿದ ಮೇಚಲಸಮುದ್ರವೆಂಬ ತಟಾಕವು "ಸರಸಿಜಸಂಕುಳದಿಂದಂ ತರದಿಂ ತುಂಬಿಗಳ ಹಂಸೆಗಳ ಬಳಗದಿನಚ್ಚರಿಯೆನಿಸಿ ತೋರ್ಪ್ಪುದಿನ್ತೀ ಧರಣಿಗೆ" ಎಂಬಂತೆ ಅಂದವಾಗಿ ಶೋಭಿಸುತ್ತಿತ್ತು.[೪೪] ಹೊಯ್ಸಳ ನರಸಿಂಹನ ಅಣುಗನಾದ ಚಟ್ಟನು "ಪುಟ್ಟಿದ ಪೊನ್ನು ಇರದು ಎಂತುಂ ಅದಱಿಂದೆ ಕೆಱೆಯುಮಂ ಕಟ್ಟಿಪುದು ದೇಗುಲಮಂ ಎತ್ತಿಪುದು" ಎಂದು ತೀರ್ಮಾನಿಸಿ 'ಚಟ್ಟಸಮುದ್ರ'ವನ್ನು ನಿರ್ಮಿಸುತ್ತಾನೆ. ನಾಡಿನ ನಡುವೆಯಿರುವ ಕಾರಣದಿಂದ ತನ್ನ ಜನ್ಮವು ಸಾರ್ಥಕವಾಯಿತು ಎಂದು 'ಚಟ್ಟಸಮುದ್ರ'ವು ಉಪ್ಪುನೀರಿನಿಂದ ಕೂಡಿದ ಸಮುದ್ರವು ನಾಡಿನ ಹೊರಗಿರುವ ಕಾರಣದಿಂದ ಅಸೇವ್ಯವಾಯಿತು ಎಂದು ಅಪಹಾಸ್ಯ ಮಾಡುವ ರೀತಿಯಲ್ಲಿತ್ತು ಎಂಬುದಾಗಿ ಈ ಪದ್ಯವು ಬಣ್ಣಿಸುತ್ತದೆ.

**ನಾಡೆಂನಂ ನಡುವಿಟ್ಟು ಕೊಂಡುದುದಱಿಂ ಮಜ್ಜೀವನಂ ಸಾರ್ತ್ಥಕಂ**

**ನಾಡಿಂದಂ ಪೊಱಗಾಯ್ತಸೇವ್ಯಸಲಿಲಂ ತಾನುಪ್ಪುನೀರೆಂದು ಱೋ**

**ಡಾಡುತ್ತಿಪ್ಪುದು ನಿರ್ಮ್ಮಳಾಂಬುಭರಿತಶ್ರೀಸಾರಸಾರಾವರಂ**

**ನೋಡೀಚಟ್ಟಸಮುದ್ರವಿಲ್ಲಿ ಲವಣಾಂಭೋರಾಶಿಯಿಂ ಪೆರ್ಮ್ಮೆಯಿಂ'**[೪೫]

ಸಾಮಂತ ಗೂಳಿಬಾಚಿಗನ ವಂಶಸ್ಥನಾದ ಭೀಮನೆಂಬುವನು ಕೈದಾಳದಲ್ಲಿ ಭೀಮಸಮುದ್ರವನ್ನು ಕಟ್ಟಿಸುತ್ತಾನೆ. ಆ ಭೀಮಸಮುದ್ರವು "ರಾಮನ ಬಾಣದಿಂದ ಮತ್ತು ವಾನರರು ರಾಮನ ಮೇಲಿನ ಪ್ರೀತಿಯಿಂದ ಸೇತುವೆಯನ್ನು ಕಟ್ಟಿದ ಕಾರಣದಿಂದ ಸಮುದ್ರವು ಕಿರಿದಾಯಿತು. ಆದರೆ ಈ ಭೀಮಸಮುದ್ರವು ಭೀಮನೆಂಬುವನು ಕಟ್ಟಿಸಿದ ಕಾರಣದಿಂದ ಹಾಗೂ ಆತನ ಒಳ್ಳೆಯತನದ

ಪ್ರಸಿದ್ಧಿಯಿಂದ ಸಮುದ್ರವನ್ನೂ ಟೀಕಿಸುವಂತಿತ್ತು ಭೀಮಸಮುದ್ರ' ಎಂಬುದಾಗಿ ಶಾಸನವು ಬಣ್ಣಿಸಿದೆ.[೨೪೬]

ಕೆರೆಸಂತೆಯ ವಿಷ್ಣುಸಮುದ್ರದ ವರ್ಣನೆಯು ಬಹಳ ಮನೋಜ್ಞವಾಗಿದೆ. **'ಅಮರವಾರಿಧಿ'** ಎಂಬುದಾಗಿ ಈ ವಿಷ್ಣುಸಮುದ್ರವನ್ನು ಕರೆದಿರುವ ಶಾಸನವು ಪೌರಾಣಿಕ ಸನ್ನಿವೇಶಗಳನ್ನು ಬಳಸಿಕೊಂಡು ಈ ಕೆರೆಯ ಸೌಂದರ್ಯವನ್ನು ಈ ರೀತಿಯಾಗಿ ಉತ್ಪ್ರೇಕ್ಷಿಸುತ್ತದೆ.[೨೪೭] –

**ಕುಡಿದು ಘಟೋದ್ಭವಂ ತವಿಸದಾ ರಘುವಂಶನತೀಬ್ರಬಾಣದಿಂ**
**ದುಡುಗದ ದೇವದಾನವಬಲಂ ಕಡೆಯಲು ಕಡದೆರ್ದ್ದು ಭಂಗವಂ**
**ಪಡೆಯದ ಪೇಯವಾರಿಪರಿಪೂರಿತವಪ್ಪನನಂತ ಸೆಯ್ಯೆಯೊಳು**
**ಪೊಡೆಯಲರಾತನಿಪ್ಪಮರವಾರಿಧಿಯೆಂಬುದು ವಿಷ್ಣುವಾರಿಧಿ**

"ಅಗಸ್ತ್ಯನು ಕುಡಿದು ಮುಗಿಸಲಾಗದ, ಶ್ರೀರಾಮನು ಬಾಣ ಪ್ರಯೋಗಿಸಿ ಅಡಗಿಸಲಾಗದ, ದೇವದಾನವರು ಕಡೆಯಲು ಭಂಗವಾಗದ 'ಪೇಯವಾರಿಪರಿಪೂರಿತ'ವಾದ ನೀರಿನಿಂದ ಕೂಡಿದ ವಿಷ್ಣುವಾರಿಧಿಯು 'ಅಮರವಾರಿಧಿ'ಎಂದು ಪ್ರಸಿದ್ಧವಾಗಿತ್ತು.

### ೪.೧೮ : ಉದ್ಯಾನವನ :–

ಕಡೂರು ತಾಲ್ಲೂಕು ಮಾದಾಪುರದ ಶಾಸನವೊಂದು[೨೪೮] ಹೊಯ್ಸಳರ ಕಾಲಕ್ಕೆ ಸೇರಿದ್ದು ಮಾಧವಪುರದ ಉದ್ಯಾನವನ್ನು ಬಣ್ಣಿಸುತ್ತದೆ. ಈ ಉದ್ಯಾನವನವು ಹಲವಾರು ರೀತಿಯಾದ ಮರಗಿಡಗಳಿಂದ ಕೂಡಿ ಹೇಗೆ ಮನೋಹರವಾಗಿತ್ತು ಎಂಬುದನ್ನು ಈ ಪದ್ಯವು ಬಣ್ಣಿಸಿದೆ.

**ಪುದಿದೆತ್ತಂದೋರೆವಣ್ಗಾಯ್ಗೊನೆಯಿನೊಲೆವ ಪೊಂಬಾಳೆಪೆಂಣ್ದುಂಬಿಗಳ್ಮುತ್ತಿದ ಚೆಂ**
**ನೆಯ್ದಲುಗೊಳಂ ಬೇರ್ವ್ವಿಡಿದುರುಟವರಂ ತೋರವಣ್ಬೆಜೆದೊಳುವ**
**ಕ್ಕೆದಳತ್ವದುಮಾಕರಂಬಿಣ್ಗೊಲೆದಳೆದೆಳೆಗವುಂಗಚ್ಚನೀರ್ಗ್ಗಾಯಿಗಳಂಪೇ**
**ಱಿದಜೆಂದೆಂಗೋಳಿಯಿಂಮಾಧವಪುರವರದುದ್ಯಾನದೊಳು ಕುಂದವೆಂದು ॥**

ಶಾಸನ ಕವಿಗಳ ವರ್ಣನೆಗೆ ವಸ್ತುವಾಗದ ವಿಷಯಗಳೇ ಇಲ್ಲವೆಂಬುದು ಉದಾಹರಿಸಿರುವ ಪದ್ಯ, ಪದ್ಯಭಾಗಗಳಿಂದ ವೇದ್ಯವಾಗುತ್ತದೆ. ಕೆಲವೊಮ್ಮೆ ವರ್ಣನೆಯ ವಿಧಾನದಲ್ಲಿ ಚರ್ವಿತ ಚರ್ವಣವಾಗಿದೆಯೆನಿಸಿದರೂ ಆ ಪದ್ಯಗಳು ಮನಸೆಳೆಯುವ ಕಾವ್ಯಸತ್ವವನ್ನು ಒಳಗೊಂಡಿವೆ. ಆ ಮೂಲಕ ಶಾಸನ ಸಾಹಿತ್ಯ ಪ್ರಪಂಚವನ್ನು ವಿಸ್ತರಿಸಿವೆಯೆನ್ನಬಹುದು.

## ಅಡಿ ಟಿಪ್ಪಣಿಗಳು

೧. E.C.(R)X ಚನ್ನರಾಯಪಟ್ಟಣ ೩೩(V ಚ.ಪ.೧೭೯) ಆನೆಗನಕೆರೆ

೨. E.C.(R)VIIIಹಾಸನ ೧೫೮ (ರಿ.೧೯೪೦-೧) ಶಾಂತಿಗ್ರಾಮ

೩. E.C.(R)XII ಕಡೂರು ೬೪ (VI ಕ೯೫) ಕೆರೆಸಂತೆ

'ಧರೆ ರುಚಿರ ಕೇತಕೀ ಮಧು

ಕರಿವೊಲ್ ದಂತಾಗ್ರದೊಳ್ ವಿರಾಜಿಸೆ'ಮಹಿಮಾ

ಕರನಾದಿ ವರಾ......

ವರಾಹಮಂ ನಮಗೆ ಕೂರ್ತು ಮಾಳ್ಕನವರತಂ ॥

೪. E.C.(R)VIIIಹಾಸನ ೧೪೦ (Vಹಾ ೫೫) ಹೊನ್ನಮ್ಮನಹಳ್ಳಿ ಕ್ರಿ.ಶ.೧೧೭೮

೫. E.C.(R)X ಅರಸೀಕೆರೆ ೧೬೦ (Vಅಕೆ ೧೧೭) ಕೆಲ್ಲಂಗೆರೆ ಕ್ರಿ.ಶ.೧೧೬೧

೬. E.C.(R)X ಅರಸೀಕೆರೆ ೧೬೧ (Vಅಕೆ ೧೨೭-೧೨೮) ತಳಲೂರು ಕ್ರಿ.ಶ.೧೯೯೧

೭. E.C.(R)VIIನಾಗಮಂಗಲ ೬೧(IV ನಾಮಂ೨೮) ಲಾಲನಕೆರೆ ಕ್ರಿ.ಶ.೧೧೩೮

೮. E.C.(R)X ಅರಸೀಕೆರೆ ೯೬ (Vಅಕೆ ೬೨) ಜಯಚಾಮರಾಜಪುರ (ಹಲಕೂರು) ಕ್ರಿ.ಶ.೧೧೭೭

೯. E.C.(R)X ಅರಸೀಕೆರೆ ೨೬೧ (XV ಅಕೆ ೨೪೫) ಸಿಂಗನಹಳ್ಳಿ ಕ್ರಿ.ಶ.೧೫೫೫

೧೦. E.C.XI ದಾವಣಗೆರೆ ೪೧ ಹರಿಹರ ಕ್ರಿ.ಶ.೧೧೪೮

೧೧. E.C.XI ದಾವಣಗೆಂ ೩೫ ಹರಿಹರ ಕ್ರಿ.ಶ.೧೧೬೦

೧೨. E.C.XI ದಾವಣಗೆರೆ ೨೫ ಹರಿಹರ ಕ್ರಿ.ಶ.೧೨೨೪

೧೩. E.C.XI ದಾವಣಗೆರೆ ೨೯ ಹರಿಹರ ಕ್ರಿ.ಶ.೧೪೨೪

೧೪. E.C.XI ದಾವಣಗೆರೆ ೫೯ ಹರಿಹರ ಕ್ರಿ.ಶ.೧೨೭೭

೧೫. E.C.(R)X ಹಾಸನ ೩೯ ಅರಸೀಕೆರೆ ಕ್ರಿ.ಶ.೧೧೮೩

೧೬. S.I.I VII ಕಾರ್ಕಳ ೧೯೬ ಮೂಡಬಿದಿರೆ ಕ್ರಿ.ಶ.೧೪೨೬

೧೭. (ಸಂ) ಎಂ.ವಿ.ಸೀತಾರಾಮಯ್ಯ : ಕವಿರಾಜಮಾರ್ಗಂ ಡಿ.ವಿ.ಕೆ.ಮೂರ್ತಿ ಪ್ರಕಾಶನ, ಮೈಸೂರು-೪ ೧೯೭೫, ಪುಟ-೩೭, ದ್ವಿತೀಯ ಪರಿಚ್ಛೇದಂ – ೨೮

೧೮. E.C.(R)XIII ಶಿವಮೊಗ್ಗ ೧೪ ಕಲ್ಲೂರುಗುಡ್ಡ ಕ್ರಿ.ಶ.೧೧೨೨, ಶಿವಮೊಗ್ಗ ೬೮ ಪುರಲೆ ಕ್ರಿ.ಶ.೧೦೬೭

೧೯. E.C.(R)XIಚಿಕ್ಕಮಗಳೂರು ೮೭ (VI ಚಿಮ೨೦) ಅಂಬಳೆ ಕ್ರಿ.ಶ.೧೨೪೯

E.C.(R)XI ಚಿಕ್ಕಮಗಳೂರು ೧೮೨ (VIಚಿಮ೭೮) ಖಾಂಡ್ಯ ಕ್ರಿ.ಶ.೧೧೮೫

E.C.(R)II ಶ್ರವಣಬೆಳಗೊಳ ೪೭೬ (೩೫) ಕ್ರಿ.ಶ.೧೧೫೯

೨೦. E.C.(R)II ಶ್ರವಣಬೆಳಗೊಳ ೧೬೩(೧೩೩) ಚಿಕ್ಕಬೆಟ್ಟ ಕ್ರಿ.ಶ.೯೮೨

೨೧. E.C.VII ಶಿಕಾರಿಪುರ ೧೨೩ ಬಳ್ಳಿಗಾವೆ

೨೨. E.C.VII ಶಿಕಾರಿಪುರ ೧೦೦ ಬಳ್ಳಿಗಾವೆ ಕ್ರಿ.ಶ.೧೧೨೯

೨೩. E.C.XIದಾವಣಗೆರೆ ೪೧ ಹರಿಹರ ಕ್ರಿ.ಶ.೧೧೪೮

೨೪. E.C.XIದಾವಣಗೆರೆ ೩೫ ಹರಿಹರ ಕ್ರಿ.ಶ.೧೧೬೦

೨೫. E.C.XIದಾವಣಗೆರೆ ೪೨ ಹರಿಹರ ಕ್ರಿ.ಶ.೧೧೬೨

೨೬. E.C.VII ಶಿಕಾರಿಪುರ ೧೦೨ ಬಳ್ಳಿಗಾವೆ

೨೭. E.C.(R)X ಹಾಸನ ೬(ರಿ.೧೯೨೮-೯) ಅರಸೀಕೆರೆ ಕ್ರಿ.ಶ.೧೧೮೩

೨೮. E.C.(R)X ಹಾಸನ ೭(ರಿ.೧೯೨೮-೧೦ : XV ಅಕೆ ೨೦೫) ಅರಸೀಕೆರೆ ಕ್ರಿ.ಶ.೧೧೮೯

೨೯. E.C.(R)X ಅರಸೀಕೆರೆ ೩೧೪ (Vಅಕೆ ೮೨) ಅರಕೆರೆ ಕ್ರಿ.ಶ.೧೨೩೩

E.C.(R)XII ಕಡೂರು ೬೭ (VIಕ ೯೫) ಕೆರೆಸಂತೆ

೩೦. E.C.(R)X ಅರಸೀಕೆರೆ ೧೬೧ (Vಅಕೆ ೧೨೭-೧೨೮ ) ಕ್ರಿ.ಶ.೧೧೯೧

೩೧. E.C.(R)X ಅರಸೀಕೆರೆ ೭(ರಿ.೧೯೨೮-೧೦: XV ಅಕೆ ೨೦೫) ಕ್ರಿ.ಶ.೧೧೮೯

೩೨. E.C.(R)XII ಕಡೂರು ೬೭ (VIಕ ೯೬) ಕೆರೆಸಂತೆ

೩೩. E.C.(R)XII ಕಡೂರು ೧೫೦ (VIಕ ೫೧) ಬ್ರಹ್ಮಸಮುದ್ರ ಕ್ರಿ.ಶ.೧೧೬೯

೩೪. E.C.(R)X ಅರಸೀಕೆರೆ ೧೨೯ (Vಅಕೆ ೬೯) ಹಿರೀಕಲ್ಲುಬೆಟ್ಟ ಕ್ರಿ.ಶ.೧೧೭೪

೩೫. E.C.(R)XIಚಿಕ್ಕಮಗಳೂರು ೧೧೧(VIಚಿಮ ೧೪೦) ಮರಲೆ ಕ್ರಿ.ಶ.೧೧೪೭

೩೬. E.C.(R)XIಚಿಕ್ಕಮಗಳೂರು ೨೧೦ (VIಚಿಮ೧೬೦) ಸಿಂಧಗಿರಿ ಕ್ರಿ.ಶ.೧೧೦೩

೩೭. ಆರ್.ನರಸಿಂಹಾಚಾರ್ಯ : ಶಾಸನಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫, ಪುಟಸಂಖ್ಯೆ-೭೮

೩೮. E.C.(R)X ಅರಸೀಕೆರೆ ೧೮೪ (Vಅಕೆ ೧೭೨) ಹುಲ್ಲೇಕೆರೆ ಕ್ರಿ.ಶ.೧೧೬೨

೩೯. ಬೆನಗಲ್ ರಾಮರಾವ್ : ಪಾನ್ಯಂ ಸುಂದರಶಾಸ್ತ್ರಿ : ಪುರಾಣನಾಮಚೂಡಾಮಣಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೨೦೦೧, ಪುಟ-೩೫೧

ನಾಭಾಗ : ಸೂರ್ಯವಂಶದ ಅರಸು. ವೈವಸ್ವತ ಮನುವಿನ ಮಗ.

ವಿಷ್ಣುಭಕ್ತಾಗ್ರೇಸರನಾದ ಅಂಬರೀಷ ಈತನ ಮಗ.

೪೦. E.C.(R)XII ಕಡೂರು ೧೬೯ (VIಕ ೬೬) ಬ್ರಹ್ಮಸಮುದ್ರ ಕ್ರಿ.ಶ.೧೧೭೨

೪೧. E.C.(R)Xಅರಸೀಕೆರೆ ೧೮೪ (V ಅಕೆ ೧೭೨) ಹುಲ್ಲೇಕೆರೆ ಕ್ರಿ.ಶ.೧೧೬೨

೪೨. E.C.(R)Xಅರಸೀಕೆರೆ ೮೮ (V ಅಕೆ ೪೮) ಕಣಿಕಟ್ಟೆ ಕ್ರಿ.ಶ.೧೧೮೯

ವಿಸಸನದೊಳು ಕಿಳ್ತಡೆ ನಿಂ

ನಸಿಲತೆ ವೈರಿಗಳ ಹ್ರಿದಯದೊಳು ನಾಂಟಿ ತಳಿ

ರ್ಪಸರಿಸಿ ಬೆಂನೊಳು ಬಳೆವುದು

ಪೊಸತೊಂದಚ್ಚರಿ ನೃಸಿಂಹ ಭಾವಿಸೆ ಜಗದೊಳು ॥

೪೩. E.C.(R)Xಅರಸೀಕೆರೆ ೬(ರಿ.೧೯೨೮-೯) ಕ್ರಿ.ಶ.೧೧೮೩

E.C.(R)X೯೬, ೨೧೪(V ಅಕೆ ೧೫೦) ೨೨೭ (V ಅಕೆ ೧೩೮)

೩೧೯ (V ಅಕೆ ೧೦೬), ೫೧(V ಚಪ ೧೮೬)

೪೪. E.C.(R)II ಶ್ರವಣಬೆಳಗೊಳ ೪೭೬(೩೪೫)ಭಂಡಾರಬಸದಿ ಕ್ರಿ.ಶ.೧೧೮೫

೪೫. E.C.(R)X ಅರಸೀಕೆರೆ ೯೬ (V ಅಕೆ ೬೨) ಜಯಚಾಮರಾಜಪುರ (ಹಲಕೂರು) ಕ್ರಿ.ಶ.೧೧೭೭

೪೬. E.C.(R)X ಅರಸೀಕೆರೆ ೫೨ (X V ಅಕೆ ೨೧೭) ಬೆಂಡೆಕೆರೆ ಕ್ರಿ.ಶ.೧೨೩೨

೪೭. E.C.(R) IX ಬೇಲೂರು ೩೦೦ (V ಬೇ ೧೧೨) ಹಳೇಬೀಡು ಕ್ರಿ.ಶ.೧೨೨೦

೪೮. ಪೂರ್ವೋಕ್ತ

೪೯. ಆರ್.ನರಸಿಂಹಾಚಾರ್ಯ : ಶಾಸನಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫, ಪುಟ ಸಂಖ್ಯೆ-೨೧೨, ಪದ್ಯಸಂಖ್ಯೆ-೧೩೦೭

೫೦. E.C.(R) IX ಬೇಲೂರು ೪೨೦ (V ಬೇ ೧೫೧) ಗೋಣಿಸೋಮನಹಳ್ಳಿ ಕ್ರಿ.ಶ.೧೨೨೭

೫೧. E.C.(R)X ಅರಸೀಕೆರೆ ೨೩೨ (V ಅಕೆ ೧೨೩) ಹಾರನಹಳ್ಳಿ

೫೨. E.C.(R)X ಅರಸೀಕೆರೆ ೩೧೭ (V ಅಕೆ ೧೦೮) ಹಿರಿಯೂರು ಕ್ರಿ.ಶ.೧೨೫೪

೫೩. E.C.(R)X ಅರಸೀಕೆರೆ ೨೪೪ (V ಅಕೆ ೧೪೪) ಗೋವಿಂದಪುರ. ಕ್ರಿ.ಶ.೧೧೩೬-೩೭

E.C.(R) X ಅರಸೀಕೆರೆ ೭೫ ಬಳಗಟ್ಟೆ

E.C.(R)XI ಚಿಕ್ಕಮಗಳೂರು ೮೭(VI ಚಿಮ೨೦) ಅಂಬಳೆ ಕ್ರಿ.ಶ.೧೨೪೯

E.C.(R)XI ಚಿಕ್ಕಮಗಳೂರು ೨೧೦(VI ಚಿಮ ೧೬೦) ಸಿಂಧಗಿರಿ. ಕ್ರಿ.ಶ.೧೧೦೩

E.C.(R)XI ಚಿಕ್ಕಮಗಳೂರು ೧೨ (VI ತ ೪೫) ಅಮೃತಾಪುರ ಕ್ರಿ.ಶ.೧೧೯೮

E.C.VIII ಹಾಸನ ೧೪೨ (V ಹಾ ೬೯) ಮುದುಗೆರೆ ಕ್ರಿ.ಶ.೧೧೫೬

೫೪. E.C.VIII ನಗರ ೩೫ ಹುಮ್ಮಚ ಕ್ರಿ.ಶ.೧೦೭೭

೫೫. E.C.VIII ನಗರ ೩೬ ಹುಮ್ಮಚ ಕ್ರಿ.ಶ.೧೦೭೭

೫೬. E.C.VIII ನಗರ ೫೮ ಹುಮ್ಮಚ

೫೭. E.C.VII ಶಿಕಾರಿಪುರ ೧೦೨ ಬಳ್ಳಿಗಾವೆ

೫೮. E.C.VII ಸೊರಬ ೧೪೦ ಉದ್ರಿ ಕ್ರಿ.ಶ.೧೧೯೭

೫೯. E.C.VIIಷಿಕಾರಿಪುರ ೨೨೫ ಬಂದಲಿಕೆ ಕ್ರಿ.ಶ.೧೨೦೩

೬೦. E.C.XII ಗೂಳೂರು ೯ ಕೈದಾಳ

೬೧. E.C.XII ಚಿಕ್ಕನಾಯಕನಹಳ್ಳಿ ೧೩ ಕೈನಡು

೬೨. E.C. (R) IX ಬೇಲೂರು ೪೧೦ (ಬೇ ೧೯೩) ಹುಲಿಕೆರೆ. ಕ್ರಿ.ಶ.೧೧೬೦

೬೩. (ಸಂ) ಡಾ.ದೇವರಕೊಂಡಾರೆಡ್ಡಿ ಮತ್ತು ಡಾ.ಜಯಪ್ರಕಾಶ ಮಾವಿನಕುಳಿ : ತುಳುನಾಡಿನ ಜೈನಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪, ಪುಟ-೧೧೧

೬೪. S.I.I. VII ಕಾರ್ಕಳ ೨೦೭ ಮೂಡಬಿದಿರೆ ಕ್ರಿ.ಶ.೧೫ನೇ ಶತಮಾನ

೬೫. (ಸಂ)ಡಾ.ದೇವರಕೊಂಡಾರೆಡ್ಡಿ ಮತ್ತು ಡಾ.ಜಯಪ್ರಕಾಶ ಮಾವಿನಕುಳಿ : ತುಳುನಾಡಿನ ಜೈನಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೪. ಪುಟ-೧೧೩

೬೬. E.C.(R) II ಶ್ರವಣಬೆಳಗೊಳ ೩೩೬ (೨೩೪) ದೊಡ್ಡಬೆಟ್ಟ ಕ್ರಿ.ಶ.೧೨ನೆಯ ಶತಮಾನ

೬೭. E.C.(R) II ಶ್ರವಣಬೆಳಗೊಳ ೮೨(೭೩) ಚಿಕ್ಕಬೆಟ್ಟ ಕ್ರಿ.ಶ.೧೧೧೮

೬೮. E.C.(R) II ಶ್ರವಣಬೆಳಗೊಳ ೪೭೬ (೩೪೫) ಕ್ರಿ.ಶ.೧೧೫೯

೬೯. E.C.(R) II ಶ್ರವಣಬೆಳಗೊಳ ೪೪೪ (೩೨೭) ಕ್ರಿ.ಶ.೧೧೮೧

೭೦. E.C.(R)Xಅರಸೀಕೆರೆ ೨೩ (V ಅಕೆ ೭೧) ಕ್ರಿ.ಶ.೧೧೭೩

೭೧. E.C.(R)Xಅರಸೀಕೆರೆ ೩೧ (V ಅಕೆ ೭೭) ಕ್ರಿ.ಶ.೧೨೯೯

೭೨. E.C.VIII ಹಾಸನ ೧೧೬ (V ಹಾ೫೩) ಜಕ್ಕೇನಹಳ್ಳಿ ಕ್ರಿ.ಶ.೧೧೭೦-೭೧

೭೩. E.C.VIII ಸಾಗರ ೧೦೩ ಬೇಸೂರು

೭೪. E.C.VII ಶಿಕಾರಿಪುರ ೧೨೩ ಬಳ್ಳಿಗಾವೆ

೭೫. E.C.(R)Xಅರಸೀಕೆರೆ ೨೪೧(V ಅಕೆ೧೪೧) ಕರುಗುಂದ ಕ್ರಿ.ಶ.೧೧೫೮

೭೬. 'ಹರಿತನಯ' ಪದ ಅರ್ಥವನ್ನು ನೋಡಿ. ಕನ್ನಡ ನಿಘಂಟು, ೮ನೆಯ ಸಂಪುಟ. ಕನ್ನಡ ಸಾಹಿತ್ಯ ಪರಿಷತ್ತು. ಬೆಂಗಳೂರು. ೧೯೯೫, ಪುಟ-೮೮೩೭

೭೭. E.C.(R)XIತರೀಕೆರೆ ೧೨ (VI ತ ೪೫)ಅಮೃತಾಪುರ. ಕ್ರಿ.ಶ.೧೧೯೮

೭೮. E.C.(R)XIಚಿಕ್ಕಮಗಳೂರು ೨೧೦ ಸಿಂಧಗಿರಿ. ಕ್ರಿ.ಶ.೧೦೪೮

೭೯. E.C.(R)XIಚಿಕ್ಕಮಗಳೂರು ೨೧೧ ಸಿಂಧಗಿರಿ. ಕ್ರಿ.ಶ.೧೧೩೭

೮೦. E.C.XIದಾವಣಗೆರೆ -೧೪ ಹರಿಹರ ಕ್ರಿ.ಶ.೧೨೨೪

೮೧. E.C.XIದಾವಣಗೆರೆ ೨೯ ಹರಿಹರ ಕ್ರಿ.ಶ.೧೪೨೪

೮೨. E.C. IXಬೇಲೂರು ೩೦೦ (V ಬೇ೧೧೨) ಹಳೇಬೀಡು ಕ್ರಿ.ಶ.೧೨ನೆಯ ಶತಮಾನ

೮೩. E.C.(R)XIIಕಡೂರು ೪೩(VI ಕ೭೯) ಕಬ್ಬಳ್ಳಿ. ಕ್ರಿ.ಶ.೧೧೫೯

೮೪. E.C.VIIIಸಾಗರ ೧೫ ನಾಡಕಲಸಿ ಕ್ರಿ.ಶ.೧೨ನೆಯ ಶತಮಾನ

೮೫. E.C.XIಚಿತ್ರದುರ್ಗ ೨. ಕ್ರಿ.ಶ.೧೩೫೫

೮೬. E.C.XIದಾವಣಗೆರೆ ೧೪೯ ಮಾಯಿಕೊಂಡ

೮೭. E.C.XIಚಿತ್ರದುರ್ಗ ೪೩ ತಮಟಕಲ್ಲು ಕ್ರಿ.ಶ.ಸು.೫೦೦

೮೮. ಡಾ.ಆರ್.ಶೇಷಶಾಸ್ತ್ರೀ : ಕರ್ನಾಟಕದ ವೀರಗಲ್ಲುಗಳು. ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೮೨, ಪುಟ-೨೪೬

೮೯. ತಮಟಕಲ್ಲಿನ ಗುಣಮಧುರನ ಶಾಸನದ ಪಾಠ

(E.C.XIಚಿತ್ರದುರ್ಗ ೪೩, ತಮಟಕಲ್ಲು. ಕ್ರಿ.ಶ.ಸು.೫೦೦)

ಬಿಣಮಣಿಅನ್ತುಭೋಗಿ ಬಿಣದುಳ್ಮಣಿವಿಲ್ಮನದೋನ್

ರಣಮುಖದುಳ್ಳಕೋಲಂ ನೆರೆಯರ್ಕ್ಕುಮನಿನ್ದ್ಯಗುಣನ್

ಪ್ರಣಯಿಜನಕ್ಕೆ ಕಾಮನಸಿತೋತ್ಪಲವರ್ಣನವನ್

ಗುಣಮಧುರಾಂಕ್ಕ ದಿವ್ಯಪುರುಷನ್ ಪುರುಷಪ್ರವರನ್

ಆದರೆ ಡಾ.ದೇವರಕೊಂಡಾರೆಡ್ಡಿ ಮತ್ತು ಡಾ.ಆರ್.ಶೇಷಶಾಸ್ತ್ರೀಯವರು ಈ ಶಾಸನದ ಮೊದಲೆರಡು ಸಾಲುಗಳನ್ನು ಈ ಕೆಳಗಿನಂತೆ ಪರಿಷ್ಕರಿಸಿದ್ದಾರೆ. ಮೂರು ಮತ್ತು ನಾಲ್ಕನೆಯ ಸಾಲಿನಲ್ಲಿ ಬದಲಾವಣೆಯಿಲ್ಲ.

ಫಣಮಣಿಅನ್ತುಭೋಗಿಫಣದುಳ್ಮಣಿವಿಲ್ಮನದೋನ್

ರಣಮುಖದುಳ್ಳೆಕಾಲನರಿಯರ್ಕ್ಕುಮನಿನ್ದ್ಯಗುಣನ್

ಲೇಖನ : ತಮಟಕಲ್ಲಿನ ಗುಣಮಧುರನ ಶಾಸನಗಳು - ಪುನರ್‌ಪರಿಶೀಲನೆ ಪತ್ರಿಕೆ : ಸಾಧನೆ, ಸಂ.-೧೦, ಸಂ-೩, ೧೯೮೧, ಪುಟ-೭೦-೭೭ (ಪದ್ಯವನ್ನು ಅರ್ಥೈಸುವಲ್ಲಿ 'ಬಿಣ' ಎಂಬ ಪದಕ್ಕಿಂತ 'ಫಣ' ಎಂಬ ಪದ್ಯವು ಹೆಚ್ಚು ಸಮರ್ಪಕವಾಗಿದೆ.)

೯೦. ಕನ್ನಡ ಸಾಹಿತ್ಯ ಚರಿತ್ರೆ : ೨ನೆಯ ಸಂಪುಟ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೫, ಪುಟ-೪೬೦

೯೧. E.C.VIIIಸೊರಬ ೧೦ ಮಾವಳಿ ಕ್ರಿ.ಶ.ಸು.೮೦೦

೯೨. E.C.VIII ಸೊರಬ ೧೭೫ ಕುರುಕೋಡು ಕ್ರಿ.ಶ.೧೧೫೫

೯೩. E.C.(R) VII ಮದ್ದೂರು ೪೨ (IIIಮಂ.೪೧) ಆತಕೂರು. ಕ್ರಿ.ಶ.೯೪೯-೫೦

೯೪. ಕನ್ನಡ ಸಾಹಿತ್ಯ ಚರಿತ್ರೆ : ೩ನೆಯ ಸಂಪುಟ, ಕನ್ನಡ ಅಧ್ಯಯನ ಸಂಸ್ಥೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೭೬, ಪುಟ-೨೭೬

೯೫. E.C.VIIಹೊನ್ನಾಳಿ ೫೫ ಕುಳ್ಳಹಳ್ಳಿ ಕ್ರಿ.ಶ.೧೨ನೆಯ ಶತಮಾನ

೯೬. E.C.VIIಹೊನ್ನಾಳಿ ೪೮ ಬೆಳಗುತ್ತಿ ಕ್ರಿ.ಶ.೧೨೧೬

೯೭. E.C.VIIಹೊನ್ನಾಳಿ ೪೯ ಬೆಳಗುತ್ತಿ ೧೨೪೫

೯೮. E.C.(R) VIII ಹಾಸನ ೭೦ (Vಹಾ೧೦೬) ನಿಟ್ಟೂರು ಕ್ರಿ.ಶ.೧೨೨೧

೯೯. E.C.VIIIಸೊರಬ ೨೦ಪಟ್ಟುಗುಪ್ಪೆ ಕ್ರಿ.ಶ.೧೨೭೭

೧೦೦. E.C.(R) VII ನಾಗಮಂಗಲ ೧೭೨ (IVನಾಮಂ೯೭) ಕಸಲಗೆರೆ ಕ್ರಿ.ಶ.೧೨೬೦

೧೦೧. E.C.VIII ನಗರ ೧೯ ಹೊಸಕೋಟೆ ಕ್ರಿ.ಶ.೧೩೨೦

೧೦೨. E.C.(R) VIII ಹಾಸನ ೬೯ (Vಹಾ೧೦೫) ನಿಟ್ಟೂರು ಕ್ರಿ.ಶ.೧೨೧೩

೧೦೩. E.C.(R) II ಶ್ರವಣಬೆಳಗೊಳ ೭೧ (೬೪) ಚಿಕ್ಕಬೆಟ್ಟ ಕ್ರಿ.ಶ.೧೧೬೩

೧೦೪. E.C.(R) II ಶ್ರವಣಬೆಳಗೊಳ ೧೩೫(೧೧೭) ಚಿಕ್ಕಬೆಟ್ಟ ಕ್ರಿ.ಶ.೧೧೨೩

೧೦೫. E.C.(R) II ಶ್ರವಣಬೆಳಗೊಳ ೧೫೬ (೧೨೭) ಚಿಕ್ಕಬೆಟ್ಟ ಕ್ರಿ.ಶ.೧೧೧೫

೧೦೬. E.C.(R) II ಶ್ರವಣಬೆಳಗೊಳ ೧೩೫(೧೧೭) ಚಿಕ್ಕಬೆಟ್ಟ ಕ್ರಿ.ಶ.೧೧೨೩

೧೦೭. E.C.(R) II ಶ್ರವಣಬೆಳಗೊಳ ೯೮(೮೮) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೧೦೮. E.C. VII ಶಿಕಾರಿಪುರ ೨೨೫ ಬಂದಲಿಕೆ. ಕ್ರಿ.ಶ.೧೨೦೩

೧೦೯. E.C. VIII ನಗರ ೩೫ ಹುಂಚ ಕ್ರಿ.ಶ.೧೦೭೭

E.C.(R) Xಅರಸೀಕೆರೆ ೨೪೧(Vಅಕೆ೧೪೧) ಕರುಗುಂದ ಕ್ರಿ.ಶ.೧೧೫೮

೧೧೦. E.C. VIII ನಗರ ೫೭ ಹುಮ್ಮಚ

೧೧೧. E.C.(R) VII ನಾಗಮಂಗಲ ೧೧೮ (IVನಾಮಂ೭೦) ಹಟ್ಟಣ ಕ್ರಿ.ಶ.೧೧೭೮

೧೧೨. E.C.(R) XIII ಶಿವಮೊಗ್ಗ ೧೪ (VII ಶಿವ೪) ಕಲ್ಲೂರಗುಡ್ಡ ಕ್ರಿ.ಶ.೧೧೨೨

೧೧೩. E.C. VIII ನಗರ ೪೬ ಹುಮ್ಮಚ ಕ್ರಿ.ಶ.೧೪ನೆಯ ಶತಮಾನ

೧೧೪. E.C.(R)XII ಕಡೂರು ೧೦೬ (VIಕ೧೨) ದೇವನೂರು ಕ್ರಿ.ಶ.೧೧ನೆಯ ಶತಮಾನ

೧೧೫. E.C.(R) VIII ಸೊರಬ ೨೭೫ ದೇವಸ್ಥಾನ ಹಕ್ಕಲು ಗ್ರಾಮ ಕ್ರಿ.ಶ.೧೨೩೫

೧೧೬. E.C. XII ಚಿಕ್ಕನಾಯಕನಹಳ್ಳಿ ೩೦ ಡಿಂಕನಹಳ್ಳಿ ಕ್ರಿ.ಶ.೧೨ನೆಯ ಶತಮಾನ

೧೧೭. E.C.(R) VIII ಹಾಸನ ೧೧೬ (Vಹಾ೫೩) ಜಕ್ಕೇನಹಳ್ಳಿ ಕ್ರಿ.ಶ.೧೧೭೦–೭೧

೧೧೮. E.C. VII ಷಿಕಾರಿಪುರ ೧೦೨ ಬಳ್ಳಿಗಾವೆ ಕ್ರಿ.ಶ.೧೧೬೨

E.C.VII ಷಿಕಾರಿಪುರ ೧೦೪ ಬಳ್ಳಿಗಾವೆ

೧೧೯. E.C.(R) X ಅರಸೀಕೆರೆ ೨೫೪ (Vಅಕೆ ೧೮೬) ಕುರಾದಹಳ್ಳಿ ಕ್ರಿ.ಶ.೧೧ನೆಯ ಶತಮಾನ

೧೨೦. ಡಾ.ಎಂ.ಎಂ.ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು: ವೀರಶೈವ ಅಧ್ಯಯನ ಸಂಸ್ಥೆ, ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ-ಗದಗ, ೧೯೭೮, ಪುಟ-೧೫೪

೧೨೧. E.C.XI ಕುಣಿಗಲ್ ೪೯ ಎಡೆಯೂರು

೧೨೨. E.C. VII ಷಿಕಾರಿಪುರ ೧೨೯ ಬಳ್ಳಿಗಾವೆ ಕ್ರಿ.ಶ.೧೦೭೧

೧೨೩. ಆರ್.ನರಸಿಂಹಾಚಾರ್ಯ : ಕರ್ನಾಟಕ ಕವಿಚರಿತೆ, ಪ್ರಥಮ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೨೦೦೫, ಪುಟ-೧೧೨, ೧೧೩

೧೨೪. E.C.(R) VIII ಹಾಸನ ೧೫೮ (ರಿ ೧೯೪೦-೧) ಶಾಂತಿಗ್ರಾಮ

೧೨೫. E.C.(R) VIIಶಿಕಾರಿಪುರ ೧೦೦ ಬಳ್ಳಿಗಾವೆ

೧೨೬. E.C.(R) X ಅರಸೀಕೆರೆ ೧೬೩ (Vಅಕೆ ೧೬೩) ತಳಲೂರು ಕ್ರಿ.ಶ.೧೨ನೆಯ ಶತಮಾನ

೧೨೭. E.C.(R) X ಅರಸೀಕೆರೆ ೧೩೭ (Vಅಕೆ ೧೧೮) ಬೊಮ್ಮೇನಹಳ್ಳಿ ಕ್ರಿ.ಶ.೧೧೯೪

೧೨೮. E.C.(R) X ಅರಸೀಕೆರೆ ೧೬೦ (Vಅಕೆ ೧೧೭) ಕೆಲ್ಲಂಗೆರೆ ಕ್ರಿ.ಶ.೧೧೬೧

೧೨೯. E.C.(R) X ಅರಸೀಕೆರೆ ೩೩ (Vಅಕೆ ೭೯) ಕ್ರಿ.ಶ.೧೧೮೪

೧೩೦. E.C.(R) II ಶ್ರವಣಬೆಳಗೊಳ ೪೪೪(೩೨೭) ಅಕ್ಕನಬಸದಿ ಕ್ರಿ.ಶ.೧೧೮೧

೧೩೧. E.C.(R) X ಚನ್ನರಾಯಪಟ್ಟಣ ೫೧ (Vಚಪ೧೮೬) ಬಾಗೂರು ಕ್ರಿ.ಶ.೧೧೪೨

೧೩೨. E.C.(R) XII ಕಡೂರು ೬೪ (VIಕ೫೫) ಕೆರೆಸಂತೆ

೧೩೩. E.C.(R) II ಶ್ರವಣಬೆಳಗೊಳ ೧೫೭ (೧೨೮) ಚಿಕ್ಕಬೆಟ್ಟ ಕ್ರಿ.ಶ.೧೧೨೧

೧೩೪. E.C.(R)II ಶ್ರವಣಬೆಳಗೊಳ ೪೪೪(೩೨೭) ಅಕ್ಕನ ಬಸದಿ ಕ್ರಿ.ಶ.೧೧೮೧

೧೩೫. E.C.(R) X ಚನ್ನರಾಯಪಟ್ಟಣ ೫೧ (Vಚಪ ೧೮೬) ೫೧ ಬಾಗೂರು ಕ್ರಿ.ಶ.೧೧೪೨

೧೩೬. E.C.(R) X ಅರಸೀಕೆರೆ ೩೧೪(Vಅಕೆ೮೨) ಅರಕೆರೆ ಕ್ರಿ.ಶ.೧೨೩೩

೧೩೭. E.C.(R) X ಅರಸೀಕೆರೆ ೧೬೧ (Vಅಕೆ೧೨೭-೧೨೮) ತಳಲೂರು ಕ್ರಿ.ಶ.೧೧೯೧

೧೩೮. E.C.(R) X ಅರಸೀಕೆರೆ ೧೮೪ (Vಅಕೆ೧೭೨) ಹುಲ್ಲೇಕೆರೆ ಕ್ರಿ.ಶ.೧೧೬೨

೧೩೯. E.C.(R) X ಅರಸೀಕೆರೆ ೨೪೧(Vಅಕೆ ೧೪೧) ಕರುಗುಂದ ಕ್ರಿ.ಶ.೧೧೫೮

೧೪೦. E.C.(R) X ಚನ್ನರಾಯಪಟ್ಟಣ ೭೫ (Vಚಪ೨೦೯) ಬಳಗಟ್ಟೆ ಕ್ರಿ.ಶ.೧೧೭೮

೧೪೧. E.C.VII ಹೊನ್ನಾಳಿ ೩೯ ನಲ್ಲೂರು

೧೪೨. E.C.VIII ನಗರ ೪೭ ಹುಮ್ಮಚ ಕ್ರಿ.ಶ.೧೦೬೨

೧೪೩. E.C.(R) XII ಕಡೂರು ೨೦೧(VIಕ೩೮) ವಕ್ಕಲಗೆರೆ ಕ್ರಿ.ಶ.೧೧೯೧

೧೪೪. E.C.VIII ನಗರ ೪೭ ಹುಮ್ಮಚ ಕ್ರಿ.ಶ.೧೦೬೨

೧೪೫. E.C.VII ಹೊನ್ನಾಳಿ ೨೫ ಚಿಕ್ಕಯೆರೆಹಳ್ಳಿ ಕ್ರಿ.ಶ.೧೨೦೮

೧೪೬. E.C.VII ಹೊನ್ನಾಳಿ ೫೨ ನಲ್ಲುದುರೆ ಕ್ರಿ.ಶ.೧೨೩೪

೧೪೭. E.C.VII ಹೊನ್ನಾಳಿ ೬೧ ತಿರುಮಲಾಪುರ

೧೪೮. E.C.(R)X ಚನ್ನರಾಯಪಟ್ಟಣ ೭೫ (Vಚಪ೨೧೯) ಬಳಗಟ್ಟೆ ಕ್ರಿ.ಶ.೧೧೭೮

೧೪೯. (ಸಂ)ಪ್ರೊ.ಹಂಪನಾಗರಾಜಯ್ಯ: ರನ್ನ ಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬. ಪುಟ-೧೨. ಪದ್ಯಗಳು:೫೪, ೫೫, ೫೭

೧೫೦. ಮಾ.ಮಂಜುಳ : ಲೇಖನ : ಅತ್ತಿಮಬ್ಬೆ ಕನ್ನಡ ಸಾಹಿತ್ಯದಲ್ಲಿ ಮತ್ತು ಶಾಸನದಲ್ಲಿ, ಕನ್ನಡ ನುಡಿ ಪತ್ರಿಕೆ, ಸಂಪುಟ-೪೨, ಸಂಚಿಕೆ-೩, ೧೯೭೯-೮೦,ಪುಟ-೨೦, ೨೧

೧೫೧. E.C.VII ಹೊನ್ನಾಳಿ ೧೪೦ ಉದ್ರಿಗ್ರಾಮ ಕ್ರಿ.ಶ.೧೧೯೭

೧೫೨. E.C.(R)X ಅರಸೀಕೆರೆ ೨೪೧ (Vಅಕೆ-೧೪೧) ಕರುಗುಂದ ಕ್ರಿ.ಶ.೧೧೫೮

೧೫೩. E.C.(R)X ಚನ್ನರಾಯಪಟ್ಟಣ ೯೨(Vಚಪ೨೪೨) ಅಗ್ರಹಾರ ಬೆಳಗುಲಿ. ಕ್ರಿ.ಶ.೧೨೫೨

೧೫೪. E.C.(R)IIಶ್ರವಣಬೆಳಗೊಳ ೧೭೬(೧೪೩) ಚಿಕ್ಕಬೆಟ್ಟ ಕ್ರಿ.ಶ.೧೧೨೩

೧೫೫. E.C.(R)VIII ಹಾಸನ ೧೬೭ (Vಹಾ೧೧೬) ಶಾಂತಿಗ್ರಾಮ. ಕ್ರಿ.ಶ.೧೧೨೨

೧೫೬. ಪೂರ್ವೋಕ್ತ ಶಾಸನ

೧೫೭. E.C.(R) IX ಹಾಸನ ೧೬(Vಬೇ೫೮) ಬೇಲೂರು ಕ್ರಿ.ಶ.೧೧೧೭

೧೫೮. (ಸಂ) ಡಾ.ಮಳಲಿ ವಸಂತಕುಮಾರ್ : ಹೊಯ್ಸಳ ಸಂಪದ, ಸ್ವಾಗತಸಮಿತಿ, ಅಖಿಲಭಾರತ ೬೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ -೧೯೯೬, ಪುಟ-೨೭

೧೫೯. E.C.(R) X ಅರಸೀಕೆರೆ ೬(ರಿ.೧೯೨೮-೯) ಕ್ರಿ.ಶ.೧೧೮೩

೧೬೦. E.C.(R) X ಅರಸೀಕೆರೆ ೬(ರಿ.೧೯೨೮-೯) ಕ್ರಿ.ಶ.೧೧೮೩

೧೬೧. E.C.(R) XII ಕಡೂರು ೬೭

೧೬೨. E.C.(R) X ಅರಸೀಕೆರೆ ೨೪೨ ಕರುಗುಂದ

೧೬೩. E.C.(R) XII ತರೀಕೆರೆ ೪೬

೧೬೪. E.C.(R) XI ಮೂಡಗೆರೆ ೧೮ (VIಮೂಡ೨೨) ಹಂತೂರು ಕ್ರಿ.ಶ.೧೧೨೯

೧೬೫. E.C.(R) VII ಶಿಕಾರಿಪುರ ೨೧೯ ಬಂದಳಿಕೆ ಕ್ರಿ.ಶ.೯೧೮

೧೬೬. E.C.(R)III ಹೆಗ್ಗಡದೇವನಕೋಟೆ ೬೦ (ಎ.ಕ.IV ಹೆ.ಕೋ.೧೮) ಬೆಳತೂರು. ಕ್ರಿ.ಶ.೧೦೫೭

೧೬೭. E.C.(R) IX ಬೇಲೂರು ೩೦೦(Vಬೇ೧೧೨) ಹಳೇಬೀಡು. ಕ್ರಿ.ಶ.೧೨ನೆಯ ಶತಮಾನ

೧೬೮. E.C.(R) VIII ಹಾಸನ ೧೪೬ (Vಹಾ೫೭) ಹೆರಗು ಕ್ರಿ.ಶ.೧೧೫೫

೧೬೯. E.C. XII ತಿಪಟೂರು ೯೩ ಕರಡಾಳು ಕ್ರಿ.ಶ.೧೧೭೪

೧೭೦. E.C. VIII ಸೊರಬ ೨೮ ಸೊರಬ

೧೭೧. E.C. VII ಷಿಕಾರಿಪುರ ೨೩೬ ಬಳ್ಳಿಗಾವೆ

೧೭೨. E.C.XI ದಾವಣಗೆರೆ ೪೧ ಹರಿಹರ ಕ್ರಿ.ಶ.೧೧೪೮

೧೭೩. E.C. VIII ಸೊರಬ ೧೩೮ ಉದ್ರಿಗ್ರಾಮ

೧೭೪. (ಪ್ರಸಂ.) ಡಾ.ಕೆ.ವಿ.ಪುಟ್ಟಪ್ಪ : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೦, ಪುಟ-೯೮ ಪದ್ಯಗಳು: ೨೮, ೨೯, ೩೦, ೩೧.

೧೭೫. ಪೂರ್ವೋಕ್ತ ಪದ್ಯ:೨೯, ೩೦

೧೭೬. E.C. VIII ಸೊರಬ ೩೪೫ ತೆವರತೆಪ್ಪ

೧೭೭. E.C.XI ದಾವಣಗೆರೆ ೩೫ ಹರಿಹರ ಕ್ರಿ.ಶ.೧೧೬೦

೧೭೮. E.C. VII ಷಿಕಾರಿಪುರ ೨೨೫ ಬಂದಳಿಕೆ ಕ್ರಿ.ಶ.೧೨೦೩

೧೭೯. ಪೂರ್ವೋಕ್ತ

೧೮೦. ಡಾ.ಭೋಜರಾಜ.ಬ.ಪಾಟೀಲ. ನಾಗರಖಂಡ -೭೦ ಒಂದು ಅಧ್ಯಯನ : ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ, ಆನಂದಪುರಂ. ೧೯೯೫. ಪುಟ-೧೯

೧೮೧. E.C. VII ಷಿಕಾರಿಪುರ ೧೯೭ ಚಿಕ್ಕಮಾಗಡಿ

೧೮೨. E.C. XI ದಾವಣಗೆರೆ ೩೫ ಹರಿಹರ ಕ್ರಿ.ಶ.೧೧೬೦

೧೮೩. E.C. VIII ಸೊರಬ ೩೨೮ ಬಾರಂಗಿ ಕ್ರಿ.ಶ.೧೧೫೯

೧೮೪. E.C. VIII ಸೊರಬ ೨೨೫ ಬಂದಲಿಕೆ ಕ್ರಿ.ಶ.೧೨೦೩ ಶಾಸನದಲ್ಲಿ ಬಂದಲಿಕೆಗ್ರಾಮವನ್ನು 'ಬಾಂಧವನಗರ'ವೆಂದು ಕರೆಯಲಾಗಿದೆ.

೧೮೫. E.C.(R) X ಅರಸೀಕೆರೆ ೩೧೪ (Vಅಕೆ ೮೨)ಅರಕೆರೆ ೧೨೩೩

೧೮೬. S.I.I. VIIಕಾರ್ಕಳ ೧೯೬ ಮೂಡಬಿದಿರೆ ಕ್ರಿ.ಶ.೧೪೨೬

೧೮೭. E.C.VII ಶಿಕಾರಿಪುರ ೧೦೦ ಬಳ್ಳಿಗಾವೆ

೧೮೮. ಬೆನಗಲ್ ರಾಮರಾವ್ ಮತ್ತು ಪಾನ್ಯಂಸುಂದರಶಾಸ್ತ್ರಿ : ಪುರಾಣ ನಾಮಚೂಡಾಮಣಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೨೦೦೧, ಪುಟ-೪೪೧ : ಭೋಗವತೀಯೆಂಬುದು ಪಾತಾಳ ಲೋಕದಲ್ಲಿರುವ ಒಂದು ಸುಂದರವಾದ ಪಟ್ಟಣ. ಇದು ಸರ್ಪಗಳ ರಾಜಧಾನಿ.

೧೮೯. E.C. VIII ಸೊರಬ ೨೭೫ ದೇವಸ್ಥಾನದ ಹಕ್ಕಲು ಕ್ರಿ.ಶ.೧೨೩೫

೧೯೦. E.C. VIII ಸೊರಬ ೨೬೧ ಕುಪ್ಪಟೂರು ಕ್ರಿ.ಶ.೧೪೦೮

೧೯೧. E.C.(R) X ಅರಸೀಕೆರೆ ೭(೧೯೨೮-೧೦ XVಅಕೆ ೨೦೫) ಕ್ರಿ.ಶ.೧೧೮೯

೧೯೨. E.C.(R) X ಅರಸೀಕೆರೆ ೩೨೫ ಕೆಂಗಲ್ಲು ಕ್ರಿ.ಶ.೧೧೮೧

೧೯೩. E.C.(R) X ಅರಸೀಕೆರೆ ೬ (೧೯೨೮-೯) ಕ್ರಿ.ಶ.೧೧೮೩

೧೯೪. E.C.(R) X ಅರಸೀಕೆರೆ ೧೨ (ರಿ.೧೯೩೦-೧) ಕ್ರಿ.ಶ.೧೨-೧೩ನೆಯ ಶತಮಾನ

೧೯೫. E.C. XI ದಾವಣಗೆರೆ ೩೬ ಹರಿಹರ ಕ್ರಿ.ಶ.೧೨೬೮

೧೯೬. E.C. XI ದಾವಣಗೆರೆ ೧೪ ಹರಿಹರ ಕ್ರಿ.ಶ.೧೨೨೪

೧೯೭. E.C. VIII ಸೊರಬ ೨೩೩ ಉದ್ರಿಗ್ರಾಮ

೧೯೮. E.C.XII ತಿಪಟೂರು ೧೨೮ ಹೊನ್ನವಳ್ಳಿ

೧೯೯. E.C.XII ಕುಣಿಗಲ್ ೧ ಕೊತ್ತಂಗೆರೆ

೨೦೦. E.C.XII ತುಮಕೂರು ೯ ಕಯ್ದಾಳ

೨೦೧. E.C.(R)X ಅರಸೀಕೆರೆ ೨೯ (Vಅಕೆ ೧೯೩) ಕೋಳಿಗುಂದ ಕ್ರಿ.ಶ.೧೧೯೪

೨೦೨. E.C.(R)X ಅರಸೀಕೆರೆ ೧೩೯ (Vಅಕೆ ೧೧೮) ಬೊಮ್ಮೇನಹಳ್ಳಿ ಕ್ರಿ.ಶ.೧೧೯೪

೨೦೩. E.C.(R)X ಅರಸೀಕೆರೆ ೩೧೪ (Vಅಕೆ೮೨) ಅರಕೆರೆ ಕ್ರಿ.ಶ.೧೨೩೩

೨೦೪. E.C. VIII ಸೊರಬ ೩೨೯ ಬಾರಂಗಿಗ್ರಾಮ

೨೦೫. E.C. VIII ಸೊರಬ ೩೨೫ ಬಾರಂಗಿಗ್ರಾಮ

೨೦೬. E.C.(R)X ಅರಸೀಕೆರೆ ೩೧೭ (Vಅಕೆ ೧೦೮) ಹಿರಿಯೂರು ಕ್ರಿ.ಶ.೧೨೫೪

೨೦೭. E.C. XII ತುಮಕೂರು ೯ ಕಯ್ದಾಳ

೨೦೮. E.C.(R)X ಅರಸೀಕೆರೆ ೨೩೨ (Vಅಕೆ ೧೨೩) ಹಾರನಹಳ್ಳಿ ಕ್ರಿ.ಶ.೧೨೧೪

೨೦೯. E.C.XI ದಾವಣಗೆರೆ ೪೧ ಹರಿಹರ ಕ್ರಿ.ಶ.೧೧೪೮

E.C.VIII ಸೊರಬ ೩೨೫ ಬಾರಂಗಿಗ್ರಾಮ

೨೧೦. E.C.VIII ಸೊರಬ ೨೬೧ ಕುಪ್ಪಟೂರು ಕ್ರಿ.ಶ.೧೪೦೮

೨೧೧. S.I.IVII ಕಾರ್ಕಳ ೨೦೨ ಮೂಡಿಬಿದಿರೆ ಕ್ರಿ.ಶ.೧೪೩೦

೨೧೨. E.C.XI ದಾವಣಗೆರೆ ೪೪ ಹರಿಹರ ಕ್ರಿ.ಶ.೧೧೮೦

೨೧೩. E.C.VII ಹೊನ್ನಾಳಿ ೨೫ ಚಿಕ್ಕಯೆರೆಹಳ್ಳಿ ಕ್ರಿ.ಶ.೧೨೦೮

೨೧೪. E.C.VIII ಸೊರಬ ೩೨೫ ಬಾರಂಗಿಗ್ರಾಮ

೨೧೫. E.C.VIII ಸೊರಬ ೨೬೧ ಕುಪ್ಪಟೂರು ಕ್ರಿ.ಶ.೧೪೦೮

೨೧೬. S.I.IVII ಕಾರ್ಕಳ ೧೯೬ ಮೂಡಬಿದಿರೆ ಕ್ರಿ.ಶ.೧೪೨೬

೨೧೭. E.C.(R)VIII ಹೊಳೆನರಸೀಪುರ ೯೫(XVಹೊನ೧೧೨) ಕ್ರಿ.ಶ.೧೨೮೨

೨೧೮. E.C.(R)XII ನರಸಿಂಹರಾಜಪುರ ೩೨. ಕ್ರಿ.ಶ.೧೧ನೆಯ ಶತಮಾನ

ತುಂಗಾನದಿಯ ಬಣ್ಣನೆಯ ಪದ್ಯ

ಪಾಠೀನಲೋಚನರಥಾಂಗ ಪಯೋಧರಾಯಾ

ನೀರೇರುಹಾನನ ಶಿಳೀಮುಖ ಕುನ್ತಳಾಯಾ

ದೀರ್ಗ್ಪೋರ್ಮಿಬಾಹುಕಳಹಂಸವಿಳಾಸಯನ್ತ್ಯಾ

ಸ್ತುಂಗೇತಿ ಪುಣ್ಯಸರಿತೋಲಸತಿಪ್ರವಾಹಃ ॥

೨೧೯. E.C.(R)XIII ಶಿವಮೊಗ್ಗ ೧೪(VIIಶಿವ೪) ಕಲ್ಲೂರುಗುಡ್ಡ. ಕ್ರಿ.ಶ.೧೧೨೨

E.C.(R)XIII ಶಿವಮೊಗ್ಗ ೬೮(VIIಶಿವ೬೪) ಮರಲೆ ಕ್ರಿ.ಶ.೧೧೧೨

೨೨೦. E.C.VII ಶಿಕಾರಿಪುರ ೧೧೪ ಬಳ್ಳಿಗಾವೆ

೨೨೧. E.C.(R)X ಚನ್ನರಾಯಪಟ್ಟಣ ೭೬ (Vಚಪ೨೧೦) ಬಿದಿರೆ ಕ್ರಿ.ಶ.೧೧೬೫

೨೨೨. E.C.(R)Xಚನ್ನರಾಯಪಟ್ಟಣ ೭೫ (Vಚಪ೨೦೯) ಬಳಗಟ್ಟೆ ಕ್ರಿ.ಶ.೧೧೭೮

೨೨೩. E.C.(R)Xಅರಸೀಕೆರೆ ೩೧೭ (Vಅಕೆ ೧೦೮) ಹಿರಿಯೂರು ಕ್ರಿ.ಶ.೧೨೫೪

೨೨೪. E.C.(R)VII ಮಂಡ್ಯ ೨೯(IIIಮಂ೧೨೧) ಬಸರಾಳು ಕ್ರಿ.ಶ.೧೨೩೪

೨೨೫. E.C.XIದಾವಣಗೆರೆ ೨೫ ಹರಿಹರ ಕ್ರಿ.ಶ.೧೨೨೪

೨೨೬. E.C.VII ಶಿಕಾರಿಪುರ ೧೧೪ ಬಳ್ಳಿಗಾವೆ

೨೨೭. E.C.(R)X ಚನ್ನರಾಯಪಟ್ಟಣ ೭೫ ಬಳಗಟ್ಟೆ ಕ್ರಿ.ಶ.೧೧೭೮

೨೨೮. E.C.(R)X ಚನ್ನರಾಯಪಟ್ಟಣ ೭೬ ಬಿದಿರೆ ಕ್ರಿ.ಶ.೧೧೬೫

೨೨೯. E.C.(R)VII ಮಂಡ್ಯ ೨೯ ಬಸರಾಳು ಕ್ರಿ.ಶ.೧೨೩೪

೨೩೦. E.C.XIದಾವಣಗೆರೆ ೨೫ ಹರಿಹರ ಕ್ರಿ.ಶ.೧೨೨೪

೨೩೧. E.C.(R)II ಶ್ರವಣಬೆಳಗೊಳ ೧೭೬(೧೪೩) ಚಿಕ್ಕಬೆಟ್ಟ ಕ್ರಿ.ಶ.೧೧೩೧

೨೩೨. E.C.VIII ನಗರ ೪೭ ಹುಮ್ಮಚ ಕ್ರಿ.ಶ.೧೦೬೨

೨೩೩. S.I.I.VII ಕಾರ್ಕಳ ೨೦೨ ಮೂಡಬಿದಿರೆ ಕ್ರಿ.ಶ.೧೪೩೦

೨೩೪. S.I.I.VII ಕಾರ್ಕಳ ೧೯೬ ಮೂಡಬಿದಿರೆ ಕ್ರಿ.ಶ.೧೪೨೬

೨೩೫. E.C.VIIಷಿಕಾರಿಪುರ ೧೦೨ ಬಳ್ಳಿಗಾವೆ ಕ್ರಿ.ಶ.೧೧೬೨

೨೩೬. ಡಾ.ಎಂ.ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೭೯, ಪುಟ-೧೫೨

೨೩೭. E.C.(R)II ಶ್ರವಣಬೆಳಗೊಳ ೩೩೬(೨೩೪) ದೊಡ್ಡಬೆಟ್ಟ ಕ್ರಿ.ಶ.೧೨ನೆಯ ಶತಮಾನ

೨೩೮. S.I.I.VII ಕಾರ್ಕಳ ೧೯೬ ಮೂಡಬಿದಿರೆ ಕ್ರಿ.ಶ.೧೪೨೬

೨೩೯. ಲಕ್ಷ್ಮೀಧರಾಮಾತ್ಯನಿಗೆ ಆತನ ತಾಯಿಯು 'ಪಾಲೆಱೆವಂದು ಕೆಱೆಯಂ ಕಟ್ಟಿಸು......" ಎಂದು ಮುಂತಾಗಿ ಉಪದೇಶಿಸುತ್ತಿದ್ದಳು ಎಂಬುದಾಗಿ ಲಕ್ಷ್ಮೀಧರನ ಶಾಸನವು ನಿರೂಪಿಸುತ್ತದೆ.

(S.I.I.IV೨೬೭ ಪುಟ-೬೦,೬೬)

(ಸಂ) ಎ.ಎಂ.ಅಣ್ಣಿಗೇರಿ, ಆರ್.ಶೇಷಶಾಸ್ತ್ರೀ: ಶಾಸನ ಸಂಗ್ರಹ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. ೧೯೮೨, ಪುಟ-೧೦೨

೨೪೦. E.C.(R)IX ಸಕಲೇಶಪುರ ೪೫(Vಮಂಬಾ೬) ಹಳೇಬೇಲೂರು ಕ್ರಿ.ಶ.೧೦೯೫

೨೪೧. E.C.(R)IX ಬೇಲೂರು ೪೧೦(Vಬೇ ೧೯೩) ಹುಲಿಕೆರೆ ಕ್ರಿ.ಶ.೧೧೬೦

೨೪೨. E.C.XII ತುಮಕೂರು ೯ ಕೈದಾಳ ಕ್ರಿ.ಶ.೧೨ನೆಯ ಶತಮಾನ

೨೪೩. E.C.(R)XII ಕಡೂರು. ೬೬ ಕೆರೆಸಂತೆ

೨೪೪. E.C.(R)IX ಸಕಲೇಶಪುರ ೪೫ ಹಳೇಬೇಲೂರು ಕ್ರಿ.ಶ.೧೦೯೫

೨೪೫. E.C.(R)IX ಬೇಲೂರು ೪೧೦ ಹುಲಿಕೆರೆ ಕ್ರಿ.ಶ.೧೧೬೦

೨೪೬. E.C.XII ತುಮಕೂರು ೯ ಕ್ರಿ.ಶ. ೧೨ನೆಯ ಶತಮಾನ

೨೪೭. E.C.(R)XII ಕಡೂರು ೬೬ ಕೆರೆಸಂತೆ

೨೪೮. E.C.(R)XII ಕಡೂರು ೧೮೫ (VIಕ ೧೨೯) ಮಾದಾಪುರ ಕ್ರಿ.ಶ.೧೨೧೮

## ಅಧ್ಯಾಯ – ೫

## ಅಲಂಕಾರ ಮತ್ತು ಛಂದಸ್ಸು

ಕಾವ್ಯ ಸೌಂದರ್ಯವನ್ನುಂಟು ಮಾಡುವ ಶಬ್ದಾರ್ಥವೈಚಿತ್ರ್ಯಗಳಿಗೆ ಅಲಂಕಾರಗಳೆಂದು ಹೆಸರು. ಮನುಷ್ಯ ದೇಹವು ಹೊರಗೆ ಅಂದವಾಗಿ ಕಾಣಲು ಒಡವೆ, ಬಟ್ಟೆ, ಶೃಂಗಾರ ಸಾಮಗ್ರಿಗಳು ಹೇಗೆ ಅಗತ್ಯವೋ ಹಾಗೆಯೇ ಕಾವ್ಯದ ಸೌಂದರ್ಯವನ್ನು ಹೆಚ್ಚಿಸಲು ಶಬ್ದ ಅರ್ಥಗಳಿಂದ ಮಾತ್ರ ಸಾಧ್ಯವಾಗುತ್ತದೆ. ಕಾವ್ಯದಲ್ಲಿ ಆಂತರಿಕ, ಬಾಹ್ಯ ಆಕರ್ಷಣೆಯನ್ನು ಹೆಚ್ಚಿಸಲು 'ಅಲಂಕಾರ'ಗಳು ಅಗತ್ಯವಾಗುತ್ತದೆ. ಕಾವ್ಯವು ಶಬ್ದ-ಅರ್ಥಗಳಿಂದ ಕೂಡಿರುತ್ತದೆ. ಅರ್ಥವಿಲ್ಲದ ಶಬ್ದಗಳಿಗೆ ಮಹತ್ವವಿಲ್ಲ. ಆ ಅರ್ಥ ಚಮತ್ಕಾರದಿಂದ ಕೂಡಿದ್ದರೆ, ಆ ಕಾವ್ಯಕ್ಕೆ ಮಹತ್ವ ಹೆಚ್ಚಾಗುತ್ತದೆ. ಹೀಗೆ ಕಾವ್ಯದ ಸೌಂದರ್ಯವನ್ನು ಉಂಟು ಮಾಡುವ ಶಬ್ದಾರ್ಥಗಳ ಚಮತ್ಕಾರಕ್ಕೆ 'ಅಲಂಕಾರ'ವೆಂದು ಹೆಸರು.

ಅಲಂಕಾರಗಳಲ್ಲಿ ೧.ಶಬ್ದಾಲಂಕಾರ ೨.ಅರ್ಥಾಲಂಕಾರಗಳೆಂದು ಎರಡು ವಿಧಗಳಿವೆ. ಶಬ್ದಾಲಂಕಾರಗಳು ಸದ್ದಿಗೋಸ್ಕರ ಕಟ್ಟಿಕೊಂಡಿರುವ ಗೆಜ್ಜೆಪಾಡಗಗಳಂತಿದ್ದರೆ, ಅರ್ಥಾಲಂಕಾರಗಳು ನೈಸರ್ಗಿಕವಾಗಿರುವ ಸೌಂದರ್ಯವನ್ನು ಹೆಚ್ಚಿಸುವ ರತ್ನಖಚಿತವಾದ ಕುಂದಣದ ಒಡವೆಗಳಂತಿವೆ. ಕಾವ್ಯಗಳಲ್ಲಿ ಹೇಗೋ ಹಾಗೆ ಶಾಸನಗಳಲ್ಲೂ ಸಹ ಕವಿಗಳು ಉಚಿತವಾಗಿ ಅಲಂಕಾರಗಳನ್ನು ಬಳಸಿ ಶಾಸನ ಸಾಹಿತ್ಯದ ಸೌಂದರ್ಯವನ್ನು ಹೆಚ್ಚಿಸಲು ಮುಂದಾದರು. ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯ ಕನ್ನಡ ಶಾಸನಗಳಲ್ಲಿ ಶಾಸನಕವಿಗಳು ಸಂದರ್ಭೋಚಿತವಾಗಿ ಬಳಸಿರುವ ಶಬ್ದಾಲಂಕಾರ, ಅರ್ಥಾಲಂಕಾರಗಳನ್ನು ಸೂಕ್ತ ಉದಾಹರಣೆಗಳೊಂದಿಗೆ ಪರಿಚಯಿಸಲಾಗುವುದು.

### ೫.೧ : ಶಬ್ದಾಲಂಕಾರಗಳು :-

ಶಬ್ದಾಲಂಕಾರಗಳಲ್ಲಿ ೧)ಅನುಪ್ರಾಸ ೨) ಯಮಕ ಮತ್ತು ೩)ಚಿತ್ರಕವಿತ್ವ ಎಂಬುದಾಗಿ ಮೂರು ವಿಧ. ಅಕ್ಷರಗಳ 'ಆವೃತ್ತಿ'ಯೇ ಅನುಪ್ರಾಸ. 'ಅನುಪ್ರಾಸ'ದಲ್ಲಿ ಒಂದೋ ಎರಡೋ ಮೂರೋ ಅಕ್ಷರಗಳು ಮತ್ತೆ ಮತ್ತೆ ಬಂದರೆ ಅದಕ್ಕೆ 'ವೃತ್ತ್ಯನುಪ್ರಾಸ'ವೆಂದೂ ಎರಡು ಅಕ್ಷರಗಳು ಜತೆಜತೆಯಾಗಿ ಹಲವು ಕಡೆ ಬಂದರೆ 'ಛೇಕಾನುಪ್ರಾಸ'ವೆಂದೂ ಹೆಸರು. ಶಾಸನಗಳಲ್ಲಿಯೂ ಸಹ ಇವುಗಳಿಗೆ ಹಲವಾರು ಉದಾಹರಣೆಗಳು ಕಂಡುಬರುತ್ತವೆ.

೫.೨ : ಅನುಪ್ರಾಸ : –

**ವೃತ್ತ್ಯನುಪ್ರಾಸ** : ಎರಡು ಅಕ್ಷರಗಳು ಪುನರಾವೃತ್ತಿಯಾಗಿರುವುದಕ್ಕೆ ಉದಾ:

**ಮಲಮಲದು ಮಲೆದು ಮಲೆಪರ**
**ಕುಲಮಂ ಬೇರ್ವೆರಸಿ ಕಿತ್ತು ಬಂಮಲೆ ಮುದದಿಂ**
**ಫಲ ಫಲಕು ಫಲಕು ಫಲಕೆನ**
**ಲಲೆವಳು ಪರಸತಿಯರ ವರಕೀರ್ತ್ಯೋರ್ಣತಿಯಂ**[1]

ಎಂಬ ಪದ್ಯದಲ್ಲಿ ಮಕಾರ ಮತ್ತು ಲಕಾರಗಳು ಪುನಃ ಪುನಃ ಬಳಕೆಯಾಗಿ ಪದ್ಯದ ಸೊಬಗನ್ನು ಹೆಚ್ಚಿಸಿವೆ.

**ಛೇಕಾನುಪ್ರಾಸಕ್ಕೆ** ಉದಾಹರಣೆಯಾಗಿ ಈ ಕೆಳಗಿನ ಪದ್ಯವನ್ನು ಗಮನಿಸಬಹುದು.

**ಪೇನಿಗಳಂ ಪೊಗಟದಿರಭಿ**
**ಮಾನಿಗಳಂ ಗುಣದ ಖನಿಗಳಂ ವಸುಮತಿಯೊಳ್ ।**
**ದಾನಿಗಳನೂನಮಿಲ್ಲದ**
**ಮೋನಿಗಳಂ ಪೋಗಿ ಪೊಗಟ ಕೆಲ್ಲಂಗೆಱೆಯೊಳು ।** [2]

ಎಂಬ ಈ ಪದ್ಯದಲ್ಲಿ ಪೇನಿಗಳಂ, ಅಭಿಮಾನಿಗಳಂ, ಖನಿಗಳಂ, ದಾನಿಗಳಂ, ಮೋನಿಗಳಂ ಎಂಬ ಪದ್ಯಗಳಲ್ಲಿ 'ಗಳಂ' ಎಂಬುದು ಮೇಲಿಂದ ಮೇಲೆ ಬರುವ ಮೂಲಕ ಕೇಳುವಿಕೆಗೆ ಹಿತವನ್ನುಂಟು ಮಾಡುತ್ತಾ ಪದ್ಯವು ಮನಸ್ಸಿನಲ್ಲಿ ಉಳಿಯಲು ಸಹಾಯಕವಾಗುತ್ತದೆ.

ಜನ್ನಕವಿಯ ಅಮೃತಾಪುರದ ಶಾಸನದ ಪದ್ಯವೊಂದರಲ್ಲಿ[3] 'ಎಱೆಯಂಗ' ಎಂಬ ಪದವನ್ನು 'ಛೇಕಾನುಪ್ರಾಸ'ದಲ್ಲಿ ಸೊಗಸಾಗಿ ಬಳಸಿದ್ದು, ಆ ಪದ್ಯ ಭಾಗವು ಹೀಗಿದೆ.

**ಚಲದೆಱೆಯಂಗೆ ಚಾಗದೆಱೆಯಂಗೆ ಜಸಕ್ಕೆಱೆಯಂಗೆಮಿಕ್ಕದೋ**
**ರ್ವ್ವಲದೆಱೆಯಂಗೆ ವೀರದೆಱೆಯಂಗೆ ಕುಲೋನ್ನತಿ ತನ್ನೊಳೊಪ್ಪುವೇ**
**ಚಲೆಱೆಯಂಗೆ ಕೀರ್ತಿಯೆಱೆಯಂಗೆಱೆಯಂಗನೃಪಂಗೆ ನಂದನಂ**
**ಜಲಧಿಪರೀತ ಭೂವಳಿಯವರ್ಧನನಂಕದ ವಿಷ್ಣುವರ್ಧನಂ ॥**

೫. ೩ : ಯಮಕ :–

ಮೂರು ಅಥವಾ ಅದಕ್ಕಿಂತ ಹೆಚ್ಚಿನ ಅಕ್ಷರಗಳುಳ್ಳ ಪದವೋ ಪದಭಾಗವೋ ಒಂದು ಪದ್ಯದ ಆದಿ, ಮಧ್ಯ, ಅಂತ್ಯ ಈ ಸ್ಥಾನಗಳಲ್ಲಿ ನಿಯತವಾಗಿ ಪುನಃ ಪುನಃ ಬಂದರೆ ಅದಕ್ಕೆ 'ಯಮಕ'ವೆಂದು ಹೆಸರು. ಉದಾಹರಣೆಗೆ

**ಶ್ರೀಯುವತಿಯುಮಖಿಳಧರಿತ್ರೀ**

**ಶ್ರೀಯುವತಿಯುಮೆರಡು ಕೆಲದೊಳಂ ಸೋಂಕಿರೆ ನಾ**

**ರಾಯಣನಾಗಳು ಕಲ್ಪಲ**

**ತಾಯುಗ್ಮದ ನಡುವೆ ಕಳ್ಪಕುಂಜದಂತಿರ್ದ್ದಂ**[೪]

ಎಂಬ ಪದ್ಯದಲ್ಲಿ ಮೊದಲೆರಡು ಪಾದಗಳ ಆದಿಯಲ್ಲಿ 'ಶ್ರೀಯುವತಿ' ಎಂಬ ಪದದ ಪ್ರಯೋಗವಾಗಿರುವುದನ್ನು ಗಮನಿಸಬಹುದು.

೫.೪ : ಚಿತ್ರಕವಿತ್ವ :–

ಅಕ್ಷರಗಳನ್ನೂ ಪದಗಳನ್ನೂ ಕುಶಲತೆಯಿಂದ ಆರಿಸಿ ಜೋಡಿಸಿ ಕವಿಗಳು ಉಂಟುಮಾಡುವ ಇತರ ಶಬ್ದವೈಚಿತ್ರ್ಯಕ್ಕೆ ಚಿತ್ರಕವಿತ್ವವೆಂದೂ 'ಬಂಧ'ವೆಂದೂ ಹೆಸರು. ಇದನ್ನು ಶಬ್ದವೈಖರಿ ಅಭ್ಯಾಸದಲ್ಲಿ, ಬುದ್ಧಿಸಾಮರ್ಥ್ಯ ಇದ್ದ ಹಾಗೆಲ್ಲಾ ಕಲ್ಪಿಸಿ ರಚಿಸಿರಬಹುದು. ಆದ್ದರಿಂದ ಇವುಗಳಲ್ಲಿ ನಿರೋಷ್ಠ್ಯ, ಅತಾಲವ್ಯ, ಏಕಾಕ್ಷರ, ದ್ವ್ಯಕ್ಷರ, ಹಾರಬಂಧ, ಮುರಜಬಂಧ ಮುಂತಾದ ನಾನಾ ವಿಧಗಳುಂಟು. 'ಚಿತ್ರಕವಿತ್ವ'ಕ್ಕೆ 'ಮುನಿಭದ್ರದೇವ'ನೆಂಬ ಜೈನಯತಿಯ ಹೆಸರನ್ನು ಚಮತ್ಕಾರವಾಗಿ ಪದ್ಯವೊಂದರಲ್ಲಿ ನಿಕ್ಷೇಪಗೊಳಿಸಿರುವುದನ್ನು ಉದಾಹರಿಸಬಹುದು.[೫] ಪದ್ಯದ ಕೊನೆಯಲ್ಲಿ ಬರುವ 'ವಾಕ್ಯಾದಿ ವರ್ಣಾಹ್ವಯರ್' ಎಂಬ ಸೂಚನೆಯನ್ನು ಅನುಸರಿಸಿದರೆ ಆಗ ಮುನಿಯ ಹೆಸರು ತಿಳಿಯುವಂತೆ ಮಾಡಿರುವುದು ಈ ಪದ್ಯದ ವಿಶೇಷವಾಗಿದ್ದು, ಪದ್ಯವು ಈ ರೀತಿಯಾಗಿದೆ.

**ಮುನಿಸಂ ಮನ್ಮಥಯುದ್ಧದೊಳ್ ನಿರುತಮಂ ತತ್ತ್ವಾರ್ಥದೊಳ್ ಭಕ್ತಿಯಂ**

**ಜಿನಪಾದಾಂಬುಜದೊಳ್ ದ್ರವಾಧಿಕತೆಯಂ ಸಚ್ಚಿತ್ತದೊಳ್ ದೇಸೆಯಂ**

**ವಿನುತಾಚಾರಾಚಯಂಗಳೊಳ್ ವಚನಮಂ ವಕ್ತೃತ್ವದೊಳ್ ರುಕ್ಮರಂ**

**ಜನೆಯಂ ದೇಹದ ಕಾಂತಿಯೊಳ್ ನಿಱುಸಿದರ್ ವಾಕ್ಯಾದಿ ವರ್ಗಾಹ್ವಯರ್ ॥**

ಈ ಪದ್ಯದ ಪ್ರತಿಯೊಂದು ಆಶಯವಾಕ್ಯದ ಆದ್ಯಕ್ಷರಗಳನ್ನು ಅಂದರೆ ಕ್ರಮವಾಗಿ ೧, ೨ ಮತ್ತು ೩ನೆಯ ಪಾದಗಳಲ್ಲಿಯ ೧, ೧೦, ೧೮, ೨೮, ೩೮, ೫೦ನೆಯ ಅಕ್ಷರಗಳನ್ನು ಸೇರಿಸಿದರೆ ಆಗ "ಮುನಿಭದ್ರದೇವ"ನೆಂಬ ಜೈನಯತಿಯ ಹೆಸರು ಹೊರಹೊಮ್ಮುತ್ತದೆ.

'ಚಿತ್ರಕವಿತ್ವ'ಕ್ಕೆ ಹಳೇಬೀಡಿನ ಶಾಸನವೊಂದನ್ನೂ ಉದಾಹರಿಸಬಹುದು[೬] ಶಬ್ದಾಲಂಕಾರಗಳು ಕೇವಲ ಶಬ್ದವೈಚಿತ್ರ್ಯಕ್ಕೆ ಸೀಮಿತವಾದವುಗಳು ಎಂಬುದಾಗಿ ಹೇಳಬಹುದು. ಅಲ್ಲಿ ಅರ್ಥವಿಶೇಷತೆಗಿಂತ ಶಬ್ದಗಳ ಬಳಕೆಯನ್ನು ಪ್ರೌಢಿಮೆಯಿಂದ ಮಾಡುವುದಕ್ಕೆ ಮಾತ್ರ ಮಹತ್ವವಿರುತ್ತದೆ. ಆದರೆ ಅರ್ಥಾಲಂಕಾರಗಳು 'ಕಾವ್ಯ ಸೌಂದರ್ಯ'ವನ್ನು ಹೆಚ್ಚಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತವೆ. ಶಾಸನಗಳಲ್ಲಿ ಪ್ರಯೋಗವಾಗಿರುವ 'ಅರ್ಥಾಲಂಕಾರ'ಗಳನ್ನು ಇನ್ನು ಮುಂದೆ ಗಮನಿಸಬಹುದು.

**೫.೫ : ಅರ್ಥಾಲಂಕಾರಗಳು :–**

ಅರ್ಥಾಲಂಕಾರಗಳಿಂದ ಕಾವ್ಯಗಳಲ್ಲಿ ಅರ್ಥಚಮತ್ಕಾರ, ಸೊಗಸುಗಳು ಬಂದು ಅರ್ಥಪುಷ್ಟಿಯುಂಟಾಗುತ್ತದೆ. ಅರ್ಥಚಮತ್ಕೃತಿಯ ಸೊಗಸು ಅರ್ಥಾಲಂಕಾರಗಳ ಗುರಿಯಾಗಿದೆ. ಅರ್ಥಾಲಂಕಾರಗಳಲ್ಲಿ ಉಪಮೆ, ರೂಪಕ, ಉತ್ಪ್ರೇಕ್ಷೆ, ದೃಷ್ಟಾಂತ, ಶ್ಲೇಷಾಲಂಕಾರಗಳು ವಿಶೇಷವಾಗಿ ಶಾಸನಗಳಲ್ಲಿ ಬಳಕೆಯಾಗಿವೆ.

**೫.೬ : ಉಪಮಾ :–**

ಎರಡು ವಸ್ತುಗಳಿಗಿರುವ ಸಾದೃಶ್ಯವನ್ನು(ಹೋಲಿಕೆ) 'ಉಪಮಾ' ಎಂದು ಕರೆಯುತ್ತಾರೆ. ಉಪಮಾಲಂಕಾರದಲ್ಲಿ ಉಪಮಾನ, ಉಪಮೇಯ, ಸಾಧಾರಣಧರ್ಮ ಮತ್ತು ಉಪಮಾವಾಚಕ ಈ ನಾಲ್ಕೂ ಅಂಶಗಳು ಇದ್ದರೆ ಆಗ ಅದು 'ಪೂರ್ಣೋಪಮೆ' ಎನಿಸಿಕೊಳ್ಳುತ್ತದೆ. ಈ ನಾಲ್ಕು ಅಂಶಗಳಲ್ಲಿ ಯಾವುದಾದರೊಂದು ಅಥವಾ ಎರಡು ಲೋಪವಾಗಿದ್ದರೆ ಆಗ ಅದು 'ಲುಪ್ತೋಪಮೆ' ಎನಿಸಿಕೊಳ್ಳುತ್ತದೆ. ಕನ್ನಡ ಶಾಸನಕವಿಗಳು ಆರಂಭದಿಂದಲೂ ಸುಂದರವಾಗಿ ಮತ್ತು ಸಮರ್ಥವಾಗಿ ಉಪಮಾಲಂಕಾರವನ್ನು ಬಳಸಿರುತ್ತಾರೆ.

ಕನ್ನಡದ ಮೊದಲನೆಯ ಪದ್ಯಶಾಸನವಾದ ತಮಟಕಲ್ಲಿನ ಗುಣಮಧುರನ ಶಾಸನವು[೭] "ಫಣಮಣಿ ಅನ್ತು ಭೋಗಿ ಫಣದುಳ್ಮಣಿ ವಿಲ್ಮನದೋನ್ ರಣಮುಖದುಳ್ಳೆ ಕಾಲನರಿಯರ್ಕ್ಕು ಪ್ರಣಯಿಜನಕ್ಕೆ ಕಾಮನ್" ಎಂಬ ಸುಂದರವಾದ ಉಪಮೆಗಳನ್ನು ಒಳಗೊಂಡಿದೆ. ಶ್ರವಣಬೆಳಗೊಳದ ನಂದಿಸೇನ ಮುನಿವರನು ಸಂನ್ಯಸನ ವಿಧಿಯಿಂದ ಮುಡುಪಿದ ವಿಷಯವನ್ನು ನಿರೂಪಿಸಿರುವ

ಪದ್ಯವು ಕಾವ್ಯೋಚಿತವಾದ ಉಪಮೆಗಳನ್ನು ಒಳಗೊಂಡು ಮನಸೆಳೆಯುತ್ತದೆ. ಈ ಪದ್ಯದಲ್ಲಿರುವ **"ಸುರಚಾಪಂಬೋಲೆ ವಿದ್ಯುಲ್ಲತೆಗಳತೆಱವೋಲ್ಮಂಜುವೋಲ್"**[೮] ಎಂಬ ಉಪಮೆಗಳು ಸ್ವೋಪಜ್ಞವಾಗಿ ಮೂಡಿಬಂದಿವೆ. ಬಳ್ಳಿಗಾವೆಯ ಮಹಾಜನರನ್ನು ಬಣ್ಣಿಸಿರುವ –

**ಸುರಪತಿಯನ್ತೆ ಸರ್ವ್ವವಿಬುಧಾಶ್ರಯರಿಂದ್ರಗಜೇಂದ್ರದನ್ತೆ ಭಾ**

**ಸುರತರದಾನಸಂಪದಧಿಕೋನ್ನತರಿನ್ದುವಿನನ್ತೆ ಸತ್ಕಳಾ**

**ಧರರಹಿರಾಜನನ್ತೆ ನಿಖಿಳಕ್ಷಮೆಗಾಸ್ಪದರ್**

ಎಂಬ ಅಲಂಕಾರಿಕ ವಾಕ್ಯಗಳೂ ಶಾಸನಕವಿಗಳು ಎಷ್ಟು ಸೊಗಸಾದ ಉಪಮೆಗಳನ್ನು ಬಳಸುತ್ತಿದ್ದರು ಎಂಬುದಕ್ಕೆ ಉತ್ತಮ ಉದಾಹರಣೆಯಾಗಿದೆ.

ಶಾಸನಕವಿಗಳು ಸನ್ನಿವೇಶಗಳನ್ನು, ವ್ಯಕ್ತಿಗಳನ್ನು ಬಣ್ಣಿಸುವಾಗ ಬಳಸುತ್ತಿದ್ದ ಉಪಮೆಗಳಲ್ಲಿ ಪೌರಾಣಿಕವಾದ ಸನ್ನಿವೇಶಗಳು, ಪಾತ್ರಗಳು, ಪ್ರಕೃತಿಗೆ ಸಂಬಂಧಿಸಿದ ಉಪಮೆಗಳನ್ನು ಕೆಲವೊಮ್ಮೆ ಐತಿಹಾಸಿಕ ಪಾತ್ರಗಳನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದು. ಪೌರಾಣಿಕ ಸನ್ನಿವೇಶಗಳು ಬಳಕೆಯಾಗಿರುವುದಕ್ಕೆ "ಕೊಡದಿನುದಯಿಸಿದಗಸ್ತ್ಯಂ ಕಡಲಂಪೀರ್ವಂತೆ"[೧೦], ಮಹಾದೇವ ಕಾಳಾಗ್ನಿರುದ್ರಂಗೆ ಉರಿಗಣ್ಬಂದಂತೆ ಮಾಕಾಳಿಗೆ ಗರುವಡೆರ್ದಂತೆ ಇಂದ್ರದಿಗುದಂತಿ ಸೊಕ್ಕಿಂಪರಿಪುಂಗೊಂಡಂತೆ[೧೧], "ಕಣೆಪಂಜರದೊಳೆಱಗಿ ಭೀಷ್ಮನ್ನಿಟ್ದನ್ತೆ"[೧೨] "ಚಕ್ರವ್ಯೂಹದೊಳಗಿನಭಿಮನ್ಯುವಿನ ಪರಿಯಲು"[೧೩], "ಚತುರಾಸ್ಯಾಸ್ಯದೊಳಿರ್ದ್ದ ವಾಕ್ಸತಿ ಕರಂಪ್ರತ್ಯಕ್ಷಮಾಗಿರ್ಪ್ಪವೋಲ್"[೧೪] ಮುಂತಾದ ಉದಾಹರಣೆಗಳನ್ನು ಗಮನಿಸಬಹುದು. ಪೌರಾಣಿಕ ಪಾತ್ರಗಳನ್ನು ಬಳಸಿರುವುದಕ್ಕೆ "ಫಣಿನಾಥಂಪಾಟಿಭೋಗಕ್ಕೆ ಅಮರಪತಿಸಮಂರೂಪಸಂಪತ್ತಿಗೆ ಅಬ್ಜೇಕ್ಷಣನುದ್ಯದ್ ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾವಿಶೇಷಕ್ಕೆಣೆ ಧೀರೋದಾತ್ತ ಚಿತ್ತಕ್ಕೆ ಸರಿದಶಾಸ್ಯಾರಿ ದಾನಕ್ಕೆ ಮತ್ತೆ ತೊಣೆ ಕರ್ಣ್ಣಂ"[೧೫] "ಸರಸ್ವತಿಯಂತೆ ಸತ್ಕಳಾನ್ವಿತೆ ಸೀತೆಯನ್ತೆ ವಿನೀತೆ ಸುಸೀಮಾದೇವಿಯಂತೆ ಸುಶೀಲೆ ರುಕ್ಮಿಣಿಯಂತೆ ಗುಣಾಗ್ರಣಿ"[೧೬] ರತಿಗಮರುಂಧತಿಗಂ ಸರಸ್ವತಿಗಂ ರೇವತಿಗಮೆಸೆವ ಪಾರ್ವ್ವತಿಗಂ ಶ್ರೀಸತಿಗಂ ಸಮ[೧೭] ಎಂಬುದಾಗಿ ಪೌರಾಣಿಕ ಪಾತ್ರಗಳನ್ನು ಬಳಸಿಕೊಂಡಿರುವುದನ್ನು ಕಾಣಬಹುದು.

ಪ್ರಕೃತಿಯ ವ್ಯಾಪಾರವನ್ನು ಉಪಮೆಗಳಾಗಿ ಬಳಸಿಕೊಂಡಿರುವುದಕ್ಕೆ "ಸಿಡಿಲಡಸಿಪೊಡೆವ ತೆಱದಿಂ[೧೮], ಬಱಸಿಡಿಲೆಱಗುವ ತೆಱದಿಂ[೧೯], ಆದಿತ್ಯನ ಕೆಲದೊಳ್ ಚಂದ್ರೋದಯ ಮೆಸೆಯದವೊಲ್[೨೦], ಅಂಬುಜವನಮಂ ಕರಿಮದದಿಂದೊಕ್ಕಲಿಕ್ಕಿ ತುಳಿವಂತೆವೋಲ್[೨೧] ಮೊದಲಾದ ವಾಕ್ಯಗಳಲ್ಲಿ ಕಾಣಬಹುದಾಗಿದೆ.

ಉಪಮಾಲಂಕಾರದಲ್ಲಿನ ಒಂದು ವಿಶಿಷ್ಟವಾದ ಬಗೆಯೆಂದರೆ ಮಾಲೋಪಮೆ ಸನ್ನಿವೇಶವೊಂದನ್ನು ಅಥವಾ ಪಾತ್ರವೊಂದರ ಗುಣವಿಶೇಷಗಳನ್ನು ಬಣ್ಣಿಸುವಾಗ ಹಲವಾರು ಉಪಮೆಗಳನ್ನು ಪುಂಖಾನುಪುಂಖವಾಗಿ ಬಳಸುವುದಕ್ಕೆ "ಮಾಲೋಪಮೆ"ಎಂದು ಕರೆಯುತ್ತಾರೆ. 'ಧರ್ಮಾಮೃತ' ಕೃತಿಯನ್ನು ರಚಿಸಿದ ನಯಸೇನ ಮಾಲೋಪಮೆಯನ್ನು ಸಮರ್ಥವಾಗಿ ಬಳಸಿದ ಕವಿಯಾಗಿದ್ದಾನೆ. ಶಾಸನಕವಿಗಳು ಸಹ ಮಾಲೋಪಮೆಯನ್ನು ಅಷ್ಟೇ ಸಮರ್ಥವಾಗಿ ಬಳಸಿದ್ದಾರೆ ಎಂಬುದಕ್ಕೆ ಹಲವಾರು ಉದಾಹರಣೆಗಳು ಕಂಡುಬರುತ್ತವೆ.

ಕೊಲ್ಲಾಪುರದ ಮಾಘನಂದಿಯತಿಯಿಂದ ಕೊಂಡಕುಂದಾನ್ವಯಕ್ಕೆ ಶೋಭೆಯು ಒದಗಿತೆಂಬುದನ್ನು ಬಣ್ಣಿಸುವಾಗ 'ಎಳಮಾವಿಂಬನಂ ಅಬ್ಜದಿಂ ತಿಳಿಗೊಳಂ ಮಾಣಿಕ್ಯದಿಂ ಮಂಡನಾವಳಿ ತಾರಾಧಿಪನಿಂ ನಭಂ ಶುಭದಮಾಗಿರ್ಪಂತೆ"[೨೨] ಎಂಬ ಶಾಸನಭಾಗ ಶುಭಚಂದ್ರದೇವಮುನಿಯನ್ನು "ಕಾನೂರ್ಗ್ಗಣೋದ್ಧಾರಕ"ನೆಂದು ಬಣ್ಣಿಸುವಾಗ "ಕುಸುಮಬ್ರಾತದೊಳ್ ಅಂಬುಜಂ ಜಳಧಿಯೊಳ್ ದುಗ್ಧಾಬ್ಧಿ ತಾರಾಳಿಯೊಳ್ ಸಸಿ ಕಲ್ಗಳೊಳ್ ಚಿಂತಾಮಣಿ ತರುಗಳೊಳ್ ಕಳ್ಪೋರ್ಬ್ಬಿಪಂ ರತ್ನದೊಳ್ ಮಿಸುಪ ಆ ಕೌಸ್ತುಭಂ ಒಪ್ಪುವಂತೆ"[೨೩] ಎಂಬ ಶಾಸನದ ಭಾಗಗಳು ಜೈನಯತಿಗಳ ಮಹತಿಯನ್ನು ಬಣ್ಣಿಸುವಾಗ ಮಾಲೋಪಮೆಯಲ್ಲಿ ಪ್ರಕೃತಿಯ ವಿಚಾರವನ್ನು ಬಳಸಿಕೊಂಡಿವೆ.

ವೀರರ ಪರಾಕ್ರಮವನ್ನು ಬಣ್ಣಿಸುವಾಗಲೂ ಸಹ ಶಾಸನಕವಿಗಳು ಇದನ್ನು ಬಳಸುತ್ತಿದ್ದರೆಂಬುದಕ್ಕೆ ಏಚಯನೆಂಬುವನ ಹೋರಾಟವನ್ನು ನಿರೂಪಿಸುವಾಗ "ಪ್ರಳಯವಾರಿಧಿಯಂತೆ ಲಯಾಗ್ನಿಯಂತೆ ಕಾಮಾರಿಯ ಮಾರಿಯಂತೆ'[೨೪] ಎಂಬುದಾಗಿ ಬಂದಿರುವುದನ್ನು ಗಮನಿಸಬಹುದು. ಕುರುಕೋಡಿನ ವೀರಗಲ್ಲು ದೇವಗಾವುಂಡ, ಮಲ್ಲಗಾವುಂಡರ ಪರಾಕ್ರಮದ ಹೋರಾಟವನ್ನು ಮನೋಜ್ಞವಾಗಿ ನಿರೂಪಿಸಿದೆ. ಇದರಲ್ಲಿ ಬಂದಿರುವ "ಗುಹೆಯ ಬಾಗಿಲೊಳು ಸಿಂಹನಿಪ್ಪಂತೆ ತಾಗಿತಳ್ತೆಸುವಾಗಳು ಕಾರಮಳೆಕಱೆದಂತೆಯುಂ ಕಡಂದುರುಹುಟ್ಟಿಯ ಕೆಣಕಿದಂತೆಯುಂ ಕವಿದ ಕಾಲಬಾಯೊಳಂ ಜವನೊಕ್ಕಿಲಿಕ್ಕಿದಂತೆ ತೊತ್ತಳದುಳಿವೋಲುತಂ.... ಕುಱೆಯ ಹಿಂಡಂ ತೋಳಂ ಪೊಕ್ಕಂತೆಯುಂ ಕಬ್ಬುದೋಂಟವನಾನೆ ಪೊಕ್ಕಂತೆಯುಂ"[೨೫] ಎಂಬುದಾಗಿ ಬಳಸಿರುವ ಉಪಮೆಯ ಭಾಗಗಳು ಯುದ್ಧದಲ್ಲಿ ವೀರರ ಹೋರಾಟದ ತೀವ್ರತೆಯನ್ನು ಮನಮುಟ್ಟುವಂತೆ ಬಣ್ಣಿಸಿವೆ.

ಮಾಲೋಪಮೆಗಳಿಂದ ಕೂಡಿ ಹರಿಹರ ಕವಿಯ ಗದ್ಯಶೈಲಿಯನ್ನು ನೆನಪಿಗೆ ತರುವ ಮಾವನೂರಿನ ಶಾಸನಗದ್ಯವನ್ನು ಗಮನಿಸಬಹುದು. ಗದ್ಯಭಾಗವು ಹೀಗಿದೆ.[೨೬]

**"ಪರ್ವತಯ್ಯನುಭಯವಹ ಕಾರುಣ್ಯಕಟಾಕ್ಷದಿಂದುದಯಿಸಿದ ಅಪ್ಪಯ್ಯ**
**ದೇವರಸರಂ ಕಂಡು ಕಾರುಣ್ಯಂಮಾಡಲುಬೇಡಿ ಚಂದ್ರಂಗೆ ಬೆಳುದಿಂಗಳಂ**
**ಬೆಳುದಿಂಗಳಿಂಗೆ ಪರಿಮಳಮಂ ಪರಿಮಳಕ್ಕೆ ಸವಿಯಂ ಸವಿಗೆರೂಪಂ**
**ರೂಪಿಂಗೆ ಸೌಂದರ್ಯಮಂ ಕೊಡುವಂತೆ ಉಪದೇಶಂ ಮಾಡೆ ಕೈಕೊಂಡ**
**ಅಪ್ಪಯ್ಯದೇವರಸರು ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ**
**ಶಾಂತಿ ಸಾಕಾರವೆತ್ತಂತೆ ಪರಮಾರ್ಥಂ ಶರೀರವಡೆದಂತೆ ಭಕ್ತಿಜ್ಞಾನಂ**
**ಸಂಸಾರವಂ ಸವಿದಂತೆ ಮೆಱವುತ್ತೆ ಲೋಭವಡಿಯಿಡದ ಕರಪಲ್ಲವಂಗಳ**
**ಅನೃತವಂಕುರಿಸದ ರಸನಾಪ್ರದೇಶದ ಸಂಸ್ಕೃತಿ ಸರಸವಾಡದ ಚರಿತ ಶುದ್ಧಿಯ**
**ಕಾಮನಡಾಮರಕೊಳಸೋರದಮನದಬಿನದದ....ಅಪ್ಪಯ್ಯದೇವರು ಸುಖದೊಳಿರೆ."**

## ೫.೭ : ರೂಪಕ :-

ಉಪಮಾನ-ಉಪಮೇಯಗಳನ್ನು ಹೋಲಿಕೆಯೊಡನೆ ಪ್ರತ್ಯೇಕವಾಗಿ ವರ್ಣಿಸಿದರೆ ಉಪಮಾಲಂಕಾರವಾಗುತ್ತದೆ. ಹಾಗೆ ಮಾಡದೆ ಉಪಮೇಯವು ಉಪಮಾನದ ರೂಪವನ್ನೇ ಪಡೆದರೆ ಅಂದರೆ ಉಪಮಾನ ಉಪಮೇಯಗಳೆರಡೂ ಒಂದೇ, ಎರಡಲ್ಲ ಎಂಬಂತೆ ವರ್ಣಿಸಿದ್ದರೆ ರೂಪಕಾಲಂಕಾರವಾಗುತ್ತದೆ. ಇದರಲ್ಲಿ ಪರಸ್ಪರ ಅಭೇದವನ್ನು ಹೇಳುವುದು ಅಭೇದ ರೂಪಕವೆಂದು ಪರಸ್ಪರ ತಾದ್ರೂಪ್ಯವನ್ನು ಹೇಳಿದರೆ ತಾದ್ರೂಪ್ಯರೂಪಕ ಎನಿಸಿಕೊಳ್ಳುತ್ತದೆ.

ಕನ್ನಡ ಶಾಸನಕವಿಗಳು 'ರೂಪಕ'ಗಳನ್ನು ಶಾಸನಗಳಲ್ಲಿ ವಿಶೇಷವಾಗಿ ಬಳಸಿದ್ದಾರೆ. ಶ್ರವಣಬೆಳಗೊಳದ ಗೊಮ್ಮಟ ಜಿನನನ್ನು ಬಣ್ಣಿಸಿರುವ ಬೊಪ್ಪಣಪಂಡಿತನ ಗೊಮ್ಮಟಸ್ತುತಿಯ

**ಅನುಪಮರೂಪನೇ ಸ್ಮರನುದಗ್ರನೆ ನಿರ್ಜ್ಜಿತಚಕ್ರಿಮತ್ತುದಾ**
**ರನೆ ನೆಱಗೆಲ್ದುಮಿತ್ತನಖಿಳೋರ್ವ್ವಿಯನತ್ಯಭಿಮಾನಿಯೇ ತಪಃ**
**ಸ್ಥನುಮೆರಡಂಗ್ರಿಯಿತ್ತಳೆಯೊಳಿರ್ದ್ದಪುದೆಂಬನೂನಬೋಧನೇ**
**ವಿನಿಹಿತ ಕರ್ಮ್ಮಬಂಧನೆನೆ ಬಾಹುಬಳೀಶನಿದೇನುದಾತ್ತನೋ॥**[೨೭]

ಎಂಬ ಪದ್ಯವು ರೂಪಕಾಲಂಕಾರಕ್ಕೆ ಉತ್ತಮ ಉದಾಹರಣೆಯಾಗಿದೆ. ಇದೇ ರೀತಿಯಲ್ಲಿ ರಕ್ಕಸಗಂಗನನ್ನು ಬಣ್ಣಿಸಿರುವ "ಸ್ಥಿರನೇ ಮೇರುಗಿರೀಂದ್ರನೊಳ್ ಸೆಣಸುವಂ,"[೨೮] ಹೊಯ್ಸಳ ದೊರೆ ವಿಷ್ಣುವರ್ಧನನ್ನು ಬಣ್ಣಿಸಿರುವ "ಸ್ಥಿರನೇ ಕೆಯ್ಯೊಳೆಧಾತ್ರಿಯಂ ನಿಲಿಸಿದಂ"[೨೯] ಮತ್ತು ಕೊಯ್ಲಾಳರನ್ನು ಬಣ್ಣಿಸಿರುವ "ಸ್ಥಿರರೇ ಮೇರುಗೆ ಸನ್ನಿಭರ್"[೩೦] ಎಂಬ ಪದ್ಯಗಳನ್ನು ಉದಾಹರಿಸಬಹುದು. ಕನ್ನಡ ಶಾಸನಗಳಲ್ಲಿ ಹಲವಾರು ಸೊಗಸಾದ ರೂಪಕಗಳು ಬಳಕೆಯಾಗಿವೆ. ಕನ್ನಡದ ಮೊದಲನೆಯ ಪದ್ಯ

ಶಾಸನವಾದ ತಮಟಕಲ್ಲಿನ ಶಾಸನದಲ್ಲಿ[೩೧] ಗುಣಮಧುರನನ್ನು ಬಣ್ಣಿಸುವಾಗ 'ಅಸಿತೋತ್ಪಲವರ್ಣನ್' ಎಂಬ ರೂಪಕವನ್ನು ಕವಿಯು ಬಳಸಿದ್ದಾನೆ.

ವೀರನ ಪರಾಕ್ರಮವನ್ನು ವರ್ಣಿಸುವಾಗ "ವೀರವಾರಿಧಿ, ಅರಿಕುಲತಿಮಿರಸಶಾಂಕ, ಅರಿಮದಕರಿಹರಿ, ಅರಿಗಿರಿವಜ್ರ,"[೩೨] "ಕರವಾಳ್ವಾಸುಗಿ, ತೋಳ್ಮಂಧರ, ವಿರೋಧಿಮಗರ ಬಳ ಜಳನಿಧಿ"[೩೩] ಎಂಬ ರೂಪಕಗಳ ಬಳಕೆಯಾಗಿದೆ. ಹಾಗೆಯೇ ಜೈನಯತಿಗಳ ವಿದ್ವತ್, ಪ್ರೌಢಿಮೆಯನ್ನು ಬಣ್ಣಿಸುವಾಗ ಶಾಸನಗಳಲ್ಲಿ "ವಾದೀಭಸಿಂಹ, ಪರವಾದಿಕುಳಕಮಳವನ ಮದಮಾತಂಗ, ಸಾಂಖ್ಯವಾದಿ ಕುಳಾದ್ರಿವಜ್ರಧರ, ನೈಯ್ಯಾಯಿಕಾಚಾರ್ಯ್ಯ ಭೂಜಾತಕುಠಾರ, ಮೀಮಾಂಸಕಮತಘನಾಘನಪ್ರಚಣ್ಡಪವನ, ಸಿದ್ಧಾನ್ತವಾರ್ದ್ಧಿ ವರ್ದ್ಧನ ಸುಧಾಕರ, ಜಿನಸಮಯಾಂಬರ ದಿವಾಕರ"[೩೪] ಎಂಬ ರೂಪಕಗಳು ಬಳಕೆಯಾಗಿದ್ದು, ಇವುಗಳು ತಮ್ಮ ವಿದ್ವತ್ತಿನ ಮೂಲಕ ಪ್ರಭಾಚಂದ್ರಸಿದ್ಧಾನ್ತ ದೇವರು ಅನ್ಯಮತೀಯರ ಮೇಲೆ ಪಡೆದ ಗೆಲುವನ್ನು ಸೂಚಿಸುತ್ತಿವೆ. ಪ್ರತಿಕಣ್ಠಸಿಂಗನೆಂಬುವನನ್ನು ಬಣ್ಣಿಸುವಾಗ

**"ಜಿನಧರ್ಮ್ಮಾಂಬರದಿನಪಂ**
**ಜಿನಧರ್ಮ್ಮಸುಧಾಂಬುರಾಶಿವರ್ದ್ಧನಚನ್ದ್ರಂ**
**ಜಿನಧರ್ಮ್ಮ ಪ್ರಾಕಾರಂ**
**ಜಿನಪತಿ ಚರಣಾಂಬುಜಾತಭೃಂಗಂ ಸಿಂಗ"[೩೫]**

ಎಂಬ ಪದ್ಯವು ಸಂಪೂರ್ಣವಾಗಿ ರೂಪಕದಲ್ಲೇ ರಚಿತವಾಗಿದೆ.

"ಹರಿಣೀಲೋಚನೆ, ಪಂಕಜಾನನೆ, ಬಿಂಬಾಧರೆ, ಕೋಕಿಳಸ್ವನೆ, ಸುಗಂಧಶ್ವಾಸೆ, ಭೃಂಗಾವಳಿನೀಳಕೇಶೆ, ಕಳಹಂಸೀಯಾನೆ, ಕಂಬುಕಂಧರೆ"[೩೬] ಎಂಬವುಗಳು ಸ್ತ್ರೀಯರ ಸೌಂದರ್ಯ, ಲಾವಣ್ಯವನ್ನು ಬಣ್ಣಿಸುವಾಗ ಬಳಕೆಯಾಗಿರುವ ರೂಪಕಗಳು. ಶಾಸನಗಳಲ್ಲಿ ಸೊಗಸಾದ ರೂಪಕಗಳನ್ನು ಬಳಸುವ ಮೂಲಕ ಶಾಸನಕವಿಗಳು ಸಾಹಿತ್ಯ ಸೌಂದರ್ಯವನ್ನು ಹೆಚ್ಚಿಸಿದ್ದಾರೆ.

**೫.೮ : ಶ್ಲೇಷೆ :–**

ಒಂದೇ ಶಬ್ದಾನುಪೂರ್ವಿಯಲ್ಲಿ ನಾನಾರ್ಥಗಳನ್ನಿಟ್ಟು ಆ ಅರ್ಥಗಳ ಮೂಲಕ ಬೇರೆ ಬೇರೆ ವಸ್ತುಗಳನ್ನು ವರ್ಣಿಸುವುದು ಶ್ಲೇಷಾಲಂಕಾರ. ಅಂದರೆ ಒಂದೇ ಪದಕ್ಕೆ ಎರಡು ಅಥವಾ ಅನೇಕ ಅರ್ಥಗಳು ಪ್ರತಿಪಾದಿತವಾದರೆ ಅದು ಶ್ಲೇಷಾಲಂಕಾರವೆನಿಸಿಕೊಳ್ಳುತ್ತದೆ.

**ಸುರಪುರದಂತಮಾಯ್ತನಿಮಿಷಾಳಿಗಳಿಂ ವರಶಂಖಚಕ್ರದಿಂ**
**ಹರಿಯಕರಂಗಳಂತಖಿಲವಾಹಿನಿಸಂಗಮದಿಂದ ಭೂವರೇ**

ಶ್ವರನ ನಿವಾಸದಂತುರುವಿಷಾಕರಮಾದುದಱಿಂದಹೀಂದ್ರಮಂ

ದಿರಮನೆಪೋಲ್ತುದೀ ಲವಣವಾರಿಧಿಯೆಂದೆನಲೇನ ಬಣ್ಣಿಪೆಂ'[೩೭]

ಎಂಬ ಪದ್ಯವು ಸಮುದ್ರದ ವರ್ಣನೆಯನ್ನು ಒಳಗೊಂಡಿದೆ. ಈ ಪದ್ಯದಲ್ಲಿ ಸಮುದ್ರವು ಅನಿಮಿಷಾಳಿಗಳಿಂದ ಕೂಡಿ ಸುರಪುರದಂತೆ, ವರಶಂಖಚಕ್ರದಿಂದ ಹರಿಯಕರಗಳಂತೆ, ಅಖಿಲವಾಹಿನಿ ಸಂಗಮದಿಂದ ಭೂವರೇಶ್ವರ ನಿವಾಸದಂತೆ, ಉರುವಿಷಾಕರವಾದ ಕಾರಣದಿಂದ ಅಹೀಂದ್ರಮಂದಿರವನ್ನು ಹೋಲುತ್ತಿತ್ತು ಎಂದು ಬಣ್ಣಿಸುವಾಗ ಶ್ಲೇಷೆಯನ್ನು ಕವಿಯು ತಂದಿದ್ದಾನೆ.

ಕೋಡಿಯ ಮಠದ ಮಹಿಮೆಯನ್ನು ವರ್ಣಿಸುವಲ್ಲಿ ಕವಿಯು ಸೊಗಸಾಗಿ ಶ್ಲೇಷೆಯನ್ನು ಉಪಮೆಯನ್ನು ತಂದಿದ್ದಾನೆ. ವಿಸ್ತಾರವಾಗಿ ಗದ್ಯದಲ್ಲಿ ಬಂದಿರುವ ಶಾಸನದ ಭಾಗ ಹೀಗಿದೆ.

"ಅದಲ್ಲದೆಯುಮಾಮಠಂ ಪುರಾಣಕಮಠನಂತೆ ಸಕಳಲೋಕಾಧಾರಮುಂ

ಪುರುಷಸಿಂಹನಂತೆ ಹಿರಣ್ಯಕಶಿಪುದಾನಸಂಶೋಭಿತಮುಂ ಕುರುಕ್ಷೇತ್ರದಂತೆ

ಸರಸ್ವತೀವಿಳಸಿತಮುಂ ಖಚರಲೋಕದಂತೆ ವಿದ್ಯಾಧರಾಧೀಶ್ವರ

ಪರಿವೃತಮುಂ ಮಂದರ ಮಹಾಮಹೀಧರದಂತೆ ಸರ್ವದಿಕ್ಸಾರಭೂತಮಂ

ವಸುದೇವನಂತ ಕ್ರೂರೋಕ್ತಿ ಶ್ರವಣರಮಣೀಯಮುಂ ಭವಾನೀ

ಭವನದಂತೆ ಬ್ರಹ್ಮಚಾರಿಸದಾಚಾರ ಸಂಭಾವಿತಮುಂ ವಿವೇಕಿಯನ್ತೆ

ವಿದ್ಯಾಭರಣವಿರಚಿತ ಸೌನ್ದರ್ಯ್ಯಮುಂ ಗೋದಾವರೀ ತೀರದನ್ತೆ

ಗೌತಮಾರ್ಯ್ಯ ಪರಿಚರ್ಯ್ಯಾ ಪರಿಕರಮುಮೆನಿಸಿ ಸೊಗಯಿಪುದಾಮಠ"[೩೮]

ಶ್ಲೇಷಾಲಂಕಾರದಲ್ಲಿ ಪ್ರಭವಾದಿ ಸಂವತ್ಸರಗಳ ಹೆಸರುಗಳನ್ನು ವಿಶೇಷಣಗಳಾಗಿ ಬಳಸಿಕೊಂಡು ವ್ಯಕ್ತಿಯನ್ನು ಬಣ್ಣಿಸುವುದನ್ನು "ಸಂವತ್ಸಾರಾಖ್ಯಾ ಸಂಯೋಜನೆ" ಎನ್ನಬಹುದು. ಇದೊಂದು ಜನಪ್ರಿಯವಾದ ಶ್ಲೇಷೆಯಾಗಿದ್ದು ಈ ಅಲಂಕಾರವನ್ನು ಸಿಂಧಗಿರಿಯ ಶಾಸನದಲ್ಲಿ[೪೦] ಭರತ ಚಮೂಪನನ್ನು ಬಣ್ಣಿಸಲು ಬಳಸಿದ್ದಾನೆ ಶಾಸನ ಕವಿ ಸಂಕಣ್ಣ. ಶಾಸನದ ೧೪೭ರಿಂದ ೧೫೧ನೇ ಪಂಕ್ತಿಯಲ್ಲಿರುವ ಪದ್ಯಭಾಗ ಹೀಗಿದೆ.

ಪ್ರಭವಿಸುಗೆ ವಿಭವಮೀಶ್ವರ

ನಿಭಮೂರ್ತ್ತಿ ವಿರೋಧಿವಿಕ್ರಮಕ್ಷಯಕೇತನ

ಶುಭಕೃದ್ಗುಣನಿನಗೆ ಚಮೂ

ಪ್ರಭುಭರತಸಹಶ್ರವತ್ಸರಂ ಪುಗುವಿನೆಗಂ

ಎಂಬ ಪದ್ಯದಲ್ಲಿ ಕವಿಯು ಶ್ಲೇಷೆಯಲ್ಲಿ ಚಮತ್ಕಾರಿಕವಾಗಿ ಪ್ರಭವ, ವಿಭವ, ಈಶ್ವರ, ವಿರೋಧಿ, ವಿಕ್ರಮ, ಕ್ಷಯ, ಶುಭಕೃತ್ ಎಂಬ ಸಂವತ್ಸರಗಳ ಹೆಸರುಗಳನ್ನು ಬಳಸಿ ಬಣ್ಣಿಸಿರುವುದನ್ನು ಗಮನಿಸಬಹುದು.

**೫.೯ : ಉತ್ಪ್ರೇಕ್ಷೆ :-**

ಒಂದು ವಸ್ತುವನ್ನು ಇನ್ನೊಂದು ವಸ್ತುವನ್ನಾಗಿ ಪರಿಭಾವಿಸುವುದನ್ನು ಉತ್ಪ್ರೇಕ್ಷೆ ಎನ್ನುತ್ತಾರೆ. ಆದರೆ ಪ್ರಸ್ತುತ ವಿಚಾರಕ್ಕೂ ಪರಿಭಾವಿಸಿದ ವಸ್ತುವಿಗೂ ಹೋಲುವಂತಹ ಧರ್ಮವಿರಬೇಕು. ಹೀಗಿದ್ದಾಗ ಮಾತ್ರ ಅದು 'ಉತ್ಪ್ರೇಕ್ಷಾಲಂಕಾರ' ಎನಿಸಿಕೊಳ್ಳುತ್ತದೆ.

**ನೆಲೆಗಟ್ಟಾನಾಗಲೋಕಂ ತಳಮವನಿ ದಿಶಾಭಿತ್ತಿ ಭಿತ್ತಿಬ್ರಜಂ ಸ್ವ**
**ಸ್ತಲಭಾಗಂ ಮುಚ್ಚಣಂ ಮೇಗಣ ಸುರರ ವಿಮಾನೋತ್ಕರಂ ಕೂಟಜಾಳಂ**
**ವಿಲಸತ್ತಾರೌಘಮನ್ತರ್ವ್ವಿತತಮಣಿವಿತಾನಂ ಸಮಂತಾಗೆ ನಿತ್ಯಂ**
**ನಿಲಯಂ ಶ್ರೀಗೊಮ್ಮಟೇಶಂಗೆನಿಸಿದುದು ಜನೋಕ್ತಾವಳೋಕಂ ತ್ರಿಲೋಕಂ ॥** [೪೦]

ಎಂಬ ಪದ್ಯದಲ್ಲಿ ಗೊಮ್ಮಟ ಜಿನನ ಭವ್ಯಶಿಲ್ಪಕ್ಕೆ ನಾಗಲೋಕವೇ ನೆಲೆಗಟ್ಟು, ಭೂಮಿಯೇ ತಳವು, ದಿಶಾಭಿತ್ತಿಗಳೇ ಭಿತ್ತಿಸಮೂಹ, ಆಕಾಶವೇ ಮೇಲ್ಹಾವಣಿ, ಆಕಾಶದಲ್ಲಿ ಹಾರಾಡುವ ಸುರರ ವಿಮಾನಗಳೇ ಗೋಪುರ, ಶೋಭಾಯಮಾನವಾದ ನಕ್ಷತ್ರಗಳ ರಾಶಿಯೇ ರತ್ನಖಚಿತವಾದ ಮೇಲುಕಟ್ಟು ಆಗಿದ್ದು ಈ ತ್ರಿಲೋಕಗಳೂ ಅವನಿಗೆ ನಿತ್ಯನಿಲಯವಾಗಿವೆ ಎಂಬುದಾಗಿ ಬೊಪ್ಪಣಕವಿಯು ಉತ್ಪ್ರೇಕ್ಷಿಸಿದ್ದಾನೆ.

ಹಾಗೆಯೇ ಬಿದಿರೆಯ ಕಣಿಗಲನಾಥ ದೇವಾಲಯವನ್ನು ಬಣ್ಣಿಸುವಾಗ "ವಿಶ್ವಕರ್ಮನು 'ಶಿವಪಾರ್ವತಿ'ಯರ ವಿವಾಹಕ್ಕಾಗಿ ನಿರ್ಮಿಸಿದ 'ಸೋಭನಮಂಟಪ'ವೆಂಬ ವರ್ಣನೆ'[೪೧], ವಸುಧಾದೇವಿಯ ಮಕುಟಮೋ ಪೊಸತೊಂದಿಂದ್ರನ ವಿಮಾನಮಿಳಿದುದೋ ದಿವದಿಂ ವಸುಮತಿಗೆ'[೪೨] ಎಂದು ಬಳಗಟ್ಟೆಯ ಕುಸುಮೇಶ್ವರ ದೇವಾಲಯದ ಬಣ್ಣನೆಯ ಮಾತು, ಪಾರ್ಶ್ವನಾಥ ಬಸದಿಯನ್ನು "ಸುರಸೈಲೇಂದ್ರಮೋ ಮೇಣ್ಕುಬೇರಗಿರಿಯೋ ಮೇಣ್ತುಂಗತಾರಾದ್ರಿಯೋ ದೊರೆಯೆಂಬಂತಿರೆ" ಎಂದು ಬಣ್ಣಿಸಿರುವ ಶಾಸನದ[೪೩] ಭಾಗಗಳು ಉತ್ಪ್ರೇಕ್ಷೆಗೆ ಉದಾಹರಣೆಗಳಾಗಿವೆ.

"ಶಾನ್ತಲದೇವಿಯ ರೂಪು ಕಲ್ಪವಲ್ಲರಿಯು ವಿಷ್ಣುನ್ರಿಪನೆಂಬ ಸಮುನ್ನತ ಕಲ್ಪವ್ರಿಕ್ಷವನ್ನು" ಆಶ್ರಯಿಸಿದ ಬಗೆಯನ್ನು –

**ಗಿರಿಜೆಯಪಾದಪದ್ಮವಿಗಳಜ್ಜಳದಿಂದಮೆ ಕೊರ್ಬ್ಬಿನೀತಿ ವಿ**
**ಸ್ತರಿಸಿರೆಸೊಂಪುವೆತ್ತ ಪುರಷವ್ರತದಿಂದಳಮೇಱಿ ಭಾಗ್ಯಮಂ**

ಜರಿಗಳನಾಂತು ರಂಜಿಸುವ ಶಾನ್ತಲದೇವಿಯ ರೂಪುಕಲ್ಪವ

ಲ್ಲರಿಯಡರ್ದ್ದಾತ್ತು ವಿಷ್ಣುನ್ರಿಪನೆಂಬ ಸಮುನ್ನತ ಕಲ್ಪವ್ರಿಕ್ಷಮಂ'[೪೪]

ಎಂಬ ಪದ್ಯವು ಉತ್ಪ್ರೇಕ್ಷೆಗೆ ಮತ್ತೊಂದು ಸೊಗಸಾದ ಉದಾಹರಣೆಯಾಗಿದೆ.

## ೫.೧೦ : ಅತಿಶಯೋಕ್ತಿ :-

ಅತಿಶಯೋಕ್ತಿ ಅಲಂಕಾರದಲ್ಲಿ ಹಲವಾರು ವಿಧಗಳಿದ್ದು ಅವುಗಳಲ್ಲಿ 'ಸಂಬಂಧಾತಿಶಯೋಕ್ತಿ' ಎನ್ನುವುದರಲ್ಲಿ ಒಂದಕ್ಕೊಂದಕ್ಕೆ ಸಂಬಂಧವಿಲ್ಲದಿದ್ದರೂ ಸಂಬಂಧವನ್ನು ಕಲ್ಪಿಸುವುದನ್ನು ಕಾಣಬಹುದು. ಇದಕ್ಕೆ ಉದಾಹರಣೆಯಾಗಿ

ಇಟ್ಟಿಗೆಗೆಂದಗಟ್ದುಳಿಗಳ್ಕೆಱೆಯಾದವು ಕಲ್ಲುಗೆಗೊಣ್ಡಪೆ

ರ್ವ್ವೆಟ್ಟು ಧರಾತಳಕ್ಕೆ ಸರಿಯಾದವು ಸುಣ್ಣದ ಭಂಡಿಬಂದ ಪೆ

ರ್ವ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ

ನೆಟ್ಟನೆ ಪೊಯ್ಸಳೇಸನೆನೆ ಬಣ್ಣಿಪರಾರ್ಮ್ಮಲೆರಾಜರಾಜನಂ"[೪೫]

ಎಂಬುದನ್ನು ಗಮನಿಸಬಹುದು. ಹೊಯ್ಸಳದೊರೆ ವಿನಯಾದಿತ್ಯನು ಜಿನಬಸದಿಯನ್ನು ನಿರ್ಮಾಣ ಮಾಡುವುದಕ್ಕಾಗಿ ಇಟ್ಟಿಗೆಯ ತಯಾರಿಕೆಗೆ ಅಗೆದ ಕಾರಣದಿಂದಾಗಿ ಉಂಟಾದ ಗುಂಡಿಗಳೆಲ್ಲಾ ಕೆರೆಗಳಾದವು. ಬೆಟ್ಟವನ್ನು ಅಗೆದ ಕಾರಣದಿಂದ ನೆಲಕ್ಕೆ ಸಮನಾದವು, ಸುಣ್ಣದ ಬಂಡಿಯು ಬಂದ ಹೆದ್ದಾರಿಯೇ ಹಳ್ಳವಾಯಿತು ಎಂದು ಬಣ್ಣಿಸಿರುವುದನ್ನು ಉದಾಹರಿಸಬಹುದು. ಹಾಗೆಯೇ 'ಚಟ್ಟಸಮುದ್ರ'ದ ಸೌಂದರ್ಯವನ್ನು ಬಣ್ಣಿಸುವಾಗ

ನಾಡೆಂನಂ ನಡುವಿಟ್ಟು ಕೊಂಡುದದಱಿಂ ಮಜ್ಜೀವನಂ ಸಾರ್ತ್ಥಕಂ

ನಾಡಿದಂ ಪೊಱಗಾಯ್ತಸೇವ್ಯ ಸಲಿಲಂ ತಾನುಪ್ಪುನೀರೆಂದು ಱೋ

ಡಾಡುತ್ತಿಪ್ಪುದು ನಿರ್ಮ್ಮಳಾಂಬುಭರಿತ ಶ್ರೀಸಾರಸಾರಾವರಂ

ನೋಡೀಚಟ್ಟಸಮುದ್ರವಿಲ್ಲಿ ಲವಣಾಂಭೋರಾಶಿಯಿಂ ಪೆರ್ಮ್ಮೆಯಿಂ[೪೬]

ಎಂಬ ಪದ್ಯವನ್ನು ಉದಾಹರಿಸಬಹುದು.

### ೫.೧೧ : ಅತ್ಯುಕ್ತಿ :–

ಅದ್ಭುತವಾಗಿಯೂ ಅಸಂಭಾವಿತವಾಗಿಯೂ ಇರುವಂತೆ ಹೇಳಿದ ಶೌರ್ಯ, ಔದಾರ್ಯ, ಸೌಂದರ್ಯಾದಿಗಳ ವರ್ಣನೆ ಅತ್ಯುಕ್ತ್ಯಲಂಕಾರವೆನ್ನಿಸಿಕೊಳ್ಳುವುದು. ವೀರಗಲ್ಲುಗಳಲ್ಲಿ ವೀರನಾದವನು ಸ್ವರ್ಗವನ್ನು ಸೇರಿದನೆಂಬುದಾಗಿ ಬಣ್ಣಿಸುವಾಗ ಬರುವ ಸ್ವರ್ಗದ ಕಲ್ಪನೆ, ಅಮರಗಣಿಕೆಯರು ಕೊಂಡೊಯ್ದರೆಂಬ ಕಲ್ಪನೆಯ ಮಾತುಗಳು ಯುದ್ಧರಂಗದಲ್ಲಿ ಮರುಳುಗಳು ನಲಿದಾಡಿದವೆಂಬುದಾಗಿ ಬಣ್ಣಿಸುವ ಸನ್ನಿವೇಶಗಳಲ್ಲಿ ಅತ್ಯುಕ್ತಿಯನ್ನು ಕಾಣಬಹುದಾಗಿದೆ.

ಬಾಳೆಯಮ್ಮವೆರ್ಗ್ಗಡೆಯ ಪರಾಕ್ರಮವನ್ನು 'ಆಹವರಂಗ'ದಲ್ಲಿದ್ದ ಮರುಳುಗಳು ತಮ್ಮದೇ ಆದ ರೀತಿಯಲ್ಲಿ ಉಗ್ಗಡಿಸುತ್ತಿದ್ದವು ಎಂಬುದಾಗಿ ಬಣ್ಣಿಸಿರುವ –

**ಮೂಳೆಯ ಸಂನ್ನೆಗಾಳವಿಡಿಯಲು ನೆಱೆನೆತ್ತರನೀಂಟಿ ಕಂ**
**ಣಾಲಿಯ ಮಾಲೆಯ ಸೂಡಿ ಬಲುಗಂಡದ ದಂಡಮನೊಪ್ಪೆಕಟ್ಟಿಕೊಂ**
**ಡಾಳಿಸಿಉಟ್ಟು ಪಂದೊವಲನಾಹವದೊಳು ನಲಿದಾಡಿ ಪಾಡಿದರು**
**ಸೂಳೆಮರುಳುಘ್ಘಡಿಸಿ ಹೆಗ್ಗಡೆ ಬಾಲೆಗನಂಕಮಾಲೆಯಂ ॥**[೪೭]

ಎಂಬ ಪದ್ಯವನ್ನು ಗಮನಿಸಬಹುದು.

ಸ್ವರ್ಗಕ್ಕೆ ಅಪ್ಸರೆಯರು ವೀರನನ್ನು ಕೊಂಡೊಯ್ಯುವ ವರ್ಣನೆ ವೀರಗಲ್ಲುಗಳಲ್ಲಿ ಮಾತ್ರವಲ್ಲದೆ ನಿಷಧಿಕಲ್ಲುಗಳಲ್ಲಿಯೂ ಸಹ ಬಂದಿರುವುದುಂಟು. ಮಹಾಸತಿ ಹರ್ಯ್ಯಲೆಯನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ದುದರ ವಿವರಗಳನ್ನು ಒಳಗೊಂಡ ಪದ್ಯಗಳಲ್ಲಿ ನೋಡಬಹುದು.[೪೮] ಇಲ್ಲೆಲ್ಲಾ ಅತ್ಯುಕ್ತಿಯನ್ನು ಶಾಸನಕವಿಗಳು ಬಳಸಿದ್ದಾರೆ.

### ೫.೧೨ : ದೃಷ್ಟಾಂತ :–

ಎರಡು ಬೇರೆ ಬೇರೆ ವಾಕ್ಯಗಳು ಪರಸ್ಪರ ಅರ್ಥಸಾದೃಶ್ಯದಿಂದ, ಒಂದರ ಪ್ರತಿಬಿಂಬ ಮತ್ತೊಂದು ಎಂದು ತೋರುವಂತಿದ್ದರೆ ಅದು ದೃಷ್ಟಾಂತಾಲಂಕಾರ. ಅಂದರೆ ಎರಡು ಅಥವಾ ಅನೇಕ ವಾಕ್ಯ ಸನ್ನಿವೇಶಗಳಲ್ಲಿ ಅರ್ಥಸಾದೃಶ್ಯವಿದ್ದು ಒಂದರ ಪ್ರತಿಬಿಂಬ ಮತ್ತೊಂದು ಎಂಬಂತಿರುವುದೆನ್ನಬಹುದು.

ಚಿಕ್ಕಮಗಳೂರು ಜಿಲ್ಲೆ ಗೌತಮೇಶ್ವರ ಗ್ರಾಮದ ಶಾಸನವೊಂದು[೪೯] ವಾಮನಯ್ಯನೆಂಬುವನು ವೃಷಭವೊಂದನ್ನು ಹೊಡೆದುಕೊಂದ ಸನ್ನಿವೇಶವನ್ನು ನಿರೂಪಿಸುವಾಗ ಪಂಚತಂತ್ರದ ಕಥೆಯೊಂದನ್ನು ದೃಷ್ಟಾಂತವಾಗಿ ಬಳಸಿದೆ. ತನ್ನ ಕಂದನನ್ನು ಮುಂಗುಸಿಯು ತಿಂದಿದೆ

ಎಂದು ಭಾವಿಸಿ ಅದನ್ನು ಕೊಂದ ಬ್ರಾಹ್ಮಣಸ್ತ್ರೀಯ ಕಥೆಯೊಂದಿಗೆ ಸಮೀಕರಿಸಿರುವ ವಾಮನಯ್ಯನ ಸಂದರ್ಭವು ಈ ಅಲಂಕಾರಕ್ಕೆ ಉದಾಹರಣೆಯಾಗಿದೆ.

ಪ್ರಸಿದ್ಧವಾದ ಅಲಂಕಾರಗಳನ್ನಲ್ಲದೆ ಶಾಸನಕವಿಗಳು ಅಪ್ರಸಿದ್ಧವಾದ ಹಲವಾರು ಅಲಂಕಾರಗಳನ್ನು ಶಾಸನಗಳಲ್ಲಿ ಬಳಸಿರುವುದು ಕಂಡುಬರುತ್ತದೆ. ಅವುಗಳಲ್ಲಿ ಏಕಾವಳಿ ಮತ್ತು ಸಾರ ಎಂಬ ಅಲಂಕಾರಗಳನ್ನು ಗಮನಿಸಬಹುದು. ಈ ಎರಡು ಅಲಂಕಾರಗಳು 'ಶೃಂಖಲಾಮೂಲವಾದ ಅಲಂಕಾರ'[೫೦]ಗಳಾಗಿವೆ.

**೫.೧೩ : ಏಕಾವಳಿ :-**

ಒಂದು ಪದ ಅಥವಾ ಪದಗುಚ್ಛವನ್ನು ಬಳಸಿ ಅದನ್ನೇ ತಕ್ಷಣ ಮುಂದಿನ ಭಾಗದಲ್ಲಿ ಬಳಸುವುದೇ ಇದರ ಮುಖ್ಯ ಲಕ್ಷಣವಾಗಿದೆ. ಇದನ್ನು ಮುಕ್ತಪದಗ್ರಹಣ ಎಂದೂ ಕರೆಯುತ್ತಾರೆ. ಚಿಕ್ಕಮಗಳೂರು ಜಿಲ್ಲೆಯ ಸಿಂಧಗಿರಿಯ ಶಾಸನವೊಂದರಲ್ಲಿ[೫೧] ಸಂಕಣ್ಣನೆಂಬ ಕವಿಯು ಈ ಅಲಂಕಾರವನ್ನು ಬಳಸಿದ್ದಾನೆ.

**ನಯಯುಕ್ತಕ್ರಮವಿಕ್ರಮಂ ಕ್ರಮನಮದುಭೂಮಂಡಳಂ ಮಂಡಳ**
**ಪ್ರಿಯವೃತ್ತಂಪ್ರಿಯವೃತ್ತ ಸಂಗತಗುಣಗ್ರಾಮಂಗುಣಗ್ರಾಮಣೀ**
**ನಯನಾನಂದಕರಂ ಕರಾರ್ಪಿತ ಧನುರ್ಜ್ಯಾರಾವದೂರೀಕೃತಾ**
**ರಿಯಶೋರಾಜಿ[ಜಿ]ತೋದ್ಧತಾಜಿಭರತಶ್ರೀಮಚ್ಚಮೂವಲ್ಲಭಂ ॥**

**ಪ್ರತಿಪಕ್ಷಕ್ಷಿತಿಕೇತುಕೇತುಜನಿತದ್ವಿಡ್ಭೀತಿಭೀತಿದ್ರುತಾ**
**ಶ್ರಿತರಕ್ಷಾನಿಲಯಂ ಲಯಾನಲಲುಠತ್ತಾಪಾಗ್ನಿಕೋಪಾಗ್ನಿಶೋ**
**ಷಿತಯುದ್ಧೋದ್ಧತ ಜೀವನಂ ವನಶಿಖಿಪ್ರೋದ್ಯತ್ಪ್ರತಾಪಂ**
**ಪ್ರತಾಪಗತಶ್ರೀಪರಿಲಬ್ಧಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭಂ ॥**

ಮಹಾಪ್ರಧಾನ ಭರತದಂಡನಾಯಕ ಗುಣಗಾನವನ್ನು ಇದೇ ಅಲಂಕಾರದಲ್ಲಿ ಶಾಸನದಲ್ಲಿ ೫೫ನೇ ಸಾಲಿನಿಂದ ೧೦೫ನೇ ಸಾಲಿನವರೆಗೆ ಶಾಸನಕವಿಯು ಮಾಡಿದ್ದಾನೆ.

**೫.೧೪ : ಸಾರ :-**

ಶೃಂಖಲಾಮೂಲವಾದ ಸಾರ ಅಲಂಕಾರದ ಲಕ್ಷಣವೆಂದರೆ "ಉತ್ತರೋತ್ತರೋತ್ಕರ್ಷ ವರ್ಣನೆ ಎಂದರೆ ಒಂದಕ್ಕಿಂತ ಮತ್ತೊಂದು ಅತಿಶಯವಾಗಿದೆ ಎಂದು ಹೇಳುವುದು."[೫೨] ಬೇಲೂರಿನ ಶಾಸನವೊಂದರಲ್ಲಿ[೫೩] ವೀರಯ್ಯನೆಂಬ ಇಮ್ಮಡಿ ಬಲ್ಲಾಳನ ದಂಡನಾಥನನ್ನು ಬಣ್ಣಿಸಿರುವ –

**ಇರ್ಮಡಿ ವಾಚಸ್ಪತಿಗೆ ಪ**
**ದಿರ್ಮಡಿ ಭಟ್ಟಿಗೆ ವಿನೂತಚಾಣಕ್ಯಂಗಂ ।**
**ನೂರ್ಮಡಿ ಮಂತಣದೊಳ್ ಸಾ**
**ಸಿರ್ಮಡಿ ಯೌಗಂಧರಾಯಣಂಗೀ ವೀರಂ ।**

ಎಂಬ ಪದ್ಯ ಹಾಗೂ ಸಾಳ್ವಮಲ್ಲನನ್ನು ಹೊಗಳಿರುವ –

**ಬಲಿಯಿಂ ಕರ್ಣನೆ ಚಾಗಿಯಾ ಬಲಿಯಿನುದ್ಯತ್ಕರ್ಣನಿಂ ಭೋಜನಾ**
**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನೀ ಲೋಕದೊಳ್**
**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನಿಂ ಚಾಗದ**
**ಗ್ಗಲನಾದಂ ಕಲಿ ಸಾಳ್ವಮಲ್ಲನವನಂತಾರ್ ನೋಂತರೀ ಧಾತ್ರಿಯೊಳ್ ॥** [೫೪]

ಎಂಬ ಪದ್ಯಗಳು ಸಾರ ಅಲಂಕಾರಕ್ಕೆ ಉದಾಹರಣೆಗಳಾಗಿವೆ.

ವರ್ಣನೆಯ ಸಂದರ್ಭದಲ್ಲಿ ಶಾಸನಕವಿಗಳು ಯಥೋಚಿತವಾಗಿ ಪ್ರಸಿದ್ಧವಾದ ಹಾಗೂ ಅಪ್ರಸಿದ್ಧವಾದ ಅಲಂಕಾರಗಳನ್ನು ಬಳಸುತ್ತಿದ್ದರು. ಆ ಮೂಲಕ ಶಾಸನ ಸಾಹಿತ್ಯದ ಸೌಂದರ್ಯವನ್ನು ಹೆಚ್ಚಿಸಿದ್ದಾರೆ ಎಂಬುದನ್ನು ಗಮನಿಸಬಹುದು.

**೫.೧೫ : ಛಂದೋವೈವಿಧ್ಯಗಳು:-**

ಭಾಷೆಗೆ ವ್ಯಾಕರಣದಂತೆ ಛಂದಸ್ಸೂ ಅಗತ್ಯವಾದುದಾಗಿದೆ. ವ್ಯಾಕರಣವು ಗದ್ಯಪದ್ಯಗಳೆರಡಕ್ಕೂ ಅನ್ವಯಿಸಿದರೆ ಛಂದಸ್ಸು ಪದ್ಯಮಾತ್ರಕ್ಕೆ ಸಂಬಂಧಿಸಿದುದಾಗಿದೆ. ವಿಸ್ತೃತವಾದ ವಿಷಯವನ್ನು ಸಂಗ್ರಹಿಸಿ ಹೇಳಲೂ, ರಸವತ್ತಾದ ಅಂಶವನ್ನು ಮನೋಹರವಾಗಿ ತಿಳಿಸಲೂ, ಸುಲಭವಾಗಿ ನೆನಪಿಟ್ಟುಕೊಳ್ಳಲೂ ಪದ್ಯದಿಂದ ಬಹಳ ಅನುಕೂಲವಾಗುತ್ತದೆ. ಅಂತಹ ಪದ್ಯಗಳ ನಿಯಮವನ್ನು ಛಂದಶಾಸ್ತ್ರವು ತಿಳಿಸುತ್ತದೆ. ಶಾಸನಗಳಲ್ಲಿ ಛಂದಸ್ಸಿಗೆ ವಿಶೇಷ ಮಹತ್ವವನ್ನು ಶಾಸನಕವಿಗಳು ನೀಡುತ್ತಿದ್ದರು. ಪ್ರಸಿದ್ಧ ಮತ್ತು ಅಪ್ರಸಿದ್ಧವಾದ ಹಲವಾರು ವರ್ಣವೃತ್ತ, ಮಾತ್ರಾವೃತ್ತ

ಮತ್ತು ಅಂಶವೃತ್ತಗಳನ್ನು ಬಳಸುತ್ತಿದ್ದರು. ಹಾಗೆಯೇ ಪ್ರಯೋಗಶೀಲತೆಯ ಕಡೆಗೆ ಗಮನವಿತ್ತಿದ್ದರು ಎಂಬ ಅಂಶವು ಕನ್ನಡ ಶಾಸನಗಳನ್ನು ಗಮನಿಸಿದಾಗ ಮನವರಿಕೆಯಾಗುತ್ತದೆ.

"ಗದ್ಯವೇ ತನಗೆ ಗದ್ದಿಗೆಯಾಗೆ । ವೃತ್ತವೇ ತನಗೆ ಕುಟಿಕುಚ ಪ್ರದೇಶವಾಗೆ । ಮಾಳಾವೃತ್ತವೇ ತನಗೆ ಮಕುಟಮಣ್ಡಳವಾಗೆ । ಅಂಕಿತೆಯೆತನಗೆ ಸುಟಿಕುಂತಳವಾಗೆ । ಛಂದವೆ ತನಗಂದವೆನಿಪಲಲಾಟಪಟ್ಟವಾಗೆ । ರಾಗಂಗಳ ಸುಳಿವುಗಳೆ ತನಗೆ ಕುರುಳೋಳಿಗಳಾಗೆ । ರಾಗಂಗಳ ಕೊಂಕುಗಳೆ ತನಗೆ ಕಡುವುರ್ಬುಗಳಾಗೆ । ನಾಟಿಯೆ ತನಗೆ ನೋಟವಾಗೆ । ಪಂಜಳವೆ ತನಗೆ ರಂಜಿಸುವ ಧರೋಷ್ಠವಾಗೆ । ಪದರಚನೆಯೇ । ತನಗೆ ಮೃದುಪವನವಾಗೆ । ಅಂಬುವೆ ತನಗೆ ಕಂಬುಗ್ರೀವವಾಗೆ । ಪೂರ್ಣ್ಣರಾಗವೆ ತನಗೆ ಕರ್ಣ್ಣಾಭರಣವಾಗೆ । ದೌವಾಳವೇ ತನಗೆ ನೇವಾಳವಾಗೆ । ಅಕ್ಕರವೆ ತನಗೆ ಅರೆಮಣಿಯಾಗೆ । ತಿವದಿಯೆ ತನಗೆ ತೆಳುವಸಿರಾಗೆ । ದೋಹಳಮೆ ತನಗೆ ಬಾಹುಬಲವಾಗೆ । ಚವುಪದಿಯೆ ತನಗೆ ಮು[ರ]ಜವಾಗೆ । ಸಾಮತವೆ ತನಗೆ ವಿರದಪರಲ್ಗಳಾಗೆ । ರಾಗಂಗಳಣುಗುಗವಿತವೆ ತನಗೆ ಸೆಳ್ಳುಗುರ್ಗ್ಗಳಾಗೆ........"[೩೩] ಎಂಬುದಾಗಿ ಸಂಗೀತ ಮತ್ತು ಛಂದೋಪರಿಭಾಷೆಯಲ್ಲಿ ಸಾಲಂಕೃತ ಸರಸ್ವತಿಯನ್ನು ಶಾಸನವೊಂದು ವರ್ಣಿಸಿದೆ. ಛಂದೋಭಿಮಾನಿಗಳಾದ ಶಾಸನಕವಿಗಳಿಂದ ವಿವಿಧ ಜಾತಿಯ ಪದ್ಯಗಳು ಶಾಸನಗಳಲ್ಲಿ ನಿಕ್ಷಿಪ್ತಗೊಂಡಿವೆ.

ಕನ್ನಡ ಸಾಹಿತ್ಯವು ಅಕ್ಷರಛಂದಸ್ಸು, ಮಾತ್ರಾಛಂದಸ್ಸು, ಅಂಶಛಂದಸ್ಸುಗಳಿಗೆ ಸಂಬಂಧಿಸಿದ ಬೇರೆ ಬೇರೆ ವೃತ್ತಗಳಲ್ಲಿ ತನ್ನ ಸಾಹಿತ್ಯ ಪ್ರಕಾರಗಳನ್ನು ಬದಲಿಸುತ್ತಾ ಬಂದರೂ ಗದ್ಯ ಇಲ್ಲವೆ ಬಿಡಿ ಪದ್ಯಮಯವಾಗಿದ್ದ ಕನ್ನಡ ಶಾಸನಗಳು ಒಂಭತ್ತನೆಯ ಶತಮಾನದಲ್ಲಿ ಚಂಪೂಪ್ರಕಾರಕ್ಕೆ ತಿರುಗಿ ಕೊನೆಯವರೆಗೂ ಅದೇ ದಾರಿಯಲ್ಲಿಯೇ ಮುನ್ನಡೆದವು. ಹೀಗಾಗಿ ಗದ್ಯ–ವೃತ್ತ–ಕಂದಗಳ ವಿಪುಲತೆ, ರಗಳೆ–ತ್ರಿಪದಿ – ಅಕ್ಕರ–ವಿಷಮ ವೃತ್ತಗಳ ವಿರಳತೆಯಿಂದ ಕೂಡಿರುವ ಚಂಪುವಿನ ಮಾದರಿ ಶಾಸನಗಳಲ್ಲಿ ಯಾವ ಕಾಲಕ್ಕೂ ನೆಲೆನಿಂತಿದೆ.

ಶಾಸನಗಳಲ್ಲಿನ ಛಂದಸ್ಸುಗಳನ್ನು ಗುರುತಿಸುವಲ್ಲಿ ಹಲವಾರು ಇತಿಮಿತಿಗಳನ್ನು ಕಾಣಬಹುದು. ಶಾಸನಗಳಲ್ಲಿ ಬಳಸಲಾದ ಕಂದ–ಕಂ[೩೬], ತ್ರಿವದಿ[೩೭] ಎಂಬ ವಿಶಿಷ್ಟ ಸೂಚನೆಗಳು ಪದ್ಯಗಳನ್ನು ಗುರುತಿಸಲು ನೆರವಾಗುತ್ತವೆ. ಆದರೆ ವೃತ್ತ[೩೮], ವ್ರಿ[೩೯], ಎಂಬ ಸಾಮಾನ್ಯ ಸೂಚನೆಗಳು ಮತ್ತು ಮೇಲೆ ಒಂದು ವೃತ್ತದ ಹೆಸರು ಹೇಳಿ ಕೆಳಗೆ ಅನೇಕ ಬಗೆಯ ವೃತ್ತಗಳನ್ನು ಬರೆದ ಕ್ರಮಗಳು ಪದ್ಯವನ್ನು ಗುರುತಿಸುವಲ್ಲಿ ಅಡ್ಡಿಯುಂಟುಮಾಡುತ್ತವೆ. ಶಾಸನದ ಫಲಕದ ಮಿತಿಯಿಂದಾಗಿ ಪದ್ಯಗಳನ್ನೂ ಗದ್ಯದಂತೆ ಬರೆದಿರುವುದೂ ಸಹ ಪದ್ಯಗಳ ಛಂದಸ್ಸನ್ನು ಗುರುತಿಸುವಲ್ಲಿ ಅಡಚಣೆಯುಂಟು ಮಾಡುತ್ತವೆ. ಜೊತೆಗೆ ಶಾಸನಗಳ ಬರವಣಿಗೆಯಲ್ಲಿ ದೋಷ, ಪಾಠದಲ್ಲಿ ಸವಕಳಿ,

ಶಾಸನಭಾಗ ತ್ರುಟಿತವಾಗಿರುವುದು ಮೊದಲಾದ ಸಂದರ್ಭದಗಳಲ್ಲಿ ಪದ್ಯಗಳ ಛಂದಸ್ಸನ್ನು ಗುರುತಿಸುವುದು ಕಷ್ಟ ಸಾಧ್ಯವಾಗುತ್ತದೆ. ಈ ಎಲ್ಲಾ ಎಡರು–ತೊಡರುಗಳನ್ನು ಗಮನದಲ್ಲಿಟ್ಟುಕೊಂಡು ಶಾಸನಗಳ ಛಂದೋವೈವಿಧ್ಯಗಳನ್ನು ಅಭ್ಯಾಸ ಮಾಡಬೇಕಾಗುತ್ತದೆ.

**೫.೧೬ : ವರ್ಣವೃತ್ತ :–**

ಗದ್ಯ ಮತ್ತು ಬಿಡಿ ಪದ್ಯರೂಪದ ಕೆಲವು ಶಾಸನಗಳನ್ನು ಬಿಟ್ಟರೆ, ಕನ್ನಡದ ಬಹುತೇಕ ಶಾಸನಗಳು ಚಂಪುವಿನ ಚೌಕಟ್ಟನ್ನು ಯಾವ ಕಾಲಕ್ಕೂ ಬಿಡಲಿಲ್ಲ. ಈ ಕಾರಣದಿಂದಾಗಿ ಚಂಪೂಕಾವ್ಯಗಳಲ್ಲಿ ವರ್ಣವೃತ್ತಗಳಿಗೆ ಸ್ಥಾನವು ಲಭಿಸಿದಂತೆ ಶಾಸನಗಳಲ್ಲೂ ಸಹ ವಿಶೇಷವಾಗಿ ದೊರೆಯಿತು. ಚಂಪೂಕಾವ್ಯಗಳಲ್ಲಿಯಂತೆಯೇ ಶಾಸನಗಳಲ್ಲಿಯೂ ಸಹ ಸಮವೃತ್ತ ಸಮುದಾಯದ ಖ್ಯಾತಕರ್ನಾಟಕ ವೃತ್ತಗಳ ಬಳಕೆಯು ಹೇರಳವಾಗಿ ಆಗಿದೆ. ಹಾಗೆಯೇ ದ್ರುತ ವಿಳಂಬಿತ, ಹರಿಣಿ, ಮತ್ತಕೋಕಿಲ, ಪೃಥ್ವಿ, ವಸಂತತಿಲಕ, ರಥೋದ್ಧತ, ಮಂಗಲಮಂಗನಾ ಮೊದಲಾದವುಗಳ ಬಳಕೆಯು ವಿರಳವಾಗಿದೆ.

ಕನ್ನಡ ಸಾಹಿತ್ಯದ ಆರಂಭಕಾಲದ ಸ್ವರೂಪವನ್ನು ತಿಳಿಯಬೇಕಾದರೆ ಶಾಸನಗಳನ್ನೇ ಆಧರಿಸಬೇಕು. ಶ್ರವಣಬೆಳಗೊಳದ ಹಲವಾರು ಕನ್ನಡ ಪದ್ಯಶಾಸನಗಳು ಕ್ರಿ.ಶ.ಸುಮಾರು೬೫೦ರಿಂದ ೭೦೦ರ ಅವಧಿಗೆ ಸೇರಿದ್ದು. ಇವುಗಳಲ್ಲಿ ಲೌಕಿಕ ಛಂದಸ್ಸಿನ ವರ್ಣವೃತ್ತಗಳು ಕಂಡುಬಂದಿವೆ. ಖ್ಯಾತಕರ್ನಾಟಕ ವೃತ್ತಗಳೆಂದು ಪ್ರಸಿದ್ಧವಾದ ಆರು ಸಮಚತುಷ್ಪದಿಗಳಲ್ಲಿ ಕೆಲವು ಸಂಸ್ಕೃತ ಭಾಷಾಸಾಹಿತ್ಯ ಪರಿಚಯದಿಂದಲೂ, ಪ್ರಭಾವದಿಂದಲೂ ನೇರವಾಗಿ ಕನ್ನಡಕ್ಕೆ ಬಂದಿದ್ದರೆ, ಇನ್ನು ಕೆಲವು ಅಲ್ಲಿಯ ಮಾದರಿಗಳನ್ನು ಇಟ್ಟುಕೊಂಡು ಕಲ್ಪಿಸಿದವುಗಳಾಗಿವೆ. ಶಾರ್ದೂಲವಿಕ್ರೀಡಿತ, ಸ್ರಗ್ಧರೆ ಮೊದಲಾದವು ಸಂಸ್ಕೃತ ಮೂಲದವುಗಳು. ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ ಇಂಥವು ಆ ಮಾದರಿಯಲ್ಲಿ ಕನ್ನಡ ಭಾಷೆಯಲ್ಲಿ ರಚಿಸಿಕೊಂಡವುಗಳು. ಹೀಗಾಗಿ ಸು.೬೫೦ರಿಂದ ೭೦೦ರ ಕಾಲಕ್ಕೆ ವಿವಿಧ ಸಂಸ್ಕೃತ ವರ್ಣವೃತ್ತಗಳ ನೇರವಾದ ಸ್ವೀಕರಣ ಅನುಕರಣಗಳೂ ಕನ್ನಡ ಭಾಷೆಯನ್ನು ಪ್ರವೇಶಿಸಿದವು ಎನ್ನಬಹುದು.

ಕನ್ನಡ ಶಾಸನ ಸಾಹಿತ್ಯದಲ್ಲಿ ಮೊದಲನೆಯ ಪದ್ಯಶಾಸನವಾದ ತಮಟಕಲ್ಲಿನ ಗುಣಮಧುರನ ಶಾಸನವು ಅಕ್ಷರವೃತ್ತವಾಗಿದೆ. "ಬಿಣಮಣಿ ಅನ್ತುಭೋಗಿ" ಎಂದು ಮೊದಲಾಗುವ ಶಾಸನಪದ್ಯವು ಪಿಂಗಲನು ಅವಿತಥವೆಂದು ಕರೆಯುವ, ಇತರ ಲಾಕ್ಷಣಿಕರು ನರ್ಕುಟಕ, ನರ್ದಟಕ ಎನ್ನುವ ಒಂದು ವರ್ಣಸಮವೃತ್ತ. "ಕೈಪಿಡಿಕಾರರು ಇದನ್ನು ಸುಮಂಗಲಿ ಅಥವಾ ನತ್ಕಟಕವೆಂದು ಹೆಸರಿಸಿದ್ದಾರೆ"[೬೦] ಈ ವರ್ಣಸಮವೃತ್ತವು ಹತ್ತನೆಯ ಶತಮಾನದ ನಾಗವರ್ಮ, ಹನ್ನೊಂದನೆಯ

ಶತಮಾನದ ನೇಮಿಚಂದ್ರ ಮೊದಲಾದವರಲ್ಲಿ ಕಂಡುಬಂದಿರುವುದರಿಂದ ತಕ್ಕಷ್ಟು ಪ್ರಚುರವಾದ ಬಂಧವೆಂಬ ಅಭಿಪ್ರಾಯವಿದೆ.[೬೧] ಶ್ರವಣಬೆಳಗೊಳದ ಶಾಸನಗಳಲ್ಲದೆ ಈ ಅವಧಿಯಲ್ಲಿ ಮಂಗಳೂರು, ಉದಯಾವರ, ಬೆಲವೆತ್ತ, ಚಿಕ್ಕಬಳ್ಳಾಪುರ, ನರಸಿಂಹರಾಜಪುರದ ಶಾಸನಗಳಲ್ಲಿ ಸಹ ಅಕ್ಷರವೃತ್ತಗಳು ಕಂಡುಬಂದಿವೆ.

ಕ್ರಿ.ಶ.೮೫೦ರ ನಂತರದ ಅವಧಿಯ ಶಾಸನಗಳಲ್ಲಿ ಖ್ಯಾತಕರ್ನಾಟಕ ವೃತ್ತಗಳು ವಿಶೇಷವಾಗಿ ಬಳಕೆಯಾಗಿವೆ. ಜೊತೆಗೆ ಕಂದಪದ್ಯಗಳೂ ಹಾಗೂ ಸಾಮಾನ್ಯವಾಗಿ ಸಂಬಂಧ ಸೂಚನೆಗೆ ಎಂಬಂತೆ ಗದ್ಯದ ಬಳಕೆಯಾಗಿರುತ್ತದೆ. ವರ್ಣವೃತ್ತಗಳ ಬಳಕೆಯಲ್ಲಿ ವೈವಿಧ್ಯತೆಯಿಲ್ಲದಿದ್ದರೂ ಸಹ ಕೆಲವೊಂದು ವೈಚಿತ್ರ್ಯಗಳು ಗೋಚರವಾಗಿರುವುದನ್ನು ಗಮನಿಸಬಹುದು. ಉದಾಹರಣೆಗೆ ಬೆಳತೂರಿನ ಶಾಸನದಲ್ಲಿರುವ[೬೨] 'ಲಲಿತವೃತ್ತ'ದ ಪದ್ಯವನ್ನು ಗಮನಿಸಬಹುದು. ಈ ಪದ್ಯವು ವರ್ಣಛಂದಸ್ಸಿನಲ್ಲಿದ್ದರೂ ಮಾತ್ರಾಛಂದಸ್ಸಿಗೂ ಪರಿವರ್ತಿಸಲು ಸಾಧ್ಯವಿದೆ.

**ಶ್ರೀರಮಣಿಗೌರಿ ಸಚಿಧಾರಿಣಿಯ ಪುತ್ರಿ ರತಿ ಭೂರಮಣಿಯಂದದ ಸ್ವರೂಪವಾಱಿವೊಳ್ಪಾ**
**ಧಾರೆ ಜಯಧಾರೆ ಜಸಧಾರೆ ನಯಧಾರೆ ಭಯಹಾರೆ ಪತಿಭಕ್ತೆ ಧೃತಶಕ್ತಿಯನೆ ಸಂದೀ**
**ವೀರನಿಧಿಯಂ ಚಲದ ವಾರಿನಿಧಿಯಂ ಗುಣದ ಚಾರುನಿಧಿಯಂ ನೆಗಳ್ದ ದೇಕಲೆಯ ನಿನ್ತೀ**
**ನಾರಿಜನರನ್ನ ಮನದಾರೊ ಮಱಿವರ್ ಶಕಳಧಾರಿಣಿಯೊಳಿನ್ತು ವರಕಾನ್ತೆ ದೊರೆಯಾವಳ್ ॥**

೩೦ ಅಕ್ಷರಗಳನ್ನು ಪ್ರತಿಯೊಂದು ಸಾಲಿನಲ್ಲೂ ಒಳಗೊಂಡ ಈ 'ಲಲಿತವೃತ್ತ'ದಲ್ಲಿ 'ಭಜಸನ' ಗಣವಿನ್ಯಾಸವು ಪ್ರತಿಪಾದದಲ್ಲಿ ಏಳು ಬಂದಿದ್ದು, ನಾಲ್ಕು ಮಾತ್ರೆಯ ಭಯಗಣವಿನ್ಯಾಸದಿಂದ ಕೊನೆಗೊಂಡಿರುತ್ತದೆ. ಈ ರೀತಿಯಾದ ವಿರಳ ವೃತ್ತವನ್ನು ಬಳಸುವುದು ಕವಿಯ ಅಭಿರುಚಿಯ ದ್ಯೋತಕವಾಗಿದೆಯೆನ್ನಬಹುದು. "ಈ ವರ್ಣಛಂದಸ್ಸಿನ ವೃತ್ತವನ್ನು ಮಾತ್ರಾಗಣದೃಷ್ಟಿಯಿಂದ ಪ್ರಾಸಯುಕ್ತವಾದ ೮ ಪಾದಗಳಲ್ಲಿಯೂ ಮುರಿದಿಡಬಹುದು. ಹಾಗೆಯೇ ೧, ೨ ಮತ್ತು ೪, ೫ನೆಯ ಪಾದಗಳಲ್ಲಿ ೫ ಮಾತ್ರೆಯ ೪ ಗಣ, ೩ ಮತ್ತು ೬ನೆಯ ಪಾದಗಳಲ್ಲಿ ೫ ಮಾತ್ರೆಯ ೩ಗಣ ಮತ್ತು ೪ ಮಾತ್ರೆಯ ೧ ಗಣದಂತೆ ಪರಿವರ್ತಿಸಿದಾಗ ಈ ಪದ್ಯದಿಂದ ಎರಡು ಕುಸುಮಷಟ್ಪದಿಗಳನ್ನು ಹೊರಡಿಸಬಹುದು"[೬೩]

ವರ್ಣವೃತ್ತಗಳ ಪಾದಗಳ ಸಂಖ್ಯೆ ನಾಲ್ಕು. ಆದರೆ ಕೆಲವು ಶಾಸನಗಳ ಪದ್ಯಗಳಲ್ಲಿ ಅಕ್ಷರವೃತ್ತಗಳನ್ನು ನಾಲ್ಕು ಪಾದಗಳಿಗೆ ನಿಲ್ಲಿಸದೆ ಐದು ಪಾದಗಳವರೆಗೂ ಬೆಳೆಸಿರುವುದು ಕಂಡುಬರುತ್ತದೆ. ಉದಾಹರಣೆಗೆ ಚಿತ್ರದುರ್ಗ ಜಿಲ್ಲೆಯ ಗಂಗನರಸಿಯ ಶಾಸನ[೬೪]ವನ್ನು

ಗಮನಿಸಬಹುದು. ಈ ಶಾಸನದಲ್ಲಿ ಪಂಚಪಾದ ವೃತ್ತಗಳು ಎರಡು ಇದ್ದು 'ವೃತ್ತನಾಮ' ಸೂಚನೆಯಿಲ್ಲದಿದ್ದರೂ 'ಚಂಪಕಮಾಲೆ'ಯೆಂದು ತಿಳಿದುಬರುತ್ತದೆ. ಶಾಸನಪದ್ಯಗಳು ಹೀಗಿವೆ.

ಎಸಕದ ಸೋಮವಂಶಜದೊಳಾರ್ ದೊರೆ ತನ್ನೊಳೆನಿಪ್ಪುದೊಂದು ಸಾ
ಹಸದ ನಿಮಿರ್ಕೆ ವರ್ಧಿಸುವ ರಾಜ್ಯದಮರ್ಕೆ ಸುಖಪ್ರಪಂಚ ಮಂ
ಪಸರಿಪ ತೋರ್ಕೆ ವೈರಿಗಳ ರಾಜ್ಯದ ಸಾರ್ಕೆ ಕಡುರ್ಪಿನಿಂ ವಿಗು
ರ್ವಿಸುವರ ಮೀಸೆಯಂ ಸುಡುವ ತೇಜದಳುರ್ಕೆ ಧರಿತ್ರಿಯೊಳ್ ವಿರಾ
ಜಿಸುತಿರಲುತ್ತರೋತ್ತರಮಿಳಾಸ್ತುತಿವೆತ್ತುದು ವೀರಪಾಂಡ್ಯನಾ ॥

ವನಧಿಪರೀತ ಭೂತಳದೊಳೆಂದುದನೊಲ್ಲದ ರಾಯರಿಲ್ಲ ತ
ನ್ನನೆಶರಣೆಂದು ಜೀವಿಸಿದ ಭೂಭುಜರಿಲ್ಲ ಸಮಸ್ತ ವಸ್ತುವಾ
ಹನಮನನೂನ ಕಾಂಚನಮನಿತ್ತಿರಮುದ್ಧತರಿಲ್ಲ ಜೀಯೆನು
ತ್ತಿನುದಿನಮೆಯ್ದೆ ಬಿಟ್ಟವೆಸಗೆಯ್ಯದ ಜಟ್ಟಿಗರಿಲ್ಲನೋಟಕ್ಕೊಪಡೇ
ನನುಪಮಮಾಯ್ತೊ ರಾಜವಿಭವಂ ಜಗದೊಳ್ ಜಗದೇಕಮಲ್ಲನಾ ॥

ಇದೇ ರೀತಿಯಾದ ಪ್ರಕ್ರಿಯೆಯನ್ನು ತುಮಕೂರು ಜಿಲ್ಲೆಯ ಕರಡಾಳು ಶಾಸನದಲ್ಲೂ[೬೫] ಕಾಣಬಹುದು.

ಏಱೆವಿಮಾನಮಂ ಬರೆ ಸುರಾಂಗನೆಯರ್ ನಳಿತೋಳ ನುಣ್ಬೊಗರ್
ತೋಱುವಿನಂ ಮಹೋತ್ಸವದೆ ಸೆಸೆಯನಿಕ್ಕಿ ಸುರಾನಕಸ್ವನಂ
ಮೀಱೆಘನಾಘನಧ್ವನಿಯನೆತ್ತಿದ ಸತ್ತಿಗೆ ಚಂದ್ರಬಿಂಬಮಂ
ಬೀಱೆವಿಲಾಸದಿಂ ಪಿಡಿದು ಚಾಮರಮನಿಕ್ಕಿ ಸಮಂತು ಪೊಕ್ಕಳಾ
ನೀಱಱ ಮಹಾನುಭಾವೆ ಸತಿ ಹರ್ಯ್ಯಲದೇವಿ ಸುರೇಂದ್ರಲೋಕಮಂ ॥

ಶಾಸನದಲ್ಲಿ ವೃತ್ತನಾಮದ ಸೂಚನೆಯಿಲ್ಲದಿದ್ದರೂ ಇದು ಪಂಚಪಾದಗಳನ್ನು ಒಳಗೊಂಡ 'ಉತ್ಪಲಮಾಲೆ'ಯಾಗಿದೆ.

ಸಮವೃತ್ತಗಳನ್ನು ಬಿಟ್ಟರೆ ಮಿಕ್ಕ ಅರ್ಧಸಮ ಮತ್ತು ವಿಷಮವೃತ್ತಗಳಲ್ಲಿ ಶಾಸನಗಳು ವಿಷಮವೃತ್ತಗಳನ್ನು ಬಳಸಿಕೊಂಡಿದೆ. ನಾಲ್ಕು ಚರಣಗಳು ಅಸಮವಿರುವುದು ಇದರ ವೈಶಿಷ್ಟ್ಯವಾಗಿದೆ. ಶಾಸನಗಳಿಂದ ವಿಷಮವೃತ್ತಗಳಿಗೆ ಈ ಕೆಳಗಿನ ಪದ್ಯಗಳನ್ನು ಉದಾಹರಣೆಯಾಗಿ ಗಮನಿಸಬಹುದು.

**ಭಯಮಂ ವಿದ್ವಿಷ್ಟಸೈನ್ಯಕ್ಕಭಯಮನತಿಭೀತರ್ಗೆ ಬೇಳ್ಪರ್ಥಮಂ ಬೇ**
**ಳ್ಪಯಶೋವಿಸ್ತಾರಮರ್ಥಿಪ್ರತತಿಗೆ ರತಿಸಮ್ಮೋಹಮಂ ಕಾನ್ತೆಯರ್ಗಿತ್ತು ಸೌಜನ್ಯಸದ್ವೃ**
**ತ್ತಿಯನಾಳ್ದೊಪ್ಪಿರ್ದನೀ ವಯ್ಜ ರಸನತನಯಂ ಕ್ಷತ್ರವಂಶೇಂದುವಾಸಂ**
**ದಿಯಬಮ್ಮಂ ಕೀರ್ತಿಧರ್ಮಂ ಪದನತ ಜನತಾವರ್ಮನುದ್ದಾಮಶರ್ಮಂ ॥** [೬೬]

ಈ ಪದ್ಯದಲ್ಲಿ ಎಲ್ಲವೂ ಮಹಾಸ್ರಗ್ಧರೆಯ ಪಾದಗಳು. ಆದರೆ ಎರಡನೆಯ ಪಾದದಲ್ಲಿ ೨ 'ಯ' ಗಣಗಳು ಅಧಿಕವಾಗಿ ವಿಷಮತೆಗೆ ಕಾರಣವಾಗಿದೆ.

ವಿಷಮವೃತ್ತಕ್ಕೆ ಮತ್ತೊಂದು ಉದಾಹರಣೆಯನ್ನು ಶ್ರವಣಬೆಳಗೊಳದ ಶಾಸನವೊಂದರಿಂದ'[೬೭] ಗಮನಿಸಬಹುದು.

**ಜಿನಧರ್ಮಾಂಬರ ತಿಗ್ಮರೋಚಸುಚರಿತ್ರಂ ಭವ್ಯವಂಶೋತ್ತಮಂ**
**ಸಿಷ್ಟಿನಿಧಾನಂ ಮಂತ್ರಿಚೂಡಾಮಣಿ ಬುಧವಿನುತಂ ಗೋತ್ರ ವಂಶಾಂಬರಾರ್ಕಂ**
**ವನಿತಾಚಿತ್ತಪ್ರಿಯಂ ನಿರ್ಮಳನನುಪಮನತ್ಯುತ್ತಮಂ ಕೂರೆಕೂರ್ಪಂ**
**ವಿನಯಾಂಭೋರಾಶಿ ವಿದ್ಯಾನಿಧಿ ಗುಣನಿಳಯಂ ಧಾತ್ರಿಯೊಳ್ ಸಿಂಗಿಮಯ್ಯಂ ॥**

"ಈ ವೃತ್ತದಲ್ಲಿ ಮೊದಲ ಪಾದ ಮತ್ತೇಭವಿಕ್ರೀಡಿತದ್ದು. ಎರಡನೆಯ ಪಾದದ ಆರಂಭದಲ್ಲಿ 'ಸುನಿಧಾನಂ' ಎಂಬಂತಿದ್ದರೆ ಪ್ರಾಸವ್ಯವಸ್ಥೆಯುಂಟಾಗಿ, ಆ ಪಾದವನ್ನು ಒಳಗೊಂಡು ಮುಂದಿನ ಎರಡು ಪಾದದಾರಂಭದ 'ಸಿ[ಸೃ]ಷ್ಟಿನಿಧಾನಂ' ಎಂಬಲ್ಲಿಯ 'ಸಿ[ಸೃ]'ವನ್ನು ಮೊದಲ ಪಾದದ ಕೊನೆಯ ಅಕ್ಷರವನ್ನಾಗಿಟ್ಟುಕೊಂಡರೂ (ಆಗ ಆ ಪಾದ ಸಭರನಮಯಲಗ+ಗ) ಪ್ರಾಸವ್ಯವಸ್ಥೆಯೇರ್ಪಟ್ಟು ಮಹಾಸ್ರಗ್ಧರೆಯ ಪಾದವಿಂಗಡ ಗೊಳ್ಳುತ್ತದೆ. ಹಾಗೂ ಇಲ್ಲದಿದ್ದರೆ 'ಸಿ[ಸೃ]' ಎಂಬುದನ್ನು ೨ನೆಯ ಪಾದದಲ್ಲಿ ಇರುವಂತೆಯೇ ಇಟ್ಟು ಅದನ್ನು ತ್ವರಿತೋಚ್ಚಾರದ ಅಕ್ಷರವನ್ನಾಗಿ (ಆಧುನಿಕ ಪರಿಭಾಷೆಯಲ್ಲಿದ್ದನ್ನು 'ಅನಾಗತ'ವೆನ್ನಲಾಗುತ್ತದೆ) ಗಣಿಸಬೇಕಾಗುತ್ತದೆ. ಈ ಸವರಣೆ ಹೇಗೇ ಆದರೂ ಇದು ಮತ್ತೇಭ, ಮಹಾಸ್ರಗ್ಧರೆಗಳ ಪಾದಗಳನ್ನು ಬೆರೆಸಿಕಟ್ಟಿರುವ ಒಂದು ವಿಷಮವೃತ್ತ ಅಥವಾ ಉಪಜಾತಿ."[೬೮]

ಕೆಲವೊಂದು ಶಾಸನಗಳು ಅಸಮಗ್ರವಾಗಿ ರಚನೆಯಾಗಿರುವುದು ಕಂಡುಬರುತ್ತದೆ. ಉದಾಹರಣೆಗೆ ವಸಂತತಿಲಕ ವೃತ್ತದಲ್ಲಿ ರಚನೆಯಾದ ಗುಣಕೀರ್ತಿ ಮುನಿಯು ಮುಡುಪಿದ ವಿಚಾರವನ್ನು ಒಳಗೊಂಡ ಶ್ರವಣಬೆಳಗೊಳದ ಶಾಸನ[೬೯] ಮತ್ತು ಮಂಗಲಮಂಗನಾ ವೃತ್ತದಲ್ಲಿ ರಚನೆಯಾದ ಶಾಸನ'[೭೦] ವನ್ನು ಗಮನಿಸಬಹುದು. ಈ ಎರಡೂ ಶಾಸನಗಳಲ್ಲಿ ನಾಲ್ಕು ಪಾದಗಳಿಗೆ ಬದಲಾಗಿ ಮೂರು ಪಾದಗಳು ಮಾತ್ರ ಕಂಡುಬರುತ್ತವೆ.

ಅಸಮಗ್ರವಾಗಿ ಅಂದರೆ ಮೂರು ಪಾದಗಳಲ್ಲಿ ಮಾತ್ರ ರಚನೆಯಾಗಿರುವ 'ಮಹಾಸ್ರಗ್ಧರೆ'ಗೆ

**ಗಣನಾತೀತಪ್ರತಾಪಪ್ರಕಟನಪಟುವೀ ವೀರಬಲ್ಲಾಳನಾಥಂ**

**ರಣದೊಳ್ ತಂನುಗ್ರಖಳ್ಗೋರಗಹತಿಗೆರೆಯಂ ಮಾಡನಾರಂ**

**ಮಣಿದುದುವೃತ್ತಾರಿಭೂಪಾಳರನಡಿದಳಿರೊಳ್ ಮೊಳ್ಗುವನ್ತಾಗೆ ಮಾಡನ್**[೨೧]

ಎಂಬ ಪದ್ಯವನ್ನು ಉದಾಹರಿಸಬಹುದು. ವೀರಬಲ್ಲಾಳನ ಪರಾಕ್ರಮವನ್ನು ಈ ಪದ್ಯದಲ್ಲಿ ಸಂಪೂರ್ಣವಾಗಿ ಬಣ್ಣಿಸಿರುವುದರಿಂದ ಶಾಸನಕವಿಯು ಮೂರು ಪಾದಗಳಲ್ಲೇ ಪದ್ಯವನ್ನು ಮುಕ್ತಾಯಗೊಳಿಸಿದ್ದಾನೆ ಎನ್ನಬಹುದು.

ಛಂದಸ್ಸಿನ ಲಕ್ಷಣಕ್ಕೆ ಅನುಗುಣವಾಗಿ ರಚನೆಯಾಗದೆ ಇರುವ ಹಲವಾರು ಪದ್ಯಗಳು ಶಾಸನ ಸಾಹಿತ್ಯ ಕಾಲದ ಉದ್ದಕ್ಕೂ ಕಂಡುಬರುತ್ತವೆ. ಶ್ರವಣಬೆಳಗೊಳದ ಶಾಸನದ ಪದ್ಯವೊಂದು[೨೨] ಮಂಗಲಮಂಗನಾ ವೃತ್ತದಲ್ಲಿ ರಚನೆಯಾಗಿದ್ದರೂ, ಅದರ ಎರಡನೆಯ ಪಾದವು ಲಕ್ಷಣಕ್ಕೆ ಅನುಗುಣವಾಗಿಲ್ಲ. ವೃತ್ತದ ಲಕ್ಷಣದ ಪ್ರಕಾರ[೨೩] ಪಾದದ ಆರಂಭದಲ್ಲಿ 'ನ'ಗಣ ಬರಬೇಕಾಗಿದ್ದು, ಈ ಶಾಸನದ ಎರಡನೆಯ ಪಾದದ ಆರಂಭದಲ್ಲಿ 'ಜ'ಗಣವು ಬಂದಿದೆ. ಮೂರನೆಯ ಪಾದದ ಎರಡನೆಯ ಗಣ 'ಭ'ಗಣವಾಗುವುದರ ಬದಲು 'ರ'ಗಣವಾಗಿದೆ. ಶಾಸನಪಾಠ –

**ತನಗೆ ಮೃತ್ಯುವರವಾನಜಿದೆನ್ದು ಸುಪಣ್ಡಿತನ್**

**ಅನೇಕಶೀಲ ಗುಣಮಾಲೆಗಳಿನ್ಸಗಿದೊಪ್ಪಿದೊನ್**

**ವಿನಯದೇವಸೇನನಾಮಮಹಾಮುನಿನೋನ್ತುಪಿನ್**

ಕನ್ನಡ ಶಾಸನಗಳಲ್ಲಿ ವರ್ಣವೃತ್ತಗಳನ್ನು ಬಳಸಿರುವ ಬಗೆಗೆ ಕೆಲವೊಂದು ವಿಶೇಷಗಳನ್ನು ಗಮನಿಸಬಹುದು. ಕನ್ನಡದ ಶಾಸನಕವಿಗಳು ವಿದ್ವಾಂಸರೂ, ಪಾಂಡಿತ್ಯಪರಿಪೂರ್ಣರೂ ಆಗಿದ್ದ ಸಂದರ್ಭದಲ್ಲಿ ಛಂದೋದೋಷಗಳಿಗೆ ಅವಕಾಶವಿಲ್ಲದಂತೆ ರಚನೆಗಳು ಆಗುತ್ತಿದ್ದವು ಎನ್ನಬಹುದು. ಮತ್ತೆ ಕೆಲವು ಶಾಸನಗಳಲ್ಲಿ ಲಕ್ಷಣಕ್ಕೆ ಅನುಗುಣವಾದ ರಚನೆಗಳು ಕಂಡುಬರದಿರುವುದನ್ನು ಗಮನಿಸಿದಾಗ ಶಾಸನರಚನಾಕಾರರು ನಿರೂಪಿಸಬೇಕಾದ ವಿಷಯಕ್ಕಷ್ಟೇ ಮಹತ್ವವನ್ನು ನೀಡುತ್ತಿದ್ದರು, ಲಕ್ಷಣಗಳಿಗಲ್ಲ ಎನ್ನಲು ಅವಕಾಶವಿದೆ. ಪಂಚಪಾದದಲ್ಲಿ ವೃತ್ತಗಳನ್ನು ರಚಿಸಿರುವುದನ್ನು ಮತ್ತು ವಿಷಮವೃತ್ತಗಳನ್ನು ಬಳಸಿರುವುದನ್ನು ಗಮನಿಸಿದಾಗ ಪ್ರಯೋಗಶೀಲತೆಯ ಕಡೆಗೂ ಸಹ ಶಾಸನಕವಿಗಳು ಆಸಕ್ತರಾಗಿದ್ದರೆನ್ನಬಹುದು. ಎಂದಿನಂತೆ ಕಾವ್ಯಗಳ ರೀತಿಯಲ್ಲಿಯೇ ಶಾಸನ ಪ್ರಪಂಚದಲ್ಲಿಯೂ ಸಹ ಖ್ಯಾತಕರ್ನಾಟಕ ವೃತ್ತಗಳ ಪ್ರಾಬಲ್ಯವೇ ಹೆಚ್ಚು.

## ೫.೧೭ : ಮಾತ್ರಾವೃತ್ತ :-

ಮಾತ್ರಾವೃತ್ತ ಜಾತಿಗೆ ಸೇರಿದ ಕಂದ ಮತ್ತು ರಗಳೆಗಳಲ್ಲಿ ಕಂದವು ವರ್ಣವೃತ್ತಗಳೊಡನೆ ಬೆರೆತು ಗದ್ಯಪದ್ಯಮಿಶ್ರಿತ ಶಾಸನಗಳಲ್ಲಿ ಹೇರಳವಾಗಿ ಬಳಕೆಯಾಗಿವೆ. ಶಾಸನಗಳ ಪದ್ಯರಾಶಿಯಲ್ಲಿ ಕಂದದ ಬಳಕೆಯ ಪ್ರಮಾಣ ಸ್ವಲ್ಪ ಹೆಚ್ಚೇ ಎನ್ನಬಹುದು. ಕವಿಜನಪ್ರಿಯವಾದ ಛಂದೋಬಂಧವಾದ ಕಂದವನ್ನು ಶಾಸನಕವಿಗಳು ಧಾರಾಳವಾಗಿಯೇ ಬಳಸಿದ್ದಾರೆ.

### ಕಂದಪದ್ಯ:-

ಲಕ್ಷಣವನ್ನು ಹೀಗೆ ಹೇಳಬಹುದು. "೪ ಪಾದಗಳು, ಇವುಗಳಲ್ಲಿ ೧-೨ನೆಯ ಪಾದಗಳು ಒಂದು ಅರ್ಧ, ೩-೪ನೆಯ ಪಾದಗಳು ಇನ್ನೊಂದು ಅರ್ಧ. ೧-೨ನೆಯ ಪಾದಗಳಂತೆಯೇ ೩-೪ನೆಯ ಪಾದಗಳಿರುತ್ತವೆ. ೧-೨ನೆಯ ಪಾದಗಳಲ್ಲಿ ಕ್ರಮವಾಗಿ ೩,೫ರ ಹಾಗೆ ಒಟ್ಟು ೮ ಚತುರ್ಮಾತ್ರಾಗಣಗಳು (೧೨+೨೦=೩೨) : ೩-೪ನೆಯ ಪಾದಗಳೂ ಹೀಗೆಯೇ (೧೨+೨೦=೩೨) ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು. ಪೂರ್ವಾರ್ಧ ಮತ್ತು ಅಪರಾರ್ಧಗಳ ೮ನೆಯ ಗಣಸ್ಥಾನ ಗುರ್ವಂತವಾಗಿರಬೇಕು(ಎಂದರೆ ೮ನೆಯ ಗಣಸ್ಥಾನದಲ್ಲಿ ಕೊನೆಗೆ ಗುರು ತಪ್ಪದೆ ಬಂದಿರಬೇಕು. ಈಯೆರಡೂ ಅರ್ಧಗಳ ವಿಷಮಸ್ಥಾನಗಳಲ್ಲಿ ಮಧ್ಯ ಗುರುವಿನ(ಜಗಣ) ಗಣ ಬರಬಾರದು. ಆದರೆ ೬ನೆಯ ಗಣಸ್ಥಾನದಲ್ಲಿ ಮಧ್ಯೆ ಗುರುವಿನ ಗಣವಾಗಲಿ, ಸರ್ವಲಘುವಿನ (ನಲಗಣ) ಗಣವಾಗಲಿ ತಪ್ಪದೆ ಬಂದಿರಬೇಕು. ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ, ಹಾಗೆಯೇ ಮಧ್ಯಗುರುವಿನ ಗಣವಾಗಿದ್ದ ಪಕ್ಷದಲ್ಲಿಯೂ ಮೊದಲನೆಯ ಹ್ರಸ್ವದ ಮುಂದೆ ಯತಿಯಿರಬೇಕು. ೭ನೆಯ ಸರ್ವಲಘುವಿನ ಗಣವಾಗಿದ್ದಲ್ಲಿ ಮೊದಲನೆಯ ಹ್ರಸ್ವದಿಂದಲೇ ಹೊಸ ಪದ ಆರಂಭವಾಗಿರಬೇಕು."[೭೪]

"ಕಂದಪದ್ಯದ ಇತಿಹಾಸವು ಕ್ರಿ.ಶ.೮ನೆಯ ಶತಮಾನದ ಹಿಂದಕ್ಕೆ ಹೋಗುತ್ತದೆ. ನರಸಿಂಹರಾಜಪುರದ ಸಿಂಗಣಗದ್ದೆ ಜೈನಮಠದಲ್ಲಿ ದೊರೆತು ಮೈಸೂರು ಪುರಾತತ್ತ್ವ ಇಲಾಖೆಯ ಕ್ರಿ.ಶ.೧೯೨೦ನೆಯ ಇಸವಿಯ ವರದಿಯಲ್ಲಿ ಪ್ರಕಟವಾಗಿರುವ ಗಂಗಶ್ರೀಪುರುಷನ ಕಾಲದ (ಕ್ರಿ.ಶ.೭೨೬-೮೮೮) ಸಂಸ್ಕೃತ-ಕನ್ನಡ ಹಾಗೂ ಗದ್ಯ-ಪದ್ಯ ಮಿಶ್ರಿತವಾದೊಂದು ತಾಮ್ರಶಾಸನದಲ್ಲಿ (ಮೈಆರಿ.೧೯೨೦.ಪು.೨೩, ಟಿಪ್ಪಣಿ.ಪುಟ-೨೮) ಲಿಖಿತವಾಗಿರುವ ಎರಡು ಕಂದಪದ್ಯಗಳು ಪ್ರಾಯಶಃ ಪ್ರಾಚೀನತಮವಾದವು.[೭೫] ಆನಂತರದ ಶಾಸನಗಳಲ್ಲಿ ಕಂದಪದ್ಯವು ಸಾಕಷ್ಟು ಪ್ರಾಚುರ್ಯವನ್ನು ಪಡೆಯಿತೆನ್ನಬಹುದು. ಸಂಪೂರ್ಣವಾಗಿ ಕಂದಪದ್ಯದಲ್ಲಿಯೇ ರಚಿತವಾದ ಶಾಸನಗಳು ೧೦-೧೧ನೆಯ ಶತಮಾನದಲ್ಲಿ ಕಂಡುಬರುತ್ತವೆ. ಅವುಗಳೆಂದರೆ 'ಗೊಹೆಯ

ಭಟ್ಟಾರಕ'ನ ಪ್ರಶಂಸೆಯನ್ನು ಎರಡು ಕಂದಪದ್ಯಗಳಲ್ಲಿ ಮಾಡಿರುವ ಎಲೇಕೊಪ್ಪದ ಶಾಸನ[೭೬], ಚಾವವೆಗ್ಗಡೆಯ ಗುಣಗಾನದ ಮೂರು ಕಂದಗಳನ್ನು ಒಳಗೊಂಡ ರಾಜೇಂದ್ರಪುರದ ಶಾಸನ[೭೭] ಮತ್ತು ಅರಸೀಕೆರೆಯ ಶಾಸನ[೭೮] ಗಳಾಗಿವೆ. ಚಿಕ್ಕಮಗಳೂರು ಜಿಲ್ಲೆ ಗೌತಮೇಶ್ವರ ಗ್ರಾಮದ ಶಾಸನವೊಂದು[೭೯] ಸಂಪೂರ್ಣವಾಗಿ ಒಟ್ಟು ಆರು ಕಂದಪದ್ಯಗಳಲ್ಲಿ ರಚನೆಯಾಗಿದ್ದು, ಪಂಚತಂತ್ರದ ಪ್ರಸಂಗವೊಂದನ್ನು ಘಟನೆಯ ನಿರೂಪಣೆಯ ಸಂದರ್ಭದಲ್ಲಿ ಬಳಸಿಕೊಂಡಿದೆ.

ಬಹುತೇಕ ಶಾಸನಗಳಲ್ಲಿ ಕಂದಪದ್ಯದ ಸಾಮಾನ್ಯ ನಿಯಮಗಳನ್ನು ಪಾಲಿಸಿರುವುದು ಕಂಡುಬರುತ್ತದೆ. ಇಷ್ಟಾಗಿಯೂ ಸಹ ಕೆಲವೊಮ್ಮೆ ಲಕ್ಷಣೋಲ್ಲಂಘನೆಯ ಅಥವಾ ಶೈಥಿಲ್ಯದ ನಿದರ್ಶನಗಳು ಶಾಸನಸಾಹಿತ್ಯದಲ್ಲಿ ಸ್ವಲ್ಪ ಹೆಚ್ಚಾಗಿಯೇ ಕಂಡುಬಂದಿದೆ. ಜನಪ್ರಿಯ ಛಂದೋ ಪ್ರಕಾರವಾದ ಕಂದವನ್ನು ಬಳಸಲು ಕವಿಗಳೂ, ಸಾಮಾನ್ಯ ಪದ್ಯಕಾರರೂ ಮುಂದಾದ ಕಾರಣದಿಂದಾಗಿ ಈ ರೀತಿಯಾದ ದೋಷಗಳು ಕಾಣಿಸಿಕೊಂಡವು. ಪ್ರೌಢವಾದ ಚಂಪೂಪದ್ಧತಿಯ ರಚನೆಯಲ್ಲಿ ಇವು ಅಷ್ಟಾಗಿ ಕಂಡುಬರದಿದ್ದರೂ, ವೀರಗಲ್ಲುಗಳು ಮುಂತಾದವುಗಳಲ್ಲಿ ಇದು ಸಾಮಾನ್ಯವಾಯಿತೆನ್ನಬಹುದು. ನಿಯಮ ಪಾಲನೆಯಾಗದಿರುವುದಕ್ಕೆ ಕೆಲವು ಉದಾಹರಣೆಗಳನ್ನು ಗಮನಿಸಬಹುದು.

೧. ಚತುರ್ಮಾತ್ರೆಗಳ ಕಟ್ಟು ಪಾಲಿತವಾಗದಿರುವುದಕ್ಕೆ :

ಪಂಚಲಿಂಗ ಪ್ರತಿಷ್ಠೆಯ
ನೇಂ ಚದುರನೋ ತೇರನಖಿಳವೈಭವಮಂ ಶೋ
ಭಾಂಚಿತ ಗೌರೀನಾಥಂ
ಗಂ ಚೆಚ್ಚರದಿಂದೆ ಮಾಡಿಸಿದನವನೀಶಂ ॥ [೮೦]

೨. ಅನಿಯತವಾಗಿ ಪಾದವನ್ನು ಬೆಳೆಸಿರುವುದಕ್ಕೆ :

ಮಠಮಿದು ನೈಷ್ಠಿಕಮಠಮೀ
ಮಠದೊಡೆಯಂ ಬ್ರಹ್ಮಚರ್ಯಮಿಲ್ಲದೊಡಂದೀ
ಮಠದಿಂ ಪೊಱಮಡಿಸುವುದೀ
ಮಠ ಅರಸಿಕೆಱೆಯ ನೊಣಬೇಶ್ವರದ ಮಠದ ಸಂತತಿಯ ಮಠ ॥[೮೧]

೩. ಹಲವು ವಿಧದ ಶೈಥಿಲ್ಯಗಳು ಕಂಡುಬಂದಿರುವುದಕ್ಕೆ

ಬೆಳ್ಳಿಯರ ಕುಲತಿಲಕಂ
ಬಲ್ಲಿದ ಚಲದಂಕ ಜಗಕ್ಕೆ ಪೂಜಿತನೆಂದೆ

**ಯೆಲ್ಲರು ಪೊಗಳಲು ನೆಗಳ್ದಾ**

**ಕಲ್ಲ ನಿನ್ನಂತು ಪುಣ್ಯಜೀವಿಗಳೊಳರೇ ॥**[೮೨]

ಪ್ರಾಚೀನ ಶಾಸನ ಕವಿಗಳಲ್ಲಿ ಈ ರೀತಿಯಾದ ಶೈಥಿಲ್ಯವು ವಿರಳವಾಗಿದ್ದರೆ, ಅವಾರ್ಚೀನದಲ್ಲಿ ಇದು ಸಾಮಾನ್ಯವಾಗಿತ್ತು. "ಚಿತ್ರದುರ್ಗ ೩೪ರಲ್ಲಿ (ಎ.ಕ. xi, ಕ್ರಿ.ಶ.೧೧೨೩), ತಿಪಟೂರು ೧೦೧ರಲ್ಲಿ (ಎ.ಕ. xii, ೧೦೭೮), ಹೊನ್ನಾಳಿ ೮ರಲ್ಲಿ (ಎ.ಕ. vii ೧೨೨೮), ತೀರ್ಥಹಳ್ಳಿ ೧೭೭ರಲ್ಲಿ (ಎ.ಕ. viii ೧೨೫೮), ಸಾಗರ ೪ರಲ್ಲಿ (ಎ.ಕ. viii ೧೯೩), ಶಿಕಾರಿಪುರ ೧೭೩ರಲ್ಲಿ (ಎ.ಕ. vii೧೯೮), ತಿ.ನರಸೀಪುರ ೬೯ರಲ್ಲಿ (ಎ.ಕ. iii ಸು.೧೦ನೆಯ ಶತಮಾನ) – ಇನ್ನೂ ಇಂತಹ ಹಲವಾರು ಶಾಸನಗಳಲ್ಲಿ ಬರುವ ಕೆಲವು ಕಂದಗಳಲ್ಲಿ ಪ್ರಾಸ, ಗಣ, ಪಾದ ಪ್ರಮಾಣ ಮುಂತಾದ ದೃಷ್ಟಿಗಳಿಂದ ಉಲ್ಲಂಘನೆಗಳೂ ನ್ಯೂನಾಧಿಕ್ಯಗಳೂ ಕಂಡು ಬರುತ್ತವೆ. ಇದು ಆ ಛಂದಸ್ಸಿನ ಜನಪ್ರಿಯತೆ ಪ್ರಾಚುರ್ಯಗಳನ್ನು ಹೇಳುವ ಒಂದು ಅಂಶವೇ ಆಗಿದೆ."[೮೩]

ಕಂದ ಪದ್ಯವನ್ನು ವಿವಿಧ ರೀತಿಯ ವರ್ಣನೆಗಾಗಿ ಶಾಸನಕವಿಗಳು ಯಶಸ್ವಿಯಾಗಿ ಬಳಸಿದ್ದಾರೆ. ಭಾಷೆ, ಭಾವ, ಬಂಧದ ದೃಷ್ಟಿಯಿಂದ ಪರಿಣಾಮಕಾರಿಯಾಗಿ ಸಾರ್ಥಕವಾಗಿ ಬಳಸಿರುವುದಕ್ಕೆ ಶಾಸನಗಳಲ್ಲಿ ಹಲವಾರು ನಿದರ್ಶನಗಳು ದೊರೆಯುತ್ತವೆ.

ಹೊಯ್ಸಳ ದೊರೆ ವಿಷ್ಣುವರ್ಧನನನ್ನು ವಿಷ್ಣುವಿನ ಹನ್ನೊಂದನೆಯ ಅವತಾರವೆಂದು ಬಣ್ಣಿಸಿರುವ ಕಂದಪದ್ಯ :

**ವನರುಹನಾಭನ ಪನ್ನೊಂ**

**ದನೆಯವತಾರವಿದೆನಲ್ಕೆ ಯದುಕುಲದೊಳ್ ಕೃ**

**ಷ್ಣನೆ ತಾನೆ ಬಂದು ಪುಟ್ಟಿದನೆ**

**ನೆನೆಗಳ್ದನುದಾರಿ ವೀರಭುಜಬಳಗಂಗಂ ॥**[೮೪]

ಕಯ್ವಾಳದ ಸೊಗಸಾದ ಬಣ್ಣನೆಯ ಪದ್ಯ :

**ಧನದನುಮನಿಳಿಪ ಪರದರಿ**

**ಮನುಗಳನಿಳಿಪಮುನಿಗಳಿಂ ಬಗೆವಾಗಳು**

**ಮನಸಿಜನಿಳಿಪವಿಟರಿಂ**

**ವನಿತೆಯರಿನಾಡೆ ಸೊಗಯಿಕುಂ ಕಯ್ವಾಳಂ ॥**[೮೫]

ಶ್ಲೇಷೆಯಲ್ಲಿ ಸಂವತ್ಸರಾಖ್ಯ ಸಂಯೋಜನೆಯಲ್ಲಿ ಭರತಚಮೂಪನನ್ನು ಬಣ್ಣಿಸಿರುವ ಪದ್ಯ :

**ಪ್ರಭವಿಸುಗೆ ವಿಭವಮೀಶ್ವರ**

**ನಿಭಮೂರ್ತ್ತಿ ವಿರೋಧಿವಿಕ್ರಮ ಕ್ಷಯಕೇತನ**

ಶುಭಕೃದ್ಗುಣನಿನಗೆ ಚಮೂ

ಪ್ರಭುಭರತಸಹಸ್ರವತ್ಸರಂ ಪುಗುವಿನೆಗಂ ॥[೮೬]

ಪ್ರಾಸರಹಿತವಾದ ಕಂದಪದ್ಯವೊಂದು ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ಬಳ್ಳಿಗಾವೆ ಶಾಸನದಲ್ಲಿ ಬಂದಿದೆ.

ಸ್ವಸ್ತಿ ಛಲಮರ್ತ್ತಿ ಗಂಡ ಪ

ರನ್ರಿಪ ಜೀವಾಪಹರಣಕರಯಮದಂಡ

ಸದ್ಗುಣ ರತ್ನಕರಂಡಕ

ವಿಜನ ಶಿಷ್ಟೇಷ್ಟವನಜವನ ಮಾರ್ತಂಡ ॥[೮೭]

ಕಂದ ಪದ್ಯ ಸ್ವರೂಪದಲ್ಲಿ ಚಿಕ್ಕದಾದರೂ ಕವಿಗಳ ಮನಸ್ಸನ್ನು ಬಹುವಾಗಿ ಆಕರ್ಷಿಸಿದ ಛಂದೋಬಂಧವೆನ್ನಬಹುದು. ಈ ಕಾರಣದಿಂದಾಗಿ ಶಿಷ್ಟ ಸಾಹಿತ್ಯದ ಚಂಪೂ ಸಾಹಿತ್ಯ ಪ್ರಕಾರದಲ್ಲಿ ಮುಕ್ಕಾಲು ಭಾಗವನ್ನು ಆವರಿಸಿಕೊಂಡಂತೆ, ಶಾಸನ ಸಾಹಿತ್ಯ ಪ್ರಪಂಚದಲ್ಲೂ ಗಣನೀಯವಾದ ಸ್ಥಾನವನ್ನು ಪಡೆದಿತ್ತು ಎನ್ನಬಹುದು.

### ೫.೧೮ : ಅಂಶವೃತ್ತ :-

ನಾಗವರ್ಮನು ಕರ್ನಾಟಕ ವಿಷಯಜಾತಿಯೆಂದೂ, ಜಯಕೀರ್ತಿ ಕರ್ನಾಟಕ ವಿಷಯ ಭಾಷಾಜಾತಿಯೆಂದೂ ಕರೆದಿರುವ ಅಂಶಛಂದಸ್ಸಿನ ಮಟ್ಟುಗಳಾದ ಏಳೆ, ತ್ರಿಪದಿ, ಪಿರಿಯಕ್ಕರ, ಮೂಲಷಟ್ಪದಿಗಳು ಶಾಸನಗಳಲ್ಲಿಯೂ ಸಹ ಸ್ಥಾನವನ್ನು ಪಡೆದಿವೆ.

### ಏಳೆ :-

ಕರ್ನಾಟಕ ವಿಷಯ ಜಾತಿ ಸಮುದಾಯದಲ್ಲಿ ಏಳೆಯು ತೀರ ಚಿಕ್ಕಬಂಧವಾಗಿದೆ. ತ್ರಿಪದಿಗೆ ಮೂಲವಾದ ಏಳೆಯು ೨ಪಾದಗಳನ್ನು ಒಳಗೊಂಡಿದ್ದು ಮೊದಲ ಪಾದದಲ್ಲಿ ೪ ವಿಷ್ಣುಗಣಗಳು (೨ ವಿಷ್ಣು ಗಣಗಳ ಬಳಿಕ ಯತಿ ಮತ್ತು ೩ನೆಯ ವಿಷ್ಣುಗಣದಲ್ಲಿ ಒಳಪ್ರಾಸ, ಎಂದರೆ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ) ೨ನೆಯ ಪಾದದಲ್ಲಿ ೩ ಗಣಗಳಿದ್ದು ಕ್ರಮವಾಗಿ ಅವು ವಿಷ್ಣು, ಬ್ರಹ್ಮ ಮತ್ತು ವಿಷ್ಣು ಗಣವಾಗಿರುತ್ತವೆ. ಕ್ರಿ.ಶ.೪೫೦ರಿಂದ ೧೬೦೦ರ ಅವಧಿಯ ಕನ್ನಡದ ಯಾವ ಶಾಸನಗಳಲ್ಲಿಯೂ ಸಹ ಏಳೆಯು ಕಾಣಸಿಗುವುದಿಲ್ಲ'.[೮೮]

**ತ್ರಿಪದಿ :-**

ಪ್ರಾಚೀನ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ವಿರಳವಾಗಿ, ಜಾನಪದ ಸಾಹಿತ್ಯದಲ್ಲಿ ಹೇರಳವಾಗಿ ಕಂಡುಬರುವ ಕನ್ನಡದ ಛಂದೋಪ್ರಕಾರವೆಂದರೆ ತ್ರಿಪದಿ. ಹೆಸರೇ ಸೂಚಿಸುವಂತೆ ಮೂರು ಪಾದಗಳನ್ನು ಒಳಗೊಂಡಿರುವ ತ್ರಿಪದಿಯ ಒಟ್ಟು ಗಣಗಳ ಸಂಖ್ಯೆ ೧೧. ೧ ಮತ್ತು ೨ನೆಯ ಪಾದದಲ್ಲಿ ನಾಲ್ಕು ನಾಲ್ಕು ಗಣಗಳು ಮತ್ತು ೩ನೆಯ ಪಾದದಲ್ಲಿ ೩ ಗಣಗಳು ಬಂದಿರುತ್ತವೆ. ೨ನೆಯ ಪಾದದ ೨ನೆಯ ಮತ್ತು ೩ನೆಯ ಪಾದದ ೨ನೆಯ ಗಣವು ಬ್ರಹ್ಮಗಣವಾಗಿದ್ದು ಉಳಿದ ಗಣಗಳೆಲ್ಲಾ ವಿಷ್ಣುಗಣಗಳಾಗಿರುತ್ತವೆ.

ಕರ್ನಾಟಕದಾದ್ಯಂತ ಕ್ರಿ.ಶ.೭೦೦ರಿಂದ ೧೯೯೯ರ ಕಾಲದ ೧೨ ಶಾಸನಗಳಲ್ಲಿ ಮಾತ್ರ ತ್ರಿಪದಿಗಳು ಬಳಕೆಯಾಗಿದ್ದು ಅವುಗಳ ಒಟ್ಟು ಸಂಖ್ಯೆ ೩೭ ಆಗುತ್ತದೆ. ಅವುಗಳಲ್ಲಿ ೨೬ ತ್ರಿಪದಿಗಳು ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿ ಕಂಡುಬಂದಿವೆ ಎಂಬುದು ಗಮನಾರ್ಹ. ಕಾಲಾನುಕ್ರಮದಲ್ಲಿ ಶಾಸನಗಳಲ್ಲಿ ಕಂಡುಬಂದಿರುವ ತ್ರಿಪದಿಗಳ ಯಾದಿಯನ್ನು ಗಮನಿಸಬಹುದು.

| **ಶಾಸನ ಸಂಖ್ಯೆ, ಸ್ಥಳ** | **ತ್ರಿಪದಿಗಳ ಸಂಖ್ಯೆ** | **ಶಾಸನಕಾಲ** |
|---|---|---|
| ೧. ಹುಮ್ಮಚ E.C.VIII ನಗರ ೬೨ | ೫ | ಕ್ರಿ.ಶ.೮೦೦ |
| ೨. ಸೊರಬ E.C.VIIIಸೊರಬ ೨೨ | ೫ | ಕ್ರಿ.ಶ.೮೦೦ |
| ೩. ಹೇಮಾವತಿ (S.I.I. IX-I ೩೮) ಮಡಕಶಿರಾ ತಾಲ್ಲೂಕು | ೫ | ಕ್ರಿ.ಶ.೯೬೭ |
| ೪. ಚಿತ್ತವಳ್ಳಿ E.C.(R)X ಚಿಕ್ಕಮಗಳೂರು ೧೨೯ (ಚಿಮ ೯೪) | ೪ | ಕ್ರಿ.ಶ.೧೦೬೦ |
| ೫. ಬಳ್ಳಿಗಾವಿ E.C.VIIಶಿಕಾರಿಪುರ ೧೨೯ | ೪ | ಕ್ರಿ.ಶ.೧೦೭೧ |
| ೬. ಹುಮ್ಮಚ E.C.VIII ನಗರ ೩೫ | ೧ | ಕ್ರಿ.ಶ.೧೦೭೭ |
| ೭. ತಾಳಗುಂದ E.C.VIIಶಿಕಾರಿಪುರ ೧೮೫ | ೧ | ಕ್ರಿ.ಶ.೧೧೮೫ |
| ೮. ಬೆಳ್ಳೂರು E.C.(R)VII ನಾಗಮಂಗಲ ೮೦ (IVನಾಮಂ ೪೭) | ೧ | ಕ್ರಿ.ಶ.೧೯೯೮ |

ಕ್ರಿ.ಶ.೧೯೯೯ರ ನಂತರದ ಶಾಸನಗಳಲ್ಲಿ ತ್ರಿಪದಿಯು ಕಂಡು ಬರದಿರುವುದು ಆಶ್ಚರ್ಯಕರವಾಗಿದೆ.

ಮೇಲೆ ಹೆಸರಿಸಿರುವ ತ್ರಿಪದಿಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿರುವ ವೈಲಕ್ಷಣವೆಂದರೆ ಗಣ ವಿಪರ್ಯಯ, ಅಕ್ಷರಗಳು ಗಳಿತವಾಗಿರುವುದು, ಅರ್ಥಕ್ಲೇಶಗಳು, ಸಾಮಾನ್ಯ ಲಕ್ಷಣದ ಉಲ್ಲಂಘನೆಯಾಗಿರುವುದು ಆಗಿರುತ್ತದೆ. ಇಷ್ಟಾದರೂ ಸಹ ಕೆಲವೊಂದು ಶಾಸನಗಳ ತ್ರಿಪದಿಗಳಲ್ಲಿ ಕಂಡುಬಂದಿರುವ ವಿಶೇಷತೆಗಳನ್ನು ಈ ರೀತಿಯಾಗಿ ಗಮನಿಸಬಹುದು.

೧. ಕ್ರಿ.ಶ.೮೦೦ರಲ್ಲಿ ರಚಿತವಾದ ಹುಮ್ಮಚದ ಶಾಸನದಲ್ಲಿ ಜಕ್ಕಯ್ಯನೆಂಬುವನನ್ನು ಬಣ್ಣಿಸುವಾಗ ತ್ರಿಪದಿಗಳಲ್ಲಿ ೨ನೆಯ ಪಾದದ ಪುನರಾವರ್ತನೆಯ ಬಳಿಕ ಎಂದರೆ ಕೊನೆಯ ಗಣವಾಗಿ ಜಕ್ಕ, ಜಕ್ಕಯ್ಯ ಎಂಬುದಾಗಿ ವರ್ಣನೆಗೆ ವಿಷಯವಾದವನ ಹೆಸರು ಕಾಣಿಸಿಕೊಳ್ಳುವುದು ಜನಪದ ತ್ರಿಪದಿಗಳ ರಚನೆಯ ಬಂಧವನ್ನು ಅನುಸರಿಸಿರುವುದಕ್ಕೆ ಸಾಕ್ಷಿಯಾಗಿದೆ.

**[ಮೋನ]ಮುಂ ಪಾಟಿಯು[ಮ್ಮ]ನದ ನಿರ್ಮ್ಮಳಿ[ಕೆ]ಯು**
**ಮನಿತು[ಮೊ]ಳ್ಗುಣಮುಮಱಿವು ಧರ್ಮ್ಮಮುಂಜಕ್ಕ**
**ನಿನಗಲ್ಲದಿಲ್ಲ ಭುವನದೊಳ್॥**
**ಬ್ರಹ್ಮನಿಂದಱಿವು ಸುಸರ್ಮ್ಮನಾರ್ಪ್ಪಿನೊ[ಳ್ಪೊ]ರೆ**
**ಧರ್ಮ್ಮದೊಳ್ಬಲಿಯ ಸಮನೆಂಬ ಜಕ್ಕಯ್ಯ**
**ನಿರ್ಮ್ಮಲ ಸುದ್ಧ ಭುವನದೊಳ್ ॥**[೯೦]

೨. ಚಿತ್ತವಳ್ಳಿಯ ಶಾಸನದಲ್ಲಿ ನಾಲ್ಕು ತ್ರಿಪದಿಗಳಲ್ಲಿ ಒಂದು ಮಾತ್ರ ಸಲಕ್ಷಣವಾಗಿದೆ. ತ್ರಿಪದಿಯ ೬ ಮತ್ತು ೧೦ನೆಯ ಸ್ಥಾನದಲ್ಲಿ ಬ್ರಹ್ಮಗಣ ಬರಬೇಕೆಂದಿದ್ದರೂ ಇಲ್ಲಿ ವಿಷ್ಣುಗಣ ಬಂದಿದೆ. ವಿಷ್ಣುಗಣದ ಬದಲಾಗಿ ರುದ್ರಗಣವೂ ಬರಬಹುದು ಎಂಬುದಕ್ಕೆ ಹಾಗೂ ಮೊದಲನೆಯ ಪಾದದ ಮೂರನೆಯ ಗಣದಲ್ಲಿ ದ್ವಿತೀಯಾಕ್ಷರ ಪ್ರಾಸ ನಿಯತವಾಗಿ ಬಂದಿರುತ್ತದೆ. ಅಂದರೆ ತ್ರಿಪದಿಯ ಬಂಧವು ಎಷ್ಟು ಬಾಗು ಬಳುಕುಗಳನ್ನು ತಾಳಬಲ್ಲುದು ಎಂಬುದಕ್ಕೆ ಈ ಶಾಸನದ ಪದ್ಯಗಳು ನಿದರ್ಶನವಾಗಿವೆ. ಪದ ಬಂಧದ ದೇಸಿ, ನಿರರ್ಗಳತೆಯನ್ನು ಕಾಣಬಹುದಾದ ಈ ಶಾಸನದ ಒಂದು ತ್ರಿಪದಿ

**ತೋರ್ಕ್ಕೆಯ ಸೂತ್ರದಿಂದೊಕ್ಕೈಯ್ಯಂ ಬಲ್ಲಂಗೆ**
**ಮೂರ್ಕ್ಕಂಗಾ ಪದವ ನೋರ್ಪ್ಪಡವಂ ಜವರೊ**
**ಳ್ಮಾರ್ಕ್ಕೊಲ ಭೈರವಂ ಕಡುಜಾಣಂ ॥**[೯೧]

೩. ಲಕ್ಷಣಕ್ಕೆ ಅನುಗುಣವಾದ ಸರಿಯಾದ ಪ್ರಾಸವನ್ನು ಒಳಗೊಂಡ ರಚನೆಯನ್ನು ಶಿಕಾರಿಪುರದ ಶಾಸನದಲ್ಲಿ ಕಾಣಬಹುದು.

**ಮುಕ್ತಶ್ರೀಸತಿಗನುರಕ್ತಂ ಸಂಸಾರವಿ**

**ರಕ್ತಂ ನಿರ್ವಿಷಯ ನಿರಪೇಕ್ಷಂ ಶುಚಿಜೀವ**

**ನ್ಮುಕ್ತಂ ನಿರ್ವಾಣಿ ಗುಣಗಳ್ಳಂ ॥**[೨]

೪. ತ್ರಿಪದಿ ಪಂಚಮಾತ್ರಾಗಣಗಳಿಂದ ಕೂಡಿದ್ದರೂ, ಧಾಟಿ ಅಂಶ ಗಣಾತ್ಮಕವೆನ್ನುವಂತಿರುವುದಕ್ಕೆ ಶಿಕಾರಿಪುರದ ಶಾಸನದ[೩] ತ್ರಿಪದಿಯನ್ನು ಗಮನಿಸಬಹುದು.

**ಅದುಕರ್ಮಭೂಮಿಯಪ್ಪುದಱಿಂದವಲ್ಲಿ ಮಾ**

**ಡಿದ ಕರ್ಮಬೀಜಂ ಶತಕೋಟಿಫಳವನೀ**

**ವುದು ಬಿತ್ತಿ ಬೆಳೆವ ತೆಱನಂತೆ ॥**

೫. ಸದೋಷವಾದರೂ, ಅಂಶಗಣಾತ್ಮಕವಾದ, ಶಿಥಿಲದ್ವಿತ್ವದ ಪ್ರಯೋಗವನ್ನು ಒಳಗೊಂಡ ಪ್ರಯೋಗವನ್ನು ನಾಗಮಂಗಲ ತಾಲ್ಲೂಕು ಬೆಳ್ಳೂರಿನ ಶಾಸನದಲ್ಲಿ[೪] ಕಾಣಬಹುದು. ಇಲ್ಲಿ 'ದೇವಾಲಯ' ಎಂಬುದು ಲಿಖಿತರೂಪ. 'ದೇವಾಲ್ಯ' ಛಂದೋರೂಪ, 'ವೆಸರ್ವಡೆ' ಶಿಥಿಲದ್ವಿತ್ವದ ಪದ

**ಆರಣೆಯೊಳು.... ಬೆಳ್ಳೂರೊಳು ದೇವಾಲಯ**

**ಮೂರಮುಂದೆಸೆವ ಕೆಱೆ ಪೆಸರ್ವಡೆದೂ ವು**

**ದಾರಿಮಂಡಲನ ಪೆಸರಿಂದಂ ॥**

**ಪಿರಿಯಕ್ಕರ :–**

ಕನ್ನಡ ಶಾಸನಗಳಲ್ಲಿ ತ್ರಿಪದಿಯ ತರುವಾಯ ವಿಶೇಷವಾಗಿ ಬಳಕೆಗೊಂಡ ವಿಷಯಜಾತಿ ಅಕ್ಕರ. ಅಕ್ಕರಗಳಲ್ಲಿ ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ, ಕಿಱಿಯಕ್ಕರ ಎಂಬುದಾಗಿ ಐದು ವಿಧಗಳಿದ್ದು ಶಾಸನಗಳಲ್ಲಿ ಹೆಚ್ಚು ಬಳಕೆಯಾಗಿರುವುದು ಪಿರಿಯಕ್ಕರ ಮಾತ್ರ.

"ಪಿರಿಯಕ್ಕರದಲ್ಲಿ ೪ ಪಾದಗಳಿದ್ದು, ಪ್ರತಿಪಾದದಲ್ಲಿಯೂ ೧ಬ್ರಹ್ಮ, ೫ವಿಷ್ಣು ಮತ್ತು ೧ರುದ್ರಗಣ ವಿನ್ಯಾಸವಿರುತ್ತದೆ. ಯಾವುದಾದರೂ ಪಾದದಲ್ಲಿ ಬ್ರಹ್ಮಗಣ ಬರಬಹುದು. ಪ್ರತಿಯೊಂದು ಗಣದ ಕೊನೆಯಲ್ಲಿಯೂ ಯತಿ. ಆದರೆ ೪ನೆಯ ಗಣದ ಅನಂತರದಲ್ಲಿಯೂ ಪಾದದ ಮುಕ್ತಾಯದಲ್ಲಿಯೂ ಅದು ಹೆಚ್ಚು ಸ್ಫುಟವಾಗಿ ಕಾಣಿಸಿಕೊಳ್ಳುತ್ತದೆ. ಪಾದದ ೨ ಅಥವಾ ೪ನೆಯ ಗಣಸ್ಥಾನದಲ್ಲಿ ಮಾತ್ರವೇ ಅಲ್ಲದೆ ಇತರ ವಿಷ್ಣುಗಣ ಸ್ಥಾನಗಳಲ್ಲಿಯೂ ಬ್ರಹ್ಮಗಣ ಬರಬಹುದು. ೨ ಮತ್ತು ೪ನೆಯ ಗಣಸ್ಥಾನಗಳೂ ಸೇರಿದಂತೆ ಯಾವುದೇ ವಿಷ್ಣುಗಣದ ಸ್ಥಾನದಲ್ಲಿಯೂ ಬ್ರಹ್ಮ ಬರುವಂತೆಯೇ ರುದ್ರಕೂಡ ಬರಬಹುದು. ರುದ್ರ ಬರುವಾಗ್ಗೆ ಪಕ್ಕದ ಗಣವನ್ನು ಬ್ರಹ್ಮವಾಗಿಸಿ ಬರಬಹುದು. ಹಾಗೆಯೇ ವಿಷ್ಣುರುದ್ರಗಳ ಪಕ್ಕದಲ್ಲಿ ಕೂಡ ತಾನೂ ಬರಬಹುದು. ಇನ್ನು ಆದಿಯ

ಬ್ರಹ್ಮದ ಸ್ಥಾನದಲ್ಲಿ ವಿರಳವಾಗಿ, ಅಂತ್ಯದ ರುದ್ರದ ಸ್ಥಾನದಲ್ಲಿ ಇನ್ನೂ ವಿರಳವಾಗಿ ವಿಷ್ಣುವಿನ ಪರ್ಯಾಯ ಬರಬಹುದು.೯೫

ದಕ್ಷಿಣ ಕರ್ನಾಟಕದ ಕನ್ನಡ ಶಾಸನ ಪ್ರಪಂಚದಲ್ಲಿ ದೊರೆತಿರುವ ಪಿರಿಯಕ್ಕರಗಳ ಕಾಲಾನುಕ್ರಮ ವಿವರ ಈ ಕೆಳಗಿನಂತಿದೆ. ಒಟ್ಟು ಪರಿಯಕ್ಕರಗಳ ಸಂಖ್ಯೆ ೧೭

| ಶಾಸನಸಂಖ್ಯೆ | ಪದ್ಯಸಂಖ್ಯೆ | ಕಾಲ |
|---|---|---|
| ೧. ಶ್ರವಣಬೆಳಗೊಳ | ೬ | ಕ್ರಿ.ಶ.೯೮೨ |
| E.C.(R)II ೧೬೩ (೧೩೩) | | |
| ೨. ಬೆಳತೂರು | ೩ | ಕ್ರಿ.ಶ.೧೦೫೭ |
| E.C.(R)III ೬೦ (ಎ.ಕ. IVಹೆ.ಕೋ.೧೮) | | |
| ೩. ಬಳ್ಳಿಗಾವೆ | ೧ | ಕ್ರಿ.ಶ.೧೦೭೧ |
| E.C.VII (ಶಿಕಾರಿಪುರ ೧೨೯) | | |
| ೪. ಹುಮ್ಮಚ (E.C.VIIIನಗರ ೩೫) | ೧ | ಕ್ರಿ.ಶ.೧೦೭೭ |
| ೫. ಶ್ರವಣಬೆಳಗೊಳ | ೧ | ಕ್ರಿ.ಶ.೧೧೧೮ |
| E.C.(R) II ೮೨ (೭೩) | | |
| ೬. ಶ್ರವಣಬೆಳಗೊಳ | ೧ | ಕ್ರಿ.ಶ.೧೧೧೯ |
| E.C.(R)II ೫೪೭ (೩೯೭) | | |
| ೭. ಶ್ರವಣಬೆಳಗೊಳ | ೧ | ಕ್ರಿ.ಶ.೧೧೨೩ |
| E.C.(R)II ೧೭೬(೧೪೩) | | |
| ೮. ಶ್ರವಣಬೆಳಗೊಳ | ೧ | ಕ್ರಿ.ಶ.೧೨ನೆಯಶತಮಾನ |
| E.C.(R)II ೧೫೪ (೧೨೫) | | |
| ೯. ಶ್ರವಣಬೆಳಗೊಳ | ೧ | ಕ್ರಿ.ಶ.೧೨ನೆಯಶತಮಾನ |
| E.C.(R)II ೩೫೫ (೨೫೧) | | |
| ೧೦.ಶ್ರವಣಬೆಳಗೊಳ | ೧ | ಕ್ರಿ.ಶ.೧೨ನೆಯಶತಮಾನ |
| E.C.(R)II ೩೪೨ (೨೪೦) | | |

ಅಧಿಕ ಪ್ರಮಾಣದಲ್ಲಿ ಪಿರಿಯಕ್ಕರಗಳು ಕಂಡುಬಂದಿರುವುದು ಶ್ರವಣಬೆಳಗೊಳದಲ್ಲಿ. ಉಳಿದಂತೆ ಬೆಳತೂರು ಶಾಸನದಲ್ಲಿ ೩ ಮತ್ತು ಬಳ್ಳಿಗಾವೆ ಮತ್ತು ಹುಮ್ಮಚ ಶಾಸನಗಳಲ್ಲಿ ತಲಾ

ಒಂದೊಂದು ಪಿರಿಯಕ್ಕರಗಳಿವೆ. ಯಾವ ಶಾಸನಗಳಲ್ಲಿಯೂ 'ಪಿರಿಯಕ್ಕರ' ಎಂದು ಹೆಸರಿಸದೆ ಬೆಳತೂರು ಶಾಸನದಲ್ಲಿ 'ಅಕ್ಕರಂ' ಎಂದೂ, ಶ್ರವಣಬೆಳಗೊಳ, ಹುಮ್ಮಚ, ಬಳ್ಳಿಗಾವೆಯ ಶಾಸನಗಳಲ್ಲಿ 'ಅಕ್ಕರ' ಎಂದೂ ಕರೆದಿದ್ದಾರೆ. ೧೨ನೆಯ ಶತಮಾನದ ನಂತರ ಶಾಸನಗಳಲ್ಲಿ 'ಪಿರಿಯಕ್ಕರ'ವು ಕಾಣಿಸಿಕೊಳ್ಳುವುದಿಲ್ಲ.

ಶ್ರವಣಬೆಳಗೊಳದ ಕ್ರಿ.ಶ.೯೮೨ರ ಶಾಸನದಲ್ಲಿ[೭] ಒಟ್ಟು ಆರು ಪಿರಿಯಕ್ಕರಗಳು ಬಳಕೆಯಾಗಿರುವುದು ಗಮನಾರ್ಹವಾಗಿದೆ. ಈ ಶಾಸನವು ರಾಷ್ಟ್ರಕೂಟ ದೊರೆ ಮುಮ್ಮಡಿಕೃಷ್ಣನ ಮೊಮ್ಮಗನಾದ ಇಂದ್ರನ ಪ್ರಶಸ್ತಿಶಾಸನವಾಗಿದೆ. ಭಾಷೆ ಛಂದಸ್ಸುಗಳ ಬಳಕೆಯಲ್ಲಿ ಕವಿಯು ದೇಸಿಗೆ ಒಲಿದಿದ್ದಾನೆ. ಛಂದಸ್ಸಿನ ದೃಷ್ಟಿಯಿಂದ "ಒಳಗಂದಕ್ಷಿಣ ಸುಕರದುಷ್ಕರಮಂ ಪೊಱಗಣಸುಕರದುಷ್ಕರ ಭೇದಮಂ"ಎಂಬ ಪದ್ಯದ ಮೊದಲ ಪಾದದಲ್ಲಿ ೪ನೆಯ ಗಣ ಬ್ರಹ್ಮವಾಗಿರುವುದು, ೨ನೆಯ ಪಾದದ ಕೊನೆಯ ರುದ್ರಗಣ ಅಧಿಕಾಂಶವನ್ನು ಹೊಂದಿರುವುದು ಗಮನಿಸಸತಕ್ಕವುಗಳಾಗಿವೆ. "ಬಳಸುವೇಱುವ ಸುಱಿವಗಲ್ವಿನ್ತಪ್ಪ" "ಗಿರಿಗೆ ಮೆಳಸಿನ್ದಕಿಱಿದಕ್ಕಕಾಲೊಳ್ಪು"ಎಂಬ ಪದ್ಯಗಳು ಲಕ್ಷಣಬದ್ಧವಾಗಿವೆ. "ನೆಗಟ್ದ ಮಂಡಲ ಮಾಲೆ" "ಎಱಗಲಱಿಯದೆ" ಎಂಬ ಪದ್ಯಗಳು ಲಕ್ಷಣಕ್ಕೆ ಹೊಂದುವುದಿಲ್ಲ. "ಎಱಕಮಲ್ಲದೆ....." ಎಂಬುದರ ಮೊದಲೆರಡು ಪಾದಗಳಲ್ಲಿ ಬ್ರಹ್ಮದ ಪರ್ಯಾಯವಿದೆ.

ದೇಕಬ್ಬೆಯ ಶಾಸನದಲ್ಲಿ[೮] ೩ ಪಿರಿಯಕ್ಕರಗಳಿದ್ದು, ಎರಡು ಅಕ್ಕರಗಳು ಅಶುದ್ಧವಾದವುಗಳು. ಶುದ್ಧವಾದುದು ಈ ರೀತಿಯಾಗಿದೆ.

**ಪಣ್ಡಿತಾಶ್ರಯಂ ನುಗುನಾಡ ರಾಘವಂ ಮುನಿವರ ಸಿಂಗ[o][ಮೋ]ಚಕದಾವಳಂ**

**ಚಣ್ಡವಿಕ್ರಮಂ ಕುಡಿಯರ ವಲ್ಲಭಂ ಕಲಿಕಾಲ ಕರ್ಣ[o]ಮಚ್ಚರಿಪವರ**

**ಗಣ್ಡಂ ವನ್ದಿಚಿ ನ್ತಾಮಣಿ ಶಿವಪಾದ ಶೇಖರಂ ನಿಜಸುತೆಗನುರಾಗದಿಂ**

**ಮಣ್ಡ ಲಕ್ಕಿಲ್ಲಂ ಪಡಿಚನ್ದ ಮಾಗೆಶಿ ಲಾಸ್ತಂಭ[o] ಶಾಸನ ಮಾಗೆ ನಟ್ಟಂ ॥**

ಸಂಸ್ಕೃತ ವೃತ್ತ ಧಾಟಿಯಲ್ಲಿರುವ "ಎಸೆವ ಕೊಂಡಳಿ ನಾಡೊಳಗೂ.." ಎಂಬ ಶಿಕಾರಿಪುರ ಶಾಸನ ಪದ್ಯ[೯], "ಗಂಗವಾಡಿಯ ಬಸದಿಗಳೆನಿತೊಳವನಿತುಮಂ......" ಎಂಬ ಶ್ರವಣಬೆಳಗೊಳದ ಪದ್ಯ[೧೦೦]ಗಳು ಸಾಮಾನ್ಯ ಲಕ್ಷಣಕ್ಕೆ ಅನುಗುಣವಾದ ಇನ್ನಿತರ ಪದ್ಯಗಳು.

ಅಲ್ಪಪ್ರಾಣ, ಮಹಾಪ್ರಾಣ, ಪ್ರಾಸ ಮತ್ತು ಗಣಪರ್ಯಾಯವಾಗಿರುವ ವೈಲಕ್ಷಣವನ್ನು ಹೊಂದಿರುವುದನ್ನು "ಆದಿಯಾಗಿರ್ಪ್ಪುದಾರ್ಹತ ಸಮಯಕ್ಕೆ ಮೂಲಸಂಘಂ ಕೊಂಡಕುಂದಾನ್ವಯಂ" ಎಂಬ ಪಿರಿಯಕ್ಕರ ಪದ್ಯದಲ್ಲಿ[೧೦೧] ಕಾಣಬಹುದಾಗಿದೆ.

ಒಟ್ಟಾರೆ ಪಿರಿಯಕ್ಕರಗಳಲ್ಲಿ ಗಣಪರ್ಯಾಯ ಸಾಮಾನ್ಯ, ದ್ವಿತೀಯ ಮತ್ತು ಚತುರ್ಥಸ್ಥಾನಗಳಲ್ಲದೆ ಅನ್ಯತ್ರ ಕೂಡ ಬರಬಹುದು. ವಿರಳವಾಗಿ ಆದಿಯ ಸ್ಥಾನದಲ್ಲೂ ಅದು

ಸಂಘಟಿಸಬಹುದು ಎಂಬ ಅಂಶಗಳು ಈಯವಧಿಯ ಪ್ರಯೋಗಗಳ ಪರಿಶೀಲನೆಯಿಂದ ತಿಳಿದುಬರುತ್ತದೆ.

**ಮೂಲಷಟ್ಪದಿ :–**

ಕರ್ನಾಟಕ ವಿಷಯಜಾತಿಗೆ ಸಂಬಂಧಿಸಿದ ತ್ರಿಪದಿ, ಪಿರಿಯಕ್ಕರಗಳ ನಂತರ ಕಾಣಿಸಿಕೊಳ್ಳುವ ವೃತ್ತವೆಂದರೆ ಷಟ್ಪದ ಅಥವಾ ಮೂಲಷಟ್ಪದಿ. ಕನ್ನಡದ ಒಟ್ಟು ನಾಲ್ಕು ಶಾಸನಗಳಲ್ಲಿ ಆರು ಷಟ್ಪದಿಗಳು ಗೋಚರವಾಗಿದ್ದು[೧೦೨], ಅವುಗಳಲ್ಲಿ ಒಂದು ಚಿತ್ರದುರ್ಗದ ಭೀಮಸಮುದ್ರದ ಕ್ರಿ.ಶ.೧೦೬೭ರ ಶಾಸನದಲ್ಲಿ[೧೦೩] ಗೋಚರವಾಗಿದೆ. ಚತುಷ್ಪಾದಗಳಲ್ಲಿ ವೃತ್ತದಂತೆ ಅಚ್ಚಾಗಿರುವ ಪದ್ಯಪಾಠ ಹೀಗಿದೆ.

**ಮಣ್ಡಲಿಗಾವ ಪ್ರಚಣ್ಡಬಿವ್ವಿಗಂಜಯ**
**ಗೊಣ್ಡೇಶ್ವರಕ್ಕೆ ಬಿಟ್ಟುಂಬಳಿಯಂ**
**ಭಣ್ಡಣಕಳ್ಕದೆ ಗಣ್ಡನೀಯಲ್ಕಾಂಪ**
**ಗಣ್ಡಂ ಮಾಚಿಗನೆಯ್ದೆ ರಕ್ಷಿಪಂ ॥**

ಇದೊಂದು ಅಂಶಗಣ ಘಟಿತವಾದ ಪದ್ಯವಾಗಿದ್ದು ಪ್ರಾಸವಿನ್ಯಾಸವನ್ನು ಗಮನಿಸಿದರೆ ಅಂಶ ಷಟ್ಪದಿಯೆಂದು ತಿಳಿಯುತ್ತದೆ. ಹಾಗೆ ನೇರ್ಪಡಿಸಿದಾಗ –

**ಮಣ್ಡಲಿ ಗಾವಪ್ರ**
**ಚಣ್ಡಬಿವ್ವಿ ಗಂಜಯ**
**ಗೊಣ್ಡೇಶ್ವರರಕ್ಕೆ ಬಿಟ್ಟುಂಬಳಿಯಂ**
**ಭಣ್ಡಣ ಕಳ್ಕದ**
**ಗಣ್ಡನೀ ಯಲ್ಕಾಂಪ**
**ಗಣ್ಡಂಮಾ ಚಿಗನೆಯ್ದೆ ರಕ್ಷಿಪಂ ॥**

"ಈ ನಿದರ್ಶನ ಅಂಶಷಟ್ಪದಿಯ ಸಾಮಾನ್ಯಲಕ್ಷಣಕ್ಕೆ ಸರಿ ಹೊಂದುತ್ತದೆ. ಆದರೆ ೨ನೆಯ ಪಾದದ ೨ನೆಯ ಗಣವಾದ 'ವ್ವಿಗಂ ಜಯಂ' ಎನ್ನುವ ಕಡೆ ಅಂಶಗಣ ರಚನೆ ಕೆಟ್ಟಿದೆ ಎನಿಸಿದರೂ ಇಲ್ಲಿ "ಚಣ್ಡಬಿವ್ವಿಗಂಜಯ" ಎಂಬುದಾಗಿ (ರು+ವಿ) ಗಣವಿನ್ಯಾಸವನ್ನು ಅಂಗೀಕರಿಸಬಹುದಾಗಿದೆ. ಆಗ 'ವಿಷ್ಣು'ವಿಗೆ ಬದಲಾಗಿ 'ರುದ್ರ'ಗಣವನ್ನು ಅಂಗೀಕರಿಸಿದಂತಾಗುತ್ತದೆ. ಈ ರೀತಿಯಾಗಿ ಪರ್ಯಾಯ ಗಣಗಳು ಬರುವುದು ಅಂಶಛಂದಸ್ಸಿನ ಪದ್ಯಗಳಲ್ಲಿ ಸಾಮಾನ್ಯ. ಇನ್ನು ಕೊನೆಯ 'ರಕ್ಷಿಪಂ' ಎಂಬ ಗಣ ಲಕ್ಷಣಾನುಸಾರವಾಗಿ ರುದ್ರವಾಗಬೇಕಾದ್ದು ವಿಷ್ಣುವಾಗಿದೆ. ರುದ್ರಕ್ಕೆ ಪರ್ಯಾಯವಾಗಿ

ಪಾದಾಂತ್ಯಗಳಲ್ಲಿ ವಿಷ್ಣುಗಣ ಅಪೂರ್ವವಾಗಿ ಬರುತ್ತಿದ್ದಿರಬಹುದು. ಇದಕ್ಕೆ ಒಂದು ನಿದರ್ಶನ ಅಮ್ಮಿನಬಾವಿಯ ಶಾಸನದಲ್ಲಿ ಸಿಗುತ್ತದೆ.[೧೦೪] ಈ ನಂತರದ ಯಾವ ಶಾಸನದಲ್ಲೂ ಮೂಲಷಟ್ಪದಿಯು ಕಂಡುಬರುವುದಿಲ್ಲ.

ಈ ವಿವಿಧ ವೃತ್ತಗಳಲ್ಲದೆ ಛಂದಸ್ಸಿನ ದೃಷ್ಟಿಯಿಂದ ಗಮನಿಸಬೇಕಾದ ಇನ್ನೂ ಕೆಲವು ಸಂಗತಿಗಳು ಶಾಸನಗಳಲ್ಲಿ ಕಂಡುಬರುತ್ತವೆ. ಅಕ್ಷರವೃತ್ತದ ಪ್ರತಿಯೊಂದು ಪಾದದ ಕೊನೆ ಮತ್ತು ಕಂದದ ದೀರ್ಘಪಾದದ ಕೊನೆಯಲ್ಲಿ ಗುರು ಅವಶ್ಯವಾಗಿ ಬರಬೇಕು. ಆದರೆ ಶಾಸನಗಳಲ್ಲಿ ಈ ನಿಯಮವನ್ನು ಮೀರಿರುವ ಸಾಕಷ್ಟು ನಿದರ್ಶನಗಳಿವೆ. ವ್ಯಂಜನಾಂತ ಪದಗಳನ್ನು ಸ್ವರಾಂತವಾಗಿ ಬರೆಯಲಾಗಿದೆ. ಇಂಥವುಗಳನ್ನು ವ್ಯಂಜನಾಂತಗಳೆಂದು ಪರಿಭಾವಿಸಿಕೊಳ್ಳದಿದ್ದರೆ ವೃತ್ತದ ಸ್ವರೂಪವೇ ತಿಳಿಯುವುದಿಲ್ಲ. ಅಂಶಗಣವೃತ್ತಗಳಲ್ಲಿ ಬ್ರಹ್ಮ, ವಿಷ್ಣು, ರುದ್ರಗಣಗಳ ಸ್ಥಾನಪಲ್ಲಟವಾಗಿರುವುದು ಕಂಡುಬರುತ್ತದೆ. ಲಘು, ಗುರುವಿನಿಂದ ಆರಂಭವಾಗುವ ಅಂಶಗಣಗಳೂ ಅಲ್ಲಲ್ಲಿ ಗೋಚರವಾಗುತ್ತವೆ. ಈ ಅಂಶಗಳನ್ನು ಗಮನಿಸಿದಾಗ ಶಾಸನಕವಿಗಳ ಲಕ್ಷ್ಯ ಕೇವಲ ವಿಷಯ ನಿರೂಪಣೆಯಷ್ಟೇ ಆಗಿತ್ತು, ನಿಯಮ ಪರಿಪಾಲನೆಯಲ್ಲ ಎನ್ನಬಹುದು. ಹಾಗೆಯೇ ಸಾಧಾರಣ ಕವಿಯಿಂದ ರಚಿತವಾದ ಸಂದರ್ಭದಲ್ಲಿ ಈ ರೀತಿಯಾದ ಛಂದೋಭಂಗಗಳು ಆಗಿರುವ ಸಾಧ್ಯತೆಯನ್ನು ಮನಗಾಣಬಹುದಾಗಿದೆ.

**೫.೧೯ : ಪ್ರಾಸ :-**

ಕವಿರಾಜಮಾರ್ಗಕಾರನು

**ಪಾದದೊಳೆರಡನೆಯಕ್ಕರ**
**ಮಾದರದಿಂದಾದುವುದದನಱಿದನಿತಂ**
**ಪಾದದೊಳಿಡುವುದದಕ್ಕುಂ**
**ಭೇದೋಕ್ತಿಕ್ರಮ ವಿಚಾರಿತೋರು ಪ್ರಾಸಂ ॥**[೧೦೫]

ಎಂಬ ಪದ್ಯದಲ್ಲಿ ಪ್ರಾಸದ ನಿಯಮವನ್ನು ನಿರೂಪಿಸಿದ್ದಾನೆ. ಪದ್ಯದ ಪ್ರತಿಪಾದದ ಒಂದು ಮತ್ತು ಎರಡನೆಯ ಸ್ವರಾಕ್ಷರಗಳ ನಡುವೆ ಬರುವ ವ್ಯಂಜನಾಕ್ಷರವನ್ನು 'ಪ್ರಾಸ'ವೆಂದು ಕರೆಯುತ್ತಾರೆ. ಪಾದದ ಆರಂಭದಲ್ಲಿ ಬಂದರೆ ಆದಿಪ್ರಾಸ ಮತ್ತು ಅಂತ್ಯದಲ್ಲಿ ಬಂದರೆ ಅಂತ್ಯಪ್ರಾಸವಾಗುತ್ತದೆ.

ಕಾವ್ಯಗಳ ರೀತಿಯಲ್ಲಿಯೇ ಶಾಸನಗಳಲ್ಲಿಯೂ ಸಹ ಪ್ರಾಸವನ್ನು ನಿಷ್ಠೆಯಿಂದ ಶಾಸನಕವಿಗಳು ಅನುಸರಿಸುತ್ತಾ ಬಂದಿದ್ದಾರೆ. ಆದಿಪ್ರಾಸ ಪಾಲನೆಯು ಸಾಮಾನ್ಯವಾಗಿ ನಿಯಮಾನುಸಾರವಾಗಿ ಬಳಸಿದ್ದರೂ ಸಹ ಕೆಲವೊಮ್ಮೆ ವೈಚಿತ್ರ್ಯಗಳು ತಲೆದೋರಿವೆ. ಈ ರೀತಿಯಾಗಿ

ಪ್ರಾಸಪಾಲನೆ, ಪ್ರಾಸೋಲ್ಲಂಘನೆಗಳ ಪ್ರಕ್ರಿಯೆಯು ಆರಂಭದ ಕಾಲದಲ್ಲೇ ಕಂಡುಬರುತ್ತದೆ. ಕ್ರಿ.ಶ.೭ನೆಯ ಶತಮಾನಕ್ಕೆ ಸೇರಿದ ಶಾಸನಗಳಲ್ಲಿ ವರ್ಗಪ್ರಾಸಪಾಲನೆ[೧೦೬], ಸಮೀಪಪ್ರಾಸಪಾಲನೆ[೧೦೭] ಹಾಗೂ ಪ್ರಾಸದ ಪಾಲನೆಯಾಗದಿರುವ[೧೦೮] ಉದಾಹರಣೆಗಳು ಕಂಡುಬಂದಿವೆ.

ಈ ರೀತಿಯಾಗಿ ಪ್ರಾಸಪಾಲನೆ, ಪ್ರಾಸೋಲ್ಲಂಘನೆಯ ಪ್ರಕ್ರಿಯೆಯು ಶಾಸನಸಾಹಿತ್ಯ ಪರಂಪರೆಯ ಉದ್ದಕ್ಕೂ ಮುಂದುವರೆದಿದೆ. ಱ–ಳ, ರ–ಱ, ಲ–ಕ್ಷಳ, ಲ–ಗ, ರ–ಳ, ದ–ನ, ಳ–ಟಿ–ಲ, ತ–ಲ, ಕುಳ–ಲ, ಕುಳ–ಟಿ ಇತ್ಯಾದಿ ಪ್ರಾಸಜೋಡಣೆಗಳು ಕಂಡುಬಂದಿವೆ. ಪ್ರಾಸವನ್ನೇ ಬಳಸದಿರುವ ಕಂದಪದ್ಯವೊಂದು ಶಿಕಾರಿಪುರ ತಾಲ್ಲೂಕು ಬಳ್ಳಿಗಾವೆಯ ಶಾಸನದಲ್ಲಿ[೧೦೯] ಕಂಡುಬಂದಿದೆ.

**ಸ್ವಸ್ತಿ ಛಲಮರ್ತ್ಥಿಗಂಡ ಪ**
**ರನ್ರಿಪ ಜೀವಾಪಹರಣಕರಯಮದಂಡ**
**ಸದ್ಗುಣ ರತ್ನಕರಂಡಕ**
**ವಿಜನ ಶಿಷ್ಟೇಷ್ಟವನಜವನ ಮಾರ್ತಂಡ ॥**

ಪದ್ಯದ ಪ್ರತಿಯೊಂದು ಪಾದದಲ್ಲಿಯೂ ನಿಯತವಾಗಿ ಗುರು, ಇಲ್ಲವೇ ಲಘು ಬರಬೇಕೆಂಬ ನಿಯಮವಿದ್ದರೂ, ಅದನ್ನು ಮೀರಿ ಒಮ್ಮೆ ಗುರು, ಒಮ್ಮೆ ಲಘು ಬಂದಿರುವುದು ಇದೆ.

**೫.೨೦ : ಯತಿ :–**

ಪದ್ಯವನ್ನೋ ಪದ್ಯಪಾದವನ್ನೋ ಓದುವಾಗ ಅರ್ಥಸ್ಫೂರ್ತಿಗೆ ಭಂಗಬರದಂತೆ ಗೊತ್ತಾದ ಒಂದೊಂದೆಡೆಯಲ್ಲಿ ಓದುನಿಲ್ಲಿಸಲು ಸಾಧ್ಯವಾಗುವಂತಿರುವುದು ಯತಿಯ ಸಾಮಾನ್ಯ ಲಕ್ಷಣ ಯತಿಯ ನಿರ್ಬಂಧವು ಸಂಸ್ಕೃತದಲ್ಲಿ ಕಡ್ಡಾಯವಾದರೆ, ಕನ್ನಡದಲ್ಲಿ ಅದು ಐಚ್ಛಿಕ. ಹೀಗಾಗಿ ಯತಿಯ ಉಲ್ಲಂಘನೆಯೂ ಕನ್ನಡ ಶಾಸನಗಳಲ್ಲಿ ಆರಂಭದ ಕಾಲದಲ್ಲಿಯೇ ಕಂಡುಬರುತ್ತದೆ. ಯತಿಯ ಪರಿಪಾಲನೆಯಾಗಿರುವುದನ್ನು –

**ಮಾಸೇನರ್ ಪರಮಪ್ರಭಾವರಿಷಿಯರ್ + ಕಟ್ವಪ್ಪಿನಾವೆಟ್ಟದುಳ್**
**ಶ್ರೀಸಂಗಂಗಳ ಪೇಱ್ದಸಿದ್ಧಿಸಮಯಂ + ತಪ್ಪಾದೆ ನೋನ್ತಿಮ್ಬಿನಿನ್**
**ಪ್ರಾಸಾದಾನ್ತರಮಾನ್ವಿಚಿತ್ರಕನಕ + ಪ್ರಜ್ವಲ್ಯದಿನ್ಮಿಕ್ಕುದಾನ್**
**ಸಾಸಿರ್ವ್ವರ್ವ್ವರ ಪೂಜೆದನ್ದುಯೆಅವರ್ + ಸ್ವರ್ಗಾಗ್ರಮಾನೇಱಿದಾರ್**[೧೧೦]

ಎಂಬ ಪದ್ಯದಲ್ಲಿ ಕಾಣಬಹುದು.

ಹಾಗೆಯೇ ಯತಿಭಂಗವಾಗಿರುವ ಸಾಕಷ್ಟು ಉಲ್ಲೇಖಗಳು ಶ್ರವಣಬೆಳಗೊಳದ ಶಾಸನಗಳಲ್ಲಿ[೧೧೧] ಕಂಡುಬಂದಿವೆ. ಪಾದದ ಕೊನೆಯ ಯತಿಯೊಂದಿಗೆ ಆದಿಪ್ರಾಸಪಾಲನೆಯು ಕಠಿಣವಾದ ಕಾರಣದಿಂದ ಕವಿರಾಜಮಾರ್ಗಕಾರನು ಹೇಳುವಂತೆ **"ನಿಜಕ್ಕೆ ಖಂಡಪ್ರಾಸಮನತಿಶಯಮಿದೆಂದು ಯತಿಯಂ ಮಿಕ್ಕರ್"**[೧೧೨] ಎಂಬಂತೆ ಪ್ರಾಸವನ್ನೂ ಉಳಿಸಿಕೊಳ್ಳುತ್ತಾ ಯತಿಯನ್ನು ದೂರ ಮಾಡತೊಡಗಿದರೆನ್ನಬಹುದು.

## ೫.೨೧ : ಪದ್ಯಜಾತಿಗಳಿಗೆ ನಾಮನಿರ್ದೇಶನ :-

ಪದ್ಯಗಳಿಗೆ ನಾಮನಿರ್ದೇಶನ ಮಾಡುವುದು ಶಾಸನಗಳಲ್ಲಿ ಕಂಡುಬರುವ ಕ್ರಮವಲ್ಲ. ಆದರೆ ಕೆಲವೊಮ್ಮೆ ಪದ್ಯಗಳ ಆರಂಭದಲ್ಲಿ ಸಂಕೇತಗಳ ಮೂಲಕ ಸೂಚಿಸುವ ಪರಿಪಾಠವಿತ್ತು. ವೃತ್ತಗಳನ್ನು ಹೆಸರಿಸುವಾಗ ವೃತ್ತಂ, ವೃತ್ತ, ವ್ರಿತ್ಯ, ವೃ, ವ್ರಿ ಎಂಬುದಾಗಿ ಸೂಚಿಸಿರುವುದುಂಟು. ಶಿಕಾರಿಪುರದ ಶಾಸನದಲ್ಲಿ ಉತ್ಪಲ, ಉತ್ಪಲಮಾಲೆ, ಚಂಪಕಮಾಲೆ, ಮತ್ತೇಭವಿಕ್ರೀಡಿತ ಎಂಬ ನಾಮನಿರ್ದೇಶನಗಳಿವೆ. ದೇಕಬ್ಬೆಯ ಶಾಸನದಲ್ಲಿ 'ಲಲಿತವೃತ್ತ'ವೆಂದು ನಾಮನಿರ್ದೇಶನವಿದೆ.

ಕಂದಪದ್ಯಗಳನ್ನು ಸೂಚಿಸುವಾಗ ಕನ್ದಂ, ಕಂದ, ಕಂ, ಕ ಎಂಬುದಾಗಿ ಪದ್ಯದ ಆದಿಯಲ್ಲಿ ಲಿಖಿತವಾಗಿದೆ. ಪಿರಿಯಕ್ಕರವನ್ನು 'ಅಕ್ಕರ'ವೆಂದೂ, ತ್ರಿಪದಿಯನ್ನು ತ್ರಿಪದಿ, ತೃಪದಿ, ತ್ರಿವದಿ, ತ್ರಿ ಎಂದೂ ಸೂಚಿಸಲಾಗಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಹೆಗ್ಗೆರೆ ಶಾಸನದಲ್ಲಿ ಚಂಪಕಮಾಲೆಯನ್ನು 'ಚಿತ್ರಲತೆ'ಯೆಂದು'[೧೧೩] ಕರೆದಿರುವುದು ವಿಶಿಷ್ಟವಾಗಿದೆ.

ಒಟ್ಟಾರೆಯಾಗಿ ಶಾಸನಗಳ ಛಂದಸ್ಸನ್ನು ಗಮನಿಸಿದಾಗ ಹಲವಾರು ನವೀನ ಸಂಗತಿಗಳನ್ನು ಒದಗಿಸಿ, ಛಂದಸ್ಸಿನ ಪರಿಜ್ಞಾನವನ್ನು ವಿಸ್ತಾರಗೊಳಿಸಲು ಅವಕಾಶ ಮಾಡಿಕೊಡುತ್ತದೆ ಎನ್ನಬಹುದು.

## ಅಡಿ ಟಿಪ್ಪಣಿಗಳು

೧. E.C.(R)X ಅರಸೀಕೆರೆ ೯೬ (Vಅಕೆ೬೨) ಜಯಚಾಮರಾಜಪುರ ಕ್ರಿ.ಶ.೧೧೭೭

೨. E.C.(R)IX ಬೇಲೂರು ೩೮೯(Vಬೇ೧೨೪) ಬಸ್ತಿಹಳ್ಳಿ ಕ್ರಿ.ಶ.೯೫೩

೩. E.C.(R)XII ತರೀಕೆರೆ ೧೨(VIತ ೪೫) ಅಮೃತಾಪುರ ಕ್ರಿ.ಶ.೧೧೯೮

೪. E.C.(R)IV ಹುಣಸೂರು ೨೪(IVಹು೧೩೭) ಧರ್ಮಾಪುರ ಕ್ರಿ.ಶ.೧೧೬೨

೫. ಕನ್ನಡ ಸಾಹಿತ್ಯ ಚರಿತ್ರೆ ಸಂಪುಟ-೫, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೮೨, ಪುಟ-೩೦೬ (E.C.VIII ಸೊರಬ ೧೪೬ ಕ್ರಿ.ಶ.೧೩೮೮)

೬. E.C.(R)IX ಬೇಲೂರು ೨೭೪ (Vಬೇ೨೩೮) ಹಳೇಬೀಡು ಕ್ರಿ.ಶ.೧೩-೧೪ನೇ ಶತಮಾನ

೭. E.C.XI ಚಿತ್ರದುರ್ಗ ೪೩ ತಮಟಕಲ್ಲು ಕ್ರಿ.ಶ.ಸು.೫೦೦

೮. E.C.(R) ಶ್ರವಣಬೆಳಗೊಳ ೯೮(೮೮) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೯. E.C.(R)VII ಶಿಕಾರಿಪುರ ೧೦೦ ಬಳ್ಳಿಗಾವೆ

೧೦. E.C.XI ದಾವಣಗೆರೆ ೪೨ ಹರಿಹರ ಕ್ರಿ.ಶ.೧೧೬೨

೧೧. E.C.(R)Xಅರಸೀಕೆರೆ ೧೨೯(Vಅಕೆ೯) ಹಿರೀಕಲ್ಲುಬೆಟ್ಟ ಕ್ರಿ.ಶ.೧೧೭೪

೧೨. E.C.VIII ಸೊರಬ ೧೦ ಮಾವಳಿ ಕ್ರಿ.ಶ.ಸು.೮೦೦

೧೩. E.C.VIII ಸೊರಬ ೨೦ ಪಟ್ಟು ಗುಪ್ಪೆ ಕ್ರಿ.ಶ.೧೨೭೭

೧೪. E.C.(R)X ಅರಸೀಕೆರೆ ೧೬೩ (Vಅಕೆ ೧೬೩) ತಳಲೂರು ಕ್ರಿ.ಶ.೧೨ನೆಯ ಶತಮಾನ

೧೫.E.C.(R)X ಅರಸೀಕೆರೆ ೯೬(Vಅಕೆ೬೨) ಜಯಚಾಮರಾಜಪುರ (ಹಲಕೂರು) ಕ್ರಿ.ಶ.೧೧೭೭

೧೬. E.C.(R)XI ಮೂಡಗೆರೆ ೧೮(VIಮೂಡ೨೨) ಹಂತೂರು ಕ್ರಿ.ಶ.೧೧೨೯

೧೭. E.C.(R)X ಹಾಸನ ೩೯ ಅರಸೀಕೆರೆ ಕ್ರಿ.ಶ.೧೧೮೩

೧೮. E.C.VII ಹೊನ್ನಾಳಿ ೪೯ ಬೆಳಗುತ್ತಿ ಕ್ರಿ.ಶ.೧೨೪೫

೧೯. E.C.(R)VIII ಹಾಸನ ೭೦(Vಹಾ೧೦೬) ನಿಟ್ಟೂರು ಕ್ರಿ.ಶ.೧೨೨೧

೨೦. E.C.VIIIನಗರ ೩೫ ಹುಂಚ ಕ್ರಿ.ಶ.೧೦೭೭

೨೧. E.C.(R)VII ನಾಗಮಂಗಲ ೧೭೨ (IVನಾಮಂ೯೭) ಕಸಲಗೆರೆ ಕ್ರಿ.ಶ.೧೨೬೦

೨೨. E.C.(R)II ಶ್ರವಣಬೆಳಗೊಳ ೭೧(೬೪) ಚಿಕ್ಕಬೆಟ್ಟ ಕ್ರಿ.ಶ.೧೧೬೩

೨೩. E.C.VIIಶಿಕಾರಿಪುರ ೨೨೫ ಬಂದಳಿಕೆ ಕ್ರಿ.ಶ.೧೨೦೩

೨೪. E.C.VII ಹೊನ್ನಾಳಿ ೫೫ ಕುಳ್ಳಹಳ್ಳಿ ಕ್ರಿ.ಶ.೧೨ನೆಯ ಶತಮಾನ

೨೫. E.C.VIII ಸೊರಬ ೧೭೫ ಕುರುಕೋಡು ಕ್ರಿ.ಶ.೧೧೫೫

೨೬. E.C.(R)VIII ಹೊಳೆನರಸೀಪುರ ೯೫ (XVಹೊನ೧೧೨) ಮಾವನೂರು ಕ್ರಿ.ಶ.೧೨೮೨

೨೭. E.C.(R)IIಶ್ರವಣಬೆಳಗೊಳ ೩೩೬(೨೩೪) ದೊಡ್ಡಬೆಟ್ಟ ಕ್ರಿ.ಶ.೧೨ನೇ ಶತಮಾನ

೨೮. ಅರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫, ಪುಟ-೬೨, ಪದ್ಯ-೩೭೨

೨೯. ಪೂರ್ವೋಕ್ತ : ಪುಟ-೧೬೫, ಪದ್ಯ-೯೫೮

೩೦. E.C.(R)X ಅರಸೀಕೆರೆ ೩೩(V ಅಕೆ೭೯) ಕ್ರಿ.ಶ.೧೧೮೪

೩೧. E.C.XI ಚಿತ್ರದುರ್ಗ ೪೩ ತಮಟಕಲ್ಲು ಕ್ರಿ.ಶ.ಸು.೫೦೦

೩೨. E.C.(R)VII ನಾಗಮಂಗಲ ೧೭೨(IV ನಾಮ೯೭) ಕಸಲಗೆರೆ ಕ್ರಿ.ಶ.೧೨೬೦

೩೩. E.C.(R)Xಅರಸೀಕೆರೆ ೨೩೨(V ಅಕೆ೧೨೩) ಹಾರನಹಳ್ಳಿ

೩೪. E.C.(R)XIII ಶಿವಮೊಗ್ಗ ೧೪(V IIಶಿವ೪) ಕಲ್ಲೂರಗುಡ್ಡ ಕ್ರಿ.ಶ.೧೧೨೨

೩೫. E.C.VIIಶಿಕಾರಿಪುರ ೧೨೪ ಬಳ್ಳಿಗಾವೆ

೩೬. E.C.(R)II ಶ್ರವಣಬೆಳಗೊಳ ೪೪೪(೩೨೭) ಅಕ್ಕನಬಸದಿ ಕ್ರಿ.ಶ.೧೧೮೧

೩೭. S.I.I.VII ಕಾರ್ಕಳ ೨೦೨ ಮೂಡಬಿದಿರೆ ಕ್ರಿ.ಶ.೧೪೩೦

೩೮. E.C.VII ಶಿಕಾರಿಪುರ ೧೦೦ ಬಳ್ಳಿಗಾವೆ

೩೯. E.C.(R)XIಚಿಕ್ಕಮಗಳೂರು ೨೧೧(VI ಚಿಮ೧೬೧) ಸಿಂಧಗಿರಿ ಕ್ರಿ.ಶ.೧೧೩೭

೪೦. E.C.(R)IIಶ್ರವಣಬೆಳಗೊಳ ೩೩೬(೨೩೪) ದೊಡ್ಡಬೆಟ್ಟ ಕ್ರಿ.ಶ.೧೨ನೆಯ ಶತಮಾನ

೪೧. E.C.(R)X ಚನ್ನರಾಯಪಟ್ಟಣ ೭೫(V ಚಪ೨೧೦) ಬಿದಿರೆ ಕ್ರಿ.ಶ.೧೧೬೫

೪೨. E.C.(R)X ಚನ್ನರಾಯಪಟ್ಟಣ ೭೫(V ಚಪ೨೦೯) ಬಳಗಟ್ಟೆ ಕ್ರಿ.ಶ.೧೧೭೮

೪೩. E.C.VIII ನಗರ ೪೭ ಹುಮ್ಮಚ ಕ್ರಿ.ಶ.೧೦೬೨

೪೪. E.C.(R)VIII ಹಾಸನ ೧೬೭(V ಹಾ೧೧೬) ಶಾಂತಿಗ್ರಾಮ ಕ್ರಿ.ಶ.೧೧೨೨

೪೫. E.C.(R)II ಶ್ರವಣಬೆಳಗೊಳ ೧೭೬(೧೪೩) ಚಿಕ್ಕಬೆಟ್ಟ ಕ್ರಿ.ಶ.೧೧೩೧

೪೬. E.C.(R)XII ಕಡೂರು ೬೬ ಕೆರೆಸಂತೆ

೪೭. E.C.VIII ಸಾಗರ ೧೫ ನಾಡಕಲಸಿ ಕ್ರಿ.ಶ.೧೨ನೆಯ ಶತಮಾನ

೪೮. E.C.XII ತಿಪಟೂರು ೯೩ ಕರಡಾಳು ಕ್ರಿ.ಶ. ೧೧೭೪

೪೯. E.C.(R)XI ಚಿಕ್ಕಮಗಳೂರು ೧೩೭ (ರಿ೧೯೨೭-೩೪) ಗೌತಮೇಶ್ವರ ಕ್ರಿ.ಶ.೧೧ನೆಯ ಶತಮಾನ

೫೦. (ಸಂ) ಡಾ.ಕೆ.ವಿ.ಪುಟ್ಟಪ್ಪ : ಕನ್ನಡ ಕೈಪಿಡಿ, ಸಂಪುಟ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೮೮, ಪುಟ-೩೦೦

೫೧. E.C.(R)XI ಚಿಕ್ಕಮಗಳೂರು ೨೧೧(VIಚಿಮ೧೬೧) ಸಿಂಧಗಿರಿ ಕ್ರಿ.ಶ.೧೧೩೭

೫೨. (ಸಂ) ಡಾ.ಕೆ.ವಿ.ಪುಟ್ಟಪ್ಪ : ಕನ್ನಡ ಕೈಪಿಡಿ, ಸಂಪುಟ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೮೮, ಪುಟ-೩೦೦

೫೩. ಆರ್.ನರಸಿಂಹಾಚಾರ್ಯ : ಶಾಸನಪದ್ಯ ಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು : ೧೯೭೫, ಪುಟ-೨೨೦, ಪದ್ಯಸಂಖ್ಯೆ :೧೩೫೩

೫೪. ಪೂರ್ವೋಕ್ತ : ಪುಟ-೩೧೩, ಪದ್ಯಸಂಖ್ಯೆ : ೧೮೫೫

೫೫. ಡಾ.ಎಂ.ಎಂ.ಕಲಬುರ್ಗಿ: ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯, ೧೯೮೮, ಪುಟ-೨೬೭

೫೬. E.C.(R)II ಶ್ರವಣಬೆಳಗೊಳ ೧೩೬(೧೧೮) ಚಿಕ್ಕಬೆಟ್ಟ ಕ್ರಿ.ಶ.೧೧೨೦

೫೭. E.C.(R)XI ಚಿಕ್ಕಮಗಳೂರು ೧೨೯(VIಚಿರ್ಮ೯೪) ಚಿತ್ತವಳ್ಳಿ ಕ್ರಿ.ಶ.೧೧ನೆಯ ಶತಮಾನ

೫೮. E.C.(R)VIII ಹಾಸನ ೧೨೮(Vಹಾ೭೧) ಕೋರವಂಗಲ ಕ್ರಿ.ಶ.೧೧೭೩

೫೯. E.C.(R)II ಶ್ರವಣಬೆಳಗೊಳ ೧೭೦(೧೩೭) ಚಿಕ್ಕಬೆಟ್ಟ ಕ್ರಿ.ಶ.೧೧೧೭

೬೦. ಡಾ.ಕೆ.ವಿ.ಪುಟ್ಟಪ್ಪ : ಕನ್ನಡ ಕೈಪಿಡಿ, ಸಂಪುಟ-೧, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೮೮, ಪುಟ-೮೭

ಡಾ.ಎಂ.ಚಿದಾನಂದಮೂರ್ತಿಯವರು "ಈ ವೃತ್ತದಲ್ಲಿ ಪಾದಾಂತಯತಿಯು ಸ್ಪಷ್ಟವಾಗಿದೆ. ಪಾದದ ಮಧ್ಯ ೮ನೇ ಸ್ಥಾನದಲ್ಲಿ ಯತಿ ಎಲ್ಲ ಕಡೆಗೂ ಬಂದಿದೆ. ವೃತ್ತ ರತ್ನಾಕರದ ಪ್ರಕಾರ ೭+೧೦ರಲ್ಲಿ ಯತಿ ಬಂದರೆ ನತ್ಕುಟಕವೃತ್ತ, ೭+೬+೪ರಲ್ಲಿ ಬಂದರೆ ಕೋಕಿಲಕ, ಆದ್ದರಿಂದ

ಮೇಲಿನ ಪದ್ಯ ಇವೆರಡೂ ಆಗಿರದೆ ಬೇರೊಂದು ವೃತ್ತವಾಗಿರುವ ಸಾಧ್ಯತೆಯೂ ಇದೆ" ಎಂದು ಅಭಿಪ್ರಾಯಪಟ್ಟಿದ್ದಾರೆ.

ಡಾ.ಎಂ.ಚಿದಾನಂದಮೂರ್ತಿ : ಸಂಶೋಧನ ತರಂಗ-೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೧, ೧೯೭೦, ಪುಟ-೧೯೭ ಅಡಿಟಿಪ್ಪಣಿ

೬೧. ಡಾ.ಎಂ.ಬಿ.ನೇಗಿನಹಾಳ : ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪, ಪುಟ-೭೬

೬೨. E.C.(R)IIIಹೆಗ್ಗಡೆದೇವನಕೋಟೆ ೬೦(ಎ.ಕ. IVಹೆ.ಕೋ.೧೮) ಬೆಳತೂರು ಕ್ರಿ.ಶ.೧೦೫೭

೬೩. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯, ೧೯೮೮, ಪುಟ-೨೬೯, ೨೭೦

೬೪. E.C.XI ದಾವಣಗೆರೆ ೮೫ ಗಂಗನರಸಿ ಕ್ರಿ.ಶ.೧೧೪೩

೬೫. E.C.XII ತಿಪಟೂರು ೯೩ ಕರಡಾಳು ಕ್ರಿ.ಶ.೧೧೭೪

೬೬. E.C.VI ಕಡೂರು ೧೫೭ ಅಸಂದಿ ಕ್ರಿ.ಶ.೧೧೯೧

E.C.VI ಕಡೂರು ೧೫೬ ಆಸಂದಿ ಕ್ರಿ.ಶ.೧೧೯೬

E.C.VII ಚನ್ನಗಿರಿ ೬೪ ಆಲಿಕನಾಳು ಕ್ರಿ.ಶ.೧೨೧೪

೬೭. E.C.(R)II ಶ್ರವಣಬೆಳಗೊಳ ೧೭೫(೧೪೨)ಚಿಕ್ಕಬೆಟ್ಟ ಕ್ರಿ.ಶ.೧೧೩೯

೬೮. ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ : ಕನ್ನಡ ಛಂದಃಸ್ವರೂಪ : ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪, ೧೯೭೮, ಪುಟ-೨೫೦-೨೫೧

೬೯. E.C.(R)II ಶ್ರವಣಬೆಳಗೊಳ ೧೨೦(೧೦೫) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೭೦. E.C.(R)II ಶ್ರವಣಬೆಳಗೊಳ ೧೩೦(೧೧೩) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೭೧. E.C.(R)VII ನಾಗಮಂಗಲ ೬೨(IVನಾಮಂ೨೯) ಲಾಲನಕೆರೆ ಕ್ರಿ.ಶ.೧೨೧೮

೭೨. E.C.(R)II ಶ್ರವಣಬೆಳಗೊಳ ೧೩೦(೧೧೩) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೭೩. ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ : ಕನ್ನಡ ಛಂದಃಸ್ವರೂಪ : ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪, ೧೯೭೮, ಪುಟ-೨೧೪

[ಮಂಗಳ-ನಭಜಜಜಗ-೮(ಹೇಛಂದೋ-೪)

೭೪. ಪೂರ್ವೋಕ್ತ : ಪುಟ-೨೯೩

೭೫. ಪೂರ್ವೋಕ್ತ : ಪುಟ-೩೦೦

೭೬. E.C.(R)VII ನಾಗಮಂಗಲ ೧೨೨(VIನಾಮಂ೬೭) ಎಲೇಕೊಪ್ಪ ಕ್ರಿ.ಶ.೧೦-೧೧ನೆಯ ಶತಮಾನ

೭೭. E.C.(R)IX ಸಕಲೇಶಪುರ ೩೬(Vಮಂಬಾಳ೫) ರಾಜೇಂದ್ರಪುರ ಕ್ರಿ.ಶ.೧೦-೧೧ನೆಯ ಶತಮಾನ

೭೮. E.C.(R)X ಹಾಸನ ೧೬೪ ಅರಸೀಕೆರೆ

೭೯. E.C.(R)XII ಚಿಕ್ಕಮಗಳೂರು ೧೩೭(೧೯೨೭-೩೪) ಗೌತಮೇಶ್ವರ ಕ್ರಿ.ಶ.೧೧ನೆಯ ಶತಮಾನ

೮೦. E.C.(R)IV ಯಳಂದೂರು ೧ ಕ್ರಿ.ಶ.೧೬೫೪

೮೧. E.C.VII ಶಿಕಾರಿಪುರ ೨೭೭ ಕ್ರಿ.ಶ.೧೧೬೫

೮೨. E.C.VI ಕೃಷ್ಣರಾಜಪೇಟೆ ೬೯(IVಕೃಪೇ೭೬) ಚಾಕನಕೆರೆ ಕ್ರಿ.ಶ.೧೨೪೨

೮೩. ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ : ಕನ್ನಡ ಛಂದಃಸ್ವರೂಪ : ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪, ೧೯೭೮, ಪುಟ-೨೯೯

೮೪. E.C.(R)XII ಕಡೂರು ೬೭(VIಕ ೯೬) ಕೆರೆಸಂತೆ

೮೫. E.C.XII ತುಮಕೂರು ೯ ಕೈದಾಳ ಕ್ರಿ.ಶ.೧೨ನೆಯ ಶತಮಾನ

೮೬. E.C.(R)XII ಚಿಕ್ಕಮಗಳೂರು ೨೧೧(VIಚಿಮ೧೬೧)ಸಿಂಧಗಿರಿ ಕ್ರಿ.ಶ.೧೧೩೭

೮೭. E.C.VII ಶಿಕಾರಿಪುರ ೧೨೩ ಬಳ್ಳಿಗಾವೆ ಕ್ರಿ.ಶ.೧೧೫೯

೮೮. ಕ್ರಿ.ಶ.೧೭ನೆಯ ಶತಮಾನಕ್ಕೆ ಸೇರಿದ ವೀರಾಜಪೇಟೆ ತಾಲ್ಲೂಕು ಬಾಳೆಲೆ ಗ್ರಾಮದ ಶಾಸನವೊಂದು (E.C.(R)Iವೀರಾಜಪೇಟೆ ೧೦೨(೭೩) ಬಾಳೆಲೆ, ಕ್ರಿ.ಶ.೧೭ನೆಯ ಶತಮಾನ) 'ಏಳೆ'ಯಾಗಿದೆ.

ಶಾಸನಪಾಠ : ಅ) ಪಡುಬರ ಜೋಗಿ ಸಿಲಾಗೊಲಾ

ಆ) ಪಡುವರಾಯಾಸಿಲಾ

ಇ) ಪಡುಬರ ಜೋಗಿ ನಮಃ ॥ ಈ ಪದ್ಯ

ನಾಗವರ್ಮನ 'ಛಂದೋಂಬುಧಿ'ಯಲ್ಲಿನ 'ಏಳೆ' ಎಂಬ ಛಂದಸ್ಸಿಗೆ ಸರಿಹೋಗುತ್ತದೆ.

E.C.(R)I ಕೊಡಗುಜಿಲ್ಲೆ ಪುಟಸಂಖ್ಯೆ: ೬೪

೮೯. ಉಳಿದ ೮ ತ್ರಿಪದಿಗಳು ಈ ಕೆಳಗಿನ ಶಾಸನಗಳಲ್ಲಿ ಕಂಡುಬಂದಿವೆ.

ಅ) ಬಾದಾಮಿ (IAXP61) ೩ ಕ್ರಿ.ಶ.೭೦೦

ಆ) ಸವಡಿ (BKI-1 ರೋಣ೪೨) ೨ ಕ್ರಿ.ಶ.೯೭೦

ಇ) ಹೂಲಿ (E.I X VIII) ೧ ಕ್ರಿ.ಶ.೯೮೫

ಈ) ನೀಲಗುಂದ (S.I.I.IX-i-141) ೨ ಕ್ರಿ.ಶ.೧೦೭೯

ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯ ೧೯೯೮, ಪುಟ-೨೭೮

೯೦. E.C.VIIIನಗರ ೬೨ ಹುಮ್ಮಚ ಕ್ರಿ.ಶ.೮೦೦

೯೧. E.C.(R)XI ಚಿಕ್ಕಮಗಳೂರು ೧೨೯(VIಚಿರ್ಮ೫೪) ಚಿತ್ತವಳ್ಳಿ ಕ್ರಿ.ಶ.೧೦೬೦

೯೨. E.C.VII ಶಿಕಾರಿಪುರ ೧೨೯ ಬಳ್ಳಿಗಾವೆ ಕ್ರಿ.ಶ.೧೦೭೧

೯೩. E.C.VII ಶಿಕಾರಿಪುರ ೧೮೫ ತಾಳಗುಂದ ಕ್ರಿ.ಶ.೧೧೮೫

೯೪. E.C.(R)VII ನಾಗಮಂಗಲ ೮೦(IVನಾಮಂ ೪೭) ಬೆಳ್ಳೂರು ಕ್ರಿ.ಶ.೧೧೯೯

೯೫. ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ : ಕನ್ನಡ ಛಂದಃಸ್ವರೂಪ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪, ೧೯೭೮, ಪುಟ-೪೪೫-೪೪೬

೯೬. ಉಳಿದ ಪಿರಿಯಕ್ಕರಗಳು ಈ ಕೆಳಗಿನ ಶಾಸನಗಳಲ್ಲಿ ಕಂಡುಬಂದಿದೆ.

ಅ)ಶಿರೂರು (BKI-i75) ೧ ಕ್ರಿ.ಶ.೧೦೪೨

ಆ) ನರಗುಂದ (K.I.VI.II) ೧ ಕ್ರಿ.ಶ.೧೦೪೫

ಇ)ಮುನಿರಾಬಾದ್ (APGASIII13) ೧ ಕ್ರಿ.ಶ.೧೦೮೮

ಡಾ.ಎಂ.ಎಂ.ಕಲಬುರ್ಗಿ: ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು -೧೯ ೧೯೮೮, ಪುಟ-೨೭೯

೯೭. E.C.(R)II ಶ್ರವಣಬೆಳಗೊಳ ೧೬೩(೧೩೩) ಚಿಕ್ಕಬೆಟ್ಟ ಕ್ರಿ.ಶ.೯೮೨

೯೮. E.C.(R)III ಹೆಗ್ಗಡದೇವನಕೋಟೆ ೬೦(ಎ.ಕ. IVಹೆಕೋ.೧೮) ೬೦ ಕ್ರಿ.ಶ.೧೦೫೭

೯೯. E.C.VIIಶಿಕಾರಿಪುರ ೧೨೯ ಬಳ್ಳಿಗಾವೆ ಕ್ರಿ.ಶ.೧೦೭೧

೧೦೦. E.C.(R)II ಶ್ರವಣಬೆಳಗೊಳ ೧೫೪(೧೨೫) ಚಿಕ್ಕಬೆಟ್ಟ ಕ್ರಿ.ಶ.೧೨ನೆಯ ಶತಮಾನ

೧೦೧. E.C.(R)II ಶ್ರವಣಬೆಳಗೊಳ ೧೫೪(೧೨೫) ಚಿಕ್ಕಬೆಟ್ಟ ಕ್ರಿ.ಶ.೧೨ನೆಯ ಶತಮಾನ

೧೦೨. ಉಳಿದ ಮೂರು ಶಾಸನಗಳು ಈ ರೀತಿಯಾಗಿವೆ.

ಅ) ಚಡಚಣ (SII XX 133) ೩ ಪದ್ಯಗಳು ಕ್ರಿ.ಶ.೧೦೬೭

ಆ) ಅಮ್ಮಿನಭಾವಿ (BKI-ii) ೧ ಪದ್ಯ ಕ್ರಿ.ಶ.೧೦೭೧

ಇ) ಗಂಗಾಪುರ (APGI-52) ೧ ಪದ್ಯ ಕ್ರಿ.ಶ.೧೧೪೧

ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು -೧೯ ೧೯೮೮, ಪುಟ-೨೮೦

೧೦೩. E.C.XI ಚಿತ್ರದುರ್ಗ ೪೭ ಭೀಮಸಮುದ್ರ ಕ್ರಿ.ಶ.೧೦೬೭

೧೦೪. ಡಾ.ಟಿ.ವಿ.ವೆಂಕಟಾಚಲಶಾಸ್ತ್ರೀ:ಕನ್ನಡ ಛಂದಃಸ್ವರೂಪ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು-೪, ೧೯೭೮, ಪುಟ-೪೯೪, ೪೯೫

೧೦೫. (ಸಂ)ಎಂ.ವಿ.ಸೀತಾರಾಮಯ್ಯ : ಕವಿರಾಜಮಾರ್ಗಂ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು-೪, ೧೯೭೫, ಪುಟ-೩೮

೧೦೬. E.C.(R)II ಶ್ರವಣಬೆಳಗೊಳ ೧೫(೧೩) ಮತ್ತು ೮೭(೭೭) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

ಶಾಸನ ಸಂಖ್ಯೆ ೧೫(೧೩) ರಾಗದ್ವೇಷ್ವ........
ವೇಗೂರಾ........
.. ಣಾದೇವ......
ಶ್ರೀಕೀಣ್ಣಾಮಲಪುಷ್ಪ

ಶಾಸನಸಂಖ್ಯೆ ೮೭(೭೭) : ಗತಿಚೇಷ್ಟಾ....
ಯತಿಯಂ....
ಪ್ರಥಿತಾರ್ತ್ಥ.....
ಸ್ಥಿತಿದೇಹಾ......

೧೦೭. E.C.(R)II ಶ್ರವಣಬೆಳಗೊಳ ೨೫(೨೨) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

ಶಾಸನ ಪಾಠ : ಬಾಳಾಮೇಲ್ಮಿಖಿ......
ಸಾಲಾಮ್ಬಾಲ.......
ಕೇಳೊಯಿಬ್ಬಿನ್ಕಟವಪ್ರ......
ಬಾಲೇಪೆಗ್ಗೊರವಂ.....

೧೦೮. E.C.(R)II ಶ್ರವಣ ಬೆಳಗೊಳ ೯೪(೮೪) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

ಶಾಸನ ಪಾಠ : ಅನವದ್ಯನ್ನದಿ.....

ವಿನಯಾಚಾರ.....

ಉದಿತಶ್ರೀ.......

ನಿರವದ್ಯನ್ನೇರಿ......

೧೦೯. E.C.VII ಶಿಕಾರಿಪುರ ೧೨೩ ಬಳ್ಳಿಗಾವೆ ಕ್ರಿ.ಶ.೧೧೫೯

೧೧೦. E.C.(R)II ಶ್ರವಣಬೆಳಗೊಳ ೩೦(೨೭) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೧೧೧. ಅ) E.C.(R)II ಶ್ರವಣಬೆಳಗೊಳ ೯೮ (೮೮) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

ಆ) E.C.(R)II ಶ್ರವಣಬೆಳಗೊಳ ೧೧೩(೯೮) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

ಇ) E.C.(R)II ಶ್ರವಣಬೆಳಗೊಳ ೧೨೧(೧೦೬) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೧೧೨. (ಸಂ)ಎಂ.ವಿ.ಸೀತಾರಾಮಯ್ಯ : ಕವಿರಾಜಮಾರ್ಗಂ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ ಮೈಸೂರು-೪, ೧೯೭೫, ಪುಟ-೧೬

೧೧೩. E.C.XII ಚಿಕ್ಕನಾಯಕನಹಳ್ಳಿ ೨೧ ಹೆಗ್ಗೆರೆ ಕ್ರಿ.ಶ.೧೧೬೦

## ಅಧ್ಯಾಯ – ೬

## ಭಾಷೆ ಮತ್ತು ಶೈಲಿ

### ೬.೧ : ಭಾಷೆಯ ಅವಸ್ಥಾಂತರಗಳು :–

ದ್ರಾವಿಡ ಭಾಷೆಗಳಲ್ಲಿ ಕನ್ನಡ ಭಾಷೆ ಬಹಳ ಮುಖ್ಯವಾದದ್ದು. ಇತರ ದ್ರಾವಿಡ ಭಾಷೆಗಳಂತೆ ಇದು ಕೂಡ ಮೂಲ ದ್ರಾವಿಡಭಾಷೆಯಿಂದಲೇ ವಿಕಾಸಗೊಂಡಿದ್ದು. ಸುಮಾರು ಎರಡು ಸಾವಿರ ವರ್ಷಗಳ ಪ್ರಾಚೀನತೆಯನ್ನು ಇದು ಹೊಂದಿದೆ. ಕ್ರಿ.ಪೂ.ದ ಆರಂಭದಿಂದಲೂ ಈ ನಾಡನ್ನು ಕರ್ನಾಟಕ ಎಂದೇ ಕರೆಯುತ್ತಿದ್ದರು ಎಂಬುದಕ್ಕೆ ಸಾಕಷ್ಟು ಆಧಾರಗಳು ದೊರೆಯುತ್ತವೆಯಾದರೂ ಕ್ರಿ.ಶ.೪, ೫, ಮತ್ತು ೬ನೆಯ ಶತಮಾನಗಳ ಯಾವ ಶಿಲಾಶಾಸನಗಳಲ್ಲಿಯೂ 'ಕರ್ಣಾಟಕ'ವೆಂಬ ಶಬ್ದವು ದೊರೆಯುವುದಿಲ್ಲ. ಕ್ರಿ.ಶ.೪೫೦ರ ಹಲ್ಮಿಡಿ ಶಾಸನದಲ್ಲಿ ಕನ್ನಡ ಭಾಷೆಯು ಮೊದಲ ಬಾರಿಗೆ ಬರಹ ರೂಪದಲ್ಲಿ ಪರಿಚಯಗೊಳ್ಳುತ್ತದೆ. ಈ ಶಾಸನದಲ್ಲಿ ದೊರೆತಿರುವ ಕನ್ನಡವನ್ನು ಗಮನಿಸಿದರೆ ಆ ಹೊತ್ತಿಗಾಗಲೇ ಕನ್ನಡವು ಹೆಚ್ಚು ಪ್ರೌಢವಾಗಿ ಬೆಳೆದು ಬಂದಿತ್ತೆಂಬುದು ತಿಳಿಯುತ್ತದೆ. ಕನ್ನಡ ಭಾಷೆಯು ಕ್ರಿ.ಪೂ.ಒಂದನೆಯ ಶತಮಾನದಿಂದಲೂ ಅದಕ್ಕೆ ಹಿಂದೆ ಅದರಲ್ಲಿ ಸಾಹಿತ್ಯವಿರದಿದ್ದರೂ ಬಹುಕಾಲದಿಂದ ಆಡುಭಾಷೆಯಾಗಿ ಬಳಕೆಯಲ್ಲಿದ್ದಿತು ಎಂಬುದರ ಬಗ್ಗೆ ಯಾವ ಅನುಮಾನವು ಇಲ್ಲ. ಕನ್ನಡ ಭಾಷೆಯ ಪ್ರಾಚೀನತೆಯನ್ನು ಹಲ್ಮಿಡಿ ಶಾಸನವೊಂದರಿಂದಲೇ ವಿವರಿಸಿಕೊಳ್ಳಲು ಸಾಧ್ಯವಿಲ್ಲ. ಆದರೂ ಸಹ ಹಲ್ಮಿಡಿಯ ಶಾಸನವು ಭಾಷಾದೃಷ್ಟಿಯಿಂದ ಪ್ರಮುಖವಾದುದಾಗಿದೆ ಎನ್ನಬಹುದು.

ನಮ್ಮ ದೇಶದಲ್ಲಿ ಭಾಷೆಯ ಅಧ್ಯಯನವು ವೇದಗಳಷ್ಟೇ ಪ್ರಾಚೀನವಾದರೂ ಸಹ ಅಧ್ಯಯನದ ಸಂದರ್ಭದಲ್ಲಿ ಭಾರತೀಯರು ಸಂಸ್ಕೃತ, ಪ್ರಾಕೃತಗಳನ್ನು ಆ ನಂತರದಲ್ಲಿ ಆಮೇಲೆ ಪ್ರಾಂತೀಯ ಭಾಷೆಗಳನ್ನು ನಿಷ್ಠೆಯಿಂದ ಅಧ್ಯಯನ ಮಾಡುವಾಗ ಗ್ರಂಥಸ್ಥಭಾಷೆಯನ್ನು ಮಾತ್ರ ಗಮನಿಸಿ, ಆಡುಭಾಷೆ ಮತ್ತು ಶಾಸನಭಾಷೆಗಳನ್ನು ಉಪೇಕ್ಷಿಸಿದ್ದಾರೆ. "ಇದಕ್ಕೆ ಮುಖ್ಯಕಾರಣ ವೈಯಾಕರಣಿಗೆ ಎಲೆಯ ಮೇಲಿನ ಸಾಹಿತ್ಯಕ್ಕಿಂತ ಶಿಲೆಯ ಮೇಲಿನ ಸಾಹಿತ್ಯವನ್ನು ದೊರಕಿಸುವುದು ದುಸ್ಸಾಧ್ಯವಾದುದು"[೧] ಎಂಬ ಅಭಿಪ್ರಾಯವನ್ನು ಗಮನಿಸಬಹುದು. ಅಂದರೆ ಗ್ರಂಥಸಂಪಾದನೆಯ ಕ್ಷೇತ್ರದಲ್ಲಿ ನಡೆದ ಪ್ರಯತ್ನದಿಂದಾಗಿ ಸಾಕಷ್ಟು ಪ್ರಾಚೀನ ಕೃತಿಗಳು ಬೆಳಕನ್ನು ಕಾಣಲು ಸಾಧ್ಯವಾಯಿತು. ಆದರೆ ಶಿಲಾಶಾಸನಗಳ ಅಧ್ಯಯನ, ಪ್ರಕಟಣೆ, ಪರಿಷ್ಕರಣೆಯ ಕೆಲಸಗಳು ಅಷ್ಟಾಗಿ ನಡೆಯದಿದ್ದ ಕಾರಣದಿಂದ ಸಹಜವಾಗಿ ಶಾಸನಗಳ ಭಾಷೆಯ ಬಗೆಗೆ ಅಧ್ಯಯನವು ನಡೆಯಲು ಸಾಧ್ಯವಾಗಲಿಲ್ಲವೆನ್ನಬಹುದು. ಆನಂತರದಲ್ಲಿ ಶಾಸನಗಳು ಪ್ರಕಟಗೊಂಡರೂ ಸಹ ಅವುಗಳನ್ನು ಆರಂಭದ ಹಂತದಲ್ಲಿ ರಾಜಕೀಯ ಇತಿಹಾಸವನ್ನು ಬರೆಯುವಾಗ ಆಕರ ಸಾಮಗ್ರಿಯಾಗಿ

ಬಳಸಿದರು. ಆನಂತರದ ಹಂತದಲ್ಲಿ ಶಾಸನಗಳಲ್ಲಿನ ವಿವಿಧ ವಿಷಯಗಳನ್ನು ಆಧರಿಸಿ ಅಧ್ಯಯನವು ನಡೆಯಿತು. ಆದರೆ ನಿರೂಪಣಾ ಮಾಧ್ಯಮವಾದ ಭಾಷೆಯ ಬಗೆಗೆ ಅಧ್ಯಯನ ನಡೆಯಬೇಕಾದ ಅಗತ್ಯತೆ ಇದೆ ಎನ್ನಬಹುದು. ಈವರೆಗೆ ಶಾಸನಗಳ ಭಾಷೆಯ ಅಧ್ಯಯನವನ್ನು ಕುರಿತಂತೆ ಅಲ್ಪಪ್ರಮಾಣದ[೨] ಪ್ರಯತ್ನಗಳು ನಡೆದಿವೆ ಎನ್ನಬಹುದು. ಕ್ರಿ.ಶ.೪೫೦ರ ಹಲ್ಮಿಡಿಯ ಶಾಸನದಿಂದ ಕನ್ನಡಭಾಷೆಯ ಲಿಖಿತ ಸ್ವರೂಪವು ಆರಂಭವಾಗುತ್ತದೆ. ಅಲ್ಲಿಂದ ಅವ್ಯಾಹತವಾಗಿ ಶಾಸನಗಳಲ್ಲಿ ಬಳಕೆಯಾದ ಕನ್ನಡ ಭಾಷೆಯ ಸ್ವರೂಪವನ್ನು ಪರಿಚಯಿಸುವ ಒಂದು ಪ್ರಯತ್ನವನ್ನಷ್ಟೇ ಇಲ್ಲಿ ಮಾಡಲಾಗಿದೆ.

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಕರ್ನಾಟಕದ ಶಾಸನಗಳನ್ನು ಗಮನಿಸಿದಾಗ

೧. ಕನ್ನಡ ಭಾಷೆಯ ಶಾಸನಗಳು

೨. ಕನ್ನಡೇತರ ಭಾಷೆಯ ಶಾಸನಗಳು – ಎಂಬುದಾಗಿ ವಿಭಾಗಿಸಬಹುದು.

ಕನ್ನಡ ಭಾಷೆಯಲ್ಲಿಯೇ ಶಾಸನಗಳು ಹೆಚ್ಚಾಗಿ ರಚನೆಯಾಗಲು ಆರಂಭವಾದದ್ದು ೯–೧೦ನೆಯ ಶತಮಾನದ ನಂತರದಲ್ಲಿ. ಅಂದರೆ ಗಂಗರ ಕಾಲದ ನಂತರದಲ್ಲಿ ಕಲ್ಯಾಣದ ಚಾಲುಕ್ಯರು, ಹೊಯ್ಸಳರು, ಸೇವುಣರು, ಕಲಚುರಿಗಳು, ವಿಜಯನಗರದರಸರು ಹಾಗೂ ಮಾಂಡಳಿಕರು, ಸಾಮಂತರುಗಳ ಆಳ್ವಿಕೆಯ ಕಾಲದಲ್ಲಿ ಎನ್ನಬಹುದು.

ಹಾಗೆಯೇ ಮೌರ್ಯರು ಹಾಗೂ ಸಾತವಾಹನರ ಕಾಲದಲ್ಲಿ ಶಾಸನಗಳಲ್ಲಿ ಪ್ರಾಕೃತ ಭಾಷೆಯ ಬಳಕೆಯಾಗಿದ್ದರೆ, ಕದಂಬರ ಕಾಲದಲ್ಲಿ ಸಂಸ್ಕೃತ ಮತ್ತು ಕನ್ನಡದ ಬಳಕೆ ಆರಂಭವಾಗುತ್ತದೆ. ಆದರೆ ಸಂಸ್ಕೃತದ ಪ್ರಾಬಲ್ಯವೇ ಹೆಚ್ಚು ಎನ್ನಬಹುದು. ಉಳಿದಂತೆ ಕರ್ನಾಟಕದ ದಕ್ಷಿಣಭಾಗದ ಪ್ರದೇಶಗಳಲ್ಲಿ ತಮಿಳು, ತೆಲುಗು ಭಾಷೆಗಳು ಆರಂಭದಿಂದಲೂ ಶಾಸನದಲ್ಲಿ ಬಳಕೆಯಾಗತೊಡಗಿದವು. ಮುಸಲ್ಮಾನರ ಆಳ್ವಿಕೆಯ ಸಂದರ್ಭದಲ್ಲಿ ಉರ್ದು, ಪರ್ಷಿಯನ್ ಭಾಷೆಗಳ ಬಳಕೆಯೂ ಪ್ರಾದೇಶಿಕವಾಗಿ ಆಗಿದ್ದವು ಎನ್ನಬಹುದು. ಈ ರೀತಿಯಾಗಿ ಅನ್ಯಭಾಷೆಗಳ ಬಳಕೆಗೆ ಅಲ್ಲಿನ ರಾಜಕೀಯ ಪರಿಸ್ಥಿತಿಯೂ ಪ್ರಮುಖ ಕಾರಣವಾಗಿತ್ತು ಎನ್ನಬಹುದು.

ಸಾಮಾನ್ಯವಾಗಿ ಒಂದು ಶಾಸನಕ್ಕೆ ಒಂದೇ ಭಾಷೆಯನ್ನು ಬಳಸುತ್ತಿದ್ದರೂ ಸಹ ಒಮ್ಮೊಮ್ಮೆ ಒಂದೇ ಶಾಸನದಲ್ಲಿ ಹಲವಾರು ಭಾಷೆಗಳನ್ನು ಬಳಸಿರುವುದು ಇದೆ. ಅದೂ ಕನ್ನಡದ ಜೊತೆಗೆ ಸಂಸ್ಕೃತ, ತೆಲುಗು ಮೊದಲಾದ ಭಾಷೆಯ ಬಳಕೆಯಾಗಿರಬಹುದು.[೩] ಶಾಸನ ಭಾಷೆಯೂ ಯಾವುದೇ ಆಗಿದ್ದರೂ ಸಹ ಆರಂಭದ ಪ್ರಾರ್ಥನಾಶ್ಲೋಕಗಳು ಮತ್ತು ಶಾಪಾಶಯ ಭಾಗದಲ್ಲಿ ಬರುವ ಫಲಶ್ರುತಿ ಪದ್ಯಗಳು ಸಾಮಾನ್ಯವಾಗಿ ಸಂಸ್ಕೃತದಲ್ಲೇ ಇರುತ್ತವೆ. ಒಂದು ವೇಳೆ ಶಾಸನವು

ಸಂಸ್ಕೃತ ಭಾಷೆಯದಾಗಿದ್ದರೆ ಆಗ ದತ್ತಿ ವಿವರಣೆಯನ್ನು ನೀಡುವ ಭಾಗವನ್ನು ಕನ್ನಡ ಅಥವಾ ಪ್ರಾದೇಶಿಕ ಭಾಷೆಯಲ್ಲಿ ಬರೆಯುತ್ತಿದ್ದರು."[೪]

ಶಿಷ್ಟಸಾಹಿತ್ಯದಲ್ಲಿ ದೇಸೀ ಮತ್ತು ಮಾರ್ಗ ಎಂಬುದಾಗಿ ವಿಭಾಗವಿದ್ದಂತೆ ಶಾಸನಸಾಹಿತ್ಯದಲ್ಲಿ ಗ್ರಂಥಸ್ಥ ಭಾಷೆ ಮತ್ತು ಕಂಠಸ್ಥಭಾಷೆ ಎಂಬ ಎರಡು ಬಗೆಗಳನ್ನು ವಿದ್ವಾಂಸರು"[೫] ಹೆಸರಿಸುತ್ತಾ ಶಾಸನದಲ್ಲಿ ನೆಲೆನಿಂತ ಗ್ರಂಥಸ್ಥ ಭಾಷೆಯಲ್ಲಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಎಂಬ ಎರಡೇ ಪ್ರಭೇದಗಳನ್ನು ಗುರುತಿಸಿದ್ದಾರೆ. ಕನ್ನಡ ಭಾಷೆಯಾದರೋ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಎಂಬುದಾಗಿ ಅವಸ್ಥೆಗಳನ್ನು ಕಂಡಿದ್ದರೂ ಸಹ ಶಾಸನಗಳ ಸಂದರ್ಭದಲ್ಲಿ ಗ್ರಂಥಸ್ಥ ಭಾಷೆಯಲ್ಲಿ ಮಾತ್ರ ಸ್ಥೂಲವಾಗಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಎಂಬ ಎರಡೇ ಪ್ರಭೇದಗಳು ಕಂಡುಬರುತ್ತವೆ ಎನ್ನಬಹುದು. ಇದಕ್ಕೆ ಕಾರಣವೆಂದರೆ "ಶಾಸನಗಳೆಲ್ಲಾ ಕೊನೆಯವರೆಗೆ ಚಂಪೂ ಪ್ರಕಾರವನ್ನೇ ಅನುಸರಿಸಿದ ಕಾರಣ ಚಂಪುವಿಗೆ ಅವಶ್ಯವೆನಿಸುವ ಅಕ್ಷರವೃತ್ತ ಮತ್ತು ಕಂದಗಳಿಗೆ ಯೋಗ್ಯವಲ್ಲದ ನಡುಗನ್ನಡ, ಹೊಸಗನ್ನಡಗಳನ್ನು ಕಡೆಗಣಿಸಿ, ಅವು ಒಂದು ಕಾಲಕ್ಕೆ ಪೂರ್ವದ ಹಳಗನ್ನಡ, ಇನ್ನೊಂದು ಕಾಲಕ್ಕೆ ಹಳಗನ್ನಡ ಹೀಗೆ ಎರಡೇ ಭಾಷಾಪ್ರಭೇದಗಳನ್ನು ಸೀಮಿತಗೊಳಿಸಿಕೊಂಡವು"[೬] ಶಾಸನಗಳಲ್ಲಿ ಬಳಸುತ್ತಿದ್ದ ಕನ್ನಡ ಭಾಷೆಯ ಸ್ವರೂಪವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಾಹಿತ್ಯದ ಸಂದರ್ಭದಲ್ಲಿ ಪ್ರಸ್ತಾಪಿಸುವ ವಿಭಾಗಕ್ಕೆ ಅನುಗುಣವಾಗಿ ಕಂಡುಬರದಿರುವ ಸಾಧ್ಯತೆಯೂ ಕಂಠಸ್ಥಭಾಷೆಯಲ್ಲಿ ಇರುತ್ತದೆಯೆನ್ನಬಹುದು. ಉದಾಹರಣೆಗೆ : ಕ್ರಿ.ಶ.೧೩೦೩ರ ಕಾಲದ ಬಾಗವಾಳದ ಶಾಸನಪಾಠವನ್ನು ಗಮನಿಸಬಹುದು.

**"ಸೋವೆಯ ದಣ್ಣಾಯಕರು ಬೆಂಮತೂರ ದುರ್ಗವನಾಳುವಲ್ಲಿ**
**ಸೇವಣರಣಿಯ ನಾಯ್ಕ ಕಂಪಿಲದೇವನು ಹೊಳಲಕೆಜಿತಿಗೆ**
**ಯತ್ತಿ ಬಂದಲ್ಲಿ ಆ ಬೆಮತೂರ ಕಲ್ಲಿಂದೆತ್ತಿ ಹೋಗಿ ಆ**
**ಕಂಪಿಲನೊಡನೆ ಹೊಯ್ದು ಹೋಕು.... ಟ್ಟಾಡಿಬಿದ್ದ ವೀರಗಲ್ಲು"[೭]**

ಸಾಹಿತ್ಯ ಚರಿತ್ರೆಯ ವಿಭಾಗದ ಕ್ರಮದಿಂದ ಗಮನಿಸಿದರೆ ಇದು ನಡುಗನ್ನಡ ಕಾಲವಾಗುತ್ತದೆ. ನಡುಗನ್ನಡದಲ್ಲಿ ಕಂಡುಬರಬಹುದಾದ ಅಂತ್ಯಾನುಸ್ವಾರಗಳೆಲ್ಲ ಕಣ್ಮರೆಯಾಗಿ ಈ ಶಾಸನವು ಹೊಸಗನ್ನಡ ಭಾಷೆಯಂತೆ ಗೋಚರಿಸುತ್ತದೆ."[೮]

ಸ್ಥೂಲವಾಗಿ ಹೇಳುವುದಾದರೆ ವಿದ್ವಾಂಸರಾದ ಹಾಗೂ ಪರಿಣಿತರಾದ ಶಾಸನಕವಿಗಳು ಒಂದು ವೇಳೆ ಶಾಸನವನ್ನು ರಚಿಸಿದ್ದರೆ ಆಗ ಗ್ರಂಥಸ್ಥವಾದ ಭಾಷೆಯನ್ನು ಬಳಸುತ್ತಿದ್ದರು. ಆಗ ಸಹಜವಾಗಿ ಆ ಶಾಸನಗಳಲ್ಲಿ ಪೂರ್ವದ ಹಳಗನ್ನಡ ಮತ್ತು ಹಳಗನ್ನಡ ಸ್ವರೂಪದ ಭಾಷೆಯ

ಬಳಕೆಯಾಗುತ್ತಿತ್ತು. ಹಾಗೆಯೇ ರಾಜಾಸ್ಥಾನದಿಂದ ದೂರದ ಪ್ರದೇಶದಲ್ಲಿ ಸ್ಥಳೀಯ ಮಟ್ಟದಲ್ಲಿ ಶಾಸನವು ರಚನೆಯಾಗಿದ್ದರೆ ಆಗ ಅಲ್ಲಿ ಕಂಠಸ್ಥವಾದ ಅಂದರೆ ಜನಸಾಮಾನ್ಯರ ಆಡುಭಾಷೆಯ ಬಳಕೆಯಾಗುತ್ತಿತ್ತು ಎನ್ನಲು ಸಾಧ್ಯವಿದೆ. ಹೀಗಾಗಿ ಇಂತಹ ಕಡೆಗಳಲ್ಲಿ ಕಾಣಿಸಿಕೊಳ್ಳುವ ಶಾಸನಗಳಲ್ಲಿ ವಿಶೇಷವಾಗಿ ಗದ್ಯಶಾಸನಗಳಲ್ಲಿ ನಿರಾಡಂಬರವಾದ ಸರಳವಾದ ಭಾಷೆಯನ್ನು ಕಾಣಲು ಸಾಧ್ಯವಾಗುತ್ತದೆ ಎನ್ನಲು ಅವಕಾಶವಿದೆ. ಈ ಹಿನ್ನೆಲೆಯಲ್ಲಿ ಶಾಸನಗಳಲ್ಲಿ ಕಂಡುಬರುವ ಭಾಷಾಸ್ವರೂಪವನ್ನು ನಿರ್ವಚಿಸಬಹುದು.

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಶಾಸನಗಳ ಭಾಷಾಸ್ವರೂಪವನ್ನು ನಿರ್ವಚಿಸುವಾಗ –

೧. ಕ್ರಿ.ಶ.೪೫೦ರಿಂದ ೮೫೦ರವರೆಗಿನ ಪೂರ್ವದ ಹಳಗನ್ನಡ ಭಾಷೆ

೨. ಕ್ರಿ.ಶ.೮೫೦ರಿಂದ ಕ್ರಿ.ಶ.೧೩೫೦ರ ಕಾಲದ ಹಳಗನ್ನಡ–ನಡುಗನ್ನಡದ ಭಾಷೆ

೩. ವಿಜಯನಗರ ಕಾಲದ ಶಾಸನಗಳ ಭಾಷೆ ಎಂಬುದಾಗಿ ಪರಿಗಣಿಸಬೇಕಾಗುತ್ತದೆ.

ಈ ರೀತಿಯಾಗಿ ಪರಿಗಣಿಸಲು ಶಿಷ್ಟಸಾಹಿತ್ಯ ಅಥವಾ ಗ್ರಂಥಸ್ಥ ಸಾಹಿತ್ಯ ಪ್ರಕಾರದಲ್ಲಿ ಕಾಲದಿಂದ ಕಾಲಕ್ಕೆ ಚಂಪೂ–ವಚನ–ರಗಳೆ–ಷಟ್ಪದಿ–ತ್ರಿಪದಿ–ಸಾಂಗತ್ಯ ಹೀಗೆ ಸಾಹಿತ್ಯ ಪ್ರಕಾರದಲ್ಲಿ ಬದಲಾವಣೆಗೊಂಡಂತೆ ಶಾಸನ ಪ್ರಪಂಚದಲ್ಲಿ ಬದಲಾವಣೆಗಳು ಆಗಲಿಲ್ಲ. ಇದಕ್ಕೆ ಬಹುಶಃ ಶಾಸನ ಕವಿಗಳು ಶಾಸನ ರಚನೆಯ ಸಂದರ್ಭದಲ್ಲಿ ಚಂಪೂ ಪ್ರಕಾರದ ಸಿದ್ಧಮಾದರಿಯನ್ನು ಅಳವಡಿಸಿಕೊಂಡದ್ದು, ಶಾಸನ ನಿರೂಪಣಾ ವಿಧಾನವು ಸದಾ ಕಾಲ ಪ್ರೌಢವಾಗಿರಬೇಕೆಂಬ ನಿರೀಕ್ಷೆ, ಶಾಸನಗಳನ್ನು ರಚಿಸಲು ಬಳಸುತ್ತಿದ್ದ ಮಾಧ್ಯಮಗಳ ಇತಿಮಿತಿಯೂ ಸಹ ದೇಸಿಯವಾದ ಛಂದೋಪ್ರಕಾರಗಳ ಬಳಕೆಯ ಕಡೆಗೆ ಶಾಸನಕವಿಗಳು ಹೊರಳದಿರಲು ಕಾರಣವಾಗಿರಬಹುದು. ಸಹಜವಾಗಿ ಅಕ್ಷರವೃತ್ತಗಳು, ಕಂದಪದ್ಯ, ಖ್ಯಾತಕರ್ನಾಟಕ ವೃತ್ತಗಳನ್ನು ಬಳಸಿ ಶಾಸನ ರಚಿಸುವಾಗ ಶಾಸನದ ಭಾಷೆಯು ಪ್ರೌಢವಾಗಿರುವುದು ಅನಿವಾರ್ಯವಾಗುತ್ತಿತ್ತು. ಈ ರೀತಿಯಾದ ಪ್ರೌಢಶಾಸನಗಳ ರಚನೆಯಲ್ಲಿ ಪಂಡಿತರೂ, ವಿದ್ಯಾವಂತರಾದವರೂ ತೊಡಗಿಸಿಕೊಳ್ಳುತ್ತಿದ್ದರು. ಹಾಗೆಯೇ ಸ್ಥಳೀಯವಾಗಿ ರಾಜಾಶ್ರಯದಿಂದ ದೂರದಲ್ಲಿ ರಚನೆಯಾಗುತ್ತಿದ್ದ ಶಾಸನಗಳಲ್ಲಿ ಜನಸಾಮಾನ್ಯರ ಆಡುಭಾಷೆಯ ಅಥವಾ ಕಂಠಸ್ಥಭಾಷೆಯ ಬಳಕೆಯಾಗುತ್ತಿತ್ತು ಎನ್ನಬಹುದು. ಈ ಹಿನ್ನೆಲೆಯಲ್ಲಿ ಶಾಸನಗಳಲ್ಲಿ ಕಂಡುಬರುವ ಭಾಷಾಸ್ವರೂಪವನ್ನು ಗಮನಿಸಬಹುದಾಗಿದೆ.

## ೬.೨ : ಪೂರ್ವದ ಹಳಗನ್ನಡ ಭಾಷಾಸ್ವರೂಪ :-

ಕ್ರಿ.ಶ.೪೫೦ರಿಂದ ಕ್ರಿ.ಶ.೮೫೦ರವರೆಗಿನ ಈ ಕಾಲಾವಧಿಯ ಭಾಷೆಯ ರೂಪವನ್ನರಿಯಲು ದೊರೆತಿರುವ ಶಾಸನಗಳು ಹೆಚ್ಚು ಪ್ರಮುಖ ಪಾತ್ರವನ್ನು ವಹಿಸುತ್ತವೆ. ಆರಂಭದ ಕಾಲದಲ್ಲಿ ರಚಿತವಾದ ಯಾವ ಸಾಹಿತ್ಯಕೃತಿಯೂ ಉಪಲಬ್ಧವಾಗಿಲ್ಲ. ಈ ಕಾರಣದಿಂದ ಕಾಲದಿಂದ ಕಾಲಕ್ಕೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ರಚನೆಯಾದ ಶಾಸನಗಳನ್ನು ಆಧರಿಸಿ ಭಾಷೆಯ ಸ್ವರೂಪವನ್ನು ಅರಿಯಬೇಕಾಗುತ್ತದೆ. ವಿಶೇಷವಾಗಿ ನೃಪತುಂಗ ಪೂರ್ವಯುಗದ ಗದ್ಯಶಾಸನಗಳು, ಪದ್ಯಶಾಸನಗಳ ಭಾಷೆಯು ವಿಷಯ ನಿರೂಪಣೆಯ ಸಂದರ್ಭದಲ್ಲಿ ಮತ್ತು ಸಾಹಿತ್ಯಕವಾಗಿ ವಹಿಸಿದ ಪಾತ್ರವನ್ನು ಗಮನಿಸುವುದು ಇಲ್ಲಿಯ ಉದ್ದೇಶವಾಗಿದೆ.

ಕನ್ನಡದ ಮೊದಲನೆಯ ಶಾಸನವಾದ ಹಲ್ಮಿಡಿ ಶಾಸನವು[೯೯] ಪೂರ್ವದ ಹಳಗನ್ನಡ ಭಾಷೆಯ ಸ್ವರೂಪವನ್ನು ನಿರೂಪಿಸುವಲ್ಲಿ ಪ್ರಮುಖಪಾತ್ರವಹಿಸಿದೆ. "ಈ ಶಾಸನದ ಭಾಷೆಯು ಸಾಕಷ್ಟು ಬೆಳೆದ ಸಮ್ಮಿಶ್ರಿತ ಭಾಷೆಯಾಗಿದೆ. ಗ್ರಾಂಥಿಕ ಭಾಷೆಗಿಂತ ಹೆಚ್ಚು ಆಡುನುಡಿಗೆ ಹತ್ತಿರವಾಗಿದೆ. ಹಳ್ಳಿಯ ಜನರಿಗೆ ಸಹ ಅರ್ಥವಾಗಬೇಕೆಂಬ ಉದ್ದೇಶದ ಸಾಧನೆಗೆ ಬರೆಯಲ್ಪಟ್ಟಿದೆ. ಸಂಸ್ಕೃತ, ಕನ್ನಡ ಎಂಬ ಬೇಧಭಾವವಿಲ್ಲದೆ ಶಾಸ್ತ್ರ ನಿಯಮಕ್ಕೆ ಒಗ್ಗಲಿ ಬಿಡಲಿ ಎರಡೂ ಭಾಷೆಗಳ ಶಬ್ದಗಳ ಹೊಂದಾಣಿಕೆ ಇಲ್ಲಿ ಆಗಿರುವುದು ಕಂಡುಬರುತ್ತದೆ"[೧೦] ಎಂಬ ಅಭಿಪ್ರಾಯವನ್ನು ಗಮನಿಸಿದಾಗ ಸಂಸ್ಕೃತ ಭಾಷೆಯ ಪ್ರಭಾವಕ್ಕೆ ಒಳಗಾಗಿದ್ದೂ ಕನ್ನಡವು ತನ್ನತನವನ್ನು ಸ್ಥಾಪಿಸಲು ಪ್ರಯತ್ನಿಸುತ್ತಿತ್ತು ಎಂಬುದು ಮನವರಿಕೆಯಾಗುತ್ತದೆ. 'ವಿಜ ಅರಸಜ್ಗೆ' ಎಂದು ಬಿಡಿಸಿ ಬರೆದ ಶಾಸನಕಾರ 'ವಿಜಾರಸರುಂ' ಎಂಬಲ್ಲಿ ಸವರ್ಣದೀರ್ಘಸಂಧಿಯನ್ನು ಸಾಧಿಸಿದ್ದು ವಿಲಕ್ಷಣವಾಗಿದೆ. 'ಪೊಗಟೆ ಪ್ೊಟ್ಟಣ' ಎಂಬುದು ಮತ್ತೊಂದು ವಿಲಕ್ಷಣ ರೂಪವಾಗಿದೆ. 'ಪಲ್ಮಿಡಿಉಂ, ಮೂಟಿವಳ್ಳಿಉಂ" ಎಂಬ ಶಿಥಿಲಸಂಧಿ, 'ತ್ಯಾಗಸಂಪನ್ನಂ' ಮೃಗೇಶನಾಗೇನ್ದ್ರಾಭೀಳರ್, ಮೃಗೇಶ ನಾಗಾಹ್ವಯರ್, ಕುಲಾಮಲವ್ಯೋಮತಾರಾಧಿನಾಥನ್, ಪಶುಪ್ರದಾನಶೌರ್ಯೋದ್ಯಮಭರಿತೋನ್' ಎಂಬ ಬಂಧುರ ಸಂಸ್ಕೃತ ರೂಪಗಳು ಈ ಶಾಸನದಲ್ಲಿ ಕಾಣಸಿಗುತ್ತವೆ. ಹಾಗೆಯೇ ಸಪ್ತಮಿ ಪ್ರತ್ಯಯ ಉಳ್‌ಗೆ ಉದಾಹರಣೆಗೆ 'ನಾಡುಳ್, ಆಹವದುಳ್ ಎಂಬವುಗಳನ್ನೂ, ಕಲಭೋರನಾ, ಭಟರಿಯಾ, ಪೆತ್ತಜಯನಾ, ದೇಶದಾ, ಇರ್ವರಾ ಎಂಬಲ್ಲಿ ಷಷ್ಠೀ ಪ್ರತ್ಯಯದ ದೀರ್ಘತೆಯನ್ನೂ, ಅಪ್ಪೋರ್, ವಿಟ್ಟಾರ್ ಎಂಬಲ್ಲಿ ಪ್ರಥಮಪುರುಷ ಬಹುವಚನ ಓರ್, ಆರ್ ಪ್ರತ್ಯಯಗಳು 'ಸುತನ್ಗೆ' ಎಂಬಲ್ಲಿ ಅನುಸ್ವಾರದ ಬದಲು ವರ್ಗಾಂತ ವ್ಯಂಜನಾಕ್ಷರವು ಬಳಕೆಯಾಗಿರುವುದನ್ನು ಗಮನಿಸಬಹುದು. ಈ ಶಾಸನದಲ್ಲಿಯ 'ಪೆತ್ತಜಯನ್' ಎಂಬ ಸಮಾಸವು ಕನ್ನಡ ಸಂಸ್ಕೃತಗಳು ಸಹಜವಾಗಿ ಬೆರೆತಿರುವುದಕ್ಕೆ ಉದಾಹರಣೆಯಾಗಿದೆ. 'ಪೊಗಟೆಪ್ೊಟ್ಟಣ' ಎಂಬ ಕರ್ಮಣಿ ಪ್ರಯೋಗವು ಕನ್ನಡ ಭಾಷೆಯ

ಮೇಲೆ ಸಂಸ್ಕೃತದ ಗಾಢಪ್ರಭಾವವಿರುವುದಕ್ಕೆ ಸಾಕ್ಷಿಯಾಗಿದೆ. ಹಾಗೆಯೇ 'ಕುಲಾಮಲವ್ಯೋಮ ತಾರಾಧಿನಾಥನ್' ಎನ್ನುವಲ್ಲಿ ಗದ್ಯದ ನಡುವೆಯೇ ಪದ್ಯದ ಲಯವನ್ನು ಶಾಸನ ರಚನಕಾರನು ಮೂಡಿಸಿರುವುದು ವಿಶೇಷವಾಗಿದೆ. ಈ ಶಾಸನದಲ್ಲಿ ಬಳಕೆಯಾಗಿರುವ 'ವಿಟ್ಟಾರ್' ಎಂಬುದು ಪೂರ್ವದ ಹಳಗನ್ನಡ ರೂಪವಾಗಿದ್ದು, ಮುಂದೆ 'ವ'ಕಾರ 'ಬ'ಕಾರವಾಗಿ ಹಳಗನ್ನಡದಲ್ಲಿ ಪರಿವರ್ತನೆಯಾದುದ್ದನ್ನು ಗಮನಿಸಬಹುದು. ಒಟ್ಟಾರೆ ಹಲ್ಮಿಡಿ ಶಾಸನದ ಭಾಷೆಯು ಪೂರ್ವದ ಹಳಗನ್ನಡದ ಭಾಷಾಸ್ವರೂಪವನ್ನು ನಿರೂಪಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತದೆ ಎನ್ನಬಹುದು.

ಕ್ರಿ.ಶ.೫೨೦ – ೫೫೦ರ ಸುಮಾರಿನ ಗಂಗರ ಕಾಲದ ಶಾಸನವೊಂದರಲ್ಲಿ[೧೧] ಸಾಕಷ್ಟು ಕನ್ನಡ ಪದಗಳ ಬಳಕೆಯಾಗಿದ್ದರೂ ಸಹ ಹ್ರಸ್ವ, ದೀರ್ಘ, ಒತ್ತು, ಸಂಧಿದೋಷಗಳಿಂದ ಕೂಡಿ ಭಾಷೆಯು ಹೊಂದಿಕೊಳ್ಳಲು ಹೆಣಗುತ್ತಿರುವುದರ ಕುರುಹುಗಳು ಕಂಡುಬರುತ್ತವೆ. ಹಲ್ಮಿಡಿ ಶಾಸನದ ನಂತರದಲ್ಲಿ ಗದ್ಯಶಾಸನಗಳು ಕಾಣಸಿಗುವುದು ೭ನೆಯ ಶತಮಾನದಲ್ಲಿ. ಆದರೆ ಈ ಶತಮಾನದ ಗದ್ಯಶಾಸನಗಳಲ್ಲಿ ಕಲ್ಪನಾಂಶ, ಸಾಹಿತ್ಯಕ ಅಂಶಗಳೇನೂ ಅಷ್ಟಾಗಿ ಕಂಡುಬರುವುದಿಲ್ಲ.

ಕ್ರಿ.ಶ.೭ನೆಯ ಶತಮಾನದ ಕಿಗ್ಗದ ಶಾಸನವೊಂದರಲ್ಲಿ"[೧೨] ಶಾಪಾಶಯ ನಿರೂಪಣೆಯ ಸಂದರ್ಭದಲ್ಲಿ ಸ್ಪಷ್ಟತೆಗಾಗಿ ಫಲಶ್ರುತಿಯನ್ನು ದೀರ್ಘಿಸಿಕೊಂಡಿರುವುದು ಕಂಡುಬರುತ್ತದೆ. 'ಅದಾನ್ ಅಟಿವೋರುಂ, ಅಟಿವಲ್ಪಟ್ಟುದೋರ್, ಮನದೆ ನೆನೆವೋರುಂ, ಅಟಿಮೆನ್ ಎಂದುಪಾದೇಶಂ ಕೊಡುವೋರುಂ' ಎಂಬಲ್ಲಿ ದಾನವನ್ನು ನಾಶಮಾಡಬಹುದಾದವರ ಸ್ವರೂಪದ ಬಣ್ಣನೆಯಿದ್ದರೆ 'ಪಂಚಮಹಾಪಾತಕ ಸಂಯುಕ್ತರಪ್ಪಾರ್, ದೇವ ದಣ್ಣದಿನ್ದೆಱವೆಪ್ಪಡುವೋರು ಮಪ್ಪಾರ್......" ಮುಂತಾದ ವಾಕ್ಯಗಳಲ್ಲಿ ಶಾಪಾಶಯ ಮಾತುಗಳು ಕಂಡುಬಂದಿವೆ.

ಸಂಸ್ಕೃತ ಮತ್ತು ಕನ್ನಡದ ನಡುವಿರುವ ಸಂಬಂಧಗಳಲ್ಲಿ ಪ್ರಮುಖವಾದ ಹಂತವೆಂದರೆ 'ಮಣಿಪ್ರವಾಳ'ವೆನ್ನಬಹುದು."[೧೩] 'ಮಣಿಪ್ರವಾಳ'ವೆಂಬುದು ಸಂಸ್ಕೃತ –ಪ್ರಾಕೃತ, ಸಂಸ್ಕೃತ–ತಮಿಳು, ಸಂಸ್ಕೃತ–ಮಲೆಯಾಳಂ ಭಾಷೆಗಳಲ್ಲಿ ಕಂಡುಬಂದಹಾಗೆ ಕನ್ನಡದಲ್ಲೂ ಕಂಡುಬರುತ್ತದೆ ಎಂಬ ಅಭಿಪ್ರಾಯವಿದೆ. ಕನ್ನಡದಲ್ಲಿ ಬಳಕೆಯಾಗಿರುವ 'ಮಣಿಪ್ರವಾಳ'ದ ವಿಧಾನವನ್ನು ಈ ರೀತಿಯಾಗಿ ಗುರುತಿಸಬಹುದು. ಸಂಸ್ಕೃತ ಮತ್ತು ಕನ್ನಡ ಭಾಷೆಯ ಪ್ರತ್ಯೇಕ ವಾಕ್ಯಖಂಡಗಳ ಮಿಶ್ರಣ, ಕಾವ್ಯ ಭಾಗಗಳಲ್ಲಿ ಸಂಸ್ಕೃತ ಭಾಗಗಳ ಪ್ರಸಕ್ತಿಯನ್ನು ಕನ್ನಡದಲ್ಲಿ 'ಮಣಿಪ್ರವಾಳ'ದ ವಿಧಾನವೆಂದು ಗುರುತಿಸಬಹುದು. ಮಲೆಯಾಳಂ ಭಾಷೆಯಲ್ಲಿ ಸಂಸ್ಕೃತ ಶಬ್ದಗಳನ್ನು ಸಂಸ್ಕೃತ ವಿಭಕ್ತಿ ಪ್ರತ್ಯಯ ಸೇರಿಸಿ ಒಂದೇ ವಾಕ್ಯ ಅಥವಾ ಪದ್ಯದಲ್ಲಿ ಪ್ರಯೋಗಿಸುವುದು ಮತ್ತು ಮಲೆಯಾಳಂ ಶಬ್ದಗಳಿಗೂ ಹಾಗೆಯೇ ಸಂಸ್ಕೃತ ಪ್ರತ್ಯಯ ಸೇರಿಸುವುದು 'ಮಣಿಪ್ರವಾಳ' ವೆಂಬುದಾಗಿ ಪ್ರಚಲಿತವಾಗಿದ್ದು ಈ ರೀತಿಯಾದ ಪ್ರಯೋಗವನ್ನು ಪೂರ್ವದ ಹಳಗನ್ನಡದ ಶಾಸನಗಳಲ್ಲಿ ಕಾಣಬಹುದಾಗಿದೆ.

ಕೆಲವು ಗದ್ಯಶಾಸನಗಳಲ್ಲಿ ಸಂಸ್ಕೃತ – ಕನ್ನಡ ಶೈಲಿಗಳ ಒಂದು ವಿಚಿತ್ರ ಮಿಶ್ರಣವು ಕಂಡುಬಂದಿದೆ. ಕ್ರಿ.ಶ.೪೬೬ರ ಮಡಿಕೇರಿಯ ಶಾಸನದ[೧೪] ಸಾಲುಗಳನ್ನು ಈ ರೀತಿಯಾದ ವಿಧಾನಕ್ಕೆ ಉದಾಹರಿಸಬಹುದಾಗಿದೆ. ಈ ಶಾಸನದ ೧೫ರಿಂದ ೨೧ನೆಯ ಪಂಕ್ತಿಯಲ್ಲಿ "ದೇಸಿಗಗಣಂ ಕೊಣ್ಡಕುನ್ದಾನ್ವಯ ಗುಣಚನ್ದ್ರಭಟಾರ ಸಿಷ್ಯಸ್ಯ  ಆಭಣನ್ದಿ ಭಟಾರ ತಸ್ಯ ಸಿಷ್ಯಸ್ಯ ಸೀಳಭದ್ರ ಭಟಾರ ಸಿಷ್ಯಸ್ಯ ಜಯಣನ್ದಿ ಭಟಾರ ಸಿಷ್ಯಸ್ಸಗುಣಣನ್ದಿ ಭಟಾರ ಸಿಷ್ಯಸ್ಯ ಚನ್ದಣನ್ದಿ ಭಟಾರರ್ಗ್ಗೆ ಅಷ್ಟಾಅಸೀತಿ ಉತ್ತರಸ್ಯ ತ್ರಯೋಸತಸ್ಯ ಸಂವತ್ಸರಸ್ಯ ಮಾಘ ಮಾಸಂ ಸೋಮವಾರಂ ಸ್ವತಿ ನಕ್ಷತ್ರ ಸುದ್ದ ಪಞ್ಚಮಿ ಅಕಾಳವರ್ಷ ಪ್ರಥುವೀವಲ್ಲಭ ಮನ್ತ್ರಿತಳೆವನ ನಗರ ಶ್ರೀವಿಜಯ ಜಿನಾಲಯಕ್ಕೆ ಪೂನಾಡು ಛಾಸಹಸ್ರ ಎಡೆನಾಡು ಸಪ್ತರಿಮಧ್ಯೆ ಬದಗೆಗುಪ್ಪೆ ನಾಮ ಅವಿನೀತ ಮಹಾಧಿರಾಜೇನ ದತ್ತೇನ ಪಡಿಯೇಟಿಱೊಳಂ ಊರೂರೊಳ್ಪನ್ನಿರ್ಕ್ಕಣ್ಡುಗಜ್ಗೆಯ್ದು ಅಮ್ಬಲಿಮಣ್ಣುಂ ತಳವನಪುರದೊಳ್ತಳವಿತ್ತಿಯ ಮಣ್ಪೊಗರಿಗೆ ಟೆಯೊಳ್ಪನ್ನಿರ್ಕ್ಕಣ್ಡುಗಂ ಪಿರಿಕೆಱೆಯೊಳಂ ರಾಜಮಾನಂ ಅನುಮೋದನ ಪನ್ನಿರ್ಕ್ಕಡುಗಂ ಮನೋಹರಂ ದತ್ತಂ ಬದಗೆಗುಪ್ಪೆ......" ಎಂಬ ಪಾಠವಿದ್ದು ಸಂಸ್ಕೃತ–ಕನ್ನಡದ ವಿಚಿತ್ರ ಮಿಶ್ರಣಕ್ಕೆ ಸಾಕ್ಷಿಯಾಗಿದೆ.

ಸಂಸ್ಕೃತ–ಕನ್ನಡ ಭಾಷೆಗಳ ನಡುವಿನ ಒಡನಾಟ ಈ ಕಾಲಾವಧಿಯ ಶಾಸನಗಳಲ್ಲಿ ಕಂಡುಬಂದ ಹಾಗೆಯೇ ದ್ರಾವಿಡ ಭಾಷೆಗಳಲ್ಲಿ ಪ್ರಾಚೀನವಾದ ತಮಿಳಿನ ಸಾಹಚರ್ಯವೂ ಸಹ ಕೆಲವು ಶಾಸನಗಳಲ್ಲಿ ಗೋಚರವಾಗಿದೆ. ಕ್ರಿ.ಶ.೭೫೦ರ ಸುಮಾರಿನ ದಕ್ಷಿಣ ಕನ್ನಡ ಜಿಲ್ಲೆಯ ಉದಯಾವರದ ಶಾಸನವೊಂದರಲ್ಲಿ ನಾಟು, ನಕರ, ಧರ್ಮನಾಯ್ಗನ್ ಎಂಬ ರೂಪಗಳಿವೆ. ಬೇರೆ ಶಾಸನಗಳಲ್ಲಿ ಮಕನ್ದಿರ್, ಮಹಾಪಾತಗನ್, ನರಗ ಎಂಬ ರೂಪಗಳಿವೆ. ಇವು ಕನ್ನಡದಲ್ಲಿ ಕ್ರಮವಾಗಿ ನಾಡು, ನಗರ, ಧರ್ಮ್ಮನಾಯ್ಕನ್, ಮಗನ್ದಿರ್, ಮಹಾಪಾತಕನ್, ನರಕ ಎಂದಾಗಬೇಕು.[೧೫] ಕ್ರಿ.ಶ.೮೦೦ರ ಸೊರಬದ ಶಾಸನದ[೧೬] 'ರಾಜಾದಿತ್ಯರಾಸರ್' ಎಂಬಲ್ಲಿರುವ 'ಅರಾಸ' ಎಂಬ ಪದದ ಮೇಲೆ ತಮಿಳಿನ ಪ್ರಭಾವವಿದೆ. ಸು.೭೫೩ರ ಕೋಲಾರದ ಶಾಸನವೊಂದರಲ್ಲಿ "ಈ ಧರ್ಮ್ಮಮಾನ್ನಿ ರಕ್ಷಿಚಿದೋನ್" ಎಂಬ ವಾಕ್ಯದಲ್ಲಿನ 'ಇರಕ್ಷಿಚ್ಚು' ಎಂಬುದು ತಮಿಳಿನ ಪ್ರಭಾವವಿರುವ ರೂಪವಾಗಿದೆ ಎನ್ನಬಹುದು."[೧೭]

ಒಟ್ಟಾರೆಯಾಗಿ ಈ ಕಾಲಾವಧಿಯ ಭಾಷೆಯ ಬಳಕೆಯಲ್ಲಿ ಒಂದು ರೀತಿಯಾದ ಅಸ್ಥಿರತೆ ಕಂಡುಬರುತ್ತದೆ. ಶಬ್ದರೂಪಗಳಲ್ಲಿ ಏಕರೂಪತೆಯಿಲ್ಲ. ಪೃಥಿವೀ, ಪ್ರಿಥಿವಿ, ಪೃಥುವಿ, ಪ್ರಥಿವೀ, ಪೃಥ್ವೀ : ಅಟಿವೊನ್, ಅಟಿವೊ, ಅಟಿಪೊನ್ – ಎಂಬಂತೆ ಒಂದೇ ಪದದ ಹಲವು ರೂಪಗಳನ್ನು ಕಾಣಬಹುದಾಗಿದೆ.

ಸಂಸ್ಕೃತ ಪದಗಳ ವಿಕೃತ ಸ್ವರೂಪಗಳು ವರಿಷ, ಸಿಷ್ಯ, ಪ್ರಿಥಿವೀ, ಸಕ್ಸಿ ಸುದ್ಧ ಮುಂತಾದ ಪದಗಳಲ್ಲಿ ಗೋಚರವಾಗಿವೆ. ವಾಕ್ಯರಚನೆಯಲ್ಲಿ ಅಲ್ಲಲ್ಲಿ ಶೈಥಿಲ್ಯ ಹಾಗೂ ಸಂದಿಗ್ಧತೆ ಕಂಡುಬಂದಿದೆ. ಅವಧಾರಣೆಯನ್ನು ಸೂಚಿಸುವ 'ಎ'ಪ್ರತ್ಯಯ ಹಾಗೂ ಸಮುಚ್ಚಯದ 'ಉಂ' ಪ್ರತ್ಯಯಗಳು ಪೂರ್ವಪದದೊಡನೆ ಸೇರದೆ ಸಂಧಿಯಾಗದೆ ಬೇರೆಯಾಗಿಯೇ ಉಳಿದಿವೆ. 'ಪಲ್ಮಿಡಿಉಂ, ಮೂಋುವಳ್ಳಿಉಂ' ಎಂಬ (ಹಲ್ಮಿಡಿ ಶಾಸನ) ರೂಪಗಳನ್ನು ಉದಾಹರಿಸಬಹುದು. "ಪ್ರಕೃತಿ, ಪ್ರತ್ಯಯಗಳನ್ನೊಡೆದು ಬರೆಯುವುದು ಈ ಕಾಲದ ಲಕ್ಷಣವಾಗಿರಬೇಕೆಂಬ ಅಭಿಪ್ರಾಯವಿದೆ."[೧೮] ವಾಕ್ಯಗಳಲ್ಲಿ ಸಹ ಶಿಥಿಲತೆಯು ಬಂದಿದೆ. ಉದಾಹರಣೆಗೆ 'ಇನ್ತುಪ್ಪೋರುಂ ಉಣಿಯ ಕೋಡುವೋರುಮ್ ದೇವಡಿತ್ತಿಯೆರಿನ್ದುಂ ಸಾಎರಿನ್ದುಮ್ ಆಭರಮ್ ಎತ್ತಿ ಆಯೆತಿಎ ಕೊಳ್ವೋರುಮ್"[೧೯] ಕೆಸಿಲ್ಮನೆ ಒಡೆಒರ್ಗಳೆಲ್ಲ ತಮ್ಮ ಕೆಱೆಯಕೆಟಗೆ"[೨೦] ಮೊದಲಾದ ವಾಕ್ಯಗಳಲ್ಲಿ ಕಾಣಬಹುದಾಗಿದೆ. ವಾಕ್ಯಗಳಲ್ಲಿ ಸಹ ಕೆಲವೊಮ್ಮೆ ಅರ್ಥಸಂದಿಗ್ಧತೆಯು ಕಂಡು ಬಂದಿರುವುದನ್ನು ಹಲ್ಮಿಡಿ ಶಾಸನದ 'ಭಟ್ಟರ್ಗ್ಗೀ ಗಟ್ದಿ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ' ಎಂಬಲ್ಲಿ ಕಾಣಬಹುದಾಗಿದೆ. ಲಿಪಿಸ್ಖಾಲಿತ್ಯದಲ್ಲಿ ಅಲ್ಪಪ್ರಾಣಕ್ಕೆ ಮಹಾಪ್ರಾಣ, ಮಹಾಪ್ರಾಣಕ್ಕೆ ಅಲ್ಪಪ್ರಾಣ, ಹ್ರಸ್ವಕ್ಕೆ ದೀರ್ಘ, ದೀರ್ಘಕ್ಕೆ ಹ್ರಸ್ವಗಳನ್ನು ಬರೆಯುವುದು. ಶ, ಷ, ಸ ಗಳಲ್ಲಿ ಒಂದಕ್ಕೆ ಮತ್ತೊಂದನ್ನು ಬರೆದಿರುವುದು ಕಂಡುಬರುತ್ತದೆ. ಈ ರೀತಿಯಾದ ಭಾಷೆಯ ಬಳಕೆಯನ್ನು ಮೂಲದ್ರಾವಿಡದ ಸ್ವರೂಪವೆನ್ನಲು ಸಾಧ್ಯವಿದೆ. ಲಿಕಿತಂ (ಲಿಖಿತಂ) ಪೊನ್ಧುಗೆ (ಪೊನ್ದುಗೆ), ಕೇಚರ (ಖೇಚರ), ವಿಮನ(ವಿಮಾನ) ಮೊದಲಾದವುಗಳನ್ನು ಉದಾಹರಿಸಬಹುದು. ಹಾಗೆಯೇ ಸಂಸ್ಕೃತ – ಕನ್ನಡ ಮಾತುಗಳನ್ನು ಜೋಡಿಸಿದ ಅಂಕಿತನಾಮಗಳನ್ನು 'ದಾಸಿಅಮ್ಮನ್, ಮನುಜಾಗರನ್, ಅನ್ತಕಜ್ಗಜ್ಜದೊನ್' ಎಂಬ ಉದಾಹರಣೆಗಳಲ್ಲಿ ಕಾಣಬಹುದಾಗಿದೆ."[೨೧] ಒಟ್ಟಾರೆಯಾಗಿ ಆರಂಭ ಕಾಲದ ಶಾಸನ ಸಾಹಿತ್ಯದ ಭಾಷೆಯಲ್ಲಿ ಭಾಷಾರೂಪಗಳ ದೃಷ್ಟಿಯಿಂದ ಅಸ್ಥಿರತೆ, ವ್ಯಾಕರಣದೃಷ್ಟಿಯಿಂದ ಅವ್ಯುತ್ಪನ್ನತೆ, ಸಾಹಿತ್ಯ ದೃಷ್ಟಿಯಿಂದ ನಿರಲಂಕಾರತೆ ಇವು ಅಧಿಕ ಪ್ರಮಾಣದಲ್ಲಿಯೇ ಗೋಚರವಾಗುತ್ತವೆ. ಈ ಕಾಲಾವಧಿಯಲ್ಲಿ ರಚನೆಯಾದ ಸಾಹಿತ್ಯಕೃತಿಗಳು ದೊರೆಯದ ಕಾರಣದಿಂದ ಭಾಷಾಸ್ವರೂಪವನ್ನು ಸಂಪೂರ್ಣವಾಗಿ ನಿರ್ವಚಿಸಲು ಸಾಧ್ಯವಾಗುವುದಿಲ್ಲ. ಪೂರ್ವದ ಹಳಗನ್ನಡವು ಹಳಗನ್ನಡವಾಗುತ್ತಿದ್ದ ಸಂಕ್ರಮಣಕಾಲದ ಸ್ವರೂಪವನ್ನು ಅರಿಯಲು ಶಾಸನಗಳು ಹೆಚ್ಚು ಸಹಾಯಕವಾಗಿವೆ ಎನ್ನಬಹುದು.

### ೬.೩ : ಹಳಗನ್ನಡ-ನಡುಗನ್ನಡ ಭಾಷಾಸ್ವರೂಪ :-

ಆರಂಭದ ಕಾಲದಿಂದ ಅಂದರೆ ಕ್ರಿ.ಶ.೪೫೦ರಿಂದ ಕ್ರಿ.ಶ.೮೫೦ರವರೆಗಿನ ಅವಧಿಯ ಶಾಸನಗಳ ಭಾಷಾಸ್ವರೂಪವನ್ನು 'ಪೂರ್ವದ ಹಳಗನ್ನಡ' ಭಾಷೆಯೆಂದು ಪರಿಗಣಿಸಿ ಈಗಾಗಲೇ ವಿವೇಚಿಸಲಾಗಿದೆ. ಕ್ರಿ.ಶ.೮೫೦ರಿಂದ ೧೩೫೦ರ ಕಾಲದ ಶಾಸನಗಳ ಭಾಷೆಯನ್ನು 'ಹಳಗನ್ನಡ-ನಡುಗನ್ನಡ' ಭಾಷೆಯೆಂದು ಪರಿಗಣಿಸಿ ಅದರ ಭಾಷಾಸ್ವರೂಪವನ್ನು ವಿವೇಚಿಸಲಾಗುವುದು.

೮ ಮತ್ತು ೯ನೆಯ ಶತಮಾನದ ಮುಂದಿನ ಕಾಲಘಟ್ಟದಲ್ಲಿ ಹೆಚ್ಚು ಹೆಚ್ಚು ಪರಿಷ್ಕೃತವಾದ ಶಾಸನಗದ್ಯ ಮತ್ತು ಪದ್ಯಗಳು ರಚನೆಯಾಗತೊಡಗಿದವು. ಅವುಗಳ ಭಾಷಾಸಾಹಿತ್ಯ ಮೌಲ್ಯಗಳು ಹೆಚ್ಚಿದವು. ಈ ಅವಧಿಯ ನೂರಾರು ಕನ್ನಡ ಶಾಸನಗಳಲ್ಲಿ ವಿಪುಲವಾದ ಸಾಹಿತ್ಯವು ನಿರ್ಮಾಣವಾಗಿದೆ. ೧೦-೧೧ನೆಯ ಶತಮಾನದಲ್ಲಿ ಶಾಸನ ಸಾಹಿತ್ಯವು ವಿಫುಲವಾಗಿ ಬೆಳೆಯಿತೆನ್ನಬಹುದು. ಈ ಅವಧಿಯಲ್ಲಿ ಒಂದು ಸಾಲಿನ ಶಾಸನದಿಂದ ಹಿಡಿದು ನೂರಕ್ಕೂ ಹೆಚ್ಚಿನ ಪಂಕ್ತಿಗಳನ್ನು ಒಳಗೊಂಡ ಶಾಸನಗಳು ರಚನೆಯಾಗಿವೆ. ಶಾಸನಗಳಲ್ಲಿ ಗದ್ಯಪದ್ಯಗಳೆರಡೂ ಸಮರಸವಾಗಿ ಬೆರೆತಿರುವುದನ್ನು ಕಾಣಬಹುದು. ಕ್ರಿ.ಶ.೮೫೦ರ ಹಿಂದಿನ ಅವಧಿಯಲ್ಲಿ ಇದ್ದ ಸಂಸ್ಕೃತ ಭಾಷೆಯ ದಟ್ಟ ಪ್ರಭಾವವು ಕ್ರಮೇಣ ಕಡಿಮೆಯಾಗುತ್ತಾ ಕನ್ನಡ ಭಾಷೆಯ ಕಡೆಗೆ ಶಾಸನಕವಿಗಳು ಒಲಿದುದು ಕಂಡುಬರುತ್ತದೆ. ವಿಪುಲವಾದ ಶಾಸನ ಸಾಹಿತ್ಯ ರಚನೆಗೆ ಕಾರಣವಾದ ಈ ಅವಧಿಯ ಶಾಸನಗಳ ಭಾಷಾಸ್ವರೂಪವನ್ನು ಈ ಕೆಳಗಿನ ಲಕ್ಷಣಗಳೊಂದಿಗೆ ನಿರ್ವಚಿಸಬಹುದಾಗಿದೆ.

ಶಾಸನಗಳ ಭಾಷಾಸ್ವರೂಪವನ್ನು ಅರಿಯುವಾಗ ವಿಶೇಷವಾಗಿ ಗದ್ಯದಲ್ಲಿ ರಚನೆಯಾದ ಶಾಸನಗಳು ಹಾಗೂ ಗ್ರಾಮೀಣ ಪ್ರದೇಶದಲ್ಲಿ ರಚನೆಯಾಗಿರುವ ಶಾಸನಗಳನ್ನು ಗಮನಿಸಿದರೆ ಕನ್ನಡ ಭಾಷಾಸ್ವರೂಪದ ನೈಜಚಿತ್ರಣವು ದೊರೆಯುತ್ತದೆ ಎನ್ನಬಹುದು. ಅದರಲ್ಲೂ ವಿಶೇಷವಾಗಿ ಗ್ರಾಂಥಿಕ ಭಾಷೆಯನ್ನು ಬಳಸದೆ, ಜನ ಸಾಮಾನ್ಯರ ಕಂಠಸ್ಥ ಭಾಷೆಯನ್ನು ಬಳಸಿರುವ ಶಾಸನಗಳನ್ನು ಗಮನಿಸಿದಾಗ ಈ ಅಂಶವು ಮತ್ತಷ್ಟು ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ ಕ್ರಿ.ಶ.೮೫೦ರ ನಂತರದ ಭಾಷಾಸ್ವರೂಪವನ್ನು ಶಾಸನಗಳ ಹಿನ್ನೆಲೆಯಲ್ಲಿ ಗಮನಿಸಬಹುದು.

ಶಾಸನಸಾಹಿತ್ಯವು ಸಮೃದ್ಧವಾಗಿ ಬೆಳೆದ ಈ ಅವಧಿಯ ಭಾಷಾಲಕ್ಷಣಗಳನ್ನು ಹೀಗೆ ಗುರುತಿಸಬಹುದು.

೧. ಕ್ರಿ.ಶ.೮೫೦ರ ನಂತರದ ಹಲವಾರು ಶಾಸನಗಳಲ್ಲೂ ಸಹ ಪೂರ್ವದ ಹಳಗನ್ನಡದ ಕೆಲವು ಲಕ್ಷಣಗಳು ಕ್ವಚಿತ್ತಾಗಿ ಕಾಣಿಸಿಕೊಂಡಿವೆ. ಹೆಮ್ಮಿಗೆಯ ಶಾಸನವು[೨] ಕ್ರಿ.ಶ.೮ - ೯ ನೆಯ ಶತಮಾನಕ್ಕೆ ಸೇರಿದ್ದು ಈ ಶಾಸನದಲ್ಲಿ ಬಳಕೆಯಾಗಿರುವ "ಅಳಿದೊ, ಪತೊನ್ದಿವಿಟ್ಟರ್

ಇದಾನ್, ಅಟಿತ್ತೊನ್ ಬಾರಣಾಸಿ ಏಟು ಕವಿಲೆ ಕೊನ್ದ ಕೊಲೆಯ್ದುವೊನ್" ಎಂಬ ಪದಗಳು ಪೂರ್ವದ ಹಳಗನ್ನಡದ ರೂಪದಲ್ಲಿರುವುದನ್ನು ಗಮನಿಸಬಹುದು.

೨. ಅಖ್ಯಾತ ಪ್ರತ್ಯಯಗಳಲ್ಲಿ ಒರ್, ಓರ್, ಓನ್ ಎಂಬ ರೂಪಗಳು ಕಂಡುಬಂದಿವೆ. ಉದಾಹರಣೆಗೆ "ಈ ಮೇರೆಯನಳಿದೊರ್ ಕವಿಲೆಯ ನಳಿದೊರ್"[೨೩] ಎಂಬುದನ್ನು ಗಮನಿಸಬಹುದು.

೩. ಸಪ್ತಮಿ ವಿಭಕ್ತಿ ಪ್ರತ್ಯಯ 'ಉಳ್'ನ ಪ್ರಯೋಗವನ್ನು "ಯುವರಾಜಪಥದುಳ್ ನಿನ್ದು ಕೊಙ್ಗಳ್ನಾಡು ಪೂನಾಡಮನಾಳುತ್ತಿಱ್ದ ಪೆರ್ಮ್ಮಾಡಿಯ ಬೆಸದುಳ್"[೨೪] ಎಂದು ಮುಂತಾದ ಕಡಗಳಲ್ಲಿ ಕಾಣಬಹುದಾಗಿದೆ. ಹಾಗೆಯೇ ಸಪ್ತಮಿಗೆ ಅಲ್, ಅಲು ಎಂಬ ಪ್ರತ್ಯಯಗಳ ಬಳಕೆಯಾಗಿರುವುದನ್ನು "ಮೂಡಲಾ ದೆಸೆಯಲ್ ಪತ್ತುಕೊಳಗ ಬೆದೆ ಗಟ್ಟಿಯ"[೨೫] ಮತ್ತು "ಬೆಳಗುಳದ ತೀರ್ತ್ಥದಲ್ಲು"[೨೬] ಎಂಬ ಪ್ರಯೋಗಗಳಲ್ಲಿ ಕಾಣಬಹುದು.

೪. ನಡುಗನ್ನಡ ಭಾಷೆಯ ಸ್ವರಾಂತ ಪ್ರಯೋಗಗಳು ಕಾಣಿಸಿಕೊಳ್ಳ ತೊಡಗುತ್ತವೆ. ಪೂರ್ವದ ಹಳಗನ್ನಡದಲ್ಲಿಯಾದರೋ ವ್ಯಂಜನಾಂತವಾಗಿಯೇ ಇರುತ್ತಿದ್ದವು. ಉದಾಹರಣೆಗೆ "ಶ್ರೀಮತ್ ಪ್ರಭಾಚನ್ದ್ರ ಸಿದ್ಧಾಂತ ದೇವರ ಶಿಷ್ಯರು ಮಹೇನ್ದ್ರಕೀರ್ತಿದೇವರು ಮುನ್ನೂಱ ಹದಿಮೂರು ಕಂಚಿನ ಹೊಳವಿಗೆಯ ಶಾನ್ತಲದೇವಿಯ ಬಸದಿಗೆ ಮಾಡಿಸಿಕೊಟ್ಟರು"[೨೭] ಎಂಬುದನ್ನು ಮತ್ತು "ಮೌಲಾಚಾರಿಯು ಆತನಳಿಯ ಕತಾಚಾರಿಯು ಈ ದೇವರಂ ಮಾಡಿದರು"[೨೮] ಎಂಬ ವಾಕ್ಯಗಳನ್ನು ಗಮನಿಸಬಹುದಾಗಿದೆ.

೫. 'ಪ'ಕಾರವು 'ಹ'ಕಾರವಾಗುವ ಪ್ರಕ್ರಿಯೆಯು ಶಾಸನಗಳಲ್ಲಿ ಕಾವ್ಯಗಳಿಗಿಂತ ಮೊದಲೇ ಆರಂಭವಾಗಿತ್ತು. ಈ ಪ್ರಕ್ರಿಯೆಯು ಕಾವ್ಯಗಳಲ್ಲಿ ೧೧ನೆಯ ಶತಮಾನದ ಪೂವಾರ್ಧದಲ್ಲಿ ನಯಸೇನನ ಧರ್ಮಾಮೃತ, ದುರ್ಗಸಿಂಹನ ಪಂಚತಂತ್ರ ಕೃತಿಗಳಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ಶಾಸನಗಳಲ್ಲಿ ಈ ಪ್ರಕ್ರಿಯೆಯು ೭–೮ನೆಯ ಶತಮಾನಗಳಲ್ಲಿಯೇ ಕಾಣಿಸಿಕೊಂಡಿರುವುದಕ್ಕೆ ಉದಾಹರಣೆಗಳು ಕಂಡುಬರುತ್ತವೆ. ಉದಾಹರಣೆಗೆ "ಜ್ಯೋತಿಷ ಶಕುನ ನಿಮಿತ್ತಂಗಳ ಬಲ್ಲಹಗೆ"(ಕ್ರಿ.ಶ.೮೬೨), ಸಂದಲೋಕಕ್ಕೆ ಹೋಹಾನ್(ಕ್ರಿ.ಶ.೯೧೦), ಪನ್ನೊರ್ಮ್ಮತ್ತರ್ಹಾಡುವೊಜ್ಜೆಗ(ಕ್ರಿ.ಶ.೯೩೧), "ಊರಟಿವಿನೊಳೆ ಹೊಗೆನೆಂದು"(ಕ್ರಿ.ಶ.೯೩೧–೯೩೨), ಹನ್ನಿರ್ವಟು ಗದ್ಯಾಣಂ(ಕ್ರಿ.ಶ.೯೭೧)"[೨೯] ಮೊದಲಾದವುಗಳನ್ನು ಗಮನಿಸಬಹುದು.

೬. ವರ್ಗ ಪಂಚಮಾಕ್ಷರವನ್ನು ಬಳಸುವುದು ಸಾಮಾನ್ಯವಾಗಿತ್ತು. ಉದಾಹರಣೆಗೆ ಗಣ್ಡ ಮಾರ್ತ್ತಣ್ಡ, ಇನ್ದ್ರ, ವನ್ದುದು, ನೊಟಿಂಬಾನ್ತಕಂ ಮೊದಲಾದವು.

೭. ಗದ್ಯಶಾಸನಗಳಲ್ಲಿ ಕೆಲವು ಮಾತುಗಳು ಆಡುಮಾತಿಗೆ ತೀರ ಹತ್ತಿರವಾಗಿ ಕಂಡುಬರುತ್ತವೆ. ಉದಾಹರಣೆಗೆ "ಸತ್ತೋರ ಹೊತ್ತು ಸುಡುವುದು", "ಬೀರಗಣ್ಣನು ಕಟ್ಟಿಸಿದ ಕೆಱೆ ಎತ್ತಿಸಿದ ದೇಗುಲ"[೩೦] ಮೊದಲಾದ ವಾಕ್ಯಗಳನ್ನು ಗಮನಿಸಬಹುದು.

೮. ವಿವಿಧ ರೀತಿಯ ಲಿಖಿತ ಸ್ಖಾಲಿತ್ಯಗಳು ಕಂಡುಬಂದಿರುವುದನ್ನು ಜಿನಗ್ರಿಹ, ತಪಶ್ವಿ ಅಭಿವ್ರಿದ್ದಿ, ಅಸ್ವೈಜ, ಅಸಡಮಾಸ್ಯ, ಸೊಮ್ಮವರ, ಸುಕ್ಲಪಕ್ಷ, ಇಶ್ವರ ಎಂಬವುಗಳಲ್ಲಿ ಕಾಣಬಹುದು. ಹಾಗೆಯೇ ಅಕ್ಷರ ಲೋಪವನ್ನು ದೇವಾಯ, ತ್ರದಶೀ, ತುರುವಕ್ಷಿಸಿ ಎಂಬ ಕಡೆಗಳಲ್ಲಿ ಗಮನಿಸಬಹುದು.

೯. ಱ, ೞ, ಅಕ್ಷರಗಳ ಬಳಕೆಯಲ್ಲಿ ಗೊಂದಲವುಂಟಾಗಿ ಸಮರ್ಪಕವಾಗಿ ಬಳಕೆಯಾಗುತ್ತಿರಲಿಲ್ಲ ಎಂಬುದು ೧೧-೧೨ನೆಯ ಶತಮಾನದ ಕಾವ್ಯಗಳಲ್ಲಿ ಕಂಡುಬರುತ್ತದೆ. ಹರಿಹರ ಕವಿಯಂತೂ

**"ನೋಡುವೊಡೊಂದಕ್ಕರಮದು**
**ಮಾಡುವೊಡುಚ್ಚರಣೆಗರಿದು ಮೂಱುಂತೆಱನಂ ।**
**ಕೂಡೆ ಕವಿತತಿ ವಿಚಾರಿಸ**
**ಬೇಡದಱಿಂ ಱೞಕುಳಕ್ಷಳಂಗಳನಿದಱೊಳ್"**[೩೧]

ಎಂಬ ಪದ್ಯದಲ್ಲಿ "ನೋಡಲು ಈ ಅಕ್ಷರಗಳು ಒಂದೇ ರೀತಿಯಾಗಿ ಕಂಡು ಬಂದರೂ, ಉಚ್ಚಾರಣೆಯಲ್ಲಿ ವ್ಯತ್ಯಾಸವನ್ನು ಕಾಣಲು ಸಾಧ್ಯವಿಲ್ಲ. ಆದ್ದರಿಂದ ತನ್ನ ಕಾವ್ಯದಲ್ಲಿ 'ಱೞ, ಕುಳ, ಕ್ಷಳ' ಗಳ ಭೇದವನ್ನು ಪರಿಗಣಿಸುವುದಿಲ್ಲ" ಎಂಬುದಾಗಿ ಸ್ಪಷ್ಟಪಡಿಸುತ್ತಾನೆ. ಆದರೆ ಈ ರೀತಿಯಾದ ಪ್ರಕ್ರಿಯೆಯು ಶಾಸನಗಳಲ್ಲಿ ಬಹಳ ಹಿಂದೆಯೇ ಆರಂಭವಾಗಿತ್ತು ಎನ್ನಲು ಸಾಕಷ್ಟು ಉದಾಹರಣೆಗಳು ಕಂಡುಬರುತ್ತವೆ. ಕನ್ನಡ ಭಾಷೆಯಲ್ಲಿ ಱವು ೯ನೆಯ ಶತಮಾನದವರೆಗೂ ಸ್ವಂತ ರೂಪದಲ್ಲಿ ಬಳಕೆಯಾಗಿದೆ. ಆದರೆ ಸು.೯೩೦ರಲ್ಲಿನ ಶಾಸನದಲ್ಲಿ ಱದ ಬದಲು ರೇಫವನ್ನು ಬಳಸಲಾಗಿದೆ. ನೆಗೞ್ತೆ, ಬೇೞ್ಪರನ್, ನೋೞ್ಪೊಡೆ ಎಂಬ ರೂಪಗಳಿಗೆ ಬದಲಾಗಿ ನೆಗರ್ತೆ, ಬೇರ್ಪರನ್, ನೋರ್ಪೊಡೆ ಎಂಬ ರೂಪಗಳ ಬಳಕೆಯಾಗಿದೆ. ಸುಮಾರು ಇದೇ ಅವಧಿಯ ಇನ್ನೊಂದು ಶಾಸನದಲ್ಲಿ ನೆಗೞ್ತೆ, ನೆಗರ್ತೆ ಎಂಬ ಎರಡೂ ರೂಪಗಳಿವೆ."[೩೨]

ಶಾಸನದಲ್ಲಿ ಬಳಕೆಯಾಗುವ ಭಾಷೆಯಲ್ಲಿ ಅಶುದ್ಧ ರೂಪಗಳು ಕಂಡುಬಂದಿರುವುದಕ್ಕೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಮುಖ್ಯವಾಗಿ ದೀರ್ಘ, ಮಹಾಪ್ರಾಣಗಳ ಬರವಣಿಗೆಯಲ್ಲಿ ಪ್ರತ್ಯೇಕತೆಯನ್ನು ಸೂಚಿಸುವ ಬರವಣಿಗೆಯ ಪದ್ಧತಿಯು ಇಲ್ಲದಿದ್ದುದು, ಲಿಪಿಕಾರ ಹಾಗೂ ಶಾಸನ

ರೂವಾರಿಯಾದವನಿಗೆ ಶಾಸನ ಪಾಠದ ಸರಿಯಾದ ತಿಳುವಳಿಕೆಯಿಲ್ಲದಿದ್ದುದು ಕಾರಣವಾಗಿರಬಹುದು. ಶಾಸನ ಪಾಠವನ್ನು ಪೂರೈಸಿದವನು ವಿದ್ವಾಂಸನೇ ಆಗಿದ್ದರೂ ಸಹ ಶಾಸನಗಳಲ್ಲಿ ಅಪಪಾಠಗಳು ಕಂಡುಬರುತ್ತಿದ್ದವು. ಇದಕ್ಕೆ ಉದಾಹರಣೆಯಾಗಿ ಜನ್ನಕವಿಯ ಅಮೃತಾಪುರ ಶಾಸನದಲ್ಲಿಯ "ಶಾಸನಮಪ್ಪಂತು, ನೃಪಶಚೀವಾಕಾರದಿಂದೆ, ಸಂಶ್ರಯದ್ವೈದೀಭಾವ ಭಾವಿತ, ಕಳ್ಪವ್ರಿಕ್ಷನುಂ, ಸಹಶ್ರಕಿರಣನುಂ, ವಾರಣಾಶಿಯೊಳ್, ಕೊಂನ್ದು"[೩೩] ಎಂಬ ಮಾತುಗಳನ್ನು ಗಮನಿಸಬಹುದಾಗಿದೆ.

ಕ್ರಿ.ಶ.೮೫೦ ರಿಂದ ಕ್ರಿ.ಶ.೧೩೫೦ರ ಈ ಅವಧಿಯನ್ನು ಭಾಷಾದೃಷ್ಟಿಯಿಂದ ಸಂಕ್ರಮಣ ಕಾಲವೆನ್ನಬಹುದು. ಈ ಅವಧಿಯ ಆರಂಭದ ಕಾಲದ ಶತಮಾನಗಳಲ್ಲಿ ಪೂರ್ವದ ಹಳಗನ್ನಡ, ಹಳಗನ್ನಡದ ಪ್ರಾಚುರ್ಯವಿದ್ದರೆ ಆ ನಂತರದ ಶತಮಾನಗಳಲ್ಲಿ ಭಾಷೆಯು ನಡುಗನ್ನಡದತ್ತ ಹೊರಳಿರುವುದು ಕಂಡುಬರುತ್ತದೆ. ಸಂಸ್ಕೃತ ಭಾಷೆಯ ಪ್ರಭಾವವು ಕಡಿಮೆಯಾಗಿ ದೇಸಿಯತ್ತ ಒಲವು ಮೂಡಿರುವುದು ಗೋಚರವಾಗುತ್ತದೆ. ಆದರೂ ಸಹ ಪ್ರಶಸ್ತಿಗದ್ಯಗಳ ರಚನೆಯ ಸಂದರ್ಭದಲ್ಲಿ ಸಂಸ್ಕೃತದ ಬಿಗಿಬಂಧದ ಬಳಕೆಯನ್ನು ಕಾಣಬಹುದಾಗಿದೆ. ಜನಸಾಮಾನ್ಯರ ಭಾಷೆಯನ್ನು ಬಳಸುವ ಪ್ರವೃತ್ತಿಯು ಶಿಷ್ಟಕವಿಗಳಲ್ಲಿ ಕಂಡುಬಂದಂತೆಯೇ ಶಾಸನಕವಿಗಳಲ್ಲೂ ಆ ರೀತಿಯಾದ ಒಲವು ಹೆಚ್ಚಾಗಿಯೇ ಇದ್ದಿತು ಎನ್ನಬಹುದು.

### ೬.೪ : ವಿಜಯನಗರ ಕಾಲದ ಭಾಷಾಸ್ವರೂಪ :-

ಸಾಹಿತ್ಯಕವಾಗಿ ಮನಸೆಳೆಯುವ ಕಾವ್ಯಗಳ ರಚನೆಯ ಕಾಲವು ಹೊಯ್ಸಳರ ಆಳ್ವಿಕೆಯ ನಂತರ ಮುಕ್ತಾಯವಾಯಿತೆನ್ನಬಹುದು. ಆ ನಂತರದಲ್ಲಿ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಯ ಕಾಲದಲ್ಲಿ ಸಹಜವಾಗಿ ಈ ಹಿಂದೆ ಶಾಸನಗಳನ್ನು ಕಾವ್ಯಾತ್ಮಕವಾಗಿ ರಚಿಸುವುದರಲ್ಲಿ ಇದ್ದ ಉತ್ಸುಕತೆಯು ಕಡಿಮೆಯಾಯಿತು. ನೇರವಾಗಿ ವಿಷಯ ನಿರೂಪಣೆಯ ಕಡೆಗೆ ಒಲವು ಹೆಚ್ಚಾದ ಕಾರಣದಿಂದಾಗಿ ಗದ್ಯಶಾಸನಗಳ ಸಂಖ್ಯೆಯು ಹೆಚ್ಚಾಯಿತು. ಕ್ರಿ.ಶ.೧೩೫೦ರ ನಂತರದ ಕಾಲದಲ್ಲೂ ಶಾಸನ ಸಾಹಿತ್ಯವನ್ನು ಉಳಿಸುವ ಪ್ರಯತ್ನದಲ್ಲಿ ತೊಡಗಿದವರೆಂದರೆ ಹಲವಾರು ಸಣ್ಣಪುಟ್ಟ ಅರಸರು. ವಿಶೇಷವಾಗಿ ಜೈನಧರ್ಮ ಮತಾವಲಂಬಿಗಳಾದ ಇಂತಹ ಅರಸರ ಕಾಲದಲ್ಲಿ ಕಾರ್ಕಳ, ಮೂಡಬಿದಿರೆ, ವೇಣೂರು ಮುಂತಾದ ಧಾರ್ಮಿಕ ಕೇಂದ್ರಗಳಲ್ಲಿ ರಚನೆಯಾದ ಶಾಸನಗಳಲ್ಲಿ ಸಮೃದ್ಧವಾದ ಸಾಹಿತ್ಯವನ್ನು ಕಾಣಬಹುದಾಗಿದೆ. ಕ್ರಿ.ಶ.೧೩೫೦ರ ನಂತರದ ಕಾಲದ ಶಾಸನಗಳ ಭಾಷೆ ಬಹುಪಾಲು ಗದ್ಯ. ಹಲವಾರು ಸಂದರ್ಭದಲ್ಲಿ ಗದ್ಯವು ಗ್ರಾಂಥಿಕವಾಗಿರದೆ ಗ್ರಾಮ್ಯವಾಗಿರುವ ಸಂದರ್ಭವು ಅಧಿಕವಾಗಿದೆ. ಈ ಕಾರಣದಿಂದಾಗಿ ಶಾಪಾಶಯ ಭಾಗಗಳಲ್ಲಿ ಯಾವ ಎಗ್ಗೂ ಇಲ್ಲದೆ

ಅಶ್ಲೀಲ ಬೈಗುಳಗಳು ಪ್ರಯೋಗವಾಗಿರುವುದು ಕಂಡುಬರುತ್ತದೆ. ವಿಜಯನಗರದ ಕಾಲದ ಭಾಷಾಸ್ವರೂಪವನ್ನು ಗದ್ಯ ಶಾಸನಗಳನ್ನು ಆಧರಿಸಿ ಈ ಕೆಳಗಿನಂತೆ ನಿರ್ವಚಿಸಬಹುದಾಗಿದೆ.

೧. ವ್ಯಂಜನಕ್ಕೆ ಬದಲಾಗಿ ಸ್ವರದ ಬಳಕೆಯಾಗಿರುವುದು. ಉದಾ: ಈ ಶಾಸನ ವಾಕ್ಯಗಳನ್ನು ಗಮನಸಿಬಹುದು. ಅವರಿಗೆ ಸಲುಉದು,[೩೪] ನಾಲು ಶರಣಾರ್ತ್ಥಿ ಮಾಡಿ,[೩೫] ಗೋಉ,[೩೬] ಶ್ರೀಗಣಾಧಿಪತಏ ನಮಃ, ಶ್ರೀಸರಸ್ವತ್ಯಾಎಂ ನಮಃ, ಗಉರೀಧಏ.[೩೭]

೨. ಸ್ವರಕ್ಕೆ ಬದಲಾಗಿ ವ್ಯಂಜನಗಳ ಬಳಕೆಯಾಗಿರುವುದು : ಉದಾಹರಣೆಗೆ– ಯೀ ನೆಯಿವೇದ್ಯಕ್ಕೆ,[೩೮] ಯೀ ಹಂಗಚೆಯಪುರ,[೩೯] ಯಿದಾಕೆ.[೪೦]

೩. ದೀರ್ಘಸ್ವರಗಳಿಗೆ ಬದಲಾಗಿ ಹ್ರಸ್ವಸ್ವರಗಳು ಬಳಕೆಯಾಗಿರುವುದು. ಉದಾ: ಇ ಧರ್ಮವನು.[೪೧]

೪. ಐ, ಔ ಸಂಯುಕ್ತಾಕ್ಷರಗಳನ್ನು ಸ್ವರ ಸಹಾಯದಿಂದ ಪ್ರಯೋಗಿಸಿರುವುದು.

'ಐ' ಕಾರಕ್ಕೆ ಉದಾಹರಣೆಗಳು:

ರಾಜ್ಯಾಭ್ಯುದಯಂ ಗೆಇವಲ್ಲಿ[೪೨], ಯೀ ನೆಯಿವೇದ್ಯಕ್ಕೆ.[೪೩]

'ಔ'ಕಾರಕ್ಕೆ ಉದಾಹರಣೆಗಳು :

ಅವುಭಳೇಶ್ವರ ಮಹಾ ಅರಸುಗಳು[೪೪], ಸ್ವಸ್ತಿ ಶ್ರೀಮತು ಸಉಮ್ಯ ಸಂವತ್ಸರದ ಚೆಯಿತ್ರ ಸು ೫ ಗು ಉ.[೪೫]

೫. ಮಹಾಪ್ರಾಣಗಳು ಅಲ್ಪಪ್ರಾಣವಾಗಿರುವುದಕ್ಕೆ ಉದಾಹರಣೆ ಸ್ತಿರವಾರದಲು, ಶ್ರೀಮಂನ್ಮಹಾಸ್ತಾನಂ, ಆಚಂದ್ರಾರ್ಕಸ್ತಾಯಿ ಆಗಿ.[೪೬]

೬. ದ್ವಿತ್ವಾಕ್ಷರಗಳು ಅದ್ವಿತ್ವವಾಗಿರುವುದಕ್ಕೆ ಉದಾಹರಣೆ 'ನಾಗಣನವರು ಮಾಡಿಸಿದ ಕಂಬ'.[೪೭]

೭. ದ್ವಿತ್ವಗಳು ಅಧಿಕವಾಗಿ ಬಳಕೆಯಾಗಿರುವುದಕ್ಕೆ ಉದಾಹರಣೆಗಳು : ಪಾರ್ತ್ಥಿವ ಸಂವತ್ಸರದ ಕಾರ್ತ್ತೀಕ ಸು ೧೩ಲು.... ರುಕ್ಕು ಶಾಖೆಯ.....[೪೮], ಸರ್ವ್ವಮಾಂನ್ಯವಾಗಿ, ಪುರವರ್ಗ್ಗವಾಗಿ.[೪೯]

೮. ಸಂಸ್ಕೃತದಲ್ಲಿ ಶ,ಷ ಗಳನ್ನು ಹೊಂದಿರುವ ಶಬ್ದಗಳು ಕನ್ನಡದಲ್ಲಿ ಸಕಾರವಾಗಿ ಬದಲಾಗಿರುವುದು ಇದನ್ನು ತತ್ಸಮ–ತದ್ಭವ ರೂಪಗಳೆಂದು ಪರಿಗಣಿಸಬಹುದು. ಉದಾಹರಣೆಗೆ : ಶಾಲಿವಾಹನ ಶಕವರುಸ[೫೦], ಶ್ರೀಮುಕ ಸ್ರಾವಣದ[೫೧]

೯. ಅನುಸ್ವಾರದಿಂದ ಕೂಡಿದ ಶಬ್ದಗಳ ಬಳಕೆಯಾಗಿರುವುದಕ್ಕೆ ಉದಾಹರಣೆಗಳು: ಚಂನರಾಜತಿಂಮಪನಾಯಕರು.... ತಂಮ ಸ್ವಾಮಿಯ[೫೨], ಚೆಂನಿಸೆಟ್ಟಿಯರ ಮಕ್ಕಳು[೫೩], ತಂಮತಾಯಿ.[೫೪]

೧೦. ಪ್ರಕೃತಿಯ-ಪ್ರತ್ಯಯವನ್ನು ಒಂದಾಗಿ ಸೇರಿದರೆ ಪ್ರತ್ಯೇಕವಾಗಿ ಬರೆಯುವ ಪರಿಪಾಠವಿತ್ತು ಎನ್ನಬಹುದು. ಉದಾ:- ವೈಷ್ಣವದರ್ಶನಕ್ಕೆಉೂ ಜೈನದರ್ಶನಕ್ಕೆಉೂ, ಕಳಶಉ, ವೈಷ್ಣಸಮಯಉ, ಬಹೆಉ[೫೫], ದಿಬ್ಯಉ ಮಹಾಜನಂಗಳು.[೫೬]

ವಿಜಯನಗರದ ಕಾಲದಲ್ಲಿ ಗದ್ಯಶಾಸನಗಳ ರಚನೆಯೇ ಹೆಚ್ಚಾಯಿತು. ಹೇಳುವ ವಿಷಯವನ್ನು ನೇರವಾಗಿ ಹೇಳುವುದು ಗದ್ಯದ ಪ್ರಮುಖ ಲಕ್ಷಣವಾಗಿತ್ತು ಎಂಬುದನ್ನು ಶ್ರವಣಬೆಳಗೊಳದ ಬುಕ್ಕರಾಯನ ಶಾಸನದಲ್ಲಿ ಗುರುತಿಸಬಹುದಾಗಿದೆ.[೫೭] ಕೆಲವು ಶಾಸನಗಳ ಗದ್ಯವು ಗ್ರಾಂಥಿಕವಾಗಿ ಇರದೆ ಗ್ರಾಮ್ಯವಾಗಿರುವ ಸಂದರ್ಭಗಳು ವಿಶೇಷವಾಗಿವೆ. ಅವು ಸಾಮಾನ್ಯವಾಗಿ ಜನಸಾಮಾನ್ಯರು ಹಾಕಿಸಿರುವ ಶಾಸನಗಳೇ ಆಗಿರುತ್ತವೆ. ಇದಕ್ಕೆ ಉತ್ತಮ ಉದಾಹರಣೆಯಾಗಿ ತುಮಕೂರು ಜಿಲ್ಲೆಯ ಗುಂಡ್ಲಹಳ್ಳಿ ಶಾಸನವನ್ನು ನೋಡಬಹುದು. ಈ ಶಾಸನದ ಮೇರೆಗೆ ಕಂಬದೇಗೌಡ ಮತ್ತು ಇತರ ನೂರು ಮನೆತನದವರು ಕಡೂತಿಯಲ್ಲಿ ಒಂದು ಕೋಟೆಯನ್ನು ನಿರ್ಮಿಸುತ್ತಾರೆ. ಈ ಕೋಟೆಯ ನಿರ್ಮಾಣದ ವೆಚ್ಚಕ್ಕೆ ಜಿರ್ಲೆಮಲ್ಲಂಮ ಆರ್ಥಿಕವಾಗಿ ಸಹಾಯ ಮಾಡುತ್ತಾಳೆ. ಅಲ್ಲಿನ ದೇವಾಲಯದಲ್ಲಿ ಬಾವಿಯನ್ನು ತೆಗೆಸುತ್ತಾಳೆ. ಅದಕ್ಕಾಗಿ ಜನರನ್ನು ಕುರಿತು ಆಕೆ ಮಾಡುವ ಪ್ರಾರ್ಥನೆಯ ಭಾಗ ಶಾಸನದಲ್ಲಿ ಹೀಗೆ ಮೂಡಿಬಂದಿದೆ. "ಬಾವಿಯ ಸೋಪಾನದ ಮ್ಯಾಲೆಯೆರಡು ಕಂಬದ ಪೂರ್ವಮುಖವಾಗಿ ಜಿಲ್ಲೆ ಮಲ್ಲಂಮನ ಕಂಬದಲ್ಲಿ ಕಡಶಿ ಮಾರ್ಗವಾಗಿ ಯಾರಾದರ್ರೂ ಬಂದ ಪುಣ್ಯಾತ್ಮರೂ ನಂನ ತಲೆಯ ಮ್ಯಾಲೆ ವೆಂದು ಬಗಸೆ ನೀರ್ರು ಆಕಬೇಕೆಂದು ಬೇಡುತ್ತೇನೆ. ನಂನ ವಂಶಸ್ತರು ಯಾರಾದರ್ರೂ ಮನೆಯಲ್ಲಿ ಅಸುವು ಎಮ್ಮೆಯೀದರೆ ನಂನ ತಲೆಗೂ ಬಾಯಿಗೂ ಬೆಣ್ಣೆಯಿಟ್ಟು ಮಾಡುತ್ತಾರೆಂದು ಬೇಡಿಕೊಂಡುಯಿದೇನೆ."[೫೮] ಇಂತಹ ಶಾಸನಗಳಿಂದ ಅಂದಿನ ಗ್ರಾಮ್ಯಭಾಷೆಯ ಸ್ವರೂಪವನ್ನು ಅರಿಯಬಹುದಾಗಿದೆ. ಶಾಪಾಶಯ ಭಾಗಗಳು ಹೆಚ್ಚು ಗ್ರಾಮ್ಯವಾಗಿ ಬೈಗುಳದ ರೀತಿಯಲ್ಲಿ ಇರುತ್ತಿದ್ದವು. ಶಾಪಾಶಯ ಭಾಗಕ್ಕೆ "ಪ್ರಭುಗಳು ಕೊಟಂತ ಸ್ತಾನಮಾನ್ಯಕ್ಕೆ ಅಳುಪಿದವರು ವಾಣರಾಸಿಯ ಗಂಗೆಯ ತಡಿಯಲಿ ಗೋಉ ಬ್ರಾಹ್ಮಣರ ಕೊಂದ ಪಾಪಕೆ ಗುಜಿಅಹರು"[೫೯] ಎಂಬ ಭಾಗವನ್ನು ಗಮನಿಸಬಹುದು.

೬.೫ : ಪದ್ಯಶೈಲಿ :-

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ವರೆಗಿನ ಕನ್ನಡ ಶಾಸನಗಳಲ್ಲಿನ ಹಲವಾರು ಪದ್ಯಗಳು ಸಾಹಿತ್ಯಕವಾಗಿ ಮನಸೆಳೆಯುತ್ತವೆ. ಅಂತಹ ಪದ್ಯಗಳನ್ನು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ವರ್ಣನೆಯ ಸಂದರ್ಭದಲ್ಲಿ ಗಮನಿಸಲಾಗಿದೆ. ಈಗ ಶೈಲಿಯ ದೃಷ್ಟಿಯಿಂದ ಕೆಲವು ಪದ್ಯಗಳನ್ನು ಗಮನಿಸಬಹುದು. ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯ ಈ ಕಾಲಘಟ್ಟದಲ್ಲಿ ಕಾಣಿಸಿಕೊಂಡ ಪದ್ಯಶಾಸನಗಳಲ್ಲಿ ಪ್ರಮುಖವಾಗಿ ಈ ಕೆಳಗಿನ ಲಕ್ಷಣಗಳನ್ನು ಗುರುತಿಸಬಹುದಾಗಿದೆ. ಅವುಗಳೆಂದರೆ ೧. ಆರಂಭದ ಕಾಲದ ಶಾಸನಗಳಲ್ಲಿ ಸಂಸ್ಕೃತ ಭೂಯಿಷ್ಠವಾದ ಸಂಸ್ಕೃತ-ಕನ್ನಡದ ಹಿತಮಿತವಾದ ಮಿಶ್ರಣವನ್ನು ಕಾಣಬಹುದು. ಹಾಗೆಯೇ ಸಂಸ್ಕೃತದ ಕನಿಷ್ಠ ಬಳಕೆ ಮತ್ತು ಕನ್ನಡದ ಗರಿಷ್ಠ ಬಳಕೆಯಾಗಿರುವುದನ್ನು ಕಾಣಬಹುದಾಗಿದೆ. ಶ್ರವಣಬೆಳಗೊಳದ ಕ್ರಿ.ಶ. ೭, ೮ ನೆಯ ಶತಮಾನದ ಶಾಸನಗಳಲ್ಲಿ ಈ ರೀತಿಯಾದ ಪ್ರಕ್ರಿಯೆಗೆ ಉತ್ತಮ ಉದಾಹರಣೆಗಳನ್ನು ಕಾಣಬಹುದು. ಸಂಸ್ಕೃತ ಭೂಯಿಷ್ಠವಾದ ಪದ್ಯರಚನೆಯನ್ನು ಕ್ರಿ.ಶ.೭ನೆಯ ಶತಮಾನದ ಚರಿತಶ್ರೀಮುನಿಯು ಸನ್ಯಸನ ವಿಧಿಯಿಂದ ಮುಡುಪಿದ ವಿಚಾರಗಳನ್ನು ಒಳಗೊಂಡ ನಿಸಧಿಗಲ್ಲಿನಲ್ಲಿ ಕಾಣಬಹುದು.[೬೦]

**ಶ್ರೀದುರಿತಾಭೂದ್ವಪಮಾನ್ಕೀಟ್ಟಲಱ ಪೊದೆದಜ್ಞಾನ ಶೈಲೇನ್ದ್ರಮಾನ್ಪೋಟ್**
**ದುರಮಿಥ್ಯಾತ್ವ ಪ್ರಮೂಢಸ್ಥಿರತೆರನೃಪನಾನ್ಮೆಟ್ಟಿ ಗನ್ಧೇಭಮಯ್ದಾನ್**
**ಸುರವಿದ್ಯಾವಲ್ಲಭೇನ್ದ್ರಾಸ್ಸುರವರಮುನಿಭಿಸ್ತುತ್ಯ ಕಟ್ಬಿಪ್ಪಿನಾಮೇಲ್**
**ಚರಿತಶ್ರೀನಾಮಧೇಯ ಪ್ರಭು ಮುನಿಸ್ವತಗಳ್ನೋನ್ತು ಸೌಖ್ಯಸ್ಥ ನಾಯ್ದಾನ್**

ಸಂಸ್ಕೃತ ಮತ್ತು ಕನ್ನಡದ ಹಿತಮಿತವಾದ ಮಿಶ್ರಣವನ್ನು ನಂದಿಸೇನಮುನಿಯ ಶಾಸನದಲ್ಲಿ ಕಾಣಬಹುದಾಗಿದೆ.[೬೧]

**ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ಮಂಜುವೋಲ್ತೋಱಿಬೇಗಂ**
**ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ನಿಲ್ಲವಾರ್ಗ್ಗಂ**
**ಪರಮಾರ್ತ್ಥಂ ಮೆಚ್ಚೆ ನಾನೀಧರಣಿಯುಳಿರವಾನೆನ್ದು ಸನ್ಯಾಸನಂಗೆ**
**ಯ್ದುರು ಸತ್ವನ್ನನ್ದಿಸೇನಪ್ರವರ ಮುನಿವರನ್ದೇವಲೋಕಕ್ಕೆ ಸನ್ದಾನ್ ॥**

ಸಂಸ್ಕೃತದ ಕನಿಷ್ಠ ಬಳಕೆ ಮತ್ತು ಕನ್ನಡದ ಗರಿಷ್ಠ ಬಳಕೆಯಾಗಿರುವುದಕ್ಕೆ ಈ ಕೆಳಗಿನ ಶಾಸನ ಪದ್ಯವನ್ನು ಗಮನಿಸಬಹುದು.[೬೨]

**ನೆಱೆದಾದ ವ್ರತಶೀಲನೋನ್ಪಿಗುಣದಿಂ ಸ್ವಾಧ್ಯಾಯ ಸಮ್ಪತ್ತಿ[ನಿಮ್]**
**ಕಱಿಇಲ್ಲಲ್ಲತ್ತಪಧರ್ಮ್ಮದಾ ಸಸಿಮತಿಶ್ರೀಗನ್ತಿಯರ್ಪ್ವನ್ದುಮೇಲ್**

ಅಱಿದಾಯುಷ್ಯಮನೆನ್ತು ನೋಡೆನಗೆ ತಾನಿನ್ತೆನ್ದು ಕಟ್ವಪ್ಪಿನುಳ್

ತೋಱಿದಾರಾಧಾನೆ ನೋನ್ತು ತೀರ್ತ್ಥಗಿರಿಮೇಲ್ಸ್ವರ್ಗ್ಗಾಲಯಕ್ಕೇಱಿದಾರ್ ॥

೨. ಭಾಷೆಯ ಮತ್ತೊಂದು ಲಕ್ಷಣವೆಂದರೆ ನಾಟಕೀಯತೆ. ಎರಡು ಪಾತ್ರಗಳ ನಡುವೆ ಸಂಭಾಷಣೆಯು ನಡೆಯುವುದು ಅಥವಾ ಸನ್ನಿವೇಶವೊಂದರ ಕಲ್ಪನೆಯನ್ನು ದೃಶ್ಯರೂಪದಲ್ಲಿ ಅಭಿವ್ಯಕ್ತಿ ಗೊಳಿಸುವುದನ್ನು ನಾಟಕೀಯತೆ ಎಂಬ ಅರ್ಥದಲ್ಲಿ ಗಮನಿಸಬಹುದು. ಈ ರೀತಿಯಾದ ಸನ್ನಿವೇಶಗಳನ್ನು ಶಾಸನಕವಿಗಳು ವಿಶೇಷವಾಗಿ ತಂದಿದ್ದಾರೆ. ಶ್ರವಣಬೆಳಗೊಳದ ಹಲವಾರು ಶಾಸನಗಳಲ್ಲಿ ಈ ರೀತಿಯಾದ ಪ್ರಸಕ್ತಿಯನ್ನು ಕಾಣಬಹುದು. ಶಾಸನವೊಂದರಲ್ಲಿ ಬಂದಿರುವ "ಬಾಲೇ ಪೆರ್ಗ್ಗೊರವಂ ಸಮಾಧಿನೆಱಿದೊನ್"[೬೩] ಎಂಬ ಶಾಸನವಾಕ್ಯದಲ್ಲಿ 'ಬಾಲೇ' ಎಂಬ ಸಂಬೋಧನಾ ವಿಭಕ್ತಿ ಪ್ರತ್ಯಯದ ಬಳಕೆಯಾಗಿರುವುದು ಪದ್ಯಕ್ಕೆ ನಾಟಕೀಯತೆ ಮತ್ತು ಕಾವ್ಯಾತ್ಮಕ ಪರಿಸರದ ನಿರ್ಮಾಣಕ್ಕೆ ಕಾರಣವಾಗುತ್ತದೆ. ಹಾಗೆಯೇ ಸ್ವರ್ಗ್ಗಾಗ್ರಮಾನೇಱಿದಾರ್, ಸೌಖ್ಯಸ್ಥನಾಯ್ದಾನ್, ಸ್ವರ್ಗ್ಗಾಲಯಂ ಏಱಿದಾರ್, ದಿವಮೇಱಿದಾನ್ ಮುಂತಾದ ವಾಕ್ಯಗಳಲ್ಲಿರುವ"[೬೪] ದೀರ್ಘಯುಕ್ತ ಪ್ರತ್ಯಯಗಳ ಬಳಕೆಯು ಆ ಸಂನ್ಯಾಸಿಗಳು ಸಾಧನೆಯ ಮೂಲಕ ಪದವಿಗೆ ಏರುವುದನ್ನು ಮಾತುಗಳಲ್ಲಿ ಅಭಿನಯಿಸಿ ತೋರಿಸುತ್ತಿರುವಂತೆ ಭಾವನೆಯುಂಟು ಮಾಡುತ್ತಾ ಸಾರ್ಥಕವಾಗುತ್ತವೆ.

ತಿಪಟೂರು ತಾಲ್ಲೂಕು ತಿಪಟೂರು ಹೋಬಳಿ ಕರಡಾಳು ಗ್ರಾಮದ ಶಾಸನದಲ್ಲಿ ಹರ್ಯ್ಯಲದೇವಿಯು ತನ್ನ ಮಗ ಬೂವಯನಾಯಕನಿಗೆ ತನ್ನ ಅವಸಾನ ಕಾಲದಲ್ಲಿ "ಬೂವಯನಾಯಕ ಕೆಮ್ಮಗೆ ಎನ್ನ ನೀಂ ಕನಸಿನೊಳಪ್ಪಡಂ ನೆನೆಯದಿರು ನೆನೆ ಸಾಶ್ವತಮಪ್ಪ ಧರ್ಮ್ಮಮಂ, ಧರ್ಮ್ಮಮನ್ ಆಗಳುಂ ಮುದದೆ ಮಾಳ್ಪುದು ಮಾಡಿದೊಡೆ ಅಪ್ಪುದು 'ಆವುದು ಆ ಧರ್ಮ್ಮದಿಂ ಎಂಬೆಯಪ್ಪೊಡೆ ಸುರೇಂದ್ರ ನರೇಂದ್ರ ಫಣೀಂದ್ರ ರಾಜ್ಯಮಂತೆ ಒರ್ಮ್ಮೊದಲು ಅಪ್ಪುದಾಗಿ ಕಡೆಯೊಳೆ ವರಮುಕ್ತಿಯನೀವುದು ಅನ್ತಱಿಂ ಧರ್ಮ್ಮದನಾಗು"[೬೫] ಎಂದು ಮುಂತಾಗಿ ಬಂದಿರುವ ಶಾಸನದ ಭಾಗವನ್ನು ನಾಟಕೀಯವಾದ ಉಪದೇಶಾತ್ಮಕವಾದ ರೀತಿಗೆ ಉದಾಹರಣೆಯಾಗಿ ನೀಡಬಹುದು. ಇಮ್ಮಡಿ ವೀರಬಲ್ಲಾಳನ ಪರಾಕ್ರಮವನ್ನು ಬಣ್ಣಿಸುತ್ತಿರುವ ಕ್ರಿ.ಶ.೧೨೦೨ರ ಬೆಂಡೆಕೆರೆಯ ಶಾಸನದಲ್ಲಿ[೬೬] ಬಂದಿರುವ "ಮುಳಿಸಿಂದ ಏಳ್ತಂದು ನಮ್ಮಂ ಬಳಸಿದೊಡೆ ಅರಿದು ಇಂತು ಈತನೊಳ್ ಕಾದಲುಂ ನಂಮಳವಲ್ಲಂ ಕಾಣ್ಬೆವು ಎಂದು ಆ ರಿಪುನೃಪರು ಅಗಿದು ಎಯ್ತಂದು ದೇವ ಎಮ್ಮನು ಈ ಸ್ಥಳದಿಂ ಬಿಟ್ಟು ಎರ್ದ್ದು ಪೋಪಂತಿರೆ ನೆನೆಯದಿರು" ಎಂಬ ಭಾಗವನ್ನು ಈ ರೀತಿಯಾದ ಪ್ರಕ್ರಿಯೆಗೆ ಮತ್ತೊಂದು ಉದಾಹರಣೆಯಾಗಿ ಗಮನಿಸಬಹುದು.

೩. ಪದ್ಯಶಾಸನಗಳಲ್ಲಿ ಕಾಣಬಹುದಾದ ಮತ್ತೊಂದು ಲಕ್ಷಣವೆಂದರೆ ಪ್ರಶ್ನೋತ್ತರ ರೂಪದ ರಚನೆಗಳಾಗಿವೆ. ಇದರಿಂದಾಗಿ ಹೇಳಬೇಕಾದ ವಿಷಯ ಮತ್ತು ಸನ್ನಿವೇಶದ ಸ್ಪಷ್ಟತೆಯೂ ಹೆಚ್ಚಾಗುತ್ತದೆ. ಉದಾಹರಣೆಗೆ 'ಗೊಮ್ಮಟಸ್ತುತಿ'ಯ ಈ ಪದ್ಯವನ್ನು ಗಮನಿಸಬಹುದು.[೧೭] "ಬಾಹುಬಳೀಶ ನಿದೇನುದಾತ್ತನೋ" ಎಂದು ವರ್ಣಿಸುವಾಗ ಕವಿಯು ಪ್ರಶ್ನೋತ್ತರ ರೂಪದಲ್ಲಿ ಹೀಗೆ ಬಣ್ಣಿಸಿದ್ದಾನೆ.

| | |
|---|---|
| ಅನುಪಮ ರೂಪನೇ | ಸ್ಮರನ್ |
| ಉದಗ್ರನೆ | ನಿರ್ಜ್ಜಿತಚಕ್ರಿ |
| ಉದಾರನೆ | ನೆಱೆಗೆಲ್ದುಂ ಇತ್ತನ್ ಅಖಿಳೋರ್ವ್ವಿಯಂ |
| ಅತ್ಯಭಿಮಾನಿಯೇ | ತಪಃಸ್ಥನುಮೆರಡಂಘ್ರಿಯಿತ್ತೆಳೆಯೊಳಿರ್ದ್ದ ಪುದೆಂಬನ್ |
| ಅನೂನಬೋಧನೇ | ವಿನಿಹಿತಕರ್ಮ್ಮಬಂಧನೆನ್ |

ಎಂಬ ವಾಕ್ಯಗಳನ್ನು ಗಮನಿಸಬಹುದು. ಹೊಯ್ಸಳ ವಿಷ್ಣುವರ್ಧನವನ್ನು ಕುರಿತಾದ ಬಣ್ಣನೆಯ ಪದ್ಯದಲ್ಲಿ"[೧೮]

| | |
|---|---|
| ಸ್ಥಿರನೇ | ಕಯ್ಯೊಳೆಧಾತ್ರಿಯಂ ನಿಲಿಸಿದಂ |
| ತೇಜಸ್ವಿಯೇ | ವಹ್ನಿಯಂ ಕೊರಗಿರ್ಪ್ಪಂ |
| ಕುಡಲಾರ್ಪ್ಪನೇ | ಕನಕಶೈಲಂ ದೂರವಾಗಿರ್ದ್ದ ನಿತ್ತರಿಸಿತ್ತು |
| ಏ ಶುಚಿಯೇ | ನಿರೀಕ್ಷಿಸಿದವರ್ ನಿಃಪಾಪಿಗಳು |
| ಚೆಲುವನೇ | ಹರನಂ ಮೋಹಿಸಲೆನ್ತು ವಾರ್ಪ್ಪರಧಿಕಂ |

ಎಂಬುದಾಗಿ ಬಂದಿರುವ ವಾಕ್ಯಗಳನ್ನು ಗಮನಿಸಬಹುದು. ಇದೇ ರೀತಿಯಾದ ಪದ್ಯಗಳನ್ನು ಮಹಾಸಾಮಂತ ಗೋವಿಯ[೧೯], ಕೊಯ್ಲಾಳರ ಬಣ್ಣನೆ[೨೦]ಯ ಪದ್ಯಗಳಲ್ಲಿ ಕಾಣಬಹುದಾಗಿದೆ.

೪. ಸಂದರ್ಭಾನುಸಾರವಾಗಿ ಶಾಸನಗಳಲ್ಲಿ ವಿಷಯ ನಿರೂಪಣೆಯ ಸಂದರ್ಭದಲ್ಲಿ ಸಂಸ್ಕೃತ ಸೂಕ್ತಿ, ವಾಕ್ಯಗಳನ್ನು ಗಾದೆ ಮಾತುಗಳನ್ನು ಶಾಸನಕವಿಗಳು ಬಳಸುತ್ತಿದ್ದರು. ಇದರಿಂದಾಗಿ ಆ ಸನ್ನಿವೇಶದ ಅರ್ಥವಂತಿಕೆಯು ಹೆಚ್ಚಾಗಲು ಸಾಧ್ಯವಾಗುತ್ತಿತ್ತು. "ಸುಪುತ್ರಃ ಕುಳದೀಪಕ", "ಪರೋಪಕಾರಾರ್ಥಮಿದಂ ಶರೀರಂ"[೨೧] ಪುಸಿಯಲ್ತು "ವೀರಭೋಜ್ಯಾ ವಸುಂಧರಾ"[೨೨] ಮೊದಲಾದ ಸಂಸ್ಕೃತ ಸೂಕ್ತಿ ವಾಕ್ಯಗಳು, "ಬೇರೊಳ್ ಬಿಸಿನೀರಂ ಪೊಯ್ದನ್" "ಪೆಣ್ಗಳಚಿತ್ತಂ ಹೊಸತನಱಸುತಿರ್ಪ್ಪುದು ಹೊಸತೆ"[೨೩] ಮೊಱಡಿಯ ಮೇಲೆ ಮಾದುಫಲಮಾದವೊಲು"[೨೪] ಮೊದಲಾದ ಗಾದೆಗಳನ್ನು ಕವಿಗಳು ಯಥೋಚಿತವಾಗಿ ಬಳಸಿದ್ದಾರೆ.

೫. ರಾಜಮಹಾರಾಜರ, ವೀರರ ಪರಾಕ್ರಮಗಳನ್ನು ಬಣ್ಣಿಸುವ ಸಂದರ್ಭದಲ್ಲಿ ಶಾಸನಕವಿಗಳು ಅನುಕರಣವಾಚಕ ಪದಗಳನ್ನು ಬಳಸಿದ್ದಾರೆ. ಆ ಮೂಲಕ ಆ ಪರಾಕ್ರಮಿಯ ಪರಾಕ್ರಮದ ತೀವ್ರತೆಯನ್ನು ಮನವರಿಕೆ ಮಾಡಿಕೊಡುವಲ್ಲಿ ಶಾಸನಗಳು ಯಶಸ್ಸನ್ನು ಪಡೆದಿವೆ ಎನ್ನಬಹುದು. ಉದಾಹರಣೆಗೆ : ವೀರ ಪೆರ್ಮ್ಮಾಡಿದೇವನ ಸಾಮಂತನಾದ ಮಲೆರಾಜರಾಜನ ಪರಾಕ್ರಮವನ್ನು ಬಣ್ಣಿಸುವಾಗ ಶಾಸನಕವಿಯು ಪದ್ಯದ ಪ್ರತಿಪಾದದಲ್ಲೂ ಅನುಕರಣ ವಾಚಕ ಪದಗಳನ್ನು ಬಳಸುವ ಮೂಲಕ ಆತನ ಪರಾಕ್ರಮದ ತೀವ್ರತೆಯನ್ನು ನಿರೂಪಿಸುತ್ತಾನೆ.[೨೫] ಶಾಸನ ಪದ್ಯವು ಈ ರೀತಿಯಾಗಿದೆ.

**ಅರಿಪುರದೊಳ್ ದಗದ್ದಗಿಲ್‌ಧಂಧಗಿಲೆಂಬುದರಾತಿ ಭೂಮಿಪಾ**
**ಳರಶಿರದೊಳ್ ಗರಿಲರಿಗರಿಲರಿ ಎಂಬುದು ವೈರಿಭೂತಳೇ**
**ಶರಕರುಳೊಳ್ ಚಿಮಿಲ್ಚಿಮಿಚಿಮಿಲ್ಚಿಮಿಲೆಂಬುದು ಕೋಪವಹ್ನಿದು**
**ರ್ದ್ಧರತರವೆಂದೊಡಳುಕುರದೆ ಕಾದುವರಾರ್ಮ್ಮಲೆರಾಜರಾಜನೊಳ್ ॥**

ಭೈರವ ಮಹೀಪಾಳನ ವಿಜಯಯಾತ್ರೆಯ ವರ್ಣನೆಯ ಸಂದರ್ಭವನ್ನು ಬಣ್ಣಿಸುವ

**ಕಡಲುಱೆತುಳ್ಕೆ ದಿಕ್ಪತಿಗಳಳ್ಕೆ ದಿಶಾಗಜಮುಳ್ಕೆ ಭೂತಳಂ**
**ಜಡಿಯೆ ಕುಲಾಚಲಂ ಕೆಡೆಯೆ ವೈರಿ ನೃಪಾಲರಂ ಹೃದ್ಘಟಂಗಳಂ**
**ತೊಡೆಯೆ ಧಡಂ ಧಡಂ ಧಡ ಧಡೆಂದುದು ಭೂರಿ ಗಂಭೀರ ಭೇರಿ ದೀಂ**
**ಕಿಡೆ ವಿಜಯಪ್ರಯಾಣದೊಳು ಭೈರವ ಭೂವರನೇಂ ಪ್ರತಾಪಿಯೋ**[೨೬]

ಎಂಬ ಪದ್ಯದಲ್ಲಿ ಶಾಸನಕವಿಯು ಮೂರನೆಯ ಪಾದದಲ್ಲಿ ಅನುಕರಣ ವಾಚಕಗಳನ್ನು ಸಮರ್ಥವಾಗಿ ಬಳಸುವ ಮೂಲಕ ಭೈರವ ಮಹೀಪಾಲನ ವಿಜಯಯಾತ್ರೆಯ ಸಂದರ್ಭದಲ್ಲಿ ಆತನ ಕೀರ್ತಿ ಡಂಗುರದ ಶಬ್ದದ ಮಹಿಮೆಯನ್ನು ಸೊಗಸಾಗಿ ನಿರೂಪಿಸಿದ್ದಾನೆ. ವೀರಬಲ್ಲಾಳನು 'ಸೇವುಣಬಳ'ವನ್ನು ಗೆದ್ದ ವಿಚಾರವನ್ನು ಬಣ್ಣಿಸುವ

**ಉರಿಯಂತಂತಟ್ಟಯಿಂ ಸುಟ್ಟುರಿಸೆ ನೆಗೆಯೆನೆತ್ತರ್ಮಹೀಚಕ್ರದೋ**
**ಳ್ಗರಿಕೆಂತಂತೆತ್ತಲುಂ ಪಂದಲೆ ಪಡೆಲಿಡೆ ಧಂಧಂಧಗಿಲ್ಘುಭ್ಘುಗಿಲ್ ಘಂ**
**ಘರಿಲೆಂದೇನಳ್ವಿತೋ ಸೇವುಣ ಬಳವನಮಂ ವೀರಬಲ್ಲಾಳಕೋಪೋ**
**ದ್ಧುರದಾವೋಗ್ರಾನಳಂ ಶಾತ್ರವನೃಪತಿಮೃಗಭ್ರಾತಮಳ್ಕಾಡುವಂನಂ**[೨೨]

ಎಂಬ ಪದ್ಯವನ್ನು ಈ ರೀತಿಯಾದ ಪ್ರಕ್ರಿಯೆಗೆ ಉದಾಹರಣೆಯಾಗಿ ಗಮನಿಸಬಹುದು.

೬. ಶಾಸನದ ಪ್ರಮುಖ ಪಾತ್ರ ಅಥವಾ ವ್ಯಕ್ತಿಯನ್ನು ಬಣ್ಣಿಸುವಾಗ ಶಾಸನಗಳು ಪೌರಾಣಿಕ ಪಾತ್ರಗಳನ್ನು ಸನ್ನಿವೇಶಗಳನ್ನು ಉಪಮೆಯಾಗಿ ಬಳಸಿದ್ದಾರೆ. ಹಾಗೆ ಬಳಸುವಾಗ ಒಬ್ಬನಿಗಿಂತ

ಮತ್ತೊಬ್ಬನನ್ನು ಹೆಚ್ಚೆಂದು ನಿರೂಪಿಸುತ್ತಾ ಅಂತಿಮವಾಗಿ ಶಾಸನದ ನಾಯಕನೇ ಅವರೆಲ್ಲರಿಗಿಂತ ಶ್ರೇಷ್ಠನೆಂಬುವನಾಗಿ ಬಣ್ಣಿಸುವ ಪರಿಪಾಠವು ಬೆಳೆದು ಬಂದಿತ್ತೆನ್ನಬಹುದು. ಉದಾಹರಣೆಗೆ ತ್ರಿಭುವನ ಮಲ್ಲದೇವನ ಸಾಮಂತನಾದ ಕಾಳಿದಾಸ ಚಮೂಪನ ವಂಶಾವಳಿಯನ್ನು ಬಣ್ಣಿಸುವಾಗ ನಾಗವರ್ಮ್ಮವಿಭು ಮತ್ತು ನಾಗಿಯಕ್ಕನ ಮಗನಾದ ಚಾವುಂಡರಾಯನ ಗುಣಗಾನ ಮಾಡಿರುವ ಪದ್ಯದಲ್ಲಿ ತಿಣ್ಪು, ಗುಣ್ಪು ಮತ್ತು ಬಿಣ್ಪುವಿನಲ್ಲಿ ಈತನು ಅಧಿಕನಾಗಿರುವ ಬಗೆಯನ್ನು ಈ ರೀತಿಯಾಗಿ ವಿವರಿಸಲಾಗಿದೆ.[೭೮]

**ಹರಿಯಿಂದಂ ಮಂದರಂ ಮಂದರ ಮಂಥನ ದಿನಂಭೋಧಿಯಂ ಭೋದಿಯಿಂದಂ**
**ಧರೆಬನ್ನಂಬೆತ್ತುವಾ ಮಂದರಗಿರಿ ಸರಿಯೇತಿಣ್ಪಿನೊಳು ವಾರ್ದ್ಧಿಯೆತ್ತಂ**
**ದೊರೆಯೇ ಪೇಳ್ಗುಣ್ಪಿನೊಳುಧಾರಿಣಿ ಸರಿಸಮೆನಲು ಬಪ್ಪದೇ ಬಿಣ್ಪಿನೊಳುಮಂ**
**ದರಶೈಳಕ್ಕರ್ಣ್ಣವಕ್ಕುರ್ವ್ವರೆಗಧಿಕಗುಣಂನೋಡೆ ಚಾವುಂಡರಾಯಂ**

ತ್ರಿಭುವನ ಮಲ್ಲದೇವನ ಕಾಲದ ಮತ್ತೊಂದು ಶಾಸನದಲ್ಲಿ[೭೯] ಪ್ರತಿಕಣ್ಠಸಿಂಗನೆಂಬುವನ ಶೌಚಗುಣವನ್ನು –

**ಶುಚಿಸುರಸಿನ್ಧುಜಂ ಸುರಸರಿದ್ಭವನಿಂದನಿಲಪ್ರಿಯಾತ್ಮಜಂ**
**ಶುಚಿಗಗನಾಪಗಾತನೆಯನಿಂ ಪವಮಾನತನೂಜನಿಂ ಸುಕಂ**
**ಶುಚಿನೆಗಳ್ದಾನದೀಸುತನಿನಾಕಪಿರಾಜನಿನಾಸುಕರ್ಷಿಯಿಂ**
**ಶುಚಿಯೆನೆ ಸನ್ದನೇದೊರೆತೊ ಶೌಚಗುಣಂ ಪ್ರತಿಕಣ್ಡಸಿಂಗನ"**

ಎಂದು ಬಣ್ಣಿಸುವಾಗ ಕ್ರಮವಾಗಿ ಸುರಸಿನ್ಧುಜ, ಅನಿಲಪ್ರಿಯಾತ್ಮಜ, ಸುಕಮಹರ್ಷಿಗಳು ಶೌಚಗುಣದಲ್ಲಿ ಪ್ರಮುಖರಾದವರೆಂದೂ ಅವರಿಗಿಂತ ಪ್ರತಿಕಣ್ಠಸಿಂಗನ ಶೌಚಗುಣವು ಮಿಗಿಲಾದುದು ಎಂಬುದಾಗಿ ಕವಿಯು ನಿರೂಪಿಸುತ್ತಾನೆ.

ಇಮ್ಮಡಿ ವೀರಬಲ್ಲಾಳನ ಗುಣಾವಳಿಯನ್ನು ಪಟ್ಟಿ ಮಾಡುವಾಗ –

**ತನಗಂ ಕಳ್ಪದ್ರುಮಕ್ಕ ವಿತರಣಗುಣದೊಳು ಮಚ್ಚರಂ ಸೂದ್ರಕಂಗಂ**
**ತನಗಂ ವಿಕ್ರಾಂತ ವಿಜ್ರಂಭಿತಭುಜಬಲದೊಳು ಮಚ್ಚರಂ ಮೇರುವಿಂಗಂ**
**ತನಗಂ ಪೆಂಪುಳ್ಳಬಿಳ್ಪಂ ತಳೆದ ಮಹಿಮೆಯೊಳು ಮಚ್ಚರಂ ತಾ**
**ನೆನಲು ಧನ್ಯನಿಳಾಧೀಶರ್ಕ್ಕಳೊಳು ವಿಸ್ರುತವಿಸದಯಸಂ ವೀರಬಲ್ಲಾಳಭೂಪಂ** [೮೦]

ಎಂಬ ಶಾಸನ ಪದ್ಯದಲ್ಲಿ ವಿತರಣಗುಣದಲ್ಲಿ ಕಳ್ಪದ್ರುಮ, ವಿಕ್ರಾಂತ ವಿಜ್ರಂಭಿತ ಭುಜಬಲದಲ್ಲಿ ಸೂದ್ರಕ, ಪೆಂಪುಳ್ಳ ಬಿಳ್ಪಂ ತಳೆದ ಮಹಿಮೆಯಲ್ಲಿ ಮೇರುವಿಗೆ ಮಚ್ಚರವನ್ನುಂಟು ಮಾಡುವ ವ್ಯಕ್ತಿತ್ವವನ್ನು ವೀರಬಲ್ಲಾಳಭೂಪನು ಹೊಂದಿದ್ದನು ಎಂದು ಬಣ್ಣಿಸಲಾಗಿದೆ.

ಬಲಿ, ಕರ್ಣ, ಭೋಜ, ಮಾಂಧಾತನಿಗಿಂತ ದಾನಗುಣದಲ್ಲಿ ಸಾಳ್ವಮಲ್ಲನು ಭೂಮಿಯಲ್ಲಿ ಅಗ್ಗಳನೆಂಬುದನ್ನು –

**ಬಲಿಯಿಂ ಕರ್ಣನುಚಾಗಿಯಾ ಬಲಿಯಿನುದ್ಯತ್ಕರ್ಣನಿಂ ಭೋಜನಾ**

**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನೀ ಲೋಕದೊಳ್**

**ಬಲಿಯಿಂ ಕರ್ಣನಿನಂತೆ ಭೋಜವಿಭುವಿಂ ಮಾಂಧಾತನಿಂ ಚಾಗದ**

**ಗ್ಗಲನಾದಂ ಕಲಿ ಸಾಳ್ವಮಲ್ಲನವನಂ ತಾನೋಂತರೀ ಧಾತ್ರಿಯೊಳ್**[೮೧]

ಎಂಬುದಾಗಿ ಈ ಶಾಸನಪದ್ಯವು ಬಣ್ಣಿಸುತ್ತದೆ. ಒಟ್ಟಾರೆ ಶಾಸನ ಕವಿಗಳ ಕಣ್ಣಿಗೆ ಆ ಶಾಸನದ ನಾಯಕನ ವ್ಯಕ್ತಿತ್ವವು ಪುರಾಣಪ್ರಸಿದ್ಧರ ವ್ಯಕ್ತಿತ್ವಕ್ಕಿಂತ ಘನವಾದುದಾಗಿ ಕಂಡುಬರುತ್ತಿತ್ತು ಎನ್ನಬಹುದು.

### ೬.೬ : ಗದ್ಯಶೈಲಿ :–

ಕನ್ನಡ ಸಾಹಿತ್ಯದ ಪ್ರಾಚೀನತೆಯನ್ನು ಅರಿಯಲು ಶಾಸನಗಳನ್ನು ಅವಲಂಬಿಸಬೇಕಾಗುತ್ತದೆ. ಕನ್ನಡದಲ್ಲಿ ದೊರೆತಿರುವ ಮೊದಲನೆಯ ಶಾಸನವಾದ ಹಲ್ಮಿಡಿಯ ಶಾಸನವು ಗದ್ಯಶಾಸನವಾಗಿದ್ದು ಪೂರ್ವದ ಹಳಗನ್ನಡದ ಸ್ವರೂಪವನ್ನು ನಿರ್ವಚಿಸಲು ಪ್ರಮುಖವಾದ ದಾಖಲೆಯಾಗಿದೆ. ಹಲ್ಮಿಡಿಯ ಶಾಸನದ ನಂತರದಲ್ಲಿ ಗದ್ಯಶಾಸನಗಳು ಕಾಣಸಿಗುವುದು ಏಳನೆಯ ಶತಮಾನದಲ್ಲಿ. ಆದರೆ ಈ ಶತಮಾನದ ಗದ್ಯಶಾಸನಗಳಲ್ಲಿ ಕಲ್ಪನಾಂಶ, ಸಾಹಿತ್ಯಕವಾದ ಒಲವು ಅಷ್ಟಾಗಿ ಕಂಡುಬರುವುದಿಲ್ಲ. ಮುಂದಿನ ಶತಮಾನಗಳಲ್ಲೂ ಸಹ ಗದ್ಯಕ್ಕೆ ಹೆಚ್ಚಿನ ಪ್ರಮಾಣದ ಮಹತ್ವವು ದೊರೆಯಲಿಲ್ಲವೆನ್ನಬಹುದು. ಬಹುಶಃ ಇದಕ್ಕೆ ಸಾಹಿತ್ಯಕವಿಗಳು ಗದ್ಯಕ್ಕಿಂತ ಹೆಚ್ಚಾಗಿ ಪದ್ಯಕ್ಕೆ ಮಹತ್ವ ನೀಡಿದ ರೀತಿಯಲ್ಲಿಯೇ ಶಾಸನಕವಿಗಳು ಸಹ ಪದ್ಯದ ಕಡೆಗೆ ಒಲಿದರೆನ್ನಬಹುದು. ೯, ೧೦, ೧೧ನೆಯ ಶತಮಾನದ ಶಾಸನಗಳಲ್ಲಿ ಗದ್ಯಕ್ಕಿಂತ ಪದ್ಯಕ್ಕೆ ವಿಶೇಷ ಪ್ರಾಶಸ್ತ್ಯವು ದೊರೆಯಿತು. ರಾಜಾಶ್ರಯವನ್ನು ಪಡೆದಿದ್ದ ಕವಿಗಳು ಆಶ್ರಯದಾತರನ್ನು ಬಣ್ಣಿಸಲು ಒಂದು ರೀತಿಯಾದ ಪೈಪೋಟಿಗೆ ಇಳಿದ ಕಾರಣದಿಂದ ತಮ್ಮ ಕವಿತ್ವದ ಪ್ರದರ್ಶನಕ್ಕೆ ಅವರಿಗೆ ಗದ್ಯವು ಗೌಣವಾಗಿ ಪದ್ಯವು ಆಪ್ಯಾಯಮಾನವಾಯಿತು. ಪರಿಣಾಮವಾಗಿ ವರ್ಣನಾತ್ಮಕ, ಛಂದೋಬದ್ಧವಾದ ರಚನೆಯಾದ ಪದ್ಯದ ಕಡೆಗೆ ಹೆಚ್ಚಾಗಿ ಕವಿಗಳು ಗಮನವಿತ್ತರು. ಮುಂದೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಶಾಸನಗಳೆಲ್ಲಾ ಹೆಚ್ಚಾಗಿ ಗದ್ಯದಲ್ಲೇ ರಚನೆಯಾದರೂ ಸಹ ಸಾಹಿತ್ಯಕವಾದ ಅಂಶವು ಕಡಿಮೆಯಾಯಿತು. ಕೇವಲ ವಿಷಯ ನಿರೂಪಣೆಯ ಕಡೆಗಷ್ಟೇ ಕನ್ನಡ ಗದ್ಯದ ಬಳಕೆಯಾಯಿತೆನ್ನಬಹುದು.

ಸಂಸ್ಕೃತ ಭಾಷೆಯಲ್ಲಿ ರಚನೆಯಾದ ಶಾಸನಗಳಲ್ಲಿ ಕೊನೆಯಲ್ಲಿ ನೀಡಿದ ದಾನದ ವಿವರಗಳನ್ನು ನಿರೂಪಿಸುವಾಗ ಗದ್ಯವನ್ನು ಬಳಸಿರುವ ಪರಿಪಾಠವನ್ನು ಕಾಣಬಹುದು. ಹಾಗೆಂದ ಮಾತ್ರಕ್ಕೆ ಕನ್ನಡದ ಶಾಸನಗಳಲ್ಲಿ ಗದ್ಯಕ್ಕೆ ಮಹತ್ವದ ಸ್ಥಾನವಿರಲಿಲ್ಲವೆಂದು ಅರ್ಥವಲ್ಲ. ಸರಳವಾದ, ನೇರವಾದ ವಿಷಯ ಪ್ರತಿಪಾದಕವಾದ ಗದ್ಯದಿಂದ ಹಿಡಿದು ಪ್ರೌಢವಾದ ಚೂರ್ಣಿಕೆಯಂತೆ, ದಂಡಕಗಳಂತೆ ಮಾಲೆ ಮಾಲೆಯಾಗಿ ಓಡುವ ಗಂಭೀರಶೈಲಿಯ ಗದ್ಯಗಳವರೆಗೆ ಹಲವು ಪ್ರಕಾರಗಳನ್ನು ಕಾಣಬಹುದು. ಚಂಪೂಶೈಲಿಯ ಶಾಸನಗಳಲ್ಲಿ ರಾಜರ, ಸಾಮಂತರ, ಅಧಿಕಾರಿಗಳ, ಗುರುಗಳ, ಪಂಡಿತರ ಬಿರುದಾವಳಿಗಳೂ ಪ್ರಶಸ್ತಿಗಳೂ ವಿಸ್ತಾರವಾಗಿ ಬೆಳೆಯತೊಡಗಿದವು. ದೀರ್ಘ ಸಮಾಸಗಳಿಂದ ಕೂಡಿದ ಶಬ್ದಾಲಂಕಾರ ಭರಿತವಾದ ಅಲಂಕಾರಿಕವಾಗಿ ಅನುರಣಿತವಾಗುವ ಪದ ಗುಂಫನಗಳ ಪ್ರಶಸ್ತಿಯ ಭಾಗಗಳು ಮನಸೆಳೆಯುವಂತಿವೆ. ಶಾಸನ ರಚನಾಕಾರರು ಗದ್ಯಭಾಗವನ್ನು ವಿಶಿಷ್ಟವಾಗಿ ಮತ್ತು ವಿಶೇಷವಾಗಿ ಪ್ರಶಸ್ತಿಯ ಸಂದರ್ಭದಲ್ಲಿ, ವಂಶವರ್ಣನೆಯ ಸಂದರ್ಭದಲ್ಲಿ ವೀರಗಲ್ಲುಗಳ ಪಾಠಗಳನ್ನು ನಿರೂಪಿಸುವಾಗ ಹೆಚ್ಚು ಸಮರ್ಥವಾಗಿ ಬಳಸಿದ್ದಾರೆ.

**೬.೨ : ಪ್ರಶಸ್ತಿ ಗದ್ಯಗಳು :–**

ಸಾಮಾನ್ಯವಾಗಿ ರಾಜಮಹಾರಾಜರು, ಪುರಪ್ರಮುಖರು, ರಾಜವಂಶದ ಪ್ರಮುಖ ಸ್ತ್ರೀಯರು, ಸಮಾಜದ ಗಣ್ಯವ್ಯಕ್ತಿಗಳ ಗುಣಗಾನಗಳು ಗದ್ಯಭಾಗಗಳಲ್ಲಿ ನಿರೂಪಿಸಿರುವ ರಚನೆಗಳಾಗಿರುತ್ತವೆ. ಆರಂಭದ ಕಾಲದಲ್ಲಿ ಸರಳವಾಗಿದ್ದ ಈ ಭಾಗಗಳು ಮುಂದೆ ಅವು ಅಲಂಕಾರಿಕವಾಗಿ, ಸಂಕೀರ್ಣವಾಗಿ ಬೆಳೆಯುತ್ತಾ ಹೋದವು ಎಂಬುದನ್ನು ಗಮನಿಸಬಹುದು.

ವಂಧಿ, ಮಾಗಧರು ಬಣ್ಣಿಸುವ ಶೈಲಿಯಲ್ಲಿ ಸರಳವಾಗಿರುವ ಪ್ರಶಸ್ತಿಗೆ ಗಂಗರಾಜ ಮಾರಸಿಂಹನನ್ನು ಬಣ್ಣಿಸಿರುವ ಗದ್ಯದ ಈ ಭಾಗವನ್ನು ಗಮನಿಸಬಹುದು.

**ಗಂಗರೊಳ್ಗಂಡಂ । ಗಂಗರ ಸಿಂಗಂ । ಗಂಗ ಚೂಡಾಮಣಿ । ಗಂಗಕಂದರ್ಪಂ ।**

**ಗಂಗವಜ್ರಂ । ಚಲದುತ್ತರಂಗಂ । ಗುತ್ತಿಯ ಗಂಗಂ । ಧರ್ಮಾವತಾರಂ ।**

**ಜಗದೇಕವೀರಂ । ನುಡಿದನ್ತೆಗಂಡಂ । ಅಹಿತ ಮಾರ್ತಾಂಡಂ ।**[೮೨]

ಹೊಯ್ಸಳರ ವೀರಬಲ್ಲಾಳನ ಶಾಸನಗಳಲ್ಲಿ ಕಂಡುಬರುವ

**ಶನಿವಾರ ಸಿದ್ಧಿ । ಸದ್ಧರ್ಮ ಬುದ್ಧಿ**

**ಗಿರಿದುರ್ಗಮಲ್ಲ । ರಿಪುಹೃದಯಮಲ್ಲ**

**ಚಲದಂಕರಾಮ । ರಣರಂಗಭೀಮ**

**ಕದನ ಪ್ರಚಂಡ । ಮಲಪರೊಳ್ಗಂಡ ।**[೮೩]

ಎಂಬ ಭಾಗದಲ್ಲಿ ಪದ್ಯಲಯವಿನ್ಯಾಸವಿದ್ದರೂ ಇವು ಗದ್ಯದ ಪಂಕ್ತಿಗಳೇ ಆಗಿವೆ.

ಹೊಯ್ಸಳರ ಕಾಲದ ಬಹುತೇಕ ಶಾಸನಗಳಲ್ಲಿ "ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ದ್ವಾರಾವತೀಪುರವರಾಧೀಶ್ವರಂ ಯಾದವಕುಲಾಂಬರ ದ್ಯುಮಣಿ ಸಮ್ಯಕ್ತ ಚೂಡಾಮಣಿ ಮಲಪರೊಳ್ಗಂಡ ಕದನ ಪ್ರಚಂಡ" ಎಂಬ ಬಿರುದಾವಳಿಯು ಸಾಮಾನ್ಯವಾಗಿ ಕಂಡುಬರುತ್ತವೆ. ಆದರೆ ಅದಕ್ಕಿಂತ ವಿಶೇಷವಾಗಿ ಒಂದನೆಯ ನರಸಿಂಹನನ್ನು ಬಣ್ಣಿಸಿರುವ 'ದಂಡಕ'ದ ಮಾದರಿಯಲ್ಲಿರುವ ಪ್ರಶಸ್ತಿಯ ಗದ್ಯವು ವಿಶಿಷ್ಟವಾಗಿದೆ. ಈ ರೀತಿಯಾದ ಪದ್ಧತಿಯನ್ನು ಚೋಳ ದೊರೆಗಳು ಆರಂಭಿಸಿದರು. "ಚೋಳ ಅರಸರು ತಮ್ಮ ಶಾಸನಗಳಲ್ಲಿ ಅರಸನನ್ನು ಹೊಗಳುವ ಸಾಧನೆಗಳನ್ನು ಪಟ್ಟಿಮಾಡುವ ಪದ್ಧತಿ ಆರಂಭಿಸಿದರು. ಆಳ್ವಿಕೆಯ ವರ್ಷಗಳು ಹೆಚ್ಚಿದಂತೆಲ್ಲಾ ಈ ಪ್ರಶಸ್ತಿಗಳೂ(ಇವನ್ನು ಮೈಕೀರ್ತಿ ಎನ್ನುತ್ತಾರೆ) ಬೆಳೆದವು. ಕಲ್ಯಾಣಿ ಚಾಲುಕ್ಯರ ಶಾಸನಗಳಲ್ಲಿ ಕಾಣಿಸಿಕೊಳ್ಳುವಂತಹುವಲ್ಲ ಇವು. ಛಂದೋಬದ್ಧವಾಗಿ ಕಾವ್ಯಮಯವಾಗಿ ಬೆಳೆದ ಇವುಗಳನ್ನು ತಮಿಳಿನಲ್ಲಿ ದಂಡಕಗಳೆನ್ನುತ್ತಾರೆ. ಹೊಯ್ಸಳರ ಶಾಸನಗಳಲ್ಲಿ ಇವು ಸ್ಪಷ್ಟವಾಗಿ ಬಳಕೆಗೆ ಬಂದಿವೆ"[೮೪] ಎನ್ನಬಹುದು. ಹಳೇಬೀಡಿನ ಶಾಸನದಲ್ಲಿ ಬಂದಿರುವ ಒಂದನೆಯ ನರಸಿಂಹನ ಪ್ರಶಸ್ತಿ ಗದ್ಯವನ್ನು[೮೫] ಇಲ್ಲಿ ಗಮನಿಸಬಹುದು. ಶಾಸನದ ೧೯ನೆಯ ಪಂಕ್ತಿಯಿಂದ ೩೫ನೆಯ ಪಂಕ್ತಿಯವರೆಗೆ ವಿಸ್ತರಿಸಿರುವ ಈ ಭಾಗದ ಹರವು ಈ ರೀತಿಯಾಗಿದೆ.

ಸ್ವಸ್ತಿ ಸಮಸ್ತರಿಪುನೃಪಾನಮತ್ಸೀಮನ್ತಿನೀಸೀಮನ್ತಸಿಂಧೂರರೇಣು
ಘೂರ್ಣಿತ ನಿಜಪದ ಪಯೋಜ ವಿವಿಧಾರ್ತ್ಥಿಜನಕಲ್ಪಭೂಜ । ನಿಜವಿಜಯ
ಲಕ್ಷ್ಮೀಪ್ರಥಿತಬ್ರಿಹದ್ ಪ್ರಬಂಧಬಂಧುರ ಕಟಕವಿಕ್ಷೇಪಾಕ್ಷೂಣ ವಿಲಕ್ಷ್ಯವಿಸ್ತಾ
ರಿತಭುಜದಣ್ಡ । ವಿಪಕ್ಷಕ್ಷತ್ರಕುಳಕುಪಿತಕಾಳದಂಡ । ನಿಜವಿಜಯ
ಪ್ರಯಾಣ ಸಮಯ ಸಮುದ್ಭೂತ ಸ್ವರ್ಣ್ನಕೋಣ ನಿಹಿತಗಭೀರ
ಭೂರಿಭೇರಿ ಪ್ರಣಾದಾಕಂಪಿತ ಬ್ರಹ್ಮಾಂಡಭಾಂಡ । ಸಮರಪ್ರಚಂಡ । ಅತಿ
ವಿಪುಳಸಕಳ ಪ್ರಾಜ್ಯಸಾಮ್ರಾಜ್ಯಲಕ್ಷ್ಮೀಸರ್ವಾಂಗಸಂಗತಾಂಗ । ಸಹಜ
ಸೌಂದರ್ಯ್ಯ ನಿರ್ಜ್ಜಿತಾನಂಗ । ದರದಳಿತವದನಾರವಿಂದ ಪ್ರಸರದ
ಸರಾಳಸಹಜಸೌಗಂಧ್ಯಮಂದಮಕರಂದಾಸಹಸಿತಮೃಗಮದಾಮೋದ ।
ವಾಸನ್ತಿಕಾದೇವೀಲಬ್ಧವರಪ್ರಸಾರ । ತರಳತರತಾರಹಾರ ನೀಹಾರ ಸಾರ
ಘನಸಾರಕ್ಷೀರವಾರಾಶಿ ಪ್ರಪೂರಚಾರುವಾಜಿಸುಧಾಸಾರ ಸನ್ನಿಭನಿಜಯಶಃ
ಪ್ರಕಾಶ ಹರ್ಯ್ಯಕ್ಷಸದೃಕ್ಷಮಧ್ಯಪ್ರದೇಶ । ಅತಿಚತುರ ಭರತ ಚಿತ್ರ ಚಮತ್ಕಾರ
ತರವಿತತ । ಘನಸುಶೀಲಹೃದ್ಯವಾದ್ಯ ಲಘುಹಸ್ತತಾವರ್ಯ್ಯ ಚಾತುರ್ಯ್ಯ ।

ಅಸಹಾಯಸೌರ್ಯ್ಯ । ವುದ್ದಂಡಮಂಡಳಿಕ ಶಿರಃ ಪಿಂಡಖಂಡನ ಪ್ರಚಣ್ಡ ಪಂಚಾಸ್ಯ ತೀಕ್ಷ್ಣದಂಷ್ಟ್ರಾಯಮಾನದೋರ್ದ್ದಂಡಮಂಡಳ ಮಂಡಳಾಗ್ರಸಮರಮುಖ ಸಮುಚಿತಾಗ್ರ । ನೆರೆಮುಟ್ಟೆ ಗಂಡ । ದಳಮುಟ್ಟೆಗಂಡ ।ಗಂಡಭೇರುಂಡ । ಜಗದೊಳೆಗಂಡ । ಯಾದವನಾರಾಯಣ । ಸಕಳ ಕಳಾಪರಾಯಣ । ಮಲೆರಾಜರಾಜ । ಶ್ರೀವಿಷ್ಣುನೃಪತನೂಜ । ಮಲೆಪರೊಳ್ಗಂಡ । ಲಕ್ಷ್ಮಾಂಭಿಕಾ ಮುಖಾಂಭೋಜ ಮಾರ್ತ್ತಂಡ । ಆಂಧ್ರಪುರಂಧ್ರೀಮಾನಸಸರಃ ಖೇಳನರಾಜಹಂಸ । ಸಿಂಹಳ ಮಹಿಳಾ ಮುಖಾಂಭೋಜಹಂಸ । ಕರ್ಣ್ನಾಟೀಕಟೀಚಂಚತ್ಕಾಂಚನ ಕಟಿಸೂತ್ರ ಲಾಟವಧೂಟೀಕಪೋಳತಳಲಿಖಿತಶಸ್ತಕಸ್ತೂರಿಕಾಪತ್ರ । ಚೋಳವಿಳಾಸಿನೀ ಘನಸ್ತನಕಳಶಕುಂಕುಮ ಪಂಕ । ಗೌಳಾಂಗನಾನೇತ್ರೋತ್ಪಳ ಮೃಗಾಂಖ । ಬಂಗಾಳಬಾಳಿಕಾಲಾವಣ್ಯ...... ಕ....... ಣಿತಲೆತರಂಗ । ಮಾಳವೀಮುಖಕಮಳ ಸಹಜಾಮೋದಮಕರಂದಭೃಂಗ । ಶ್ರೀಮನ್ಮಹಾಮಂಡಳೇಶ್ವರಂ ತಳಕಾಡು ಗಂಗ ವಾಡಿನೊಳಂಬವಾಡಿ ಬನವಸೆಹಾನುಂಗಲುಚ್ಚಂಗಿಗೊಣ್ಡ ಭುಜಬಳವೀರಗಂಗ ಪ್ರತಾಪಹೊಯ್ಸಳ ನಾರಸಿಂಹದೇವರು ಶ್ರೀಮದ್ರಾಜಧಾನಿ ದೋರಸಮುದ್ರದ ನೆಲೆವೀಡಿನಲು ಪೃಥ್ವೀರಾಜ್ಯಂಗೆಯ್ಯುತ್ತಮಿರೆ ।....

ಹೊಯ್ಸಳ ವಿಷ್ಣುವರ್ಧನನ ಸುದೀರ್ಘವಾದ ಪ್ರಶಸ್ತಿಯನ್ನು ಬೇಲೂರಿನ ಶಾಸನದಲ್ಲಿ[೮೬] ಕಾಣಬಹುದು. ಇದೇ ರೀತಿಯಲ್ಲಿ ಸುದೀರ್ಘವಾಗಿರುವ ಚಾಳುಕ್ಯ ಚಕ್ರವರ್ತಿ ಇಮ್ಮಡಿ ಜಗದೇಕಮಲ್ಲನ ಸಾಮಂತನಾದ ವೀರಪಾಂಡ್ಯನ ಪ್ರಶಸ್ತಿಗದ್ಯವು[೮೭] ಗಮನಸೆಳೆಯುತ್ತದೆ.

ಹೊಯ್ಸಳ ವಿಷ್ಣುವರ್ಧನನ ಪಟ್ಟದರಸಿ ಶಾಂತಲಾದೇವಿಯನ್ನು ಹಲವಾರು ಶಾಸನಗಳು ಬಣ್ಣಿಸಿದ್ದು, ಆಕೆಯ ಗುಣಗಾನ ಮಾಡಿರುವ ಈ ಕೆಳಗಿನ 'ಪ್ರಶಸ್ತಿ'ಯು ಆಕೆಯ ವ್ಯಕ್ತಿತ್ವದ ಚಿತ್ರವನ್ನು ಸಮಗ್ರವಾಗಿ ನೀಡುವಂತಿದೆ. ಶ್ರವಣಬೆಳಗೊಳದ ಗಂಧವಾರಣ ಬಸದಿಯಲ್ಲಿರುವ ಶಾಸನದ[೮೮] ಪಾಠ ಹೀಗಿದೆ.

ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ ದ್ವಿತೀಯ ಲಕ್ಷ್ಮೀಲಕ್ಷಣ ಸಮಾನೆಯುಂ । ಸಕಳಗುಣಗಣಾನೂನೆಯುಂ ।ಮಭಿನವರುಗು ಮಿಣೀದೇವಿಯಂ ಪತಿಹಿತಸತ್ಯಭಾವೆಯುಂ । ವಿವೇಕೈಕಬ್ರಹಸ್ಪತಿಯುಂ । ಪ್ರತ್ಯುತ್ಪನ್ನವಾಚಸ್ಪತಿಯುಂ । ಮುನಿಜನವಿನೇಯಜನವಿನೀತಿಯುಂ । ಚತುಸ್ಸಮಯ ಸಮುದ್ಧರಣೆಯುಂ । ಲೋಕೈಕವಿಖ್ಯಾತೆಯುಂ । ಪತಿವ್ರತಾಪ್ರಭಾವ ಪ್ರಸಿದ್ಧಸೀತೆಯುಂ । ಸಕಳ ವಂದಿಜನ ಚಿಂತಾಮಣಿಯುಂ । ಸಮ್ಯಕ್ತ

**ಚೂಡಾಮಣಿಯುಂ । ಉದ್ವಿತ್ತಸವತಿಗಂಧವಾರಣೆಯುಂ । ಪುಣ್ಯೋಪಾರ್ಜ್ಜನ ಕರಣಕಾರಣೆಯುಂ । ಮನೋಜರಾಜವಿಜಯಪತಾಕೆಯುಂ । ನಿಜಕಳಾಭ್ಯುದಯ ದೀಪಿಕೆಯುಂ । ಗೀತವಾದ್ಯಸೂತ್ರಧಾರೆಯುಂ । ಜಿನಸಮಯಸಮುದಿತ ಪ್ರಾಕಾರೆಯುಂ ।ಜಿನಧರ್ಮ್ಮಕಥಾಕಥನಪ್ರಮೋದೆಯುಂ । ಮಹಾದಾಭಯ ಭೈಶಜ್ಯಶಾಸ್ತ್ರದಾನವಿನೋದೆಯುಂ । ಜಿನಧರ್ಮ್ಮ ನಿರ್ಮ್ಮಳೆಯುಂ । ಭವ್ಯಜನವಚ್ಛಳೆಯುಂ । ಜಿನಗನ್ಧೋದಕ ಪವಿತ್ರೀಕ್ರಿತೋತ್ತಮಾಂಗೆಯುಮಪ್ಪ॥**

ಪಟ್ಟದರಸಿ ಶಾಂತಲೆಯ ಪ್ರಶಸ್ತಿಯನ್ನು ಒಳಗೊಂಡಿರುವ ಮತ್ತೊಂದು ಶಾಸನವೆಂದರೆ ಬೇಲೂರಿನ ಚೆನ್ನಕೇಶವ ದೇವಾಲಯದಲ್ಲಿರುವ ಶಾಸನ[68] ಈ ಶಾಸನದ ಮತ್ತೊಂದು ವಿಶೇಷವೆಂದರೆ ಹೊಯ್ಸಳ ದೊರೆ ವಿಷ್ಣುವರ್ಧನನಿಂದ ನಿರ್ಮಿತವಾದ ಚೆನ್ನಕೇಶವ ದೇವಾಲಯ ಮತ್ತು ಚೆನ್ನಕೇಶವನೆಂಬ 'ಶ್ರೀಮದ್ವಿಜಯನಾರಾಯಣ' ದೇವರನ್ನು ಸೊಗಸಾಗಿ ಗದ್ಯದಲ್ಲಿ ವರ್ಣಿಸಲಾಗಿದೆ.

**ಚೆನ್ನಕೇಶವ ದೇವಾಲಯವು :-**

ಸ್ವಸ್ತಿಸಮಪ್ತಮಂಗಳಾಭ್ಯುದಯ ಕರಲಕ್ಷಣಲಕ್ಷಿತಮುಂ । ಶಬ್ದವಿದ್ದೆಯಂತೆ ಸೂತ್ರಮುಖಸಿದ್ಧಮುಂ । ಶ್ರುತಿ ಕದಂಬದಂತೆ ಪದಕ್ರಮಾನುವಿದ್ಧಮುಂ । ತ್ರಿವಿಕ್ರಮಾವತಾರದಿಂತಿರುಪಕ್ರಮ ಪ್ರವೃದ್ಧಮುಂ । ಚತುರ್ಮ್ಮುಖನನ್ತೆ ಕಮಳೋದ್ಭವಮುಂ । ಶಶಿಖಂಡ ಮಂಡನನಂತೆ ಶಿಳಾಪುತ್ರಿಕಾಳಂಕೃತಮುಂ ಶತಕ್ರತುವಿನಂತೆ ನಯನಾಭಿರಾಮಮುಂ । ಕುಳಗಿರಿಯಂತೆ ದೃಢಮೂಳಬನ್ಧಮುಂ । ಜಳಾಶಯದಂತೆ ಕುಮುದೋಲ್ಲಾಸಿಯುಂ । ಮೇರುಗಿರಿಯಂತೆ ಬಹುಕನಕ ಘಟಿತಮುಂ । ಹರಗಿರಿಯಂತೆ ವೃಷಪದಾಂಕಿತೆಯುಂ । ಗುರುವರಣ ಮಾಗಿಯುಂ ತಮೋಗುಣಮಲ್ಲದೆಯುಂ । ಸ್ತಂಭಸಂಭೃತಮಾಗಿಯುಂ ರಜೋಗುಣಮಲ್ಲದೆಯುಂ । ಗಹನಮಲ್ಲದೆಯುಂ ಜಳನಿಧಿಯಂತೆ ಗಂಭೀರಾಂತರಂಗಮಂ । ಹರ್ಷೋತ್ಕರ್ಷಕಾರಿಯಾಗಿಯುಂ ಸತ್ವಗುಣಮಲ್ಲದೆಯುಂ । ಸಿಂಹಗಜಾವಳಿಯನುಳ್ಳದಾಗಿಯುಂ । ಕನಕಶಿಖರಿಯಂತೆ ಧ್ರುವಗತಿನಿರತಮುಂ । ಚಂದ್ರಮಂಡಳದಂತೆ ಸುಧಾವಳಂಬಿಯುಂ । ರವಿಮಂಡಲದಂತೆ ವಿಯತ್ಪಥವರ್ತ್ತಿಯುಂ । ಗಗನಮಂಡಲದಂತೆ ಭಗಣಸಂಕ್ರಾನ್ತಮುಂ । ಬಹುಕೂಟಕೋ....... ಮಿಕಾದ್ಭಾಸಿತ ಶ್ರೀಮುಖದ್ವಾರಮುಂ । ಉತ್ತಂಭಿತಧ್ವಜಪಟಪಲ್ಲ...... ಮಾನಗಗನವಳಯಮುಂ । ಧರಾಭಾರಧೀರನಾಗರಾಜಹೃದಯದರ್ಶಿತ ಗುರುತ್ವಮುಂ । ಲಬ್ಧಮಹತ್ವ....... ಮಪ್ಪಶ್ರೀಮನ್ಮಮಹಾಪ್ರಾಸಾದದೊಳೆ ॥

ಚೆಂನನುವೆನಿಪ ಶ್ರೀಮದ್ವಿಜಯನಾರಾಯಣದೇವರು –

ಸ್ವಸ್ತಿ ಸಮಸ್ತ ಜಗದುದಯ ಕರ ಚತುರ ಚತುರಾನನೋದ್ಭೂತಿಪೂತ ಪುಂಡರೀಕ ದಳಧವಳಿತೋದರ...... ಕ್ತಹಳಮುಖಸಮಾಕೃಷ್ಟಯಮ್ನಾನದೀಪ್ರವಾಹ ವಿದಿತ ಸಾಮರ್ಥ್ಯ ಮುದ್ರಾಭದ್ರಬಳಭದ್ರಸಹೋದರನುಂ । ಅಮೃತಮಥನ ಸಮಯ ಸಂಸಿಕ್ತ ಸುವ್ಯಕ್ತ ಬಿಂದುಬೃಂದ ತಾರಕಿತವಿಕಟವಕ್ಷಸ್ಥಳವಿಯ....... ನಿಜಖುರಘಟಿತಬಿಳಗಳಿತ ಸಕಳಜಳಧಿಜಳಕರ್ದ್ದಮಿತ ಪಾತಾಳ ಪಂಕ ಕೇಳೀವಿಲೋಳ ವರಾಹರೂಪಹೇಳಾಸಮತ್ತಾಳಿತಧರಾತಳಮಂ ಜಗತ್ಕಂಟಕೋತ್ಕಣ್ಠ ದಶಕಣ್ಠ ಕಾಂಡಷಂಡಖಂಡನ ಪ್ರಚಂಡ ಕಾಂಡಮ...... ಸಮುದ್ಭೂತ ವಿಜಯ ವಿಖ್ಯಾತರಾಮಾವತಾರನುಂ । ಧರಣೀಭಾರಾವ ತಾರರಚಿತ ಪಾಂಡವೋಪಕಾರನುಂ । ಬಳಿಕರನಿಯುಕ್ತಧಾರಾಪ್ರವರ್ದ್ಧಮಾನ ವೃದ್ಧಿಲತಾ ರೂಢೋದ್ದಂಡ ಪದ್ಮಜಾಂಡಸ್ಪೃಗಾಧಾರದಂಡಾಯ ಮಾನಕಳೇವರವರತ್ರಿವಿಕ್ರಮಾವತಾರ ಮಿತಧರಣೀಮಂಡಲನುಂ । ಅತಿಕ್ರೂರ ದನುಜವಿನಾಶವಿರಚಿತೋಪಾಯ ರಕ್ಷಿತಾಖಂಡಳನುಂ । ಸುರಾಸುರಕರಾಕೃಷ್ಯಮಾಣ ಮಂದರಭ್ರಮಣಭರಸಹಾತಿಧೀರಕಮಠಾಕಾರ ದರ್ಶಿತ ದೃಢತ್ವನುಂ । ಪರಮಮಹತ್ಪರಿಮಾಣಗರ್ಭೀಕೃತಸಕಳ ಸತ್ವನುಂ । ಅಜ್ಞಾತಪರಮಾರ್ತ್ಥಸ್ವರೂಪನಾಗಿಯುಂ ಪ್ರಕಟನುಂ । ಅನಿಕಟೀಕೃತನಿಕಟನುಂ । ಅದೂರೀಕೃತದೂರನುಂ । ಅತುಂಗೀಕೃತತುಂಗನುಂ । ಅಸೂಕ್ಷ್ಮೀಕೃತಸೂಕ್ಷ್ಮನುಂ । ಅಗಹನೀಕೃತಗಹನನುಂ । ಅನವನತಗಭೀರನುಂ । ಅವಿಸ್ತಾರ್ಯ್ಯಮಾಣ ವಿಸ್ತೀರ್ಣ್ಣನುಂ । ಸಕಳಭುವನಸಂಪೂರ್ಣ್ಣನುಂ । ಸಂಸಾರ ಸಮುಚಿತತಮಸ್ಪಟಳವಿಘಟನ ಪ್ರದೀಪನುಂ । ಪರಂಬ್ರಹ್ಮಸ್ವರೂಪನುಂ । ಅರಿಪ್ರಸಂನನುಂ । ಚೆಂನನುಂವೆನಿಪ" ಎಂಬುದಾಗಿ ಬಣ್ಣಿತನಾಗಿದ್ದಾನೆ. ಚನ್ನಕೇಶವನನ್ನು ಬಣ್ಣಿಸುವಾಗ ಶಾಸನಕವಿಯು ಸೊಗಸಾದ ಗದ್ಯದಲ್ಲಿ ದಶಾವತಾರ ಮತ್ತು ಭಾಗವತದ ಪ್ರಸಂಗಗಳನ್ನು ಬಳಸಿಕೊಂಡು, ಮುಕ್ತಾಯದಲ್ಲಿ "ಅಣೋರಣೀಮಾನ್ ಮಹತೋಮಹೀಯಾನ್" ಎಂಬ ಉಪವಿಷದ್ವಾಕ್ಯದ ರೀತಿಯಲ್ಲಿ ದೇವರ ಮಹಿಮೆಯನ್ನು ಕೊಂಡಾಡಿದ್ದಾನೆ.

ರಾಜವಂಶೀಕರ ಪ್ರಶಸ್ತಿಯನ್ನು ಗದ್ಯದಲ್ಲಿ ನಿರೂಪಿಸಿರುವಂತೆಯೇ ಮಾಂಡಳಿಕ, ಸಾಮಂತರನ್ನೂ ಸಹ ಹಲವಾರು ಶಾಸನಗಳಲ್ಲಿ ಗದ್ಯರೂಪದ ಪ್ರಶಸ್ತಿಯಲ್ಲಿ ಬಣ್ಣಿಸಲಾಗಿದೆ. ಅಂತಹವುಗಳಲ್ಲಿ ಕಾದಂಬ ಕುಲದ ದಯಾಸಿಂಹ ನೃಪನನ್ನು ಕುರಿತ ಶಾಸನದ ಈ ಭಾಗವನ್ನು ಗಮನಿಸಬಹುದು.[೬೦]

ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರಂ । ಬನವಸಿಪುರವರಾಧೀಶ್ವರಂ ಅತಿಬಹಳಬಳವ್ಯೂಹ ವಿದ್ವಿಡುಶ್ರೀಪಾಳಸಂಹಾರಪ್ರಚಂಡದೋರ್ದಂಡಕೋದಣ್ಡ ಪಾರ್ಥಸ..... ತೀರ್ಥ। ವಿರೋಧಿನರಪಾಳ ಜಾಳಕುಜವಿಚ್ಛೇದನಕುಠಾರರಾಜರಾಜ ಕಾದಂಬ ಕುಳಕಮಳಕಮಳ ಮಾರ್ತ್ತಣ್ಡ ।

ಸಮರಪ್ರಚಣ್ಣ । ವಿನಯ ವಿನಮದ್ವಿಳಾಸಿನೀ ಕದಂಬ ಬಾಳಕಾಳಂಬಚರಣನಖಕಿರಣಕಳಾಪೆಯುಂ । ಪಾವನಚರಿತ್ರೆಯುಮಪ್ಪಮೇಚಲದೇವಿಯರ ಪುತ್ರ ಕ್ಷತ್ರಿಯಪವಿತ್ರ । ಸಿದ್ಧವಿದ್ಯಾಧರ ಸುರಾಸುರನರೋರಗೇನ್ದ್ರವನ್ದಿತ ಸಮಾಂಬಕ ಶ್ರೀಮಹಾದೇವಪಾದಪಂಕಜೋನ್ಮತ್ತ ಮಧುಕರ ವಿನಯ ರತ್ನಾಕರ । ಲಾವಣ್ಯಸಿಂಧುವೇಳಾಲೀಳಾಯಮಾನಾತಿಬಂಧುರ ವಿದಗ್ಧ...... ಕದಂಬಗೀತವಾದ್ಯನ್ರಿತ್ಯ ವೇಣುವೀಣಾರವ ಸಂಗತ ಮಂಗಳಪಾಠಕ ವಿಜೃಂಭಿತಾಸ್ಥಾನ......। ಕಾವ್ಯನಾಟಕ ವಿಚಾರ ಪ್ರಸಂಗ । ಶತ್ರು ಕ್ಷತ್ರಿಯಕಳತ್ರ ಗರ್ಬ್ಬಸ್ರಾವ ಸಂಪಾದಕ ವಿಜಯ ಗಂಭೀರಶಂಖನಾದ । ಶ್ರೀಮದೆಕ್ಕಲದೇವೀಲಬ್ಧ ವರಪ್ರಸಾದ । ಪರೋಪಕಾರಕರಣ ಜೀಮೂತವಾಹನ । ಕದನಮಯೂರ ವಾಹನ । ತರ್ಕ್ಕವ್ಯಾಕರಣ ಚಿತ್ರಪತ್ರ ಭರತಾದ್ಯಾನೇಕ ಚೌಶಷ್ಟಿಕಳಾಸಮಗ್ರ ಚಾತುರ್ಯ್ಯ ಚತುರಾನನ । ಸಾಹಸದಶಾನನ । ಕಾನೀನಸಮಾನೌದಾರ್ಯ ಗಜದಾನ ದೀಕ್ಷಾಗುರು ಪ್ರಸಿದ್ಧ ಸಮಸ್ತಾಗಮಪ್ರಬುದ್ಧ । ಭುವನಭವನ ದಶದಿಶಾ ವಳೆಯನ್ತರಾಳವಿಖ್ಯಾತ । ರಾಜಮಾಂಧಾತ । ಅನೇಕೋಪಾಯನಿಪುಣ ಪ್ರವೀಣ ಪದ್ಮೋದರ । ವೀರವೃಕೋದರ । ಉದ್ವೃತ್ತರಾತಿಭೂಪಾಳಜಾಳಬಳವಿಳಯಕಾಳಾನಳ । ಮಣ್ಡಳಿಕ ಬಹಳ ಕೋಳಾಹಳ । ಪ್ರಚಂಡದೋರ್ದ್ದಂಡಮಣ್ಡಳಾಗ್ರಖಣ್ಡಿತಾರಾತಿಮಣ್ಡಳಿಸೈನ್ಯಸಂಘಾತ । ಮದಾರಾತಿಮಣ್ಡಳಿಕನಿರ್ಗ್ಘಾತಕ್ರೂರಾರಾತಿಮಣ್ಡಳಿಕದರ್ಪದಳನಸಮರ ಕೇಳೀಪ್ರಳಯಕಾಳಭೈರವ ಉದ್ದಣ್ಡಮಣ್ಡಳಕ ವೇದಣ್ಡಕಂಠೀರವ । ವಿಭ್ರಮವಿಳಾಸ ಲಾವಣ್ಯ ನವಯೌವನೋನ್ಮತ್ತ ವಾರಾಂಗನಾಜನಮನೋಜಾತ । ಆರ್ತ್ಥಿಜನಪಾರಿಜಾತ । ನಂನಿಯಕೆಳೆಯ ಸೌಂದರ್ಯನಿಳೆಯ.... ವ । ಸಂಗ್ರಾಮದೊಳೊಪ್ಪುವನುಮೆನಿಸಿ ಧರಣೀಂದ್ರ ನನ್ತನೇಕಭೋಗಿಯುಂ ದಿವಸಕರನನ್ತೀವ್ರುಂನತತೇಜನುಂ । ಪೂರ್ಣ್ಣೇಂದುವಿನಂತೆ ಸಕಳಕಳಾಧರನುಮಪ್ಪ ಶ್ರೀಮತ್ತ್ರಿಭುವನಮಲ್ಲ ಪ್ರತಾಪದಯಸಿಂಹ ಮಹಾರಾಜಸ್ಥಿರಂಜೀಯಾತ್ ॥

ರಾಜವಂಶೀಕರು, ಮಾಂಡಳೀಕರನ್ನು ಹೊಗಳುವ ಪ್ರಶಸ್ತಿ ಗದ್ಯಗಳಲ್ಲಿ ವಿಶೇಷವಾಗಿ ಅವರ ಪರಾಕ್ರಮ, ರೂಪ ಸೌಂದರ್ಯ ವ್ಯಕ್ತಿತ್ವದ ನಿರೂಪಣೆಯು ಕಂಡುಬಂದಿರುತ್ತದೆ. ಹಾಗೆಯೇ ಧಾರ್ಮಿಕವಲಯದಲ್ಲಿ ಪ್ರಸಿದ್ಧರಾದವರನ್ನು ಬಣ್ಣಿಸಿರುವ ಗದ್ಯಭಾಗಗಳಲ್ಲಿ ಅವರ ವಿದ್ವತ್ತು, ಅವರ ಘನತೆವೆತ್ತ ವ್ಯಕ್ತಿತ್ವವನ್ನು ಕಾವ್ಯಾತ್ಮಕವಾಗಿ ನಿರೂಪಿಸಿರುವುದನ್ನು ಕಾಣಬಹುದಾಗಿದೆ. ಇದಕ್ಕೆ 'ಶ್ರೀಮೂಲಸಂಘದ ಕೊಣ್ಡಕುನ್ದಾನ್ವಯದ ಕ್ರಾಣೂರ್ಗ್ಗಣಮೇಷ ಪಾಷಾಣಗಚ್ಛದ ಶ್ರೀಮತು ಪ್ರಭಾಚಂದ್ರಸಿದ್ಧಾನ್ತದೇವರ"ನ್ನು ಬಣ್ಣಿಸಿರುವ ಶಾಸನದ ಭಾಗವನ್ನು[61] ಗಮನಿಸಬಹುದಾಗಿದೆ.

"ಅವರಿಂ ಬಳಿಕಮಕಳಂಕ ಸಿಂಹಾಸನಮನಳಂಕರಿಸಿ ನೆಗರ್ದ್ದ ತಾರ್ಕ್ಕಿಕ ಚಕ್ರೇಶ್ವರರುಂ । ವಾದೀಭಸಿಂಹರುಂ । ಪರವಾದಿಕುಳಕಮಳವನಮದ ಮಾತಂಗರುಂ । ಬೌದ್ಧವಾದಿತಿಮಿರ ಪತಂಗರುಂ। ಸಾಂಖ್ಯವಾದಿಕುಳಾದ್ರಿವಜ್ರಧರರುಂ । ನೈಯ್ಯಾಯಿಕಾಚಾರ್ಯ್ಯ । ಭೂಜಾತಕುಠಾರರುಂ ।

ಮೀಮಾಂಸಕಮತ ಘನಾಘನಪ್ರಚಣ್ಡ ಪವನರುಂ । ಸಿದ್ಧಾನ್ತವಾರ್ದ್ಧಿ ವರ್ದ್ಧನ ಸುಧಾಕರರುಂ । ಸಕಳಸಾಹಿತ್ಯಪ್ರವೀಣರುಂ । ಮನೋಭವಭಯರಹಿತರುಂ । ಜಿನಸಮಯಾಂಬರ ದಿವಾಕರರು ಮಪ್ಪ ಶ್ರೀಮೂಲ ಸಂಘದ ಕೊಣ್ಡಕುನ್ದಾನ್ವಯದ ಕ್ರಾಣೂರ್ಗ್ಗಣ ಮೇಷಪಾಷಾಣಗಚ್ಛದ ಶ್ರೀಮತು ಪ್ರಭಾಚಂದ್ರಸಿದ್ಧಾನ್ತದೇವರ್ । ಎಂಬುದರಲ್ಲಿ ಈ ಪ್ರಭಾಚಂದ್ರಸಿದ್ಧಾನ್ತದೇವರನ್ನು ಬಣ್ಣಿಸುವಾಗ ಶಾಸನಕವಿಯು ಸೊಗಸಾದ ಹಲವಾರು ರೂಪಕಗಳನ್ನು ಬಳಸಿದ್ದಾನೆ.

ಹರಿಹರ ಕವಿಯ ರಗಳೆಗಳಲ್ಲಿನ ಗದ್ಯದ ಸೊಗಸನ್ನು ಹೋಲುವಂತಹ ಗದ್ಯಭಾಗವನ್ನು ಮಾವನೂರಿನ ಶಾಸನದಲ್ಲಿ[3] ಕಾಣಬಹುದಾಗಿದೆ. ವಿಶೇಷವಾಗಿ ಮಾವನೂರಿನ ಚಿಕ್ಕ ಒಡೆಯನಾದ ಅಪ್ಪರಸಯ್ಯನನ್ನು ಬಣ್ಣಿಸುವಾಗ ವೀರಶೈವ ಪಾರಿಭಾಷಿಕ ಪದಗಳನ್ನು ಬಳಸಿರುವುದು ಗಮನಾರ್ಹವಾಗಿದ್ದು ಶಾಸನದ ಭಾಗ ಈ ರೀತಿಯಾಗಿದೆ.

"ಶಿವನ ವುಭಯನೇತ್ರದಿಂ ಚಂದ್ರಸೂರ್ಯ್ಯರೊಗೆದಂತೆ । ಪರ್ವ್ವತ್ಯೈಯ್ಯನುಭಯವಹ ಕಾರುಂಣ್ಯಕಟಾಕ್ಷದಿಂದುದಯಿಸಿದ । ಅಪ್ಪೆಯ್ಯದೇವರಸರಂ ಕಂಡು ಕಾರುಣ್ಯಂ ಮಾಡಲುವೇಡಿ । ಚಂದ್ರಂಗೆ ಬೆಳುದಿಂಗಳಂ । ಬೆಳುದಿಂಗಳಿಂಗೆ ಪರಿಮಳಮಂ । ಪರಿಮಳಕ್ಕೆ ಸವಿಯಂ । ಸವಿಗೆ ರೂಪಂ । ರೂಪಿಂಗೆ ಸೌಂದರ್ಯ್ಯಮಂ ಕೊಡುವಂತೆ ವುಪದೇಶಂ ಮಾಡೆ । ಕೈಕೊಂಡ ಅಪ್ಪೈಯ್ಯದೇವರಸರು ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ । ಶಾಂತಿಸಾಕಾರವೆತ್ತಂತೆ । ಪರಮಾರ್ಥ್ಯಂ ಶರೀರವಡೆದಂತೆ । ಭಕ್ತಿಗ್ನಾನಂ ಸಂಸಾರವಂ ಸವಿವಂತೆ। ಮೆಱವುತ್ತೆ । ಲೋಭವಡಿಯಿಡದ ಕರಪಲ್ಲವಂಗಳ । ಅನ್ರುತವಂಕುಚಿಶದ ರಸನಾಪ್ರದೇಶದ । ಶಂಸ್ರುತಿ ಸರಸವಾಡದ ಚರಿತ ಸುದ್ಧಿಯ । ಕಾಮನ ಡಾಮರಕೊಳಸೋರದ ಮನದ ಬಿನದದ । ಮಾ ಎಯಾಗ್ಣೆಯ ನುಲ್ಲಂಗಿಸಿದ ಚಿತ್ತವ್ರಿತ್ತಿಯ । ಸಬ್ದಸ್ಪರುಶರೂಪುರಸಗಂಧಾದಿ ಭೋಗಕ್ಕೆಳಸದ ಕರುಣಾವಳಿಯ । ಮಹಾಮಹಿಮರೆನಿಸುವ ಅಪ್ಪೈಯದೇವರಸರು । ತಿಲಮಧ್ಯದೊಳಿರ್ಪ್ಪ ತೈಲದಂತೆ। ಕಾಷ್ಟಮಧ್ಯದೊಳಿಪ್ಪ ಅಗ್ನಿಯಂತೆ । ಜಲಮಧ್ಯದೊಳಿರ್ಪ್ಪ ಕಮಳದಂತೆ । ತಾವು ಮಾನುಷಚರಿತರಪ್ಪುದಱಿಂ ಸಂಸಾರಮಂ ಸೋಂಕದೆ ಅಣೋರಣೀಯಾಂ ಮಹತೋಮಹೀಯಾಂ ಎಂಬ ಸ್ರುತಿವುಂಟಾಗಿಯಿಱುಹೆ ಮೊದಲಾ ಪರಮಾಣುವಿನನೋದಂ ಸೈರಿಸದೆ ಯಿತ್ಸಾಸಕ್ತಿ ಗ್ನಾನಶಕ್ತಿ ಕ್ರಿಯಾಶಕ್ತಿವುಳ್ಳ ಶಿವನ ಭಕ್ತರಪ್ಪುದಱಿಂ । ವುಭಯತನುನಿಂದನಂತವಾದ್ಯದಿಂ ಶಿವನಂ ಕೇಳಿಸುತಂ ಅನವರತಂ ಶಿವನೊಳವಿರಳ ಪೂಜೆಯಂ ಮಾಡುತಂ । ಮೂಲೋಕಮಂ ತೀವಿದ ಶೈವಕೀರ್ತ್ತಿಯಂ ತಳೆದುದಪ್ಪೈಯದೇವರಶರು ಸುಖದೊಳಿರೆ ॥

ನಗರ – ನಾಡುಗಳ ಬಣ್ಣನೆಯನ್ನು ಸಾಮಾನ್ಯವಾಗಿ ಪದ್ಯದಲ್ಲಿ ನಿರೂಪಿಸುವುದು ವಾಡಿಕೆ. ಆದರೆ ಅಷ್ಟೇ ಸೊಗಸಾಗಿ ಮತ್ತು ಸಮರ್ಥವಾಗಿ ಶಾಸನಕವಿಯು ಬನವಾಸಿ ನಾಡಿನ ಪ್ರಕೃತಿ ಸೌಂದರ್ಯವನ್ನು ಗದ್ಯದಲ್ಲಿ ನಿರೂಪಿಸಿರುವ ಶಾಸನಭಾಗವು[೯೩] ಈ ರೀತಿಯಾಗಿದೆ.

**"ಅನ್ತು ನಾಡೊಳೂರೂರೋಳೋಳಿಯಿಂ ಬೆಳೆದ ಕಳಮೆಯ ಕೆಯ್ವೊಲಂಗಳಿಂದಲ್ಲಲ್ಲಿ ಪರಿವ ಪರಿಕಾಲ್ಗಳಿಂ ಪೂಗಪುಂನಾಗ ನಾಗವಕುಳ ಚಂಪಕಾವಿಚಕಿಳಕೇತಕೀಸುಗನ್ಧಕಣವೀರಸೇಮನ್ತಿಕಾ ಸೌರಭಾಭರಿತಮೆನಿಪ ಪುಜ್ಪವಾಟಂಗಳಿಂ । ಕೌಂಗುತೆಂಗುಕದಳೀ ವನ ಸಾಂಬ್ರಜಂಬೂದ್ರುಮಾದಿನಂದನಂಗಳಿಂ ಕರ್ತ್ತಲಿಪ ನಾಗವಲ್ಲೀವನಂಗಳಿನೊಸರ್ವ್ವತನಿರಸದ ಪುಂಡ್ರೇಕ್ಷುವಾಟಂಗಳಿಂ । ಕಂಪನು ಗುಳ್ವ ಕಮಳನೀಳೋತ್ಪಳವನಾವಳಿಯಿಂದತೀರಂಮ್ಯಮೆನಿಸಿ ಯೋಗಿಗಳ್ಗಂ ಭೋಗಾಶಕ್ತಿಯನಾಗಿಸುತ್ತಿರ್ಪ್ಪುದು"**

ಪ್ರಮುಖ ವಿದ್ಯಾಕೇಂದ್ರವಾಗಿ ೧೨ನೆಯ ಶತಮಾನದಲ್ಲಿ ಪ್ರಸಿದ್ಧವಾಗಿದ್ದ ಬಳ್ಳಿಗಾವೆಯ ಕೇದಾರಮಠವನ್ನು ಬಳ್ಳಿಗಾವೆಯ ಶಾಸನವೊಂದು"[೯೪] ಶ್ಲೇಷೆಯಲ್ಲಿ ಗದ್ಯದಲ್ಲಿ ಸೊಗಸಾಗಿ ಬಣ್ಣಿಸಿರುವುದನ್ನು ಕಾಣಬಹುದು. ಶಾಸನದ ಭಾಗವು ಹೀಗಿದೆ.

**"ಮತ್ತಮಾಮಠಂ ಕಮಠನನ್ತೆ ಸಕಳಜನಾಧಾರಮುಂ । ಪುರುಷಸಿಂಹನನ್ತೆ ಹಿರಣ್ಯಕಶಿಪುದಾನ ಸಂಶೋಭಿತಮುಂ । ಕುರುಕ್ಷೇತ್ರದನ್ತೆ ಸರಸ್ವತೀವಿಳಸಿತಮುಂ । ಖಚರಲೋಕದನ್ತೆ ವಿದ್ಯಾಧರಾಧೀಶ್ವರ ಪರಿವೃತಮುಂ । ಮನ್ದರಮಹಾಮಹೀಧರದನ್ತೆ ಸರ್ವ್ವದಿಕ್ಸಾರಭೂತಮುಂ । ವಾಸುದೇವನನ್ತಕ್ರೋರೋಕ್ತಿ ಶ್ರವಣರಮಣೀಯಮುಂ । ವಿವೇಕಿಯನ್ತೆ ವಿದ್ಯಾಭರಣವಿರಚಿತ ಸೌನ್ದರ್ಯ್ಯಮುಂ । ಗೋದಾವರೀ ತೀರದನ್ತೆ ಗೌತಮಾರ್ಯ್ಯ ಪರಚರ್ಯ್ಯಾ ಪರಿಕರಮುಮೆನಿಸಿ ಸೊಗಯಿಸುವುದಾ ಮಠ"॥**

## ೬.೮ : ವೀರಗಲ್ಲುಗಳ ಗದ್ಯ :-

ಶಾಸನ ಪರಂಪರೆಯಲ್ಲಿ ವೀರಗಲ್ಲುಗಳಿಗೆ ಮಹತ್ವವಾದ ಸ್ಥಾನವಿದೆ. ಆರಂಭದ ಕಾಲದ ವೀರಗಲ್ಲುಗಳಿಂದ ಹಿಡಿದು ವಿಜಯನಗರದ ಅರಸರ ಕಾಲದವರೆಗಿನ ವೀರಗಲ್ಲುಗಳ ಪಾಠಗಳ ನಿರೂಪಣಾ ವಿಧಾನವನ್ನು ಗಮನಿಸಿದಾಗ ಬಹುಪಾಲು ನೇರವಾಗಿ ವೀರನು ಮಡಿದ ತೇದಿ, ಯುದ್ಧ, ಅವನಿಗೆ ಅರಸರೋ, ಇನ್ನಿತರರೋ ಬಿಟ್ಟ ದತ್ತಿಯ ವಿವರ ನಡುವೆ ವೀರರ ಪರಾಕ್ರಮಗಳನ್ನು ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ದ ವರ್ಣನೆಯನ್ನು ಒಳಗೊಂಡಿರುತ್ತದೆ. ಬಹುಪಾಲು ವೀರಗಲ್ಲುಗಳು ಈ ಕ್ರಮವನ್ನೇ ಅನುಸರಿಸಿರುವುದನ್ನು ಕಾಣಬಹುದು. ಬಹುತೇಕ ಶಾಸನಗಳ ನಿರೂಪಣೆಯು ಗದ್ಯದಲ್ಲಿದ್ದು ಮಧ್ಯದಲ್ಲಿ ಪದ್ಯಗಳನ್ನು ಬಳಸಿರುವುದನ್ನು ಕಾಣಬಹುದು. ಸಾಹಿತ್ಯದ ದೃಷ್ಟಿಯಿಂದ ಗದ್ಯದಲ್ಲಿ ರಚನೆಯಾಗಿರುವ ಮಾವಳಿಯ ಶಾಸನ ಮತ್ತು ಕೊರಕೋಡಿನ ವೀರಗಲ್ಲುಗಳನ್ನು ಉದಾಹರಣೆಯಾಗಿ ಗಮನಿಸಬಹುದು.

ಮಾವಳಿಯ ಶಾಸನವು[೫] ನಿರೂಪಣಾವಿಧಾನ ಮತ್ತು ಭಾಷೆಯ ದೃಷ್ಟಿಯಿಂದ ಗಮನಾರ್ಹವಾಗಿದ್ದು ಕನ್ನಡ ಗದ್ಯದ ಎಲ್ಲಾ ಸಾಧ್ಯತೆಗಳನ್ನು ಯಶಸ್ವಿಯಾಗಿ ಉಪಯೋಗಿಸಿಕೊಂಡು ಯುದ್ಧದ ಸಂಪೂರ್ಣ ಚಿತ್ರವನ್ನು ಕುಲಮುದ್ದನ ಪರಾಕ್ರಮವನ್ನು, ಸ್ವಾಮಿನಿಷ್ಠೆಯನ್ನು ಯಶಸ್ವಿಯಾಗಿ ನಿರೂಪಿಸಿದೆ. ಶಾಸನ ಪಾಠ ಹೀಗಿದೆ.

"ಸ್ವಸ್ತಿ ಪ್ರಭೂತವರ್ಷ ಶ್ರೀಪ್ರಿಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರಾ ಭಟ್ಟಾರಕ ಶ್ರೀಗೋಇನ್ದರಸರ್ಚ್ಚತುಸ್ಸಮುದ್ರಾ ನ್ತವಸುಧೆಯಾ ಧವಳೈಕಛತ್ರಛಾಯೆಇನ್ದಾಳೆ । ಬನವಾಸಿಮಣ್ಡಲಮಾನಾಸಮುದ್ರಾನ್ತ ರಾಜಾದಿತ್ಯರಾಸರ್ ಆಳೆ । ಆಳುವ ಖೇಡಮಱುಸಾಸಿರನುಮಾನ್ ಚಿತ್ರವಾಹನನಾಳುತ್ತಂ ಬಾಯ್ಕೇಳದಿರೆ ಮುನಿದು ಕೊಲ್ಲಿಪಲ್ಲವ ನೊಳಮ್ಬಂ ನೊಳಮ್ಬರಾದಿತ್ಯನನ್ವೆಸಸಲಾ ಕಾಕರಾಸರುಮೆಟ್ಟಿ ಪೆರ್ಗ್ಗುಂಜಿಯ ಕೋಟೆಯಾನ್ ರೋಹಿಸಿಬಿಟ್ಟು ಎರಡುಮ್ಬಲದ ವೀರ ಭಟರ್ಕ್ಕಳೊಟ್ಟಿ ಪೊಱಮಟ್ಟು ಬಿಲ್ವಲ್ಲಳ್ಕುದುರೆ ಕುದುರೆಯೊಳ್ಕಿಟ್ಟ ಅತಿತುಮುಲ ಕಾಳೆಗ ಪೆಟ್ಟ್ ಬಲದ ಕಯ್ಯಂ ಚಿತ್ರ ವಾಹನನೊತ್ತಿ ಪುಗುತ್ತನ್ದು ಕಾದಿಸೆ ಕಣ್ದು ಕುಲಮುದ್ದ ನೀನೀಕಯ್ಯ ಪೊಕ್ಕು ಕಾದೆನ್ದು ಬೆಸಸೆ ಪ್ರಸಾದಮೆನ್ದಯ್ದಿ ಕಿಟ್ಟಿ ಕಾದಿಮಱುವಕ್ಕದವರ ಮೆಯ್ಮೆಯ್ಯಮ್ಬಾಗೆ ಎಚ್ಚೋಡಿಸಿ ಆ ಕಯ್ಯಂ ಗೆಲ್ದು ತಾನುಂ ಪಲವುಂ ಎಸುವೆತ್ತು ಎಯ್ವೊದೊದಪ್ಪಿದಪ್ಪೊಲ್ಕಣೆ ಪಂಜರದೊಳೆಱಗಿ ಭೀಷ್ಮನ್ವಿಟ್ಟನ್ತೆ ನೆಲಮುಟ್ಟದೆ ಬಿಟ್ಟೋನಾ ನ್ದೇವಗಣಿಕ್ಕೆಯರಾರ್ಗ್ಗಮ್ಬಿಡಿದು ಬನ್ದಿದಿರ್ಗ್ಗೊಣ್ಡುಯೆ ವೀರಲೋಕಕ್ಕೆ ಸನ್ದೋನ್ ॥

"ಪೆರ್ಗ್ಗುಂಜಿಯ ಕೋಟೆಯಾನ್ ರೋಹಿಸಿ ಬಿಟ್ಟು" ಎಂಬ ವಾಕ್ಯವು ಕೋಟೆಯನ್ನು ಆಕ್ರಮಣ ಮಾಡುವ ವೀರರ ಹುರುಪನ್ನು ಸಮರ್ಥವಾಗಿ ನಿರೂಪಿಸಿದರೆ, "ಎರಡುಮ್ಬಲದ ವೀರಭಟರ್ಕ್ಕಳೊಟ್ಟಿ ಪೊಱಮಟ್ಟು ಬಿಲ್ವಲ್ಲಳ್ಕುದುರೆ ಕುದುರೆಯೊಳ್ಕಿಟ್ಟ ಅತಿ ತುಮುಲ ಕಾಳಗ ಪೆಟ್ಟ್" ಎಂಬ ವಾಕ್ಯಗಳು ಯುದ್ಧದ ಭೀಕರ ಚಿತ್ರವನ್ನು ನೀಡುತ್ತವೆ. "ಕುಲಮುದ್ದ ನೀನೀಕಯ್ಯಪೊಕ್ಕು ಕಾದು" ಎಂಬ ಮಾತು ಯುದ್ಧರಂಗದಲ್ಲಿ ಹೋರಾಟದ ಜವಾಬ್ದಾರಿಯನ್ನು ಹೇಗೆ ವಹಿಸುತ್ತಿದ್ದರು, ನಿರ್ವಹಿಸುತ್ತಿದ್ದರು ಎಂಬುದನ್ನು ಸೂಚಿಸುವುದರ ಜೊತೆಗೆ ವೀರಗಲ್ಲಿನ ನಿರೂಪಣೆಯಲ್ಲಿನ 'ನಾಟಕೀಯತೆ'ಗೆ ಉದಾಹರಣೆಯಾಗಿದೆ. ಹೋರಾಟ ಮಾಡುತ್ತಲೇ ಯುದ್ಧದಲ್ಲಿ ಮಡಿದ ಕುಲಮುದ್ದನ ಪರಾಕ್ರಮವನ್ನು ಬಣ್ಣಿಸಿರುವ "ಕಣೆಪಂಜರದೊಳೆಱಗಿ ಭೀಷ್ಮನ್ವಿಟ್ಟನ್ತೆ ನೆಲಮುಟ್ಟದೆ ಬಿಟ್ಟೋನ್" ಎಂಬ ಮಾತು ಕುಲಮುದ್ದನ ಬಗೆಗೆ ಗೌರವವನ್ನು ಮೂಡಿಸುವುದರ ಜೊತೆಗೆ "ದೇವಗಣಿಕ್ಕೆಯರಾರ್ಗ್ಗಮ್ಬಿಡಿದು ಬನ್ದಿದಿರ್ಗ್ಗೊಣ್ಡುಯೆ ವೀರಲೋಕಕ್ಕೆ ಸನ್ದೋನ್" ಎಂಬ ವಾಕ್ಯವು ಆತನನ್ನು ವೀರಲೋಕಕ್ಕೆ ದೇವಗಣಿಕೆಯರು ಒಯ್ದ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸಿದೆ.

ಗದ್ಯದಲ್ಲಿ ಸೊಗಸಾಗಿ ತುಱಿಗೋಳು, ಪೆಣ್ಬುಯ್ಯಲ್ ಹೋರಾಟದಲ್ಲಿ ಪಾಲ್ಗೊಂಡ ದೇವಗಾವುಂಡ ಮತ್ತು ಮಲ್ಲಗಾವುಂಡನ ಹೋರಾಟದ ಪರಿಯನ್ನು ಕುರುಕೋಡಿನ ವೀರಗಲ್ಲು[6] ನಿರೂಪಿಸಿದೆ. ಕಲ್ಯಾಣದ ಚಾಲುಕ್ಯರ ತ್ರೈಲೋಕ್ಯಮಲ್ಲನ ಕಾಲದ ಈ ವೀರಗಲ್ಲಿನಲ್ಲಿ ಮಹಾಮಂಡಳೇಶ್ವರ ಜಗದೇವರಸನ ಅಣತಿಯಂತೆ ಮದಸಾಲೆಯ ಕಾಳರಸನು ಸಮಸ್ತಸಾಮಾತ್ತಿಯಂಬೆರಸು 'ಶ್ರೀ ಮದನಾದಿಯಗ್ರಹಾರಂ ಕುಪ್ಪಗಡೆಯಹಳ್ಳಿ ಕೊರಕೋಡನಿಱಿದು' ತುಱುವಂ ಕೊಂಡುಡೆಯುಚ್ಚಿ ಹೋಹಾಗಳಲ್ಲಿ ಹುಟ್ಟಿದ ಬಾವಗಾವುಂಡನ ಮಗಂದಿರು ದೇವಗಾವುಂಡನುಂ ಮಲ್ಲಗಾವುಂಡನುಂ ಬಿಲ್ಲಮಂಬುಮಂ ಕೊಂಡೀರ್ವ್ವರುಂ ಹೆಬ್ಬಾಗಿಲಡ್ಡಂನಿಂದು ಗುಹೆಯ ಬಾಗಿಲೊಳು ಸಿಂಹನಿಪ್ಪಂತೆ ತಾಗಿತಳ್ತೆಸುವಾಗಳು ಕಾರಮಳೆಕಱೆದಂತೆಯುಂ ಕಡಂದುಱಿಹುಟ್ಟಿಯ ಕೆಣಕಿದಂತೆಯುಂ ಕವಿದ ಕಾಲಬಾಯೊಳಂ ಜವನೊಕ್ಕಿಲಿಕ್ಕಿದಂತೆ ತೊತ್ತಳದುಳಿದ ವೋಲುತಂ ಕಯ್ಯ ನೆರದುಂ ಬಿಲ್ಲತಿರುಮಂಪಱೆವಂನ್ನವೆಚ್ಚು ನೆಱೆಯದೆಕಟ್ಟಿದ ಗಲಂಕಿತ್ತು..... ಕುಱೆಯ ಹಿಂಡಂ ತೋಳಂಪೊಕ್ಕಂತೆಯುಂ ಕಬ್ಬುದೋಂಟವಂನಾನೆ ಪೊಕ್ಕಂತೆಯುಂ ನಿಕ್ಕುರಳಿಲು ಪೊಕ್ಕುದೊಳಹಿಂಡು ಕುತ್ತಿನೂಂಕುತ್ತ ಬಪ್ಪಾಗಳು"

**ಮಲೆದಿದಿರಾಂತಮಾರ್ವ್ವಲವನಳ್ಕುಱೆತಾಗಿ ಭುಜಪ್ರತಾಪದಿಂ**
**ದಲಗನಕಿರ್ತ್ತು ಪೊಯ್ಯೆನಿರುತಂ ಕಣಕಾಲಮೊಳಕಾಲ್ಮುಖಂಭುಜೆಯ**
**ತಲೆಬಲಿಯಾಗೆ ಸಂಬಳಿತಯೋಪಿನದೊಂದೆರಡಟ್ಟಿಯೋಡಲುಂ**
**ತೊಲಗದೆನಿಂದು..... ಳಱೆದುರಿರ್ಬ್ಬರುಮಾಹವರಂಗಭೂಮಿಯೊಳು ॥**

ಅಂತವರಿಬ್ಬರುಂ ಪೋಗದೆ ನಿಂದುದಂ ಕಂಡು ಪೊರಿದಾಳು ಕುದುರೆಯ ಮೊರ್ಬ್ಬಂತಾಗಿಯೆ ಸಲ್ವಿಱೆಯಲುಂ ಕೋಲ್ಕೊಂತಂಗಳೂಡಾಗಿ ಬಿರ್ದ್ದು ಸುರಲೋಕಪ್ರಾಪ್ತರಾದವರಿಬ್ಬರಪೆಣನಂ ಮೆಟ್ಟಿ ತುಱುಪರಿಯಲವರಿಬ್ಬರಿಂಕಿಱೆಯ ಬೊಪ್ಪಗಾವುಂಡ ತಂಮಂಣಂದಿರಬ್ಬರ ಕಳೇಬರವಂ ಕಂಡು ಸೈರಿಸಲಾಱೆದೆ ನಿಮ್ಮಾದುದನಪ್ಪೆನಲ್ಲದೊಡೇಂ ತುಱುವಂ ಮಗುಳ್ಚಿ ಬಪ್ಪೆನೆರದೊಂದ ಮೆಯ್ಯೊಳು ಹಿಂದಹತ್ತಲಾತಂಗೆ ಪಡಿಬಲದಾಗಿ ಮಂಡಳಿಕಂ ವುದ್ದೆರೆಯೆಕ್ಕಲರಸನಾಳ್ಕುದುರೆಯಂ ಹೇಳಲಾನೆಱಿವಂ ಕೂಡಿಕೊಂಡು ಹಾಲ್ಗಟ್ಟದ ಬಯಲಲೊಡ್ಡನೊಡ್ಡಿದರಿ ಬಲವಂ ಬೊಪ್ಪಗವುಂಡ ಕೊಂಡು ತುಱುವಂ ಮಗುಳ್ಚಿ ಕೊಂಡು ಬಂದಣ್ಣಂದಿರಂ ಸಂಸ್ಕಾರಿಸಿ ಜಳದಾನಕ್ರಿಯೆಯಂ ಪರೋಕ್ಷವಿನಯಮುಮಂ ಮಾಡಿಯಿರ್ಬ್ಬರ್ಗ್ಗಂ ಕಲ್ಲನಿಱೆಸಿದಲ್ಲಿ ಮಂಗಳ ಮಹಾ ಶ್ರೀಶ್ರೀಶ್ರೀಶ್ರೀ....

ಬಾವಗಾವುಂಡನ ಮಕ್ಕಳಾದ ದೇವಗಾವುಂಡ ಮತ್ತು ಮಲ್ಲಗಾವುಂಡ ನಡೆಸಿದ ಹೋರಾಟದ ಪರಿಯನ್ನು ಬಣ್ಣಿಸುವಾಗ "ಹೆಬ್ಬಾಗಿಲಡ್ಡಂ ನಿಂದು ಗುಹೆಯಬಾಗಿಲೊಳು ಸಿಂಹನಿಪ್ಪಂತೆ ತಾಗಿತಳ್ತು ಎಸುವಾಗಳು ಕಾರಮಳೆಕಱೆದಂತೆಯುಂ ಕಡಂದುಱಿಹುಟ್ಟಿಯಕೆಣಕಿದಂತೆಯುಂ ಕವಿದ

ಕಾಲಬಾಯೊಳಂ ಜವನೊಕ್ಕಿಲಿಕ್ಕಿದಂತೆ" "ಕುಱಿಯಹಿಂಡಂ ತೋಳಂ ಪೊಕ್ಕಂತೆಯುಂ ಕರ್ಬ್ಬುದೋಂಟವನಾನೆಪೊಕ್ಕಂತೆಯುಂ" ಎಂಬ ಉಪಮೆಗಳು ಯುದ್ಧದ ತೀವ್ರತೆಯನ್ನು ಮನೋಜ್ಞವಾಗಿ ನಿರೂಪಿಸಿವೆ. ಅಣ್ಣಂದಿರ ವೀರ ಮರಣವನ್ನು ಕಂಡು ಸೈರಿಸಲಾಗದೆ ತಮ್ಮನಾದ ಬೊಪ್ಪಗಾವುಂಡನು "ನಿಮ್ಮಾದುದನ್ ಅಪ್ಪೆನ್ ಅಲ್ಲದೊಡೆ ಏಂ ತುಱಿವಂ ಮಗುಳ್ಚಿ ಬಪ್ಪೆನ್" ಎಂಬುದಾಗಿ ದೃಢನಿರ್ಧಾರವನ್ನು ಕೈಗೊಂಡ ಭಾಗವು ಮನಸೆಳೆಯುತ್ತದೆ.

ಹಲವಾರು ಗದ್ಯಶಾಸನಗಳಲ್ಲಿ ದೇಸಿಯ ಸೊಗಸು, ಸಂಭಾಷಣೆಯ ರೀತಿಯ ನಿರೂಪಣೆಯನ್ನು ಕಾಣಬಹುದಾಗಿದೆ. ಆತಕೂರು ಶಾಸನವನ್ನು[೬೭] ಇದಕ್ಕೆ ಉದಾಹರಣೆಯಾಗಿ ಗಮನಿಸಬಹುದು. "ಶ್ರೀಮತ್‌ಮನಾಲರಂಗನುವರದೊಳ್ ಮೆಚ್ಚಿ ಬೇಡಿಕೊಳ್ಳೆನ್ದೊಡೆ ದಯೆಯಮೆಱೆವೊಳ್ಳೆಮ್ಮ ಕಾಳಿಯಂ ದಯೆಗೆಯ್ಯೆನ್ದು ಕೊಣ್ಡನಾ ನಾಯಕವಿಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ ಪಿರಿದು ಪನ್ದಿಗೆವಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುವದರ್ಕ್ಕೆ ಯಾತುಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ ಪಿರಿಯಕೆಱೆಯ ಕೆಱಗೆ ಮಟಸ್ತಿಕಾಲಜ್ಗಳೊಳಿರ್ಕ್ಕಣ್ಡುಗಂ ಮಣ್ಣು ಕೊಟ್ಟರಾಮಣ್ಣನೊಕ್ಕಲ್ ನಾಡನಾಳ್ವೊನೂರನಾಳ್ವೊರೀ ಮಣ್ಣನಟಿದೊನಾ ನಾಯಗೆಯ್ದ ಪಾಪಮಂ ಕೊಣ್ಡೊನಾಸ್ಥಾನಮನಾಳ್ವ ಗೊರವನಾಕಲ್ಲಂ ಪೂಜಿಸದುಣ್ಡರಪ್ಪೊಡೆ ನಾಯಗೆಯ್ದ ಪಾಪಮಂ ಕೊಣ್ಡ"

ದೇಸಿಯ ಸೊಗಸು, ಸಂಭಾಷಣೆಯ ಧಾಟಿಯು ಬಳ್ಳಿಗಾವೆಯ ಕೇದಾರೇಶ್ವರ ದೇವಾಲಯದ ಶಾಸನವೊಂದರಲ್ಲಿ"[೬೮] ಮತ್ತಷ್ಟು ಸ್ಪಷ್ಟವಾಗಿ ಸ್ಫುಟವಾಗಿ ಬಂದಿರುವುದನ್ನು ಗಮನಿಸಬಹುದು. ಕಲ್ಯಾಣದ ಚಾಲುಕ್ಯದೊರೆ ಸೋಮೇಶ್ವರ ಮತ್ತು ಮಾಂಡಲಿಕನಾದ ಕದಂಬ ತೈಲನೊಡನೆ ನಡೆದ ಸಂಭಾಷಣೆ ಭಾಗವನ್ನು ಗಮನಿಸಬಹುದು. ಚಾಲುಕ್ಯ ದೊರೆಯು ಕೇದಾರೇಶ್ವರ ದೇವಾಲಯಕ್ಕೆ ಕೇದಾರಮಠಕ್ಕೆ ದಾನದತ್ತಿಗಳನ್ನು ನೀಡಿದ ಶಾಸನದ ಭಾಗವು ಈ ರೀತಿಯಾಗಿದೆ.

"ಮಠದ ಧರ್ಮ್ಮದ ಪೆರ್ಮ್ಮೆಯುಮಂ ತನ್ಮಠಾಚಾರ್ಯ್ಯರಧರ್ಮ್ಮ ವಿದ್ಯಾತಪಶ್ಶೀಲತೆಯಂ ಕೇಳ್ದು ರೋಮಾಂಚಕಂಚುಕಿತಗಾತ್ರನುಂ ಪ್ರಸನ್ನನೇತ್ರನುಮಾಗಿ ಕಾದಂಬಕಣ್ಠೀರವನ ಮೊಗಮಂ ನೋಡಿ ನಾವೇನಾನುಂಧರ್ಮ್ಮ ಮನಾಸ್ಥಾನದೊಳ್ಮಾ ಡಲ್ವೇಳ್ಕುವಲ್ಲಿಗೆಸಮೀಪಂಗಳಪ್ಪೂರ್ಗಳಾವುವೆಂದು ಬೆಸಗೊಳ್ವುದುಂ ದೇವರ್ಬ್ಬೆರೆ ಧರ್ಮ್ಮಮಂ ಮಾಡಲ್ವೇಡೇನಾನುಂ ಧರ್ಮ್ಮಮನಾನಲ್ಲೀದೇವರ ವಿಜಯರಾಜ್ಯಾಭಿವೃದ್ಧಿ ನಿಮಿತ್ತವಾಗಿ ಮಾಡಿದೆನದಂದೇವರ್ಸ್ವಹಸ್ತದಿಂ ಧಾರಾಪೂರ್ವ್ವಕಂ ಮಾಡಿ ಧರ್ಮ್ಮಮನಾಚಂದ್ರಾರ್ಕ್ಕಸ್ಥಾಯಿಯಾಗಿಮಾರ್ಪ್ಪುದೆಂಬುದುಮದನೆ ಮನದೆಗೊಣ್ಡಲ್ಲಿಯಖಣ್ಡಸ್ಫುಟಿತ ಜೀರ್ಣ್ನೋದ್ಧಾರಕ್ಕಂ....."

ಚಾಲುಕ್ಯ ದೊರೆಯು ಕೇದಾರಮಠದ ಕೀರ್ತಿಯನ್ನು ಕೇಳಿ ಸಂತೋಷಪಟ್ಟು ಸಮೀಪದ ಊರುಗಳಲ್ಲಿ ತಾನು ಧರ್ಮವನ್ನು ಮಾಡಬೇಕೆಂದು ಅಪೇಕ್ಷೆಪಟ್ಟಾಗ ಮಾಂಡಳಿಕ ಕಾದಂಬತೈಲನು ಬೇರೆ ಎಲ್ಲೋ ದಾನದತ್ತಿ ನೀಡುವುದು ಬೇಡವೆಂದೂ ತಾನು ಈಗಾಗಲೇ ಕೇದಾರಮಠಕ್ಕೆ ನೀಡಿದ ದಾನದತ್ತಿಗಳನ್ನು ಮಹಾರಾಜನು ಸ್ವಹಸ್ತದಿಂದ ಧಾರಪೂರ್ವಕವಾಗಿ ಆಚಂದ್ರಾರ್ಕಸ್ಥಾಯಿಯಾಗಿ ನೀಡುವ ಮೂಲಕ ಸ್ಥಿರೀಕರಿಸಬೇಕೆಂದು ಕೇಳಿಕೊಂಡನೆಂದು ಸಹಜವಾಗಿ ಸರಳವಾಗಿ ಗದ್ಯದಲ್ಲಿ ನಿರೂಪಿಸಿರುವುದನ್ನು ಕಾಣಬಹುದಾಗಿದೆ.

ಚಿಕ್ಕಮಗಳೂರು ತಾಲ್ಲೂಕು ಮತ್ತಾವಾರ ಗ್ರಾಮದ ಶಾಸನವು ಪಾರ್ಶ್ವನಾಥ ಬಸದಿಯನ್ನು ನಿರ್ಮಿಸಿ ದಾನದತ್ತಿಗಳನ್ನು ಹೊಯ್ಸಳದೊರೆ ವಿನಯಾದಿತ್ಯನು ನೀಡಿದ ವಿಚಾರವನ್ನು ನಿರೂಪಿಸುತ್ತದೆ. ಈ ಶಾಸನವು ಗದ್ಯಶಾಸನವಾಗಿದ್ದು ಸರಳವಾಗಿ ನೇರವಾಗಿ, ಸಂಭಾಷಣಾ ಧಾಟಿಯಲ್ಲಿ ನಿರೂಪಿತವಾಗಿದ್ದು ಗಮನಾರ್ಹವಾಗಿದೆ."[೯೯]

"ಶ್ರೀಮತ್ಪರಮ........ ಶಾಸನಂ" ಎಂಬ ಪ್ರಾರ್ಥನಾಪದ್ಯದ ನಂತರ "ಸ್ವಸ್ತಿಸಮಧಿಗತಪಂಚಮಹಾಶಬ್ದ ಮಹಾಮಂಡಳೇಶ್ವರಂ ದ್ವಾರಾವತೀಪುರವರಾಧೀಶ್ವರಂ ಯಾದವಕುಳಾಂಬರದ್ಯುಮಣಿ ಸಮ್ಯಕ್ತ ಚೂಡಾಮಣಿ ಮಲಪರೊಳುಗಣ್ಡಾದ್ಯನೇಕ ನಾಮಾವಳೀವಿರಾಜಿತರಪ್ಪ ಶ್ರೀಮತ್ರೈಲೋಕ್ಯಮಲ್ಲ ವಿನಯಾದಿತ್ಯ ಹೊಯ್ಸಳದೇವ"ರು ಮತ್ತಾವಾರಕ್ಕೆ ಭೇಟಿ ನೀಡಿ "ಬಸದಿಗೆ ವಂದಿ ದೇವರಂಕಂಡಿ ಬೆಟ್ಟದೊಳೆ ಕಳ್ಧರವವಿಲ್ಲಿಯಕೆ(ಯಾಕೆ) ಮಾಡಿಸಿದಿರಿ ಊರೊಳಗೆ ಮಾಡಿಸಿ" ಎಂದಾಗ 'ಮಾಣಿಕಸೆಟ್ಟಿಯು "ಇನ್ತೆಂದು ಬಿನ್ನಪಂ ಗೆಯ್ದಂ ದೇವರ್ ನೀವೂರೊಳೊಂದು ಬಸದಿಯಂ ಮಾಡಿಸಿ ಭೂಮಿಯಂ ಬಿಟ್ಟು ಮಾನಮಹಿಮೆಗಳಂ ಕೊಟ್ಟದೆ ಬಡವಬ್ಬರ್ ನಿಮ್ಮದಡದರ್ಥಕ್ಕೆ ಪ್ರಮಾಣುಂಟೆ ದೇವರರ್ಥಮಂ ಮಲೆಯರಸುಗಳ ಹಡೆದ ಭತ್ತಮುಂ ಸಮಾನಮದರ ಮಾಣಿಕಸೆಟ್ಟಿಯ ಮಾತಿಂ ಮೆಚ್ಚಿ ನಕ್ಕು ಕರವೊಳ್ಳಿತೆಂದು ಬಸದಿಯನೂರೊಳಗೆ ಮಾಡಿಸಿ.......... ಮತ್ತವೂರ ಬಸದಿಗೆ ಬಿಟ್ಟಂ ॥

ಕ್ರಿ.ಶ.೧೦ನೆಯ ಶತಮಾನದಿಂದ ಕ್ರಿ.ಶ.೧೩ನೆಯ ಶತಮಾನದವರೆಗಿನ ಕಾಲದಲ್ಲಿ ಶಾಸನಗಳು ಹೇಗೆ ಸಾಹಿತ್ಯಕವಾಗಿ ಗಮನಸೆಳೆಯುತ್ತವೆಯೋ ಅದೇ ರೀತಿಯಲ್ಲಿ ಶಾಸನಗಳಲ್ಲಿನ ಗದ್ಯಭಾಗಗಳೂ ಸಹ ಉಚಿತವಾದ ಪದಗಳ ಬಳಕೆ, ಸುದೀರ್ಘವಾದ ಅಲಂಕಾರಿಕ ವಾಕ್ಯಗುಚ್ಛಗಳು ಮತ್ತು ನೇರವಾದ ಖಚಿತವಾದ ವಿಷಯ ನಿರೂಪಣೆಯಿಂದ ಗಮನಸೆಳೆಯುತ್ತವೆ ಎಂಬುದನ್ನು ಉಲ್ಲೇಖಿಸಿರುವ ಶಾಸನಗದ್ಯಭಾಗಗಳು ಸ್ಪಷ್ಟಪಡಿಸುತ್ತವೆ. ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಕಾವ್ಯಾತ್ಮಕವಾದ ಶಾಸನಗಳ ರಚನೆಯು ಇಳಿಮುಖವಾಗತೊಡಗಿತು. ಸಹಜವಾಗಿ ಈ ಅವಧಿಯಲ್ಲಿ ಬರುವ ಗದ್ಯಭಾಗಗಳು ಸಹ ತಮ್ಮ ಈ ಹಿಂದಿನ ಶತಮಾನದ ಕಾವ್ಯಾತ್ಮಕತೆಯನ್ನು ಕಳೆದುಕೊಂಡು

ಶುಷ್ಕ ನಿರೂಪಣೆಗೆ ಮೀಸಲಾದವು ಎನ್ನಬಹುದು. ಆದರೆ ಈ ಕಾಲದ ಶಾಸನಗಳು ಹಲವಾರು ಮಹತ್ವಪೂರ್ಣವಾದ ವಿಷಯಗಳನ್ನು ದಾಖಲಿಸುವ ಕಾರಣದಿಂದ ಗಮನ ಸೆಳೆಯುತ್ತವೆ. ಅಂತಹ ಶಾಸನಗಳಲ್ಲಿ ಶ್ರವಣಬೆಳಗೊಳದ ಭಂಡಾರಬಸದಿಯ ಬುಕ್ಕರಾಯನ ಶಾಸನವು[೧೦೦] ಪ್ರಮುಖವಾದದ್ದು.

ಶ್ರವಣಬೆಳಗೊಳದಲ್ಲಿರುವ ಬುಕ್ಕರಾಯನ ಶಾಸನವು ಜೈನರಿಗೆ ಮತ್ತು ವೈಷ್ಣವರಿಗೆ ನಡೆದ ಧಾರ್ಮಿಕ ಕಲಹದ ತೀರ್ಪಾಗಿದ್ದು, ಆ ತೀರ್ಪಿನ ಭಾಗ ಜೈನರು ಮತ್ತು ವೈಷ್ಣವರನ್ನು ಉದ್ದೇಶಿಸಿ ಹೇಳುತ್ತದೆ.

"ಹದಿನೆಂಟು ನಾಡ ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ವೈಷ್ಣವದರ್ಶನಕ್ಕೆಊ ಜೈನದರ್ಶನಕ್ಕೆಊ ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯ್ಯಲು ಜೈನರ ಕೈವಿಡಿದು ಕೊಟ್ಟು ಯೀ ಜೈನದರ್ಶನಕ್ಕೆ ಪೂರ್ವಮರಿಯಾದೆಯಲು ಪಂಚಮಹಾವಾದ್ಯಂಗಳೂ ಕಳಶಊ ಸಲುಉದು ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃಧ್ಧಿಯಾದರೂ ವೈಷ್ಣವಹಾನಿವೃಧ್ಧಿಯಾಗಿ ಪಾಲಿಸುವರು ಯೀ ಮರ್ಯ್ಯಾದೆಯಲು ಯೆಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವ ನಟ್ಟು ಪಾಲಿಸುವರು ಚಂದ್ರಾರ್ಕ್ಕಸ್ಥಾಯಿಯಾಗಿ ವೈಷ್ಣವ ಸಮಯಉ ಜೈನದರ್ಶನವ ರಕ್ಷಿಸಿಕೊಂಡು ಬಹೆಉ ವೈಷ್ಣವರೂ ಜೈನರೂ ವೊಂದು ಭೇದವಾಗಿ ಕಾಣಲಾಗದು." ವಿಜಯನಗರ ಕಾಲದ ಗದ್ಯಕ್ಕೆ ಮಾದರಿಯಾಗಿರುವ ಈ ಶಾಸನವು ಸೂಕ್ಷ್ಮವಾಗಿ ಜೈನಧರ್ಮವು ವೈಷ್ಣವಮತೀಯರಿಂದ ತುಳಿತಕ್ಕೆ ಒಳಗಾಗಿದುದನ್ನು ದಾಖಲಿಸುತ್ತದೆ.

ಒಟ್ಟಾರೆಯಾಗಿ ಶಾಸನಗಳಲ್ಲಿನ ಗದ್ಯಭಾಗಗಳ ಯಶಸ್ಸನ್ನು ಈ ರೀತಿಯಾಗಿ ಗುರುತಿಸಬಹುದು. ಸಂಸ್ಕೃತದಲ್ಲಿ ಗದ್ಯದ ರಚನೆಯು ಕವಿಗಳ ಸಾಮರ್ಥ್ಯಕ್ಕೆ ಒರೆಗಲ್ಲಾದರೆ, ಕನ್ನಡದಲ್ಲಿ ಪದ್ಯವೇ ಪ್ರಮುಖವಾಯಿತು. ಇಷ್ಟಾದರೂ ಸಹ ಶಾಸನಗಳಲ್ಲಿ ಗದ್ಯದ ನಾನಾ ರೂಪಗಳನ್ನು ಕಾಣಬಹುದು. ಶಿಷ್ಟ ಸಾಹಿತ್ಯದಲ್ಲಿನ ವೈವಿಧ್ಯತೆ ಶಾಸನಗದ್ಯದಲ್ಲಿ ಕಾಣಿಸಿಕೊಂಡಿತು. "ಗದ್ಯವು ತನ್ನ ನಿಜವಾದ ಸ್ವರೂಪದಲ್ಲಿ ಕಾಣಿಸಿಕೊಂಡಿರುವುದು ಶಾಸನಗಳಲ್ಲಿಯೇ. ಪ್ರೌಢವಾದ ಗದ್ಯಬೇಕೆ, ಸಂಸ್ಕೃತ ಭೂಯಿಷ್ಠವಾದ ಗದ್ಯಬೇಕೆ, ಪೆಡಸಾದ ಗದ್ಯಬೇಕೆ, ದೇಸೀ ಚಲುವಿನಿಂದ ಕೂಡಿದ ಗದ್ಯ ಬೇಕೆ – ಈ ಎಲ್ಲವೂ ಶಾಸನಗಳಲ್ಲಿ ದೊರೆಯುತ್ತವೆ. ಶುದ್ಧ ಸಾಹಿತ್ಯ ಅಥವಾ ಪಕ್ಕಾ ಸಾಹಿತ್ಯದಲ್ಲಿ ಇಷ್ಟೊಂದು ವೈವಿಧ್ಯಮಯವಾದ ಗದ್ಯವನ್ನು ಕಾಣಲಾರೆವು. ಅಲ್ಲಿನವರೆಲ್ಲಾ ಸಂಸ್ಕೃತಕ್ಕೆ ಮಾರುಹೋದ ಅಥವಾ ಸಂಸ್ಕೃತದ ಪ್ರಭಾವಕ್ಕೆ ಒಳಗಾದ ಕವಿಗಳು. ಶಾಸನ ಕವಿಗಳಲ್ಲೂ ಪಕ್ಕಾ ಸಾಹಿತ್ಯದ ಕವಿಗಳನ್ನು ಸರಿದೂಗುವಂತಹ ಕವಿಗಳಿರುವರಾದರೂ ಅವರ ಸಂಖ್ಯೆ ಕಡಿಮೆ. ಶಾಸನ ಕವಿಗಳು ವಿದ್ವಾಂಸರಾದರೂ ಬಹುಮಂದಿ ಶಾಸನಕವಿಗಳು ಹೆಚ್ಚು ಕಲಿತವರಲ್ಲ. ಒಂದು ಅರ್ಥದಲ್ಲಿ

ಅವರು ಜನತೆಯ ಕವಿಗಳು. ಆದ್ದರಿಂದಲೇ ಅವರ ಭಾಷೆಯಲ್ಲಿ ನೈಜತೆಯಿದೆ. ಆಡುಮಾತಿನ ಸೊಗಡಿದೆ. ಈ ಗದ್ಯದಲ್ಲಿಯೇ ಗದ್ಯ ತನ್ನ ನೀರಸತನವನ್ನು ಕಳೆದುಕೊಂಡು ಓಜಸ್ವಿಯಾಗಿ ಬೆಳಗುತ್ತಿರುವುದು. ಕೆಲವು ಶಾಸನಗಳ ಕೊನೆಯಲ್ಲಿ ಬರುವ ಫಲಶ್ರುತಿಯ ಶಾಸನ ವಾಕ್ಯಗಳಲ್ಲಿ ಒರಟುತನವಿದೆ. ಆ ಒರಟುತನದಲ್ಲಿಯೇ ಭಾಷೆಯ ಶಕ್ತಿ ಅಭಿವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಕನ್ನಡ ಸಾಹಿತ್ಯದ ಗದ್ಯದ ಬೆಳವಣಿಗೆಯಲ್ಲಿ ಶಾಸನಗಳ ಗದ್ಯಕ್ಕೆ ವಿಶಿಷ್ಟವಾದ ಸ್ಥಾನವುಂಟು"[೧೦೧] ಎನ್ನುವ ಅಭಿಪ್ರಾಯವು ಶಾಸನಗದ್ಯಗಳ ಮಹತ್ವವನ್ನು ಪ್ರತಿಪಾದಿಸುತ್ತದೆ.

## ಅಡಿ ಟಿಪ್ಪಣಿಗಳು

೧. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯, ೧೯೮೮, ಪುಟ-೨೮೪

೨. ಪೂರ್ವೋಕ್ತ : ಪುಟ-೨೮೪

ಅ) ಡಾ.ಎ.ಎನ್.ನರಸಿಂಹಯ್ಯ : A Grammer of the Oldest Kanarese inscriptions.

ಆ) ಡಾ.ಜಿ.ಎಸ್.ಗಾಯಿ : Historical Grammar of Old Kannada,

ಇ) ಡಾ.ಕೆ.ಕುಶಾಲಪ್ಪಗೌಡ : A Grammar of Kannada

೩. E.C.X ಕೋಲಾರ ೧೫೮ ಮದವಾಡಿ ಕ್ರಿ.ಶ.೧೪೮೨ ಇಲ್ಲಿ ಕನ್ನಡ ಮತ್ತು ತೆಲುಗು ಭಾಷೆಯನ್ನು ಬಳಸಲಾಗಿದೆ.

೪. ಡಾ.ಎಂ.ಎಂ.ಕಲಬುರ್ಗಿ: ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು-೧೯, ೧೯೮೮, ಪುಟ-೨೮೬ರಲ್ಲಿ ಅಡಿಟಿಪ್ಪಣಿ (೭)ರಲ್ಲಿ "ಹೂವಿನ ಹಿಪ್ಪರಗಿ ಶಾಸನದಲ್ಲಿ ಎಲ್ಲ ವಿಷಯವನ್ನು ಕನ್ನಡದಲ್ಲಿ ದತ್ತಿ ವಿಷಯವನ್ನು ಸಂಸ್ಕೃತದಲ್ಲಿ ಬರೆಯಲಾಗಿದೆ. SII XI- i 8 ಹೂವಿನ ಹಿಪ್ಪರಗಿ –ವಿಜಾಪುರ ಜಿಲ್ಲೆ(೮೬೨) ಎಂಬ ವಿಚಾರವನ್ನು ಕಾಣಬಹುದು.

೫. ಪೂರ್ವೋಕ್ತ : ಪುಟ-೨೮೬

೬. ಪೂರ್ವೋಕ್ತ : ಪುಟ-೨೮೭

೭. E.C.XV, ಹೊಳೆನರಸೀಪುರ ೮೩ ಬಾಗವಾಳ ಕ್ರಿ.ಶ.೧೩೦೩

೮. ಅಂತ್ಯಾನುಸ್ವಾರಗಳನ್ನು ಒಳಗೊಂಡಿರುವುದಕ್ಕೆ ಉದಾ;

E.C.(R) ಬೇಲೂರು ೧೯೧ (ಬೇ೨೦೦) ದಬ್ಬೆ –ಅಗ್ರಹಾರ ಕ್ರಿ.ಶ.೧೧೯೯

ಮೃಡಗೃಹದಿಂದಂ ಮತ್ತಂ
ಬಡಗಣಮೆಯ್ಯಕೆಱೆಯ ಕೆಳಗೆತೋಱೆವರವಿಳಿಯೆ
ಕಡಹೊನ್ನನಾವಗಂ ಬಿಟ್ಟ
ಮೃಡಪಾದಪಂಕಜ ಕೋಬಿಗಾಂಕಂ ॥

೯. E.C.(R) IX ಬೇಲೂರು ೨೩೬ (೧೧೯೩೬-೧೬) ಹಲ್ಮಿಡಿ ಕ್ರಿ.ಶ.೪೫೦

೧೦. E.C.(R) IX ಹಾಸನಜಿಲ್ಲೆ ಪೀಠಿಕೆ XLii

೧೧. ಡಾ.ಎಂ.ಎಂ.ಕಲಬುರ್ಗಿ : ಕವಿರಾಜಮಾರ್ಗ ಪರಿಸರದ ಕನ್ನಡ ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೩, ಪುಟ-೧೩೦

೧೨. E.C.VI ಕೊಪ್ಪ ೮೮ ಕಿಗ್ಗ ಕ್ರಿ.ಶ.೭ನೆಯ ಶತಮಾನ

೧೩. ಡಾ.ಎಂ.ಬಿ.ನೇಗಿನಹಾಳ : ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ : ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೯೪, ಪುಟ-೧೭ರಿಂದ ೨೧

೧೪. E.C.(R) I, ಮಡಿಕೇರಿ ೧ ಕ್ರಿ.ಶ.೪೬೬

೧೫. ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆಸಂಪುಟ-೨, : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೫, ಪುಟ-೪೪೯

೧೬. E.C.VIII, ಸೊರಬ ೧೦ ಮಾವಳಿ ಕ್ರಿ.ಶ.ಸು.೮೦೦

೧೭. ಕನ್ನಡ ಅಧ್ಯಯನ ಸಂಸ್ಥೆಯ ಸಾಹಿತ್ಯ ಚರಿತ್ರೆ : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು ೧೯೭೫, ಸಂಪುಟ-೨, ಪುಟ-೪೪೯

೧೮. ತಿ.ತಾ.ಶರ್ಮ : ಲೇಖನ : ಶಾಸನಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ : ಕನ್ನಡ ನುಡಿ ಪತ್ರಿಕೆ. ಸಂಚಿಕೆ-೯, ಸಂಪುಟ-೩೦, ಸೆಪ್ಟಂಬರ್ ೧೯೬೭, ಪುಟ-೯ರಿಂದ ೧೨

೧೯. E.C.VI, ಕೊಪ್ಪ ೩೭ ಕಿಗ್ಗ ಕ್ರಿ.ಶ.೭ನೆಯ ಶತಮಾನ

೨೦. E.C.III, ನಂಜನಗೂಡು ೧೮೭

೨೧. ತಿ.ತಾ.ಶರ್ಮ : ಲೇಖನ : ಶಾಸನಗಳಲ್ಲಿ ಕನ್ನಡ ಭಾಷೆ ಮತ್ತು ಸಂಸ್ಕೃತಿ : ಕನ್ನಡ ನುಡಿ ಪತ್ರಿಕೆ. ಸಂಚಿಕೆ-೯, ಸಂಪುಟ-೩೦, ಸೆಪ್ಟಂಬರ್ ೧೯೬೭, ಪುಟ-೯ರಿಂದ ೧೨

೨೨. E.C.(R) V ತಿ.ನರಸೀಪುರ ೨೫೩(XIV ತಿನ೨೩೪ ) ಹೆಮ್ಮಿಗೆ ಕ್ರಿ.ಶ.೮-೯ನೆಯ ಶತಮಾನ

೨೩. E.C.(R) III ನಂಜನಗೂಡು ೧೭೮(M.A.R ೧೯೩೬-೫೫) ತಾಂಡ್ಯ ಕ್ರಿ.ಶ.೧೦೫೨

೨೪. E.C.(R) III ನಂಜನಗೂಡು ೩೮೫ ಹುಸುಕೂರು ಕ್ರಿ.ಶ.೮೭೦-೭೧

೨೫. E.C.(R) III ನಂಜನಗೂಡು ೨೧೫ ಸುತ್ತೂರು ಕ್ರಿ.ಶ.೧೦೩೨

೨೬. E.C.(R) IIಶ್ರವಣಬೆಳಗೊಳ ೫೩೮ (೩೮೮) ಜಿನನಾಥಪುರ ಕ್ರಿ.ಶ.೧೨ನೇ ಶತಮಾನ

೨೭. E.C.(R) IIಶ್ರವಣಬೆಳಗೊಳ ೧೬೨ (೧೩೨) ಚಿಕ್ಕಬೆಟ್ಟ ಕ್ರಿ.ಶ.೧೧೨೩

೨೮. ಶ್ರವಣಬೆಳಗೊಳ ೫೫೨ (೪೦೨) ಬೊಮ್ಮೇನಹಳ್ಳಿ ಕ್ರಿ.ಶ.೧೧೩೮

೨೯. ಡಾ.ಎಂ.ಎಂ.ಕಲಬುರ್ಗಿ:ಮಾರ್ಗ-೨,ನರೇಶ್‌ಅಂಡ್‌ಕಂಪನಿ, ಬೆಂಗಳೂರು-೧೯, ೧೯೮೮, ಪುಟ-೨೮೯-೨೯೦

೩೦. E.C.(R) III ಗುಂಡ್ಲುಪೇಟೆ ೫೮ (ಎ.ಕ. IV ಗು.ಪೇ.೭೪) ತೊರವಳ್ಳಿ ಕ್ರಿ.ಶ.೧೦ನೇ ಶತಮಾನ

E.C.(R) III ಗುಂಡ್ಲುಪೇಟೆ ೨೨೦(ಎ.ಕ. IV ಗು.ಪೇ.೬೮) ಬೇರಂಬಾಡಿ, ಕ್ರಿ.ಶ.೧೯೯೦-೯೧

೩೧. ರಾ.ಯ.ಧಾರವಾಡಕರ : ಕನ್ನಡ ಭಾಷಾಶಾಸ್ತ್ರ, ಗೀತಾಬುಕ್ ಹೌಸ್, ಮೈಸೂರು, ೧೯೯೮, ಪುಟ-೯೫

(ಸಂ) ಎಂ.ಎಸ್.ಸುಂಕಾಪುರ : ಗಿರಿಜಾಕಲ್ಯಾಣ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೭, ೧-೩೨, ಪುಟ-೧೦

೩೨. ಕನ್ನಡ ಸಾಹಿತ್ಯ ಚರಿತ್ರೆ : ೪ನೆಯ ಸಂಪುಟ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು. ೧೯೭೭, ಪುಟ-೧೮೨

೩೩. E.C.(R)XII ತರೀಕೆರೆ ೧೨ (VI ತ ೪೫) ಅಮೃತಾಪುರ ಕ್ರಿ.ಶ.೧೧೯೬

೩೪. E.C.(R)XI ಚಿಕ್ಕಮಗಳೂರು ೭೪ ಹಿರೇಮಗಳೂರು ಕ್ರಿ.ಶ.೧೫೮೬

೩೫. E.C.(R)III ಗುಂಡ್ಲುಪೇಟೆ ೧೭೬ ಶಿವಪುರ ಕ್ರಿ.ಶ.೧೪೮೯

೩೬. E.C.(R)III ಗುಂಡ್ಲುಪೇಟೆ ೧೭೮ ಶೆಟ್ಟಹಳ್ಳಿ ಕ್ರಿ.ಶ.೧೪೮೮

೩೭. E.C.(R)XIII ತೀರ್ಥಹಳ್ಳಿ ೧೩೭ ಕೌದಹಳ್ಳಿ ಕ್ರಿ.ಶ.೧೪೦೪

೩೮. E.C.(R)IX ಹಾಸನ ೯ (Vಬೇ ೧೫೫) ಬೇಲೂರು ಕ್ರಿ.ಶ.೧೪೨೭

೩೯. E.C.(R)IV ಚಾಮರಾಜನಗರ ೧ ಕ್ರಿ.ಶ.೧೬೦೫

೪೦. E.C.(R)XI ಚಿಕ್ಕಮಗಳೂರು ೮೫ ಕುರುವಂಗಿ ಕ್ರಿ.ಶ.೧೫೪೯

೪೧. E.C.(R)III ಗುಂಡ್ಲುಪೇಟೆ ೧೭೮ ಶೆಟ್ಟಹಳ್ಳಿ ಕ್ರಿ.ಶ.೧೪೮೮

೪೨. E.C.(R)VII ನಾಗಮಂಗಲ ೫೮ ಕೆಳಗೆರೆ

೪೩. E.C.(R)IX ಹಾಸನ ೯ ಬೇಲೂರು ಕ್ರಿ.ಶ.೧೪೨೭

೪೪. E.C.(R)IV ಚಾಮರಾಜನಗರ ೯೫ ಉಮ್ಮತ್ತೂರು ಕ್ರಿ.ಶ.೧೫೪೫

೪೫. E.C.(R)III ಗುಂಡ್ಲುಪೇಟೆ ೧೭೩ ಎರೆಯೂರು ಕ್ರಿ.ಶ.೧೪೨೯

೪೬. E.C.(R)IX ಹಾಸನ ೧೧ (V XV ಬೇ ೫೭) ಬೇಲೂರು ಕ್ರಿ.ಶ.೧೫೨೨

೪೭. E.C.(R)VIIನಾಗಮಂಗಲ ೪೨ ಸುಬ್ಬರಾಯನಕೊಪ್ಪಲು ಕ್ರಿ.ಶ.೧೪-೧೫ನೇ ಶತಮಾನ

೪೮. E.C.(R)IX ಹಾಸನ ೧೦ (Vಬೇ ೧೫೬) ಬೇಲೂರು ಕ್ರಿ.ಶ.೧೪೦೫

೪೯. E.C.(R)III ಗುಂಡ್ಲುಪೇಟೆ ೧೩೫ ತ್ರಿಯಂಬಕಪುರ ಕ್ರಿ.ಶ.೧೪೯೨

೫೦. E.C.(R)IV ಚಾಮರಾಜನಗರ ೮೯ ಉಮ್ಮತ್ತೂರು ಕ್ರಿ.ಶ.೧೫೩೧

೫೧. E.C.(R)VIII ಹಾಸನ ೧೮೦ ದಾಸಲಾಪುರ ಕ್ರಿ.ಶ.೧೫೭೩

೫೨. E.C.(R)VII ಮಂಡ್ಯ ೬(IVನಾಮಂ ೨) ನಾಗಮಂಗಲ ಕ್ರಿ.ಶ.೧೪೬೬

೫೩. E.C.(R)VII ಮಂಡ್ಯ ೮ (IV ನಾಮಂ೪) ನಾಗಮಂಗಲ ಕ್ರಿ.ಶ.೧೫೧೧

೫೪. E.C.(R)IV ಚಾಮರಾಜನಗರ ೮೯ ಉಮ್ಮತ್ತೂರು ಕ್ರಿ.ಶ.೧೫೩೧

೫೫. E.C.(R) II ಶ್ರವಣಬೆಳಗೊಳ ೪೭೫ (೩೪೪) ಭಂಡಾರಬಸದಿ ಕ್ರಿ.ಶ.೧೩೬೮

೫೬. E.C.(R) VIIನಾಗಮಂಗಲ ೪೬ ಸುಬ್ಬರಾಯನಕೊಪ್ಪಲು, ಕ್ರಿ.ಶ.೧೪೬೦

೫೭. E.C.(R) IIಶ್ರವಣಬೆಳಗೊಳ ೪೭೫ (೩೪೪) ಭಂಡಾರಬಸದಿ ಕ್ರಿ.ಶ.೧೩೬೮

೫೮. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ-೪, ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು. ೧೯೭೭, ಪುಟ-೭೧೧

೫೯. E.C.IX ನೆಲಮಂಗಲ ೫೮, ಮಂಣೆ ಕ್ರಿ.ಶ.೧೫೨೭

೬೦. E.C.(R)II ಶ್ರವಣಬೆಳಗೊಳ ೧೪ (೧೨) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೬೧. E.C.(R)II ಶ್ರವಣಬೆಳಗೊಳ ೯೮ (೮೮) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೬೨. E.C.(R)II ಶ್ರವಣಬೆಳಗೊಳ ೮೬ (೭೬) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೬೩. E.C.(R)II ಶ್ರವಣಬೆಳಗೊಳ ೨೫ (೨೨) ಚಿಕ್ಕಬೆಟ್ಟ ಕ್ರಿ.ಶ.೭ನೆಯ ಶತಮಾನ

೬೪. E.C.(R)II ಶ್ರವಣಬೆಳಗೊಳ ೧೫ (೧೩), ೧೪ (೧೨), ೧೧೨ (೯೭), ೧೩೦(೧೧೩) ಚಿಕ್ಕಬೆಟ್ಟ

೬೫. E.C.XII ತಿಪಟೂರು ೯೩ ಕರಡಾಳು ಕ್ರಿ.ಶ.೧೧೭೪

೬೬. E.C.(R) X ಅರಸೀಕೆರೆ ೫೨ (XV ಅ.೨೧೭) ಬೆಂಡೆಕೆರೆ ಕ್ರಿ.ಶ.೧೨೩೨

೬೭. E.C.(R)II ಶ್ರವಣಬೆಳಗೊಳ ೩೩೬ (೨೩೪) ದೊಡ್ಡಬೆಟ್ಟ ೧೨ನೆಯ ಶತಮಾನ

೬೮. E.C.(R)XII ಕಡೂರು ೧೫೦ (VI ಕ೫೧) ಬ್ರಹ್ಮಸಮುದ್ರ ಕ್ರಿ.ಶ.೧೧೯೬

೬೯. E.C.XII ಚಿಕ್ಕನಾಯಕನಹಳ್ಳಿ ೧೩ ಕೈನಡುಗ್ರಾಮ ೧೨ನೆಯ ಶತಮಾನ

೭೦. E.C.(R)X ಅರಸೀಕೆರೆ ೩೧ (V ಅಕೆ೭೭)

೭೧. E.C.(R)XIII ಶಿವಮೊಗ್ಗ ೫೯ (VII ಶಿವ೧೦) ತಟ್ಟೆಕೆರೆ ಕ್ರಿ.ಶ.೧೦೮೫

೭೨. E.C.XI ದಾವಣಗೆರೆ ೩೫ ಹರಿಹರ ಕ್ರಿ.ಶ.೧೧೬೦

೭೩. ಆರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ದ್ವಿಮು.೧೯೭೫, ಪುಟ-೧೪೦, ಪದ್ಯಸಂಖ್ಯೆ-೮೨೩, ೮೨೬

೭೪. E.C.(R)XII ತರೀಕೆರೆ ೧೨(VI ತ೪೫) ಅಮೃತಾಪುರ ಕ್ರಿ.ಶ.೧೧೯೮

೭೫. E.C.XII ಚಿಕ್ಕನಾಯಕನಹಳ್ಳಿ ೨೧ ಹೆಗ್ಗೆರೆ ಕ್ರಿ.ಶ.೧೧೬೧

೭೬. S.I.I. VII ಕಾರ್ಕಳ ೨೦೨, ಮೂಡಬಿದಿರೆ ಕ್ರಿ.ಶ.೧೪೩೦

೭೭. E.C.(R) XII ತರೀಕೆರೆ ೧೨ (VI ತ೪೫) ಅಮೃತಾಪುರ ಕ್ರಿ.ಶ.೧೧೯೮

೭೮. E.C.VIII ಶಿಕಾರಿಪುರ ೧೧೪ ಬಳ್ಳಿಗಾವೆ

೭೯. E.C.VIII ಶಿಕಾರಿಪುರ ೧೨೪ ಬಳ್ಳಿಗಾವೆ

೮೦. E.C.(R)X ಅರಸೀಕೆರೆ ೩೯ (Vಅಕೆ೮೮) ಕ್ರಿ.ಶ.೧೧೮೩ ಮತ್ತು ೯೬, ೧೫೨, ೨೧೪ (Vಅಕೆ೧೫೦) ನೇ ಶಾಸನಗಳು.

೮೧. S.I.I. VII ಕಾರ್ಕಳ ೨೦೭ ಮೂಡಬಿದಿರೆ ಕ್ರಿ.ಶ.೧೫ನೆಯ ಶತಮಾನ

೮೨. E.C.(R) II ಶ್ರವಣಬೆಳಗೊಳ ೬೪ (೫೯) ಚಿಕ್ಕಬೆಟ್ಟ ಕ್ರಿ.ಶ.೧೦ನೆಯ ಶತಮಾನ

೮೩. E.C.(R) II ಶ್ರವಣಬೆಳಗೊಳ ೫೭೧ ಬೊಮ್ಮೇನಹಳ್ಳಿ ಕ್ರಿ.ಶ.೧೧೮೧

೮೪. ಡಾ.ಬಾ.ರಾ.ಗೋಪಾಲ : ಕನ್ನಡ ಶಾಸನಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ೨೦೦೪, ಪುಟ-೫೨

೮೫. E.C.(R) IXಬೇಲೂರು ೩೧೭ (V ಬೇ೧೪) ಹಳೇಬೀಡು, ಕ್ರಿ.ಶ.೧೧೭೩

೮೬. E.C.(R) IXಬೇಲೂರು ೧೬ (V ಬೇ೫೮) ಕ್ರಿ.ಶ.೧೧೧೭

೮೭. ಹೆಚ್.ಎಂ.ಶಂಕರನಾರಾಯಣರಾವ್ : ಶ್ರೀಹರಿಹರ ದೇವಾಲಯ, ಶಾರದಾಮಂದಿರ ಮೈಸೂರು-೪, ೧೯೮೨, ಪುಟ-೧೭೯ ಮತ್ತು ೧೮೨

೮೮. E.C.(R) II ಶ್ರವಣಬೆಳಗೊಳ ೧೭೬ (೧೪೩) ಚಿಕ್ಕಬೆಟ್ಟ ಕ್ರಿ.ಶ.೧೧೨೩

೮೯. E.C.(R) IXಬೇಲೂರು ೧೬(V ಬೇ೫೮) ಕ್ರಿ.ಶ.೧೧೧೭

೯೦. E.C.(R) IXಸಕಲೇಶಪುರ ೪೫(V ಮಂಬಾ೧೮) ಹಳೇಬೇಲೂರು ಕ್ರಿ.ಶ.೧೯೫

೯೧. E.C.(R) XIIIಶಿವಮೊಗ್ಗ ೧೪(VII ಶಿವ ೪) ಕಲ್ಲೂರಗುಡ್ಡ ಕ್ರಿ.ಶ.೧೦೪೪

೯೨. E.C.(R) VIIIಹೊಳೆನರಸಿಪುರ ೯೫(XV ಹೊನ೧೧೨) ಮಾವನೂರು ಕ್ರಿ.ಶ.೧೨೮೨

೯೩. E.C. VIII ಸೊರಬ ೧೩೮ ಉದ್ರಿಗ್ರಾಮ

೯೪. E.C.VII ಶಿಕಾರಿಪುರ ೧೦೦ ಬಳ್ಳಿಗಾವೆ

೯೫. E.C.VIIIಸೊರಬ ೧೦ ಮಾವಳಿ ಕ್ರಿ.ಶ.ಸುಮಾರು ೮೦೦

೯೬. E.C.VIIIಸೊರಬ ೧೭೫ ಕೋರಕೋಡು ಕ್ರಿ.ಶ.೧೯೫

೯೭. E.C.(R)ಮದ್ದೂರು ೪೨ (III ಮಂ೪೧) ಆತಕೂರು ಕ್ರಿ.ಶ.೯೪೯-೫೦

೯೮. E.C.VII ಶಿಕಾರಿಪುರ ೧೦೦ ಬಳ್ಳಿಗಾವೆ

೯೯. E.C.(R) XIಚಿಕ್ಕಮಗಳೂರು ೨೧ (ರಿ.೧೯೩೨-೧೬) ಮತ್ತಾವಾರ ಕ್ರಿ.ಶ.೧೦೭೭

೧೦೦. E.C.(R) II ಶ್ರವಣಬೆಳಗೊಳ ೪೭೫(೩೪೪) ಭಂಡಾರಬಸದಿ ಕ್ರಿ.ಶ.೧೩೬೮

೧೦೧. ಹು.ಕಾ.ಜಯದೇವ್ : ಶಾಸನ ಮತ್ತು ಗದ್ಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು ೧೯೭೫, ಪುಟ-೧೪೨, ೧೪೩

# ಅಧ್ಯಾಯ – ೭

## ಕಾವ್ಯಗಳ ಪ್ರಭಾವ

ಕನ್ನಡ ಶಾಸನಗಳ ಪರಂಪರೆಯು ಐದನೆಯ ಶತಮಾನದ ಹಲ್ಮಿಡಿಶಾಸನದಿಂದ ಆರಂಭವಾಗುತ್ತದೆ. ಆದರೆ ಆರಂಭದ ಕಾಲದ ಶಾಸನಗಳಲ್ಲಿ ಪ್ರೌಢವಾದ ರಚನೆಗಳು ಕಂಡು ಬಂದಿರುವುದಿಲ್ಲ. ಬಿಡಿ ಬಿಡಿಯಾದ ಪದ್ಯಗಳು, ಪುಟ್ಟ ಪುಟ್ಟ ಶಾಸನಗಳು ಮಾತ್ರ ಸಿಗುತ್ತವೆ. ಈ ರೀತಿಯಾದ ಶಾಸನಗಳಲ್ಲೂ ಸಾಹಿತ್ಯಾಂಶವಿದ್ದರೂ ಸಹ ಇವುಗಳ ಮೇಲೆ ಸಾಹಿತ್ಯದ ಪ್ರಭಾವ ಎಷ್ಟರ ಮಟ್ಟಿಗೆ ಆಗಿದೆ ಎಂದು ಹೇಳಲು ಸಾಧ್ಯವಿಲ್ಲ. ಏಕೆಂದರೆ ಕನ್ನಡದಲ್ಲಿ ಸಾಹಿತ್ಯ ಕೃತಿಗಳು ಉಪಲಬ್ಧವಾಗಿರುವುದೇ ಒಂಬತ್ತನೆಯ ಶತಮಾನದ ನಂತರದ ಕಾಲದಲ್ಲಿ. ಕನ್ನಡದಲ್ಲಿ ಉಪಲಬ್ಧವಾದ ಮೊದಲನೆಯ ಕೃತಿಯಾದ 'ಕವಿರಾಜಮಾರ್ಗ'ವು ಒಂದು ಲಕ್ಷಣಗ್ರಂಥವಾಗಿದೆ. ಆ ನಂತರದಲ್ಲಿ ಕನ್ನಡದ ಮೊದಲನೆಯ ಗದ್ಯಗ್ರಂಥ ವಡ್ಡಾರಾಧನೆ, ಕ್ರಿ.ಶ.೯೪೧ರ ನಂತರದಲ್ಲಿ ಆದಿಕವಿ ಪಂಪನ ಕೃತಿಗಳಾದ 'ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯ ಅಥವಾ ಪಂಪಭಾರತ' ಉಪಲಬ್ಧವಾದ ಸಾಹಿತ್ಯಕೃತಿಗಳಾಗಿವೆ. ಪಂಪಕವಿಗಿಂತ ಮೊದಲಿಗೆ ಕನ್ನಡದಲ್ಲಿ ರಚಿತವಾದ ಕೃತಿಗಳು ಈವರೆಗೆ ದೊರೆಯದಿರುವ ಕಾರಣದಿಂದಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಸ್ವರೂಪವನ್ನು ಅರಿಯಲು ಶಾಸನಗಳನ್ನು ಆಧರಿಸಬೇಕಾಗುತ್ತದೆ. ಪಂಪಕವಿಗಿಂತಲೂ ಮೊದಲು ಕಂಡುಬಂದ ತಮಟಕಲ್ಲಿನ ಗುಣಮಧುರನ ಶಾಸನ, ಬಾದಾಮಿಯ ಅರಭಟ್ಟನ ಶಾಸನ, ಮಾವಳಿಯ ಶಾಸನ, ಜೈನಮುನಿಗಳ ಜೀವನದರ್ಶನವನ್ನು ಕಲಾತ್ಮಕವಾಗಿ ಮೂಡಿಸಿರುವ ಶ್ರವಣಬೆಳಗೊಳದ ಹಲವಾರು ಶಾಸನಗಳು ಆಯಾ ಕಾಲದಲ್ಲಿ ನಡೆದಿರಬಹುದಾದ ಸಾಹಿತ್ಯ ಚಟುವಟಿಕೆಗಳಿಗೆ ನಿದರ್ಶನವಾಗಿವೆ. ಇಷ್ಟಾಗಿಯೂ ಸಹ ಆರಂಭದ ಕಾಲದಲ್ಲಿ ಸುದೀರ್ಘವಾದ ಮತ್ತು ಸಾಹಿತ್ಯಕವಾಗಿ ಮನಸೆಳೆಯುವ ಯಾವ ಶಾಸನಗಳು ದೊರೆಯದಿರಲು ಕಾರಣಗಳನ್ನು ಈ ರೀತಿಯಾಗಿ ಗುರುತಿಸಬಹುದು. ಮೊದಲನೆಯದಾಗಿ ಕನ್ನಡ ಭಾಷೆಯನ್ನು ಸಾಹಿತ್ಯದ ರಚನೆಯ ಸಂದರ್ಭದಲ್ಲಿ ಕವಿಗಳು ಸಂಪೂರ್ಣವಾಗಿ ಒಪ್ಪಿಕೊಳ್ಳದಿರುವುದು. ಸಂಸ್ಕೃತ ಭಾಷೆಯ ಬಗೆಗೆ ಆಳ್ವಿಕೆಯನ್ನು ನಡೆಸುತ್ತಿದ್ದ ರಾಜವಂಶಗಳ ವಿಶೇಷ ಒಲವು ಮತ್ತು ಶಾಸನಗಳನ್ನು ಒಂದು ವ್ಯವಸ್ಥಿತವಾದ ರೀತಿಯಲ್ಲಿ ರಚಿಸಬೇಕೆಂಬ ಮನೋಭಾವವು ಅಷ್ಟಾಗಿ ರೂಪುಗೊಳ್ಳದಿರುವುದು ಎನ್ನಬಹುದು. ಹೀಗಾಗಿ ಸಾಹಿತ್ಯಾಂಶಗಳಿಂದ ಕೂಡಿದ ಸುದೀರ್ಘವಾದ ಶಾಸನಗಳು ಪಂಪನಿಗಿಂತ ಮೊದಲು ಕಂಡುಬಂದಿಲ್ಲವೆನ್ನಬಹುದು. ಆದರೆ ಕನ್ನಡ ಭಾಷೆಯ ಬಗೆಗೆ ಒಲವಿದ್ದ ಕೆಲವು ಕವಿಗಳು ರಚಿಸಿರುವ ಮುಕ್ತಕಗಳಂತಹ ಸಣ್ಣಪುಟ್ಟ ಶಾಸನಗಳು 'ಕಾವ್ಯಾತ್ಮಕವಾಗಿ ರೂಪುಗೊಂಡಿದ್ದವು ಎನ್ನಲು ಅವಕಾಶವಿದೆ.

ಆದಿಕವಿ ಪಂಪನ ಕೃತಿಗಳು ಬಂದ ಮೇಲೆ ಕನ್ನಡದ ಶಾಸನಗಳು ಪ್ರೌಢವಾಗಿ ರಚನೆಯಾಗತೊಡಗಿದವು. ಸಾಮಾನ್ಯವಾಗಿ ಶಾಸನಗಳನ್ನು ಬರೆಯುತ್ತಿದ್ದವರು ವಿದ್ಯಾವಂತರಾಗಿರುತ್ತಿದ್ದರಿಂದ ಪ್ರೌಢಕಾವ್ಯಗಳ ಪರಿಚಯ ಅವರಿಗೆ ಇರುತ್ತಿದ್ದರಿಂದ ಸಹಜವಾಗಿ ಅವುಗಳ ಪ್ರಭಾವ ಅವರ ಮೇಲಿರುತ್ತಿತ್ತು. ಶಾಸನಕವಿಗಳು ವಿದ್ಯಾವಂತರಾಗಿದ್ದುದರಿಂದ ಶಾಸನ ರಚನೆಯಲ್ಲೂ ಪ್ರೌಢವಾದ ಚಂಪೂ ಕಾವ್ಯಗಳನ್ನು ಅನುಸರಿಸಲು ಪ್ರಯತ್ನಪಡುತ್ತಿದ್ದರು. ಇದರ ಪರಿಣಾಮವಾಗಿ ಅನೇಕ ಶಾಸನಗಳು ಪುಟ್ಟ ಚಂಪೂಕಾವ್ಯಗಳಂತೆ ರೂಪುಗೊಳ್ಳಲು ಸಾಧ್ಯವಾಯಿತು. ಈ ಭಾಗದಲ್ಲಿ ಪಂಪಪೂರ್ವಯುಗದ ಶಾಸನದ ಕೆಲವು ಪದ್ಯಗಳು ಪಂಪನೇ ಮೊದಲಾದ ಕವಿಗಳ ಮೇಲೆ ಬೀರಿರುವ ಪ್ರಭಾವ ಮತ್ತು ಪಂಪ, ರನ್ನ ಮೊದಲಾದ ಸಾಹಿತ್ಯ ಕವಿಗಳ ಪ್ರಭಾವವು ಶಾಸನಕವಿಗಳ ಮೇಲೆ ಆಗಿರುವ ಸಾಧ್ಯತೆಯನ್ನು ಗುರುತಿಸಬಹುದು.

**೭:೧ : ಸಾಹಿತ್ಯ ಕವಿಗಳ ಮೇಲೆ ಶಾಸನಗಳ ಪ್ರಭಾವ :-**

ಕವಿರಾಜ ಮಾರ್ಗ ಕೃತಿಯಲ್ಲಿ

**ವಿಮಲೋದಯ ನಾಗಾರ್ಜುನ**
**ಸಮೇತಜಯಬಂಧು ದುರ್ವಿನೀತಾದಿಗಳೀ**
**ಕ್ರಮದೊಳ್ ನೆಗಟ್ಟ ಗದ್ಯಾ**
**ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್**[೧]

ಎಂಬ ಪದ್ಯದಲ್ಲಿ ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತರು ಗದ್ಯಕಾರರಾಗಿದ್ದರೆಂದೂ,

**ಪರಮಶ್ರೀವಿಜಯಕವೀ**
**ಶ್ವರ ಪಂಡಿತ ಚಂದ್ರಲೋಕಪಾಲಾದಿಗಳ್**[೨]

ಎಂಬ ಪದ್ಯದಲ್ಲಿ ಶ್ರೀವಿಜಯ, ಕವೀಶ್ವರ, ಪಂಡಿತ, ಚಂದ್ರ ಲೋಕಪಾಲ ಇವರುಗಳು ಪದ್ಯಕಾರರಾಗಿದ್ದರೆಂದು ಉಲ್ಲೇಖವಿದೆ. ಆದರೆ ಇವರುಗಳು ರಚಿಸಿದ ಯಾವ ಕೃತಿಯೂ ಸದ್ಯ ಉಪಲಬ್ಧವಿಲ್ಲದ ಕಾರಣದಿಂದ ನೃಪತುಂಗ ಪೂರ್ವಯುಗದ ಶಾಸನಗಳ ರಚನೆಯ ಮೇಲೆ ಕಾವ್ಯಗಳ ಪ್ರಭಾವ ಯಾವ ರೀತಿ ಆಗಿತ್ತು ಎಂದು ಹೇಳಲು ಸಾಧ್ಯವಿಲ್ಲ. ಬಹುಶಃ ಈ ಕಾಲದಲ್ಲಿದ್ದ ಸಂಸ್ಕೃತ ಶಾಸನಗಳು, ಕಾವ್ಯಗಳ ಪ್ರಭಾವವು ಆಗ ತಾನೇ ಕನ್ನಡ ಭಾಷೆಯಲ್ಲಿ ಶಾಸನ ರಚನೆಯಾಗುತ್ತಿದ್ದ ಸಂದರ್ಭದಲ್ಲಿ ಉಂಟಾಗಿರುವ ಸಾಧ್ಯತೆಯಿದೆ.

ನೃಪತುಂಗ ಪೂರ್ವ ಕಾಲದ ಕೆಲವು ಪದ್ಯಶಾಸನಗಳ ಪ್ರಭಾವವು ಮುಂದೆ ಕನ್ನಡ ಸಾಹಿತ್ಯದ ಕೆಲವು ಕವಿಗಳ ಮೇಲೆ ಉಂಟಾಗಿರುವ ಸಾಧ್ಯತೆಯಿದೆ. ಶ್ರವಣಬೆಳಗೊಳದ ಈ ಅವಧಿಯ ಬಹುತೇಕ ಶಾಸನಗಳು ಜೈನಮುನಿಗಳ ವೈರಾಗ್ಯವನ್ನು ಕಾವ್ಯಾತ್ಮಕವಾಗಿ ನಿರೂಪಿಸಿವೆ. ಇಂತಹ ಪದ್ಯಗಳ ಭಾವಬಂಧದ ಪ್ರಭಾವವು ಕನ್ನಡದ ಆದಿಕವಿ ಪಂಪ, ಜನ್ನ, ದುರ್ಗಸಿಂಹ ಮೊದಲಾದವರ ಮೇಲೆ ಉಂಟಾಗಿರುವ ಸಾಧ್ಯತೆಯಿದೆ.

ಶ್ರವಣಬೆಳಗೊಳದ ಪದ್ಯ ಶಾಸನಗಳಲ್ಲೆಲ್ಲಾ ತುಂಬಾ ಪ್ರಸಿದ್ಧವಾದ ನಂದಿಸೇನನೆಂಬ ಜೈನಯತಿಯು ಸಂಸಾರದ ನಶ್ವರತೆಯನ್ನು ಮನಗಂಡು ಸನ್ಯಸನ ವಿಧಿಯಿಂದ ಮುಡುಪಿದ ಪದ್ಯವು[೩] "ಉತ್ತಮವಾದ ಉಪಮೆಗಳಿಂದ ಕೂಡಿದ್ದು, ಮುಂದಿನ ಕನ್ನಡ ಕವಿಗಳ ಅಭಿವ್ಯಕ್ತಿಯ ಮೇಲೆ ಅದರಲ್ಲೂ ವಿಶೇಷವಾಗಿ ಬದುಕಿನ ನಶ್ವರತೆಯನ್ನು ವೈರಾಗ್ಯಪರವಾದ ಭಾವವನ್ನು ವಿವರಿಸುವ ಸಂದರ್ಭದಲ್ಲಿ ತನ್ನ ಪ್ರಭಾವವನ್ನು ಬೀರಿರುವುದನ್ನು"[೪] ಗಮನಿಸಬಹುದಾಗಿದೆ.

ಪಂಪಕವಿಯ ಆದಿಪುರಾಣದಲ್ಲಿ ವಜ್ರದಂತ ಮಹಾರಾಜನಿಗೆ ವೈರಾಗ್ಯ ಮೂಡಿದುದನ್ನು ವಿವರಿಸುವ ಸಂದರ್ಭದಲ್ಲಿ

**ತೃಣಶಿಖರಾದ್ಯುಷಿತಾಂಭಃ**

**ಕಣಸಂಚಲಮಮರಚಾಪ ಚಪಲಂ ವಿದ್ಯುತ್**

**ಕ್ಷಣಕಂ ನಿಟ್ಟಿಯೆ ತನು ಭ**

**ದ್ಗಣಯೌವನ ರೂಪವಿಭವ ಭೋಗಾಭೋಗಂ'(ಆದಿಪುರಾಣ ೯–೫೭)**

ಎಂಬ ಪದ್ಯವು 'ಸುರಚಾಪಂಬೋಲೆ' ಎಂಬ ಶಾಸನ ಪದ್ಯದ ಪ್ರೌಢವಾದ ರೂಪಾಂತರವಾಗಿದೆ. ನೀಲಾಂಜನೆಯ ನರ್ತನದ ಸಂದರ್ಭದಲ್ಲಿ ಆದಿದೇವನಿಗೆ ವೈರಾಗ್ಯೋದಯವಾದ ಸಂದರ್ಭದಲ್ಲಿ

**ತನುರೂಪ ವಿಭವ ಯೌವನ**

**ಧನ ಸೌಭಾಗ್ಯಾಯುರಾದಿಗಳ್ಗೆಣೆ ಕುಡುಮಿಂ**

**ಚಿನ ಪೊಳಪು ಮುಗಿಲನೆಬಲಿಂ**

**ದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ(ಆದಿಪುರಾಣ. ೯–೪೬)**

ಎಂಬ ಪದ್ಯದಲ್ಲಿ 'ನರಭೋಗಮೆಂಬೀ ಪನಿಪುಲ್ಲನಕ್ಕೆ ತೃಷ್ಣೆ ಪೇಳ್ ಪೋದಪುದೇ......(ಆದಿಪುರಾಣ – ೫೭) ಎಂಬ ಮಾತುಗಳಲ್ಲಿ ಕಾಮನಬಿಲ್ಲು, ಮಿಂಚಿನಹೊಳಪು, ಹುಲ್ಲಮೇಲಿನ ಹನಿ(ಮಂಜು) ಈ ರೂಪಕಗಳು ಬದುಕಿನ ನಶ್ವರತೆಯನ್ನು ಸೂಚಿಸಲು ಬಳಕೆಯಾಗಿವೆ.

ದುರ್ಗಸಿಂಹನ ಪಂಚತಂತ್ರದಲ್ಲಿ –

**ಅನಿಮಿಷಚಾಪದಂತೆ ಸಿರಿ.. ಶಾರದನೀರದ ಕಾಂತಿಯಂತೆ ಯೌ**

**ವನದೆಸಕಂ ತೃಣಾಗ್ರಗತವಾಃಕಣಿಕಾಗಣದಂತೆ ಸಂದ ಜೀ**

**ವನಮದರಿಂ.........(ಪಂಚತಂತ್ರ; ಭೇದಪ್ರಕರಣ. ಪದ್ಯ:೧೧೬)**

ಎಂಬ ಮಾತು ಬರುತ್ತದೆ. ಜನ್ನನ 'ಅನಂತನಾಥಪುರಾಣ'ದಲ್ಲಿ

**ದಿವಿಜಚಾಪದಿಂ ಚಾಪಳಂ ಪೊದಳ್ದ ಸಿರಿಯೆಂಬುದು'** (ಅನಂಪು ೯–೨೮)

**'ಎಯ್ದೆತೋರ್ಪಮಿಂಚಿನ ಪೊಳಪು....... ಮಾನಸರ ಮಾನವಾಳ್**

(ಅನಂಪು ೯–೨೯) ಎಂಬ ವರ್ಣನೆಗಳ ಸಂದರ್ಭದಲ್ಲಿ ಶ್ರವಣಬೆಳಗೊಳದ ಶಾಸನಪದ್ಯದ ಪ್ರಭಾವವನ್ನು ಕಾಣಬಹುದಾಗಿದೆ.

"ಮನುಷ್ಯ ಜೀವನ ಹಾಗೂ ಅದರ ವೈಭವಾದಿಗಳು ನಶ್ವರವೆಂದು ಸಾಂಕೇತಿಸುವ, ಕಾಮನಬಿಲ್ಲು, ಮಿಂಚಿನಬಳ್ಳಿ, ಮಂಜಿನಹನಿ ಇತ್ಯಾದಿ ರೂಪಕಗಳು ಶ್ರವಣಬೆಳಗೊಳದ ಶಾಸನದಲ್ಲಿ ಯಾವಾಗ ರಮ್ಯವಾದ ಅಭಿವ್ಯಕ್ತಿಯನ್ನು ಪಡೆದುಕೊಂಡವೋ ಆ ಅಭಿವ್ಯಕ್ತಿಯ ಸೊಗಸು ಮುಂದಿನ ಕನ್ನಡದ ಪ್ರಮುಖ ಕವಿಗಳಾದ ಪಂಪ, ದುರ್ಗಸಿಂಹ ಮತ್ತು ಜನ್ನ ಇಂಥ ಕವಿಗಳ ಅಭಿವ್ಯಕ್ತಿಯಲ್ಲೂ ಅನುರಣನಗೊಂಡಿದೆಯೆಂಬುದನ್ನು ಗಮನಿಸಿದರೆ, ಈ ಪ್ರಸ್ತುತ ಶಾಸನ ಪದ್ಯ ಸಾಹಿತ್ಯದ ದೃಷ್ಟಿಯಿಂದ ಎಷ್ಟು ಮಹತ್ತಾಗಿದೆ"[೫] ಎಂಬ ಅಭಿಪ್ರಾಯವು ವ್ಯಕ್ತವಾಗಿದ್ದು, ಕಾವ್ಯಗಳ ಮೇಲೆ ಶಾಸನದ ಪ್ರಭಾವವನ್ನು ಮನವರಿಕೆ ಮಾಡಿಕೊಡುತ್ತದೆ.

## ೭. ೨ : ಶಾಸನಗಳ ಮೇಲೆ ಸಾಹಿತ್ಯಕವಿಗಳ ಪ್ರಭಾವ :–

ಕನ್ನಡ ಶಾಸನಗಳನ್ನು ರಚಿಸಿದ ಹಲವಾರು ಜನರು ಕನ್ನಡದ ಕವಿಗಳು ಆಗಿದ್ದಾರೆ. ಹಲವಾರು ಪ್ರಸಿದ್ಧರಾದ ಕನ್ನಡ ಕವಿಗಳ ಪ್ರಭಾವವು ಶಾಸನಕವಿಗಳ ಮೇಲಾಗಿರುವುದು ಕಂಡುಬರುತ್ತದೆ. ಹಾಗೆ ಕನ್ನಡ ಶಾಸನಗಳ ರಚನೆಯ ಮೇಲೆ ಹೆಚ್ಚು ಪ್ರಭಾವ ಬೀರಿರುವುದು ಪಂಪ ಮತ್ತು ರನ್ನ ಕವಿ. ಉಳಿದಂತೆ ಗುಣವರ್ಮ, ನಾಗವರ್ಮ, ಬಸವಣ್ಣ ಮತ್ತು ಹರಿಹರ ಕವಿಯ ಪ್ರಭಾವವು ಉಂಟಾಗಿರುವುದು ಕೆಲವೊಂದು ಶಾಸನಗಳನ್ನು ಗಮನಿಸಿದಾಗ ಕಂಡುಬರುತ್ತದೆ.

ಪಂಪಪೂರ್ವಯುಗಕ್ಕೆ ಸೇರಿದ ಕವಿ ಗುಣವರ್ಮ. ಸು.೯೦೦ರಲ್ಲಿದ್ದ ೧ನೆಯ ಗುಣವರ್ಮನು ಶೂದ್ರಕ ಮತ್ತು ಹರಿವಂಶ ಎಂಬ ಗ್ರಂಥಗಳನ್ನು ಬರೆದಿದ್ದಾನೆ. ಗುಣವರ್ಮನ 'ಶೂದ್ರಕ' ಕೃತಿಯು ಹೆಸರೇ ಸೂಚಿಸುವಂತೆ ಈ ಕಾವ್ಯದಲ್ಲಿ ಆ ಹೆಸರಿನ ಪುರಾಣಪ್ರಸಿದ್ಧನಾದ ರಾಜನ ಚರಿತ್ರೆಯಿದ್ದು, ಅವನೊಡನೆ ಹೊಂದಿಕೊಂಡು ಆಶ್ರಯದಾತನಾದ ಗಂಗರಾಜನ ಚರಿತ್ರೆಯೂ

ಸ್ತುತಿಯೂ ಇರಬಹುದು ಎಂಬ ಅಭಿಪ್ರಾಯವಿದೆ.[೬] "ಗುಣವರ್ಮನ 'ಶೂದ್ರಕ' ಕೃತಿಯ ಸಮುದ್ರ ವರ್ಣನೆಯ ಪದ್ಯವು ಕನ್ನಡದ ಹಲವಾರು ಶಾಸನಗಳಲ್ಲಿ ಕಂಡುಬಂದಿವೆ"[೭] ಎಂಬುದಾಗಿ ವಿದ್ವಾಂಸರು ಗುರುತಿಸಿದ್ದಾರೆ. ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಸಂತೆಶಿವರಗ್ರಾಮದ ಶಾಸನದಲ್ಲಿರುವ[೮] ಸಮುದ್ರವರ್ಣನೆಯ ಪದ್ಯ ಈ ರೀತಿಯಾಗಿದೆ.

**ಗಂಭೀರಾಸ್ಫಾರಾವೇಳಾಂ ಬಹಳ ಪರಿವ್ರಿಡಲ್ಲೋಲಕಲ್ಲೋಲಮಾಲಾ**

**ರಂಭಪ್ರೋಡ್ಡೀನಫೇನಪ್ರಬಳಜಳಚರಲ್ಲೋಠಪಾಠೀನಶುಂಭ**

**ತ್ಕುಂಭೀರಾಭೀಳನಕ್ರಪ್ರಕರಕಮಠ ನೀರೇಭರತ್ನಪ್ರಭಾವೋ**

**ಜ್ಜೃಂಭಪ್ರೋದ್ಭಾಸಿವೀಚೀನಿಚಯಘನಘನಧ್ವಾನ ರೌದ್ರಂಸಮುದ್ರಂ**

ಸಂಸ್ಕೃತಮಯವಾದ ಶೈಲಿಯಿಂದ ಕೂಡಿರುವ ಈ ಪದ್ಯದಲ್ಲಿ ಭೀಕರವಾದ 'ಶಬ್ದಸಮುದ್ರ'ವನ್ನಷ್ಟೇ ಕಾಣಲು ಸಾಧ್ಯ. ಇದೇ ಪದ್ಯವು ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ'ದಲ್ಲಿ ಮತ್ತು ಅಭಿನವವಾದಿ ವಿದ್ಯಾನಂದನ 'ಕಾವ್ಯಸಾರ' ಕೃತಿಯಲ್ಲೂ ಕಂಡುಬಂದಿದೆ. ಸಮುದ್ರವರ್ಣನೆಯ ಗುಣವರ್ಮನ ಪದ್ಯದ ಮೂಲ ರೂಪವನ್ನು ಶಾಸನಗಳು ಉಳಿಸಿಕೊಂಡಿರುತ್ತವೆ. "ಶಾಸನಗಳಲ್ಲಿ ಈ ಪದ್ಯವು ದೊರೆಯುವುದಕ್ಕೆ ಗುಣವರ್ಮನ ಸ್ಥಳಸಾಮೀಪ್ಯವೋ, ಶಾಸನಕವಿಯ 'ಶೂದ್ರಕ' ಪ್ರೀತಿಯೋ ಕಾರಣವಾಗಿರಬಹುದು"[೯] ಎಂಬುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ.

ಕನ್ನಡದ ಶಾಸನಗಳ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದ ಕವಿಗಳೆಂದರೆ ಪಂಪ ಮತ್ತು ರನ್ನ. ಪಂಪನು ಕನ್ನಡದ ಆದಿಕವಿ ಮತ್ತು ಅಗ್ರಮಾನ್ಯ ಕವಿ. ಪಂಪನಿಗಿಂತ ಮೊದಲು ಅನೇಕ ಗದ್ಯಕೃತಿಗಳೂ, ಪದ್ಯಕೃತಿಗಳು ಇದ್ದುವೆಂದು ತಿಳಿದು ಬಂದರೂ ಅವುಗಳು ಯಾವುವೂ ದೊರೆಯದಿರುವುದರ ಕಾರಣದಿಂದ ಆ ಕೃತಿಗಳ ಪ್ರಭಾವವು ಶಾಸನಗಳ ಮೇಲಾಗಿದ್ದರೂ ಸಹ ಅವುಗಳನ್ನು ಗುರುತಿಸುವುದು ಅಸಾಧ್ಯವಾಗುತ್ತದೆ. ಗುಣವರ್ಮನ 'ಸಮುದ್ರವರ್ಣನೆ'ಯ ಪದ್ಯವು ಹೆಚ್ಚುಕಡಿಮೆ ಅದೇ ರೂಪದಲ್ಲಿ ಶಾಸನಗಳಲ್ಲಿ ಉಳಿದುಬಂದಿರುವುದನ್ನು ಈಗಾಗಲೇ ಗಮನಿಸಲಾಗಿದೆ. ಪಂಪನಿಗಿಂತ ಮೊದಲು ಇದ್ದ ಸಂಸ್ಕೃತ ಭಾಷೆಯ ಶಾಸನಗಳು, ಕಾವ್ಯಗಳ ಪ್ರಭಾವವು ಆಗ ತಾನೇ ಕನ್ನಡ ಭಾಷೆಯಲ್ಲಿ ಶಾಸನ ರಚನೆಯಾಗುತ್ತಿದ್ದ ಸಂದರ್ಭದಲ್ಲಿ ಉಂಟಾಗಿರುವ ಸಾಧ್ಯತೆಯಿದೆ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಕ್ರಿ.ಶ.ಸು.೮೦೦ರ ಮಾವಳಿಯ ಶಾಸನ[೧೦] ಈ ಶಾಸನದಲ್ಲಿ ಕುಲಮದ್ದನೆಂಬುವನು ಪರಾಕ್ರಮದಿಂದ ಹೋರಾಡುತ್ತ ಮಡಿಯುತ್ತಿರುವ ಸನ್ನಿವೇಶವನ್ನು ಬಣ್ಣಿಸುವಾಗ "ಕಣೆಪಂಜರದೊಳೆಱಗಿ ಭೀಷ್ಮನ್ವಿಟ್ಟನ್ತೆ" ಎಂಬ ಮಾತು ಬರುತ್ತದೆ. ಮಹಾಭಾರತದ ಭೀಷ್ಮನ ಪ್ರಸಂಗವನ್ನು ಶಾಸನಕವಿಯು ಬಳಸಿರುವುದನ್ನು ಗಮನಿಸಿದಾಗ ಈಗಾಗಲೇ ಜನಜನಿತವಾಗಿದ್ದ ಮಹಾಭಾರತ ಕಾವ್ಯದ ಪ್ರಭಾವವನ್ನು

ಗುರುತಿಸಬಹುದು. ಇದರಿಂದ ಒಂದು ಅಂಶವು ಸ್ಪಷ್ಟವಾಗುತ್ತದೆ. ಪಂಪನಿಗಿಂತಲೂ ಮೊದಲು ಕನ್ನಡದಲ್ಲಿ ಒಂದು ಉಜ್ವಲವಾದ ಕಾವ್ಯಪರಂಪರೆಯಿದ್ದಿರಬಹುದಾದ ಸಾಧ್ಯತೆಯಿದೆ. ಆ ಕಾವ್ಯ ಪರಂಪರೆಯ ಪ್ರಭಾವವು ಶಾಸನ ಸಾಹಿತ್ಯದ ಮೇಲೆ ಭಾಗಶಃ ಆಗಿರಲೂಬಹುದು. ಪಂಪಕವಿಯು ಕೃತಿಗಳನ್ನು ರಚಿಸಿದ ನಂತರದಲ್ಲಿ ಅದರಲ್ಲಿ ಪ್ರತಿಪಾದಿತವಾದ ಮೌಲ್ಯಗಳು ಸಮಾಜದಲ್ಲಿ ಮತ್ತಷ್ಟು ಪ್ರಚಲಿತವಾಗಿ ಶಾಸನಗಳಲ್ಲೂ ಪ್ರತಿಧ್ವನಿಸಲು ಆರಂಭವಾಯಿತೆನ್ನಬಹುದು.

ಆದಿಕವಿ ಪಂಪನು ಕನ್ನಡ ಸಾಹಿತ್ಯಲೋಕಕ್ಕೆ ಆದಿಪುರಾಣ ಮತ್ತು ವಿಕ್ರಮಾರ್ಜುನ ವಿಜಯ ಅಥವಾ ಪಂಪಭಾರತ ಎಂಬ ಎರಡು ಕೃತಿಗಳನ್ನು ನೀಡಿದ್ದಾನೆ. ಪಂಪಭಾರತವು ಲೌಕಿಕ ಕೃತಿಯಾದರೆ, ಆದಿಪುರಾಣವು ಅಲೌಕಿಕ ಅಥವಾ ಧಾರ್ಮಿಕ ಕೃತಿಯಾಗಿದೆ. ಆದಿಪುರಾಣದಲ್ಲಿ ಮೊದಲನೆಯ ತೀರ್ಥಂಕರನಾದ ಆದಿನಾಥನ ಜನ್ಮಯಾತ್ರೆಯ ಪರಮಸಿದ್ಧಿಯ ಕಥೆಯಿದೆ. ಆದಿಪುರಾಣದ ಪ್ರಮುಖ ಪ್ರಸಂಗಗಳಲ್ಲಿ ಒಂದಾದ ಭರತ-ಬಾಹುಬಲಿಯ ಪ್ರಸಂಗವು ಬೊಪ್ಪಣ ಕವಿಯ 'ಗೊಮ್ಮಟಸ್ತುತಿ'ಯ ರಚನೆಗೆ ಪ್ರೇರಣೆಯನ್ನು ಒದಗಿಸಿದೆಯೆನ್ನಬಹುದು. ಗೊಮ್ಮಟಸ್ತುತಿಯಲ್ಲಿರುವ ಕಥನಾತ್ಮಕ, ಭಾವಗೀತಾತ್ಮಕವಾದ ರಚನಾವಿಲಾಸವನ್ನು ಗಮನಿಸಿದಾಗ "ಕವಿಗೆ ಜಿನಸೇನ ಪಂಪರ "ಪೂರ್ವಪುರಾಣ" "ಆದಿಪುರಾಣ"ಗಳೇ ಆಕರಗಳಾಗಿ ಒದಗಿರುವುದು ನಿಶ್ಚಯ"[೧೧] ಎಂಬ ಅಭಿಪ್ರಾಯವನ್ನು ಗಮನಿಸಿದಾಗ ಆದಿಪುರಾಣದ ಪ್ರಭಾವವನ್ನು ಗುರುತಿಸಲು ಸಾಧ್ಯವಾಗುತ್ತದೆ. ಪಂಪನ ಆದಿಪುರಾಣದ ಪದ್ಯವೊಂದು'[೧೨] ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕು ಬಸ್ತಿಹಳ್ಳಿ ಗ್ರಾಮದ ಆದಿನಾಥ ಬಸದಿಯ ಗರ್ಭಾಂಕಣದ ಬಾಗಿಲುವಾಡದ ಮೇಲಿನ ಶಾಸನದಲ್ಲಿ ಕಂಡುಬರುತ್ತದೆ. ಆ ಶಾಸನ ಪದ್ಯವು

**ಮುನಿಜನದೋದಿಸಿದೋಜೆಯ**
**ಲನುವದಿಪುದಿದೊಂದೆ ಕೊಣ್ಡಕುಂದಾನ್ವಯ ನ**
**ನ್ದನವನ ಶುಕವೆಂದೆನಗಿನಿ**
**ತನನುಗ್ರಹಂಗೆಯ್ಗೆ ಕರುಣದಿಮ್ಮುನಿನಿವಹಂ"[೧೩]**

ಎಂಬುದಾಗಿದೆ. ಇದರಿಂದ "ಕ್ರಿ.ಶ.೯೪೧ರಲ್ಲಿ ಪೂರ್ಣಗೊಂಡ ಆದಿಪುರಾಣದ ಹಸ್ತಪ್ರತಿಯು ಕ್ರಿ.ಶ.೧೧೩೮ರ ಸುಮಾರಿಗೆ ಹಳೇಬೀಡು ಬೇಲೂರು ಕಡೆಗೆ ಪ್ರಸಾರಗೊಂಡಿದ್ದು, ಶಾಸನದಲ್ಲಿ ಸ್ಥಾನ ಪಡೆಯುವಷ್ಟು ಜನತೆಯ ಮೆಚ್ಚುಗೆಯನ್ನು ಗಳಿಸಿದ್ದವು"[೧೪] ಎಂಬ ಅಭಿಪ್ರಾಯವು ಪಂಪನ ಆದಿಪುರಾಣದ ಪ್ರಭಾವವು ಶಾಸನಗಳ ಮೇಲೆ ಉಂಟಾಗಿದ್ದುದನ್ನು ಸ್ಪಷ್ಟಪಡಿಸುತ್ತದೆ.

ಪಂಪಕವಿಯ ಆದಿಪುರಾಣಕ್ಕಿಂತ "ವಿಕ್ರಮಾರ್ಜುನವಿಜಯ" ಅಥವಾ "ಪಂಪಭಾರತ"ವು ಅಂದಿನ ಜನಜೀವನದ ಮೇಲೆ ತನ್ಮೂಲಕ ಶಾಸನಗಳ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದೆ.

ಹತ್ತನೆಯ ಶತಮಾನವನ್ನು "ಕ್ಷಾತ್ರತೇಜಸ್ಸಿನ ಯುಗ" ಎನ್ನಬಹುದು. ಅಂದಿನ ಜನಜೀವನವನ್ನು ಪ್ರೇರೇಪಿಸುತ್ತಿದ್ದ ಮಾರ್ಗದರ್ಶನ ಮಾಡುತ್ತಿದ್ದ ಮೌಲ್ಯಗಳೆಂದರೆ ನನ್ನಿ, ಚಾಗ, ಸ್ವಾಮಿಭಕ್ತಿ, ಅಭಿಮಾನ, ಶೌಚ, ಅಜಿವು, ಅಣ್ಮು, ಚಲ, ಶರಣ್ಬುಗೆ ಕಾವುದು ಇತ್ಯಾದಿ. ಅಂದಿನ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದ ಈ ಮೌಲ್ಯಗಳನ್ನು ಅಕ್ಷರಶಃ ಅನುಸರಿಸುತ್ತಿದ್ದರು ಮತ್ತು ಹಾಗೆ ಅನುಸರಿಸಲು ಕಾವ್ಯ, ಶಾಸನಗಳು ಪ್ರೇರೇಪಿಸುತ್ತಿದ್ದವು ಎನ್ನಲು –

**ತುಱುಗೋಳೊಳ್ ಪೆಣ್ಬುಯ್ಯಲೊ**

**ಳೆಱೆವೆಸದೊಳ್ ನಂಟನೆಡಱೊಳೂರಟೆವಿನೊಳಂ**

**ತಱಸಂದು ಗಂಡುತನಮನೆ**

**ನೆಱಪದವಂ ಗಂಡನಲ್ಲನೆಂತುಂ ಷಂಡಂ'**[೧೫]

ಎಂಬ ಪದ್ಯವು ಸಾಕ್ಷಿಯಾಗಿದೆ. ಮೇಲ್ಕಂಡ ಮೌಲ್ಯ ಸೂಚಕಪದಗಳು ಕೇವಲ ತೋರಿಕೆಯ ಮಾತುಗಳಾಗಿರದೆ, ಅವೆಲ್ಲಾ ಜೀವಂತವಾಗಿದ್ದ ಮಾತುಗಳು. "ಅಭಿಮಾನವೆನ್ನುವುದು ಕಾವ್ಯಭಾಷೆಯ ಪದ ಮಾತ್ರವಲ್ಲ' ಅದನ್ನು ಜನ ಬಳಸುತ್ತಿದ್ದರು. ಅಥವಾ ಅದನ್ನು ಜನ ಬಳಸದೆ ಇದ್ದರೂ ಅದಕ್ಕೆ ಸಮಾನಾರ್ಥಕವಾದ 'ಚಲ' ಎಂಬ ಪದವನ್ನು ಬಳಸುತ್ತಿದ್ದರು. 'ಅಭಿಮಾನ'ದ ಭಾವನೆಯಿತ್ತು ಜನಮನದಲ್ಲಿ. 'ದಾನ'ವನ್ನೇ ತೆಗೆದುಕೊಳ್ಳೋಣ. ನಮ್ಮ ಶಾಸನ ಸಂಪತ್ತಿನಲ್ಲಿ ಅರ್ಧದಷ್ಟು ದಾನಶಾಸನಗಳೇ. ಇನ್ನುಳಿದ ಶಾಸನಗಳಲ್ಲಿ ಮುಕ್ಕಾಲುಪಾಲು ವೀರಗಲ್ಲುಗಳು. ಬೀರ ಎಂಬ ಮೌಲ್ಯಕ್ಕಿದ್ದ ಸ್ಥಾನ ಇದರಿಂದ ಗೊತ್ತಾಗುತ್ತದೆ. ಆದ್ದರಿಂದ ಶಾಸನಗಳಲ್ಲಿ ಪಂಪನ ಕಾವ್ಯಗಳಲ್ಲಿ ಕಂಡುಬರುವ ಮೌಲ್ಯಸೂಚಕ ಪದಗಳು ಕವಿಗಳ ಕಾವ್ಯಗಳಲ್ಲಿ ಮಾತ್ರ ಪ್ರಚಾರದಲ್ಲಿದ್ದ ಪದಗಳಲ್ಲ; ಅವು ಜನರ ಬಾಳಿನ ಅನುಭವದ ಮುದ್ರೆಯನ್ನು ಹೊತ್ತ ಜೀವಂತ ಪದಗಳು."[೧೬] ಹೀಗೆ ಜನಜೀವನದಲ್ಲಿ ಗಾಢವಾಗಿ ಬೇರೂರಿದ್ದ "ಪಂಪನ ಸಮಕಾಲೀನ ಮೌಲ್ಯಗಳೆಲ್ಲವೂ ಪಂಪನ ನಂತರದ ಶಾಸನಗಳಲ್ಲೂ ಬರುತ್ತವೆ. ಇವು ಹೆಚ್ಚು ಸಂಖ್ಯೆಯಲ್ಲಿ ಕಂಡುಬರುವುದು ಮಾತ್ರವಲ್ಲದೆ, ಭಾರತದ ಪಾತ್ರಗಳೊಡನೆ ಹೆಚ್ಚುಕಡಿಮೆ ಪಂಪ ಸೇರಿಸುವಂತೆ ಸೇರಿಸಿ ಹೇಳುತ್ತಾರೆ. ಪಂಪ ಪೂರ್ವದಲ್ಲಿ ಒಂದೆರಡು ಕಡೆ ಅರ್ಜುನನ ಶೌರ್ಯವನ್ನು ಕರ್ಣನ ತ್ಯಾಗವನ್ನು ಪ್ರಶಂಸಿದ್ದರೂ, ಪಂಪನ ನಂತರದ ಶಾಸನಗಳಲ್ಲಿ ಎಲ್ಲಿ ನೋಡಿದರೂ ಭೀಮಾರ್ಜುನರ ಸಾಹಸ ಕೀರ್ತಿಗಳು, ಭೀಷ್ಮರ ಬೀರ ಮತ್ತು ಶೌಚ, ಕರ್ಣನ ನನ್ನಿ ಮತ್ತು ಚಾಗ, ಕೌರವನ ಚಲ ಮತ್ತು ಅಭಿಮಾನಗಳ ಪ್ರಸಕ್ತಿಯೇ ಪ್ರಸಕ್ತಿ. ಪಂಪ ತನ್ನ ಕಾಲದ ಮೌಲ್ಯಗಳಿಗೆ ಕಾವ್ಯಗಳಲ್ಲಿ ಸ್ಥಾನವನ್ನು ಕೊಟ್ಟು ಅವುಗಳಿಗೆ ಬೆಲೆಯನ್ನು ಘನತ್ವವನ್ನು ನಿರ್ದಿಷ್ಟತೆಯನ್ನು ತಂದುಕೊಟ್ಟಿದ್ದರ ಫಲವಾಗಿ ಅವುಗಳ ಪ್ರಸಾರವು ಕೂಡ ಆಯಿತು. ಈ ಮೌಲ್ಯಗಳಿಗೆ ಈ ರೀತಿ ಬೆಲೆ ಬರಲು, ಪ್ರಸಾರವಾಗಲು ಪಂಪನ ಕೃತಿಯೊಂದೇ

ಕಾರಣ, ಅಂತಹ ಮೌಲ್ಯಗಳನ್ನು ಜನರ ಕಣ್ಣಿಗೆ ಬೀಳುವಂತೆ ಬಾಳಿದ ಆ ಕಾಲದ ಮಹನೀಯರು ಕಾರಣವಲ್ಲ ಎಂದಲ್ಲ ಪಂಪನ ಕೃತಿಯೂ ಕಾರಣ. ಬಹುಮಟ್ಟಿಗೆ ಕಾರಣ ಎಂಬರ್ಥ ಅಷ್ಟೇ'[೧೭] ಪಂಪನು ಪ್ರತಿಪಾದಿಸಿದ ಮೌಲ್ಯಗಳನ್ನು ಹಲವಾರು ಶಾಸನಗಳು ಅನುರಣಿಸುತ್ತವೆ. ಪಂಪನ ವಿಕ್ರಮಾರ್ಜುನ ವಿಜಯದಲ್ಲಿ ಹದಿನಾಲ್ಕನೆಯ ಆಶ್ವಾಸದಲ್ಲಿ

**ಚಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೊಳ್ ಭೀಮಸೇನಂ।**
**ಬಲದೊಳ್ ಮದ್ರೇಶನತ್ಯುನ್ನತಿಯೊಳಮರ ಸಿಂಧೂದ್ಭವಂ ಚಾಪ ವಿದ್ಯಾ**
**ಬಲದೊಳ್ ಕುಂಭೋದ್ಭವಂ ಸಾಹಸದ ಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ।**
**ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲಿವರ್ಗಳಿನೀ ಭಾರತಂ ಲೋಕಪೂಜ್ಯಂ'**[೧೮]

ಎಂಬ ಪದ್ಯವು ಮಹಾಭಾರತದ ಒಂದೊಂದು ಪಾತ್ರದಲ್ಲಿ ಒಂದೊಂದು ಗುಣವನ್ನು ಗುರುತಿಸಿದೆ. ಇದೇ ಧಾಟಿಯಲ್ಲಿ ರಚಿತವಾದ ಹಲವಾರು ಶಾಸನಗಳ ಪದ್ಯಗಳು ಒಬ್ಬನೇ ವ್ಯಕ್ತಿಯಲ್ಲಿ ಈ ರೀತಿಯಾದ ಗುಣಗಳ ಪ್ರಶಂಸೆಯನ್ನು ಮಾಡಿರುತ್ತವೆ. ಇಂತಹ ಪದ್ಯಗಳಲ್ಲಿ ಪಂಪನಲ್ಲಿ ಪ್ರತಿಪಾದಿತವಾಗಿರುವ ಮೌಲ್ಯಗಳು ಅವನ ಕಾವ್ಯದಲ್ಲಿನ ಪದ್ಯಗಳ ಪಡಿಯಚ್ಚುಗಳಾಗಿ ಕಂಡುಬಂದಿರುತ್ತವೆ. ಹೊಯ್ಸಳ ದೊರೆ ಇಮ್ಮಡಿ ಬಲ್ಲಾಳನ ಸಾಮಂತನಾದ ಮಂಡಲಸ್ವಾಮಿಯನ್ನು ಹೊಗಳಿರುವ ಕ್ರಿ.ಶ.೧೧೯೯ರ ನಾಗಮಂಗಲದ ಶಾಸನವನ್ನು[೧೯] ಇಲ್ಲಿ ಉದಾಹರಿಸಬಹುದು.

**ರವಿಸುತನೊಂದು ನನ್ನಿ ಪವಮಾನತನೂಜನದೊಂದು ಬಲ್ಪು ವಾ**
**ಸವಸುತನೊಂದು ವಿಕ್ರಮದನುಕ್ರಮಮಶ್ವಿನೀದೇವ ಪುತ್ರರೊಂ**
**ದವಿಚಳಮಪ್ಪ ಶಸ್ತ್ರದ ನೆಗಟ್ತೆಯ ಶಾಸ್ತ್ರದ ಪೆರ್ಮೆತನ್ನೊಳೊ**
**ಪ್ಪುವುದೆನೆ ಪಾಂಡವಪ್ರತಿಮನಲ್ಲವೆ ಮಂಡಲಸ್ವಾಮಿಲೋಕದೊಳ್**

ಕರ್ಣನ ನನ್ನಿ, ಭೀಮನ ಪರಾಕ್ರಮ, ಅರ್ಜುನನ ವಿಕ್ರಮದ ಅನುಕ್ರಮ, ನಕುಲಸಹದೇವರ ಶಸ್ತ್ರದ ನೆಗಟ್ತೆ ಶಾಸ್ತ್ರದ ಹಿರಿಮೆಯು ತನ್ನೊಳು ಇದ್ದ ಕಾರಣದಿಂದ ಮಂಡಲಸ್ವಾಮಿಯು 'ಪಾಂಡವ ಪ್ರತಿಮ' ನೆನಿಸಿಕೊಂಡಿದ್ದಾನೆ ಎಂಬುದಾಗಿ ಹೊಗಳುತ್ತದೆ.

ಪಂಪಕವಿಯನ್ನು ಆಕರ್ಷಿಸಿದ್ದ ಪಾತ್ರವೆಂದರೆ ಕರ್ಣ. ಮಹಾಭಾರತದ ಕರ್ಣನು 'ನನ್ನಿ' ಮತ್ತು 'ಚಾಗ' ಗುಣಗಳಿಗೆ ಆದರ್ಶವಾಗಿದ್ದನು. ಆ ಕಾರಣದಿಂದ ಪಂಪಕವಿಯು "ನೆನೆಯದಿರಣ್ಣ ಭಾರತದೊಳಿಂ ಪೆಱರಾರುಮನೊಂದೆ ಚಿತ್ತದಿಂ ನೆನೆವೊಡೆಕರ್ಣನಂ ನೆನೆಯ "ಕರ್ಣರಸಾಯನಮಲ್ತೆ ಭಾರತಂ"ಎಂಬುದಾಗಿ ಅಭಿಮಾನದಿಂದ ನುಡಿಯುತ್ತಾನೆ. ಪಂಪನು ಚಿತ್ರಿಸಿರುವ ಕರ್ಣನ ಪಾತ್ರ ಬಹುಶಃ ಮುಂದೆ ಶಾಸನಕವಿಗಳ ಮನಸ್ಸನ್ನು ಆಕರ್ಷಿಸಿರಬಹುದು. ಹೀಗಾಗಿ ಕನ್ನಡದ ಹಲವಾರು

ಶಾಸನಗಳಲ್ಲಿ ಕರ್ಣನ ಪ್ರಸಕ್ತಿಯನ್ನು ಕಾಣಬಹುದು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಪ್ರಮುಖನಾಗಿದ್ದ ಕರ್ಣ್ಣಾಮಾತ್ಯ ಅಥವಾ ಕನ್ನೆಯನೆಂಬುವನನ್ನು ಬಣ್ಣಿಸುವಾಗ

"ಕನ್ನನುದಾತ್ತ ವೀರಗುಣಕನ್ನನುದಾರತೆ ಕನ್ನನೊಂದು ಸೌಜನ್ಯತೆ
ಕನ್ನನೊಂದು ಮಹಿಮೋನ್ನತೆ ಕನ್ನನ ಭದ್ರಲಕ್ಷಣಂ ಕನ್ನನ ಕೀರ್ತ್ತಿ
ಕನ್ನನಭಿಮಾನತೆ ಕನ್ನನ ಸಚ್ಚರಿತ್ರೆ"[೨೦]

ಎಂಬ ಶಾಸನದ ಮಾತು "ಕರ್ಣನೇಱು ಕರ್ಣನ ಕಡುನನ್ನಿ ಕರ್ಣನಳವಂಕದ ಕರ್ಣನ ಚಾಗಮೆಂದು"[೨೧] ಪಂಪಕವಿಯು ಬಣ್ಣಿಸಿರುವ ಕರ್ಣನ ಗುಣಾವಳಿಯನ್ನೇ ಹೋಲುತ್ತದೆ. ಹಾಗೆಯೇ ಸಾಮಂತ ಗೂಳಿಬಾಚಿಗನಲ್ಲಿ "ಕರ್ಣ್ಣನೀವ ಗುಣ"[೨೨], ಸಾಮಂತ ಗೋವಿಯನಲ್ಲಿ "ಸತದಳಮಿತ್ರಪುತ್ರನದಾನಗುಣ"[೨೩], ತೈಲದಂಡಾಧಿಪನು "ಅರ್ತ್ಥಿಜನಕ್ಕೆ ಹರಿತನಯಂ"[೨೪], "ಬೇಳ್ಪರ ಬೇಳ್ಪುದನಿತ್ತು ಸದ್ಗುಣಾಸ್ಪದ ನೆನಿಸಲ್ಕೆ ರವಿತನೂಭವಂ"[೨೫] ಎನಿಸಿದ ಹೊಯ್ಸಳಗವುಂಡ ಎಂಬುದಾಗಿ ಬಣ್ಣಿಸುವಾಗ ಶಾಸನಕವಿಗಳು ಕರ್ಣನ ದಾನಗುಣವನ್ನೇ ಮುಖ್ಯವಾಗಿ ನಿರೂಪಿಸಿದ್ದಾರೆ. ಪಂಪನಿಂದ ಪ್ರತಿಪಾದಿತವಾಗಿದ್ದ 'ದಾನ ಅಥವಾ ಚಾಗ' ಎಂಬ ಮೌಲ್ಯದ ಪ್ರಸಕ್ತಿಯೇ ಇಲ್ಲೆಲ್ಲಾ ವ್ಯಕ್ತವಾಗಿದೆ.

ಪಂಪನು ಚಿತ್ರಿಸಿದ ಪಾತ್ರಗಳಲ್ಲಿ ಭೀಷ್ಮರದು ಅಪೂರ್ವವಾದ ಪಾತ್ರವಾಗಿದೆ. ಶೌಚಗುಣವನ್ನು ಬಣ್ಣಿಸುವಾಗ 'ನದೀಜ' ಅಥವಾ 'ಸುರಸಿಂಧೂದ್ಭವ'ನನ್ನೇ ಕವಿಗಳು ಉಪಮೆಗಾಗಿ ಬಳಸುತ್ತಿದ್ದರು. ಭೀಷ್ಮರು ಶಿಖಂಡಿಯಿಂದ ಸಾವನ್ನಪ್ಪುವ ವರ್ಣನೆಯು ಪಂಪನ ಭೀಷ್ಮನ ಪಾತ್ರಕ್ಕೆ ಅನುಗುಣವಾಗಿ ತುಂಬಾ ಪ್ರಭಾವಪೂರ್ಣವಾಗಿ ಮೂಡಿಬಂದಿದೆ'.[೨೬] ಈ ಪ್ರಸಂಗದ ವರ್ಣನೆಯಿಂದ ಪ್ರೇರಿತವಾದ ಶಾಸನಕವಿಯೊಬ್ಬ ತುಱುಗೋಳಿನಲ್ಲಿ ಹೋರಾಡಿ ಸತ್ತವೀರನ ವರ್ಣನೆಯನ್ನು ಮಾಡುತ್ತಾ ಹೀಗೆ ವರ್ಣಿಸಿದ್ದಾನೆ.

"ಅಂತು ವಿರೋಧಿ ಸೇನೆಯನುಗುರ್ಬಿನೊಳಂತಿಱಿಯಿಲ್ಲಿ ವೀರ ವಿ
ಕ್ರಾಂತಸರಾಳಿಗಳು ತನುವನುರ್ಚ್ಚೆಲೊಡಂ ಶಿವೆಯೆಂದು ವೀರಸಿ
ದ್ಧಾಂತದ ಪೊಸ್ತಕಂ ತವಣೆ ಕೋಲೊಳಳುರ್ವಿಸಿದಂತೆ ವೀರವಿ
ಕ್ರಾಂತವನಾಸೆವಟ್ಟು ಕಲಿ ಬೆಳೆಯನೆಯ್ದಿದ ದೇವಲೋಕಮಂ"[೨೭]

ಷಿಕಾರಿಪುರ ತಾಲ್ಲೂಕಿನ ಕ್ರಿ.ಶ.೧೧೬೨ರ ಶಾಸನವು'[೨೮] ಗಿರಿದುರ್ಗಮಲ್ಲನ ಪರಾಕ್ರಮವನ್ನು ಬಣ್ಣಿಸುತ್ತಾ

ಸುರಿದಕರುಳು ಕರುಳ್ತೊಡರೆ ಬಿದ್ದ ಭಟರ್ಬ್ಬಟಶಸ್ತ್ರಘಾತದಿಂ
ದುರುಳ್ದಹಯಂಹಯಂಗಳೆಡೆಯೊಳುಕುಣಿವಟ್ಟೆಗಳಟ್ಟೆಯಂ ಭಯಂ

**ಕರತರಮಾಗೆ ನೋಟ್ಪಿಮರುಳಾ ಮರುಳಂಗೆಲೆ ಸೋವತನ್ನಿಶಾ**

**ಚರಿಯರೆನಲ್ಕೆ ನೋಡಲರಿದಾಯ್ತು ರಣಂಗಿರಿದುರ್ಗಮಲ್ಲ ನಾ ॥**

ಎಂಬುದಾಗಿ ಹೊಗಳುವ ಶಾಸನದ ಈ ಪದ್ಯವು ಪಂಪನ ವಿಕ್ರಮಾರ್ಜುನ ವಿಜಯದ ಒಂಬತ್ತನೆಯ ಆಶ್ವಾಸದಲ್ಲಿ ಅರಿಕೇಸರಿಯಾದ ಅರ್ಜುನನನ್ನು ಹೊಗಳಿ ಬರೆದ ಪದ್ಯದ ಅಕ್ಷರಶಃ ಅನುಕರಣೆಯಾಗಿದೆ.[೨೯]

ಪಂಪ ಕವಿಯಷ್ಟೇ ಶಾಸನ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವ ಕವಿಯೆಂದರೆ ರನ್ನ. 'ಸಿಂಹಾವಲೋಕನ' ಎಂಬ ವಿಶಿಷ್ಟ ಮಾದರಿಯಿಂದ ಕಾವ್ಯವನ್ನು ರಚಿಸಿದ ರನ್ನನದು ವಿಶಿಷ್ಟವಾದ, ವಿಭಿನ್ನವಾದ ಶೈಲಿಯಾಗಿದೆ. 'ಅತ್ತಿಮಬ್ಬೆ'ಯಂತಹ 'ಸ್ತ್ರೀರತ್ನ'ವನ್ನು ಪರಿಚಯಿಸಿದ ಯಶಸ್ಸು ಈತನಿಗೆ ಸಲ್ಲುತ್ತದೆ. ರನ್ನನು ಶಾಸನಕವಿಯೂ ಹೌದು. ಶಿಷ್ಟ ಸಾಹಿತ್ಯ ಕವಿಯೂ ಹೌದು. ತನ್ನ ಶಾಸನದ ಪದ್ಯಗಳನ್ನು ಆನಂತರದಲ್ಲಿ ಕಾವ್ಯದಲ್ಲು ಅಳವಡಿಸಿಕೊಂಡ ಕವಿಯಾಗಿದ್ದಾನೆ ರನ್ನ. ಈ ರನ್ನ ಕವಿಯ ಪ್ರಭಾವವು ಮುಂದಿನ ಶಾಸನಕವಿಗಳ ಮೇಲೆ ಉಂಟಾಗಿದೆ. 'ಸಮಾಲೋಕನ' ಕೃತಿಯಲ್ಲಿ ತೀ.ನಂ.ಶ್ರೀಯವರು ರನ್ನನ ಪ್ರಭಾವ ಮುದ್ರೆಯು ಕವಿಸಾಹಿತ್ಯ ಹಾಗೂ ಶಾಸನಸಾಹಿತ್ಯದ ಮೇಲೆ ಉಂಟಾಗಿರುವುದನ್ನು ಲಕ್ಕುಂಡಿ ಶಾಸನ ಮತ್ತು ಅಜಿತಪುರಾಣಗಳ ಹೋಲಿಕೆಯಿಂದ ತೋರಿಸಿ ಕೊಟ್ಟಿರುತ್ತಾರೆ. ಹಾಗೆಯೇ ರನ್ನ ಕವಿಯ ಪ್ರಭಾವವು ಶ್ರವಣಬೆಳಗೊಳದ ಶಾಸನಗಳ ಮೇಲೆ ಉಂಟಾಗಿರುವುದನ್ನು ಡಾ.ಎಂ.ಎಂ.ಕಲಬುರ್ಗಿಯವರು[೩೦] ಗುರುತಿಸಿರುತ್ತಾರೆ.

ಶ್ರವಣಬೆಳಗೊಳವು ಜೈನರ ಒಂದು ಪವಿತ್ರ ಯಾತ್ರಾಸ್ಥಳ. ಇಲ್ಲಿಗೆ ರನ್ನನು ಭೇಟಿ ನೀಡಿದ್ದ ಗುರುತಾಗಿ ರನ್ನನೇ ಸ್ವಹಸ್ತದಿಂದ ಬರೆದು ಕೊರೆಯಿಸಿರಬಹುದಾದ ಶ್ರೀಕವಿರತ್ನ[೩೧] ಎಂಬ ಸಹಿಯು ಸಾಕ್ಷಿಯಾಗಿದೆ. ಚಿಕ್ಕಬೆಟ್ಟದ ಮೇಲಿನ ಬಾಹುಬಲಿ ಬಸದಿಯ ಸಮೀಪ ಸಾವಿಯಬ್ಬೆಯೆಂಬ ಮಹಾಸಾಧ್ವಿಯ ಯುದ್ಧ ಮರಣವನ್ನು ಉದ್ಘೋಷಿಸುತ್ತಾ ನಿಂತಿರುವ ಒಂದು ವೀರಗಲ್ಲು ರನ್ನನ ಪ್ರಭಾವದ ದ್ಯೋತಕವಾಗಿದೆ.

ಶ್ರವಣಬೆಳಗೊಳದ ಬಾಹುಬಲಿ ಬಸದಿಯ ವೀರಗಲ್ಲು ಸಾವಿಯಬ್ಬೆ ಎಂಬುವಳು ಆನೆಯೊಂದಿಗೆ ಹೋರಾಡುತ್ತಿರುವ ಶಿಲ್ಪವನ್ನು ಹೊಂದಿದೆ.[೩೨] "ಶಾಸನಶಿಲ್ಪದಲ್ಲಿ ಕುದುರೆಯ ಮೇಲೆ ಕುಳಿತು ಆನೆಯೊಂದಿಗೆ ಹೋರಾಡುತ್ತಿರುವ ವಿವರವಿದೆ. ಕುದುರೆಯ ಮೇಲೆ ಕುಳಿತಿರುವ ಮಹಿಳೆಯೇ ಸಾವಿಯಬ್ಬೆ. ಕುದುರೆ ಮತ್ತು ಆನೆ ಎರಡೂ ಮುಂಗಾಲುಗಳನ್ನೆತ್ತಿ ಹೋರಾಡುತ್ತಿವೆ. ಆನೆಯೊಂದಿಗೆ ಹೋರಾಡುತ್ತಿರುವ ಮಹಿಳೆಯ ಏಕೈಕ ವೀರಗಲ್ಲು"[೩೩] ಇದಾಗಿದೆ. ಈ ಶಾಸನದ ಮೂರು ಪದ್ಯಗಳ ಮೇಲೆ ರನ್ನನ ಪ್ರಭಾವವಿರುವುದನ್ನು ಡಾ. ಎಂ.ಎಂ.ಕಲಬುರ್ಗಿಯವರು ಗುರುತಿಸಿದ್ದಾರೆ. –

**ಶ್ರೀಯುವತಿಗೆ ನಿಜವಿಜಯ ।**

**ಶ್ರೀಯುವತಿಯೆ ಸವತಿಯಾಗೆ ರಿಪುನೃಪರಂ ಶೌ**

**ರ್ಯಾವಷ್ಟಂಭದೆ ಗೆಲ್ದ ಜ ।**

**ಯಾವಸಥನ ಸಾಧ್ಯನಲ್ತೆ ಸಾಹಸಭೀಮಂ ॥**

ಎಂಬ ಇಜೆವ ಬೆಡಂಗನ ಪರಾಕ್ರಮವನ್ನು ಬಣ್ಣಿಸಿರುವ ಗದಾಯುದ್ಧದ ಪದ್ಯದ (ಗ.ಯು.೪-೧) ರೀತಿಯಲ್ಲೇ ಶಾಸನದಲ್ಲಿ ಸಾವಿಯಬ್ಬೆಯ ಪರಾಕ್ರಮವನ್ನು ನಿರೂಪಿಸುವಾಗ ಬಂದಿರುವ

**ಶ್ರೀಯುವತಿಗೆ ನಿಜವಿಜಯ**

**ಶ್ರೀಯುವತಿಯೆ ಸವತಿಯೆನಿಸಿ ರಣಮೂರ್ಖನೃಪಾ**

**ಮ್ನಾಯದೊಳಾಯದ ಮೆಯ್ಗಲಿ**

**ಬಾಯಿಕನೆಂಬಂ ನೆಗಟ್ತಿಯಂ ಪ್ರಕಟಿಸಿದನ್**

ಎಂಬ ಶಾಸನ ಪದ್ಯವನ್ನು ಗಮನಿಸಬಹುದು. ಈ ಪದ್ಯದ ಮೊದಲ ಎರಡು ಸಾಲುಗಳು ಗದಾಯುದ್ಧದ ಪದ್ಯದ ಪ್ರಭಾವವನ್ನು ಎತ್ತಿಹೇಳುತ್ತದೆ.

ಅದೇ ಶಾಸನದ ಸಾವಿಯಬ್ಬೆಯ ಉದಾತ್ತ ವ್ಯಕ್ತಿತ್ವವನ್ನು ಕೊಂಡಾಡುವ ಪದ್ಯದ ಮೇಲೆ ಅಜಿತಪುರಾಣದಲ್ಲಿ ಬಂದಿರುವ ಅತ್ತಿಮಬ್ಬೆಯ ವ್ಯಕ್ತಿತ್ವವನ್ನು ನಿರೂಪಿಸಿರುವ ಪದ್ಯದ ಪ್ರಭಾವದ ಛಾಯೆಯಿದೆ. ಅತ್ತಿಮಬ್ಬೆಯನ್ನು ಬಣ್ಣಿಸುವಾಗ ರನ್ನನು

**ಶ್ರಾವಕ ಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸನ್ದರೇವತಿ ।**

**ಶ್ರಾವಕಿತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್**

**ದೇವಕಿ ತಾನೆದಾನಗುಣದಿಂದೆ ಸುಲೋಚನೆ ತಾನೆಯೆಂದು ಭ**

**ವ್ಯಾವಳಿಮೆಚ್ಚಿ ಬಣ್ಣಿಪುದು ಭವ್ಯಮನೋರಥ ಜನ್ಮಭೂಮಿಯಂ (ಅ.ಪು.೧-೫೩)**

ಎಂದು ಹೇಳಿರುವ ಪದ್ಯದಂತೆಯೇ ಶಾಸನದಲ್ಲಿ –

**ಶ್ರಾವಕ ಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸನ್ದರೇವತಿ**

**ಶ್ರಾವಕಿತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್**

**ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ ಜಿನೇಂದ್ರ ಭಕ್ತಿ ಸ**

**ದ್ಭಾವದೆ ಸಾವಿಯಬ್ಬೆ ಜಿನಶಾಸನದೇವತೆ ತಾನೆ ಕಾಣಿರೇ ॥**

ಎಂದು ಸಾವಿಯಬ್ಬೆಯನ್ನು ಬಣ್ಣಿಸಿರುವ ಪದ್ಯವನ್ನು ಗಮನಿಸಿದರೆ ಈ ಎರಡೂ ಪದ್ಯಗಳಲ್ಲಿ ಪೂರ್ವಾರ್ಧವು ಒಂದೇ ಆಗಿರುವುದು ಅಜಿತಪುರಾಣದ ಪ್ರಭಾವಕ್ಕೆ ಸಾಕ್ಷಿಯಾಗಿದೆ.

ಇದೇ ಶಾಸನದಲ್ಲಿ ೨೪ನೆಯ ಪಂಕ್ತಿಯಿಂದ ೨೮ನೆಯ ಪಂಕ್ತಿಯವರೆಗೆ ತ್ರುಟಿತವಾಗಿದ್ದು, ಅಲ್ಲಿರಬಹುದಾದ ಶಾಸನಪದ್ಯದ ಭಾಗವನ್ನು ಡಾ.ಎಂ.ಎಂ.ಕಲಬುರ್ಗಿಯವರು ಊಹಿಸುವ ಪ್ರಯತ್ನವನ್ನು ನಡೆಸಿದ್ದಾರೆ. ಅವರ ಪ್ರಕಾರ ತ್ರುಟಿತವಾಗಿರುವ ಶಾಸನದ ಭಾಗವನ್ನು ಸರಿಪಡಿಸಲು ಅಜಿತಪುರಾಣವನ್ನೇ ಆಶ್ರಯಿಸಬೇಕು. ಅಜಿತಪುರಾಣದಲ್ಲಿನ

**ಕಲಿಯನೆ ನೆಗಟ್ದಿಳ್ ಕಸವರ**

**ಗಲಿಯನೆ ಗುಣದಂಕಕಾರ್ತಿ ಮೊನೆಯೊಳ್ ಮನೆಯೊಳ್ ।**

**ಮೊಲೆವೆತ್ತ ತೈಲಜನನಿಯ**

**ಕೆಲದೊಳ್ ರಂಜಿಪರೆ ಮೀಸೆವೊತ್ತಣ್ಣಂಗಳ್ ॥(ಅಜಿತಪುರಾಣ ೧-೬೫)**

ಎಂಬ ಪದ್ಯವನ್ನು ಆಧರಿಸಿ ಶಾಸನದ ೨೪ರಿಂದ ೨೮ನೆಯ ವರೆಗಿನ ಪಂಕ್ತಿಯನ್ನು ಸರಿಪಡಿಸಲು ಸಾಧ್ಯ.

| **ಶಾಸನಪಾಠ** | **ಸರಿಪಡಿಸಿದ ಪಾಠ** |
|---|---|
| ೨೪ . . ವೆತ್ತ | ಮೊಲೆವೆತ್ತ |
| ೨೫ . . ಯಬ್ಬೆ | ಸಾವಿಯಬ್ಬೆ |
| ೨೬ ಸಾಯಲೆನ್ದು | ಸಾಯಲೆನ್ದು |
| ೨೭ ಪೆಂಡತಿಯೆ | ಪೆಂಡತಿಯೆ |
| ೨೮ . . ವೊತ್ತ | ಮೀಸೆವೊತ್ತ |

ಎಂದು ಸರಿಪಡಿಸಿದಾಗ ಆಗ ಉಂಟಾಗುವ ಕಂದಪದ್ಯವು ಮುಂದಿನ ಸಾಲುಗಳನ್ನು ಒಳಗೊಂಡು ಅಂತಿಮವಾಗಿ ಹೀಗೆ ಸಿದ್ಧವಾಗುತ್ತದೆ.

**[ಮೊಲೆ]ವೆತ್ತ [ಸಾವಿ]ಯಬ್ಬೆ ಸಾ**

**ಯಲೆನ್ದು ಪೆಂಡತಿಯೆ [ಮೀಸೆ]ವೊತ್ತಣ್ಣಳೊಗಳೆ ।**

**ಪಲರುಂ ತೊಲಗಿದ ರಾಯದ**

**ಚಲಯಸಬಳಗೆಗನ್ದಿ ನಿಪ್ಪಣ್ಡತಿಯನ್ ॥**

ಎಂದಾಗುತ್ತದೆ. ಈ ಕಂದಪದ್ಯವು ಪಾಠದೋಷ, ಛಂದೋದೋಷಗಳಿಂದ ಕೂಡಿದ್ದು ಇದನ್ನು ಶುದ್ಧಗೊಳಿಸಲು ಸಾಧ್ಯವಾಗಿಲ್ಲ. "ಈವರೆಗಿನ ವಿವೇಚನೆಯಿಂದ ಲಕ್ಕುಂಡಿ ಶಾಸನವನ್ನು ಬಿಟ್ಟರೆ ರನ್ನನಿಂದ ಅಧಿಕಪ್ರಭಾವಿತವಾದುದು ಈ ಶಾಸನವೆಂದು ತಿಳಿದುಬರುತ್ತದೆ. ಆದರೆ ಅಲ್ಲಿ ಅಜಿತಪುರಾಣದ ಪದ್ಯಗಳನ್ನು ನೇರವಾಗಿ ಎತ್ತಿಕೊಂಡಿದ್ದರೆ ಇಲ್ಲಿ ಗದಾಯುದ್ಧ, ಅಜಿತಪುರಾಣಗಳ ಪದ್ಯಗಳನ್ನು ಸಂದರ್ಭಕ್ಕೆ ಉಚಿತವಾಗುವಂತೆ ವ್ಯತ್ಯಾಸಗೊಳಿಸಿಕೊಳ್ಳಲಾಗಿದೆ" ಈ ಶಾಸನದಲ್ಲಿ

ಕಾಲಮಿತಿ ನಿರ್ದೇಶನವಿಲ್ಲ. ಅಕ್ಷರ ಸ್ವರೂಪವನ್ನು ಅನುಲಕ್ಷಿಸಿ ಸಂಪಾದಕರು ಇದರ ಕಾಲ ಕ್ರಿ.ಶ.೯೫೦ ಎಂದು ಊಹಿಸಿದ್ದಾರೆ. ಅಜಿತಪುರಾಣದ ರಚನೆಯ ಕಾಲ ಕ್ರಿ.ಶ.೯೩ ಎಂದು ರನ್ನನೇ ಸ್ಪಷ್ಟವಾಗಿ ಹೇಳಿರುವುದರಿಂದ ಆ ಪುರಾಣದ ಪ್ರಭಾವಕ್ಕೊಳಗಾದ ಈ ಶಾಸನದ ಮಿತಿ ಕ್ರಿ.ಶ.೯೫೦ ಅಲ್ಲ. ಕ್ರಿ.ಶ.೯೩ರ ತರುವಾಯವೆಂದು ಈಗ ಭಾವಿಸಬೇಕಾಗುತ್ತದೆ'[೩೪] ಎಂದು ಡಾ.ಎಂ.ಎಂ.ಕಲಬುರ್ಗಿಯವರು ಅಭಿಪ್ರಾಯ ಪಟ್ಟಿದ್ದಾರೆ.

ಶ್ರವಣಬೆಳಗೊಳದ ಚಾವುಂಡರಾಯ ಬಸದಿಯ ದಕ್ಷಿಣಭಾಗದ ಎರಡನೆಯ ಕಂಬದ ಶಾಸನದಲ್ಲಿ'[೩೫] ಪೋಚಿಕಬ್ಬೆಯ ಆದರ್ಶದ ಬದುಕಿನ ವಿಚಾರವಿದೆ. ಈಕೆಯು ತನ್ನ ತನು ಮತ್ತು ಧನವನ್ನು ಕ್ರಮವಾಗಿ 'ಜಿನಪತಿನುತಿ' ಮತ್ತು 'ಮುನಿಜನದತೃಪ್ತಿ'ಯಿಂದ 'ಸಫಳ'ವೆನಿಸುತ್ತಿದ್ದಳು ಎಂಬುದಾಗಿ ಬಣ್ಣಿಸಿರುವ –

**ತನುವಂ ಜಿನಪತಿನುತಿಯಿಂ**

**ಧನವಂ ಮುನಿಜನರ ತೃಪ್ತಿಯಿಂ ಸಫಳಮಿದಿಂ**

**ನೆನಗೆಂಬೀ ನಂಬುಗೆಯೊ**

**ಳ್ಮನಮಂ ಜಗದೊಳಗೆ ಪೋಚಿಕಬ್ಬೆಯೆ ನಿಱಿಪಳು ॥**

ಎಂಬ ಪದ್ಯದ ಮೇಲೆ ಹಾಗೂ ಕುಂಜಸೆಟ್ಟಿಯೆಂಬುವನನ್ನು ಬಣ್ಣಿಸಿರುವ

**ತನುವಂ ಜಂಗಮದೆಡೆಯೊಳು**

**ಮನಮಂ ಶ್ರೀಸೋಮನಾಥಪದಪಂಕಜದೊಳು**

**ವಿನಿಯೋಗಿಸಿ ಕುಂಜಂ ನೆ**

**ಟ್ಟನೆ ಪಡೆದಂ ಪುಣ್ಯಪರಮನಾಶಿವಪದಮಂ"**

ಎಂಬ ಪದ್ಯದ ಮೇಲೆ ರನ್ನನ ಅಜಿತಪುರಾಣದ –

**ಒಡಲನುಪವಾಸದಿಂ ತ**

**ನ್ನೊಡಮೆಯನನವರತದಾನದಿಂ ತವಿಸಿ ಜಸಂ**

**ಬಡೆದಳ್ ನೂರ್ಮಡಿತ್ರೈಲನ**

**ಪಡೆವಳ ತ್ರೈಲಪನ ಜನನಿಗೆಣೆ ಪೆಱಕೊಳರೇ[೩೬]**

ಎಂಬ ಪದ್ಯದ ಪ್ರಭಾವದ ಛಾಯೆಯನ್ನು ಕಾಣಬಹುದಾಗಿದೆ.

ರನ್ನನು ಚಿತ್ರಿಸಿದ ಅತ್ತಿಮಬ್ಬೆಯ ಪಾತ್ರವು ಆ ನಂತರದಲ್ಲಿ ಕನ್ನಡದ ಶಾಸನಕವಿಗಳ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿತ್ತು. ಸ್ತ್ರೀಯರ ದಾನಗುಣವನ್ನು ಮಹಿಮೋನ್ನತಿಯನ್ನು ವಿಶದ ಪಡಿಸುವಾಗ ಸಹಜವಾಗಿ ಆ ಶಾಸನದ ವ್ಯಕ್ತಿಯನ್ನು 'ಅತ್ತಿಮಬ್ಬೆ'ಯ ಜೊತೆಗೆ ಹೋಲಿಸುವುದು

ಒಂದು ಪರಿಪಾಠವೇ ಆಯಿತೆನ್ನಬಹುದು. ಹೀಗಾಗಿ ಹೊಯ್ಸಳರ ವೀರಬಲ್ಲಾಳ ಕಾಲದ ಶಾಸನದಲ್ಲಿ'[೩೭] ಮಹಾದೇವ ಮಂತ್ರಿಯ ಪತ್ನಿ ಲೋಕಲದೇವಿಯನ್ನು "ಚತುರತೆಯೊಳು ಸಮಯ ಜಿನಶಾಸನದೇವತೆ ಜೈನಧರ್ಮ್ಮದುಂನತಿಕೆಯೊಳತ್ತಿಮಬ್ಬೆ"ಯೆಂದು ಬಣ್ಣಿಸಿದ್ದರೆ, ಮಹಾಪ್ರಧಾನ ಮತ್ತು ಪಟ್ಟಸರ ಭಂಡಾರಿ ಪಾರಿಸಣ್ಣನ ಪತ್ನಿಯಾದ ಬಮ್ಮಲದೇವಿಯನ್ನು "ಪತಿಭಕ್ತಿಯೊಳಮಳಿನ ಜಿನಪತಿ ಭಕ್ತಿಯೊಳತ್ತಿಮಬ್ಬೆ"ಯೆಂದು ಮತ್ತೊಂದು ಶಾಸನವು'[೩೮] ನಿರೂಪಿಸುತ್ತದೆ.

ರನ್ನನ ಪ್ರಭಾವವಿರುವ ಮತ್ತೊಂದು ಶಾಸನ ಪದ್ಯ ಈ ರೀತಿಯಾಗಿದೆ.

**ಅಣುಗಾಳ್ ಕಾರ್ಯದ ಶೌರ್ಯದಾಳ್ ವಿಜಯದಾಳ್ ಚಾಳುಕ್ಯರಾಜ್ಯಕ್ಕೆ ಕಾ**
**ರಣಮಾದಾಳ್ ತುಱಿಲಾಳ್ತನಕ್ಕೆ ಕಟ್ಟಾಯದಾಳ್ ಮಿಕ್ಕ ಮ**
**ನ್ನಣೆಯೊಳ್ ಮಾಂತನದಾಳ್ ನೆಗಳ್ತೆವಡೆದಾಳ್ ವಿಕ್ರಾಂತದಾಳ್ ಮೇಳದಾಳ್**
**ರಣದಾಳಾಳ್ದನ ನಚ್ಚುವಾವೆಡೆಯೊಳಂ ವಿಶ್ವಾಸದಾಳ್ ಲಕ್ಷ್ಮಣಂ ॥**

ಎಂಬ ಪದ್ಯವು'[೩೯] ಚಾಳುಕ್ಯ ಚಕ್ರವರ್ತಿ ಭುವನೈಕಮಲ್ಲನ ಪಸಾಯಿತ ಲಕ್ಷ್ಮರಸನನ್ನು ಬಣ್ಣಿಸುತ್ತಿದ್ದು, ಈ ಪದ್ಯದ ಮೇಲೆ ರನ್ನಕವಿಯ "....... ಗುರಭಾರಕ್ಕಿಱಿವಾಳ್ ರಣಕ್ಕೆ ತುಱಿಳಾಳ್ ಕಟ್ಟಾಯದೊಳ್ ಮೇಳದಾಳ್ ಪರಿಹಾಸಕ್ಕೆನಿಸಿರ್ದಂ ಎಂತು ಮಱೆವಂ ದುರ್ಯೋಧನಂ ಕರ್ಣನಂ'[೪೦] ಎಂಬ ಪದ್ಯದ ಪ್ರಭಾವವಿದೆ. ರನ್ನನ ಪದ್ಯಗಳನ್ನು ಹೋಲುವ ಇನ್ನೂ ಕೆಲವು ಶಾಸನೋಕ್ತ ವಾಕ್ಯಗಳು ಮತ್ತು ಪದ್ಯಗಳನ್ನು ವಿದ್ವಾಂಸರು ಗುರುತಿಸಿದ್ದಾರೆ'[೪೧] ಅವುಗಳು ಈ ಕೆಳಗಿನಂತಿವೆ.

೧. ಜವನುಂಡು ಕಾಱಿದವೊಲಾಯ್ತೆತ್ತಂ ಕುರುಕ್ಷೇತ್ರದೊಳ್

(ಗ.ಯು.೩-೨)

ಜವನುಂಡೊಯ್ಯನೆ ಕಾಱಿದನ್ತೆ

(E.C.VIII ಸೊರಬ ೩-೧೧ ಮತ್ತು ೧೨)

೨. ಗುಣಕ್ಕೆ ಮಚ್ಚರಮುಂಟೆ (ಅ.ಜಿ.ಪು.೧೨ -೧೪೦)

ಗುಣಕ್ಕೆ ಮಚ್ಚರಮುಂಟೆ (E.C.VII P.20 ಮತ್ತು M.A.R. 1938 P.98)

೩. ಅರೆಮುಗಿದಿರ್ದ ಕಣ್ಗಳುಮಲರ್ದಮೊಗಂ (ಗ.ಯು.೪-೫೪)

ಅರೆಮುಗುಳ್ದಿರ್ದ ಕಣ್ಮಲರ್ಗಳೋದುವ ಪಂಚಪದಂ (E.C.II)

ಹೀಗೆ ರನ್ನಕವಿಯ ಪ್ರಭಾವವು ಕನ್ನಡ ಶಾಸನಗಳ ಮೇಲೆ ಸಾಕಷ್ಟು ಪ್ರಭಾವವನ್ನು ಬೀರಿದೆಯೆನ್ನಬಹುದು. ಪಂಪಕವಿಯು ಪ್ರತಿಪಾದಿಸಿದ ಮೌಲ್ಯಗಳನ್ನು ಶಾಸನಕವಿಗಳು ತಮ್ಮದಾಗಿಸಿಕೊಂಡು ಶಾಸನ ಪದ್ಯಗಳಲ್ಲಿ ವ್ಯಕ್ತಿಚಿತ್ರಣವನ್ನು ಮಾಡುತ್ತಿದ್ದರೆ, ರನ್ನನ ಅಜಿತಪುರಾಣ ಮತ್ತು ಗದಾಯುದ್ಧ ಕೃತಿಯ ಹಲವಾರು ಪದ್ಯಗಳನ್ನು ಕವಿಗಳು ತಾವು ರಚಿಸುತ್ತಿರುವ ಶಾಸನಗಳ ಸಂದರ್ಭದಲ್ಲಿ

ಸಮಯೋಚಿತವಾಗಿ ಬಳಸುತ್ತಿದ್ದರು. ಆದಿಕವಿಯೆಂಬುದಾಗಿ ಪಂಪನನ್ನು ಗುರುತಿಸಿದರೂ ಸಹ ಅವನಿಗಿಂತ ಹೆಚ್ಚಿನ ಪ್ರಭಾವವು ರನ್ನಕವಿಯಿಂದ ಉಂಟಾಗಿದೆ. ಈ ಕಾರಣದಿಂದಾಗಿ ಶಾಸನಕವಿಗಳು ರನ್ನನ ಕಾವ್ಯಗಳಿಂದಲೇ ಹೆಚ್ಚಿನ ಪ್ರಮಾಣದಲ್ಲಿ ಪದ್ಯಗಳನ್ನು ಆರಿಸಿಕೊಂಡಿದ್ದಾರೆ ಎನ್ನಬಹುದು.

ಪಂಪ, ರನ್ನ ಕವಿಯ ನಂತರದಲ್ಲಿ ೧ನೆಯ ನಾಗವರ್ಮನು ಹತ್ತನೆಯ ಶತಮಾನದಲ್ಲಿ ಬಾಳಿದ್ದ ಪ್ರಮುಖ ಕವಿ. 'ಕರ್ನಾಟಕ ಕಾದಂಬರಿ' ಈತನ ಕೃತಿ. ಈ ಕೃತಿಯು ಬಾಣ ಕವಿಯ ಸಂಸ್ಕೃತ ಕಾದಂಬರಿಯ ಕನ್ನಡದ ಪರಿವರ್ತನರೂಪವಾಗಿದೆ. ಈ ಕವಿಯ ಪ್ರಭಾವವು ಶಾಸನಗಳ ಮೇಲೆ ಆಗಿರುವುದನ್ನು ವಿದ್ವಾಂಸರಾದ ಡಾ.ಕೆ.ಆರ್.ಗಣೇಶ್‌ರವರು ಈ ರೀತಿಯಾಗಿ ಗುರುತಿಸಿದ್ದಾರೆ'[೪೨]

"ಮೂಡುಬಿದಿರೆಯ ತ್ರಿಭುವನ ಚೂಡಾಮಣಿ ಮಹಾಚೈತ್ಯಾಲಯದ ವರ್ಣನೆಯಲ್ಲಿ ಬಂದಿರುವ ಅತ್ಯುಕ್ತಿಗಳು ಮೊದಲನೆಯ ನಾಗವರ್ಮನ ಕರ್ನಾಟಕ ಕಾದಂಬರಿಯ ಪದ್ಯಗಳನ್ನು ನೆನಪಿಗೆ ತರುತ್ತವೆ.

**ಸುರಪತಿಗೆ ಅಂಜಿ ರೋಹಣನಗಂ ಮಱೆವೊಕ್ಕುದೋ ಮೇಣ್**
**ದಶಾಸ್ಯಗೆ ಅಳ್ಕಿ ಇರದೆ ಹರಾದ್ರಿ ಬಂದು ನೆಲೆಸಿತ್ತೋ ಕುಬೇರನು**
**ದೈತ್ಯಭೀತಿಯಿಂದ ಇರಿಸಿದ ತನ್ನ ಪುಷ್ಪಕಂ ಅದಲ್ಲದೊಡ ಇಂತು**
**ವಿಚಿತ್ರಕೂಟದಿಂ ಕರಂ ಚೆಲುವಾದ ಚಂದ್ರಜಿನಮಂದಿರಮಂ ಪೊಗಳಲ್ಕೆ ಬರ್ಕುಮೇ"**

ಕರ್ನಾಟಕದಲ್ಲಿ ನಡೆದ ಪ್ರಮುಖ ಸಾಹಿತ್ಯ ಚಳುವಳಿಯೆಂದರೆ ವಚನ ಚಳುವಳಿ. ಈ ಚಳುವಳಿಯು ಬಸವಣ್ಣನವರ ಮುಖಂಡತ್ವದಲ್ಲಿ ನಡೆಯಿತು. ವೀರಶೈವ ಕ್ರಾಂತಿಯ ಫಲವಾಗಿ ಮೂಡಿಬಂದ ವಚನಗಳ ಪ್ರಭಾವವನ್ನು ಶಾಸನಗಳಲ್ಲಿ ಸಹ ಗುರುತಿಸಲು ಸಾಧ್ಯವಿದೆ. ಕ್ರಿ.ಶ.೧೧೯೧ರ ಕಡೂರು ತಾಲ್ಲೂಕಿನ ಎರಡನೆಯ ಬಲ್ಲಾಳನ ಆಳ್ವಿಕೆಯಲ್ಲಿ ಮಸಣಯ್ಯನೆಂಬುವನು ದತ್ತಿ ಬಿಟ್ಟ ವಿಷಯವನ್ನು ತಿಳಿಸುವ ಶಾಸನದಲ್ಲಿ[೪೩] ಹೊಯ್ಸಳ ನರಸಿಂಹನನ್ನು ಹೊಗಳುವ ಪದ್ಯವು –

**ಅರಿಭೂಪಾಳಶಿರಂಗಳಿಂದೆ ಸೊರೆಯಂ ತದ್ಬಾಹು ಸಂದೋಹದಿಂ**
**ಕರೆಯಂ ದಂಡಿಗೆ ಮಾಡಿ ಬೆನ್ನೆಸೆವ ಬೀಏಂ ತಂತಿಯಂ ಕಟ್ಟಿ ತ**
**ದ್ಧುರದೊಳ್ ಪಾಡುತಮಿರ್ಪಳೊಲ್ದು ನಲವಿಂ ಶ್ರೀಕಾಂತೆಯಾನಂದದಿಂ**
**ಧರಣೀಶೋತ್ತಮ ನಾರಸಿಂಹ ನೃಪನಂ ಸದ್ಭಾವದಿಂ ಸಂತತಂ ॥**

ಎಂಬುದಾಗಿದೆ. ಪದ್ಯದ ಮೇಲೆ ಬಸವಣ್ಣನವರ

**ಎನ್ನ ಕಾಯವ ದಂಡಿಗೆಯ ಮಾಡಯ್ಯ**
**ಎನ್ನ ಶಿರವ ಸೋರೆಯ ಮಾಡಯ್ಯ**

**ಎನ್ನ ನರವ ತಂತಿಯ ಮಾಡಯ್ಯ**

**ಎನ್ನ ಬೆರಳ ಕಡ್ಡಿಯ ಮಾಡಯ್ಯ**

**ಬತ್ತೀಸರಾಗವ ಹಾಡಯ್ಯ ಉರದಲೊತ್ತಿ ಬಾಜಿಸು ಕೂಡಲಸಂಗಮದೇವಾ'**[೪೪]

ಎಂಬ ವಚನ ಪ್ರಭಾವವಿರುವುದನ್ನು ಗಮನಿಸಬಹುದಾಗಿದೆ.

ವಚನ ಸಾಹಿತ್ಯ ಮತ್ತು ಹರಿಹರ ಕವಿಯ ಪ್ರಭಾವವು ದಟ್ಟವಾಗಿರುವುದನ್ನು ಮಾವನೂರಿನ ಶಾಸನದಲ್ಲಿ[೪೫] ಕಾಣಬಹುದಾಗಿದೆ. "ಇದು ಶರಣರನ್ನು ಕುರಿತ ಒಂದು ವೈಶಿಷ್ಟಪೂರ್ಣ ಶಾಸನ. ನಂದೀಶ್ವರ ದೇವರ ಮಲ್ಲಯ್ಯನು ಪರ್ವಯ್ಯನಿಗೆ, ಪರ್ವತಯ್ಯನು ಅಪ್ಪರಸ ದೇವರಸರಿಗೆ ನೀಡಿದ ಈ ಗುರುಕರುಣೆ ವೀರಶೈವ ಗುರುಕರುಣೆಯನ್ನು ಪ್ರತಿಬಿಂಬಿಸುತ್ತದೆ. ಇಚ್ಛಾಶಕ್ತಿ ಜ್ಞಾನಶಕ್ತಿ, ಕ್ರಿಯಾಶಕ್ತಿ ಪದಗಳಂತೂ ವೀರಶೈವರ ಸ್ಪಷ್ಟ ಪರಿಭಾಷೆಗಳಾಗಿವೆ. ಇದಲ್ಲದೆ ಶರಣರ ವಚನಪ್ರಭಾವ ಈ ಶಾಸನದಲ್ಲಿ ನಿಚ್ಚಳವಾಗಿ ಮೂಡಿದೆ. "ಭಕ್ತನೆಂದಜಿದಡಿಜಿದಂತೆ ಮಱುಗುತಂ ನಿಂದಿಸಿದವರ ಮೇಲೆ ನೇಹವ ಗಳಿಸುತುಂ" ಎಂಬುದು ಬಸವಣ್ಣನವರ "ಎನ್ನ ಭಕ್ತನೆಂಬರು ಎನ್ನ ಸಮಯಾಚಾರಿಯೆಂಬರು ನಾನೇನು ಪಾಪವ ಮಾಡಿದೆನೋ?" "ಹೊಯ್ದವರೆನ್ನ ಹೊರೆದವರೆಂಬೆ ಬಯ್ದವರೆನ್ನ ಬಂಧುಗಳೆಂಬೆ" ಎಂಬ ವಚನಗಳಿಗೆ ಸಮಾನವಾಗಿವೆ. "ತಿಲದ ಮಧ್ಯದೊಳಿರ್ಪ ತೈಲದಂತೆ, ಕಾಷ್ಟ ಮಧ್ಯದೊಳಿಪ್ಪ ಅಗ್ನಿಯಂತೆ, ಜಲದ ಮಧ್ಯದೊಳಿರ್ಪ ಕಮಳದಂತೆ" ಎಂಬ ಈ ಮಾತುಗಳಲ್ಲಿ ದೇವರ ನಿಲುವನ್ನು ನಿರೂಪಿಸುವ ಶರಣರ ವಚನಗಳ ದಟ್ಟ ಪ್ರಭಾವವು ಎದ್ದು ಕಾಣುತ್ತದೆ. ಈ ಶಾಸನದ ಒಟ್ಟು ಶೈಲಿಯಲ್ಲಿ ಹರಿಹರನ ಉತ್ಸಾಹ ಸೌಕುಮಾರ್ಯಗಳ ಜೀವಂತಿಕೆ ಸೂಸಿ ಹರಿದಿದೆ. "ಚಂದ್ರಂಗೆ ಬೆಳುದಿಂಗಳು, ಬೆಳುದಿಂಗಳಿಗೆ ಪರಿಮಳಮಂ, ಪರಿಮಳಕ್ಕೆ ಸವಿಯಂ ಸವಿಗೆ ರೂಪಂ, ರೂಪಕ್ಕೆ ಸೌಂದರ್ಯಮಂ ಕೊಡುವಂತೆ ವುಪದೇಶಂ ಮಾಡೆ" ಎಂಬ ಸರಪಳಿ ಶೈಲಿ "ಪುಟವಿಟ್ಟ ಪುಣ್ಯಂ ಪುರುಷಾಕಾರವಾದಂತೆ, ಶಾಂತಿಸಾಕಾರವೆತ್ತಂತೆ, ಪರಮಾರ್ಥಂ ಶರೀರ ವಡೆದಂತೆ, ಭಕ್ತಿಗ್ನಾನಂ ಸಂಸಾರವಂ ಸವಿದಂತೆ" ಎಂಬ ಉಪಮಾಶೈಲಿ, "ಲೋಭವಡಿಯಿಡದ ಕರಪಲ್ಲವಂಗಳ, ಅನೃತವಂಕುರಿಸದ ರಸನಾಪ್ರದೇಶದ, ಶಂಸ್ರುತಿ ಸರಸವಾಡದ ಚರಿತಶುದ್ಧಿಯ ಕಾಮನ ಡಾಮರಕೊಳಸೋರದ ಮನದ ಬಿನದದ" ಎಂಬ ವೈವಿಧ್ಯ ಪೂರ್ಣ ಗದ್ಯಶೈಲಿಯ ತುಂಬ ಹರಿಹರ ತುಂಬಿ ನಿಂತಿದ್ದಾನೆ. ಓದುತ್ತಾ ಹೋದಂತೆ ಹೆಜ್ಜೆಹೆಜ್ಜೆಗೂ ಹರಿಹರನ ನೆನಪು ಮರುಕಳಿಸುತ್ತದೆ. ಅದಕ್ಕಾಗಿ ಈ ಶಾಸನಕರ್ತೃ ಹರಿಹರದೇವನೆಂಬ ಭಾವನೆ ಮೂಡಲು ಅವಕಾಶವಿದೆ. ಇದರ ಕಾಲವಾದ ಕ್ರಿ.ಶ.೧೨೮೮ ಈ ಊಹೆಗೆ ಪೋಷಕವಾಗಿದೆ.'[೪೬]

ಈವರೆಗೆ ಗುಣವರ್ಮ, ಪಂಪ, ರನ್ನ, ೧ನೆಯ ನಾಗವರ್ಮ, ವಚನಕಾರರು ಮತ್ತು ಹರಿಹರಕವಿಯ ಸಾಹಿತ್ಯದ ಪ್ರಭಾವವು ಶಾಸನಗಳ ಮೇಲೆ ಆಗಿರುವುದನ್ನು ಗಮನಿಸಲಾಯಿತು.

ಹಾಗೆಯೇ ಶಾಸನಕವಿಯೂ ಆಗಿದ್ದ 'ಸೂಕ್ತಿಸುಧಾರ್ಣವಂ' ಎಂಬ ಸಂಕಲನ ಗ್ರಂಥವನ್ನು ರಚಿಸಿದ ಮಲ್ಲಿಕಾರ್ಜುನನ 'ಸೂಕ್ತಿಸುಧಾರ್ಣವ' ಕೃತಿಯ ಕೆಲವು ಪದ್ಯಗಳು ಶಾಸನಗಳಲ್ಲೂ ಕಂಡುಬಂದಿರುವುದನ್ನು ಗಮನಿಸಬಹುದು.

ಶ್ರೀಮಲ್ಲಿಕಾರ್ಜುನ ಕವೀಶ್ವರ ಸಂಯೋಜಿತ "ಸೂಕ್ತಿಸುಧಾರ್ಣವಂ" ಎಂಬ ಕೃತಿಯ ಪೀಠಿಕಾ ಪ್ರಕರಣದಲ್ಲಿ ಬಂದಿರುವ 'ಶ್ರೀವಧುಮುತ್ತಿನೆಕ್ಕಸರದಂತುರದೋಳ್' ಹರಿನಾಭೀ ಕಮಲಕ್ಕೆ ಪುಟ್ಟಿ ರಜನಿಂ', 'ಸಳನೆಂಬಂ ಶಶಕಾಭಿದಾನಪುರದೊಳ್', 'ಆದಿವರಾಹಂ ಕೋಡೊಳ್ ಮೇದಿನಿಯಂ ತಳೆವ ತೆಱದಿಂ', 'ವಿನಯಾದಿತ್ಯನ ನಂದನಂ', 'ಪೆಸರ್ಗೊಂಡಾವಾವ ದೇಶಂಗಳ ನೆಣಿಸುವುದಾವಾವ ದುರ್ಗಂಗಳಂ', 'ದೇವಿವೆಸರೆಸೆವ ಲಕುಮಾದೇವಿಗಮಾ', 'ಇದಿರಾದರಿಭೂಪಾಲರ ಮದದಾನೆಯ ಕೊಂಬಿನೆಸೆವ ದಂತದ ಬಳೆಯಂ', ಆ ವಿಜಯನಾರಸಿಂಹ ಮಹೀವಲ್ಲಭನಗ್ರಮಹಿಷಿಗಾ', 'ಉರದೊಳ್ ಸಪ್ತಾಂಗ ಲಕ್ಷ್ಮೀವಧುವಿಜಯಭುಜಾದಂಡರೊಳ್', ಆ ಚಕ್ರೇಶನ ಸೂನು ವೀರನರಸಿಂಹಂ', 'ಮುನ್ನಂ ರೂಢಿಯ' ಕೃಷ್ಣಕಂಧರನುಂಮಂ', ಸಿರಿ ವಕ್ಷೋರಂಗದೊಳ್' ಎಂಬ ಪದ್ಯಗಳು'[೪೭] ಬಸರಾಳು, ಭೀಮನಹಳ್ಳಿ, ದೇವನೂರು, ಅಮೃತಾಪುರ, ಹಲಕೂರು, ಮಂಡ್ಯ ಶಾಸನಗಳಲ್ಲಿ ಬಂದಿರುವುದಾಗಿ 'ಸೂಕ್ತಿಸುಧಾರ್ಣವ'ದ ಸಂಪಾದಕರು ಗುರುತಿಸಿದ್ದಾರೆ. ಹಾಗೆಯೇ ಹಾಸನ ಜಿಲ್ಲೆಯ ಹಾಸನ ತಾಲ್ಲೂಕಿನ ಶಾಂತಿಗ್ರಾಮದ ನರಸಿಂಹ ದೇವಾಲಯದಲ್ಲಿರುವ ಶಾಸನದಲ್ಲಿ[೪೮] ಸೂಕ್ತಿಸುಧಾರ್ಣವದ ಎರಡು ಪದ್ಯಗಳನ್ನು ವಿದ್ವಾಂಸರಾದ ಡಾ.ಎಂ.ಎಂ.ಕಲಬುರ್ಗಿಯವರು ಗುರುತಿಸಿದ್ದಾರೆ.[೪೯] ಈ ಪದ್ಯಗಳನ್ನು ಮಲ್ಲಿಕಾರ್ಜುನನು ಕಾವ್ಯಗಳಿಂದ ಎತ್ತಿಕೊಂಡಿರದೆ ಶಾಸನಗಳಿಂದ ಎತ್ತಿಕೊಂಡಿರುವ ಸಾಧ್ಯತೆ ಹೆಚ್ಚಾಗಿದೆ. ಮಲ್ಲಿಕಾರ್ಜುನನು ಶಾಸನಕವಿ ಮತ್ತು ಕವಿಯೂ ಆಗಿರುವ ಕಾರಣದಿಂದ ಸಹಜವಾಗಿ ಈ ಮೇಲೆ ಹೆಸರಿಸಿದ ಪದ್ಯಗಳಲ್ಲಿ ಕೆಲವನ್ನು ಈ ಕವಿಯೇ ರಚಿಸಿರುವ ಸಂಭವವಿದೆ ಎನ್ನಬಹುದು.

ಈವರೆಗೆ ಶಿಷ್ಟಕವಿಗಳ ಮೇಲೆ ಶಾಸನ ಪದ್ಯದ ಪ್ರಭಾವವಿರುವುದನ್ನು ವಿವೇಚಿಸಲಾಗಿದೆ. ಹಾಗೆಯೇ ಪಂಪ, ರನ್ನ ಮೊದಲಾದ ಪ್ರಸಿದ್ಧ ಶಿಷ್ಟಕವಿಗಳ ಪ್ರಭಾವವು ಶಾಸನಗಳ ಮೇಲೆ ಆಗಿರುವುದನ್ನು ಗುರುತಿಸಲಾಗಿದೆ. ಕವಿಗಳ ಪ್ರಭಾವಕ್ಕೆ ಒಳಗಾಗಿರುವ ಶಾಸನಪದ್ಯಗಳ ಸಂಖ್ಯೆಯೂ ಸಹ ಪ್ರಮಾಣದಲ್ಲಿ ಕಡಿಮೆಯೆನ್ನಬಹುದು. ಇದರಿಂದ ಶಾಸನಕವಿಗಳು ಶಾಸನಗಳನ್ನು ರಚಿಸುವಾಗ ತಮ್ಮದೇ ಆದ ಸ್ವಂತಿಕೆಯನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು ಎನ್ನಬಹುದು. ಇದಕ್ಕೆ ಉತ್ತಮ ಉದಾಹರಣೆಯೆಂದರೆ ದೇಕಬ್ಬೆಯ ಶಾಸನವಾಗಿದೆ. ಈ ಶಾಸನ ಕವಿಯಾದ ಕವಿಮಲ್ಲನು (ಕ್ರಿ.ಶ.೧೦೫೭) ಸುಲಲಿತವಾಗಿ ಘಟನೆಯನ್ನು ನಿರೂಪಿಸಿದ್ದಾನೆ. ಇಲ್ಲಿನ ಯಾವ ಪದ್ಯದ ಮೇಲಾಗಲೀ, ಪದ್ಯದ ಪಾಠದ ಸಂದರ್ಭದಲ್ಲಿಯಾಗಲೀ ಯಾರ ಪ್ರಭಾವಕ್ಕೂ ಒಳಗಾಗದೆ

ಶಾಸನಪಾಠವನ್ನು ರಚಿಸಿರುವ ಕವಿಮಲ್ಲನು ನಿಜಕ್ಕೂ ಧನ್ಯನಾಗಿದ್ದಾನೆ ಎನ್ನಬಹುದು. ಕೆಲವು ಕವಿಗಳು ಈಗಾಗಲೇ ಬಂದಿರುವ ಶಾಸನಗಳ ಪದ್ಯಗಳಿಂದ ಒಂದಷ್ಟು ಪದ್ಯಭಾಗಗಳನ್ನು ಆರಿಸಿಕೊಂಡು ತಾವು ರಚನೆಯನ್ನು ಮಾಡಲಿರುವ ಶಾಸನಗಳಲ್ಲಿ ಬಳಸಿಕೊಳ್ಳುವ ಪರಿಪಾಠವನ್ನು ಬೆಳೆಸಿಕೊಂಡಿದ್ದರು ಎನ್ನಬಹುದು.

ಇಷ್ಟಾದರೂ ಸಹ ಶಾಸನ ಪದ್ಯಗಳಿಗೆಲ್ಲಾ ಮೂಲವನ್ನು ಹುಡುಕುವುದು ಅಷ್ಟು ಸರಿಯಲ್ಲವೆನ್ನಬಹುದು. ಏಕೆಂದರೆ ಕ್ರಿ.ಶ.೯ನೆಯ ಶತಮಾನದ ನಂತರ ಬಂದ ಶಾಸನಗಳು ಹೆಚ್ಚು ಹೆಚ್ಚು ಪ್ರೌಢವಾಗಿವೆ. ಅನೇಕ ಪ್ರೌಢಕವಿಗಳೂ ಶಾಸನಗಳನ್ನು ಬರೆದಿದ್ದಾರೆ. ಸಾಕಷ್ಟು ಪ್ರತಿಭಾಶಾಲಿಗಳಾಗಿದ್ದುದರಿಂದ ಸ್ವತಂತ್ರವಾಗಿ ಶಾಸನಗಳನ್ನು ರಚಿಸಿದ್ದಾರೆ.

ಕೆಲವು ಪದ್ಯಗಳು ತುಂಬ ಪ್ರಸಿದ್ಧವಾಗಿದ್ದು ಅವುಗಳ ಕೊನೆಯಲ್ಲಿ ಹೆಸರೊಂದನ್ನು ಬದಲಾಯಿಸಿದ್ದರೆ ಆ ಪದ್ಯಗಳು ಯಾವ ಶಾಸನಕ್ಕಾದರೂ ಹೊಂದುತ್ತದೆ. ಉದಾಹರಣೆಗೆ ತಾನು ಕುರಿತು ಹೇಳುತ್ತಿರುವ ರಾಜನನ್ನು ಹೊಗಳಬೇಕಾದರೆ "ಇನನೋರ್ವಂ ಪೊಜಿಗಾಗೆ ಪೇಳ್ ಪುದುವೆ ತೇಜಂ ಕ್ಷತ್ರಿಯಂಗೆ" ಎಂದೋ "ಸ್ಥಿರನೇ ಮೇರು ಗಿರೀಂದ್ರದೊಳ್ ಸೆಣಸುವಂ ಗಂಭೀರನೇ ವಾರ್ಧಿಯೊಳ್ ಪುರುಡಿಪ್ಪಂ" ಇತ್ಯಾದಿಯಾಗಿ ಹೊಗಳುವುದು ವಾಡಿಕೆ. ಬಹುಶಃ ಇಂತಹ ಪದ್ಯಗಳು ಸಾಂಪ್ರದಾಯಿಕವಾಗಿ ಎಲ್ಲ ಶಾಸನಗಳಲ್ಲಿ ಬಂದಿವೆ ಎನ್ನಬಹುದು. ರಾಣಿಯರನ್ನು ಹೊಗಳಬೇಕಾದರೆ

**ಸರಸತಿಗೆ ರತಿಗೆ ರಂಭೆಗೆ**
**ಗಿರಿಜೆಗರುಂಧತಿಗೆ ರಘುಕುಲೇಶನ ಸತಿಗಂ**
**ದೊರೆ ಪಾಸಟಿ ಮಿಗಿಲೆಂದೀ**
**ಧರೆ ಪೊಗಳ್ವುದು ನೆಗಳ್ದ ಸವತಿಗಜಕೇಸರಿಯಂ**

ಎಂದು ಹೊಗಳುತ್ತಿವೆ. ರಾಜನನ್ನೆ ಆಗಲಿ, ರಾಣಿಯನ್ನೇ ಆಗಲಿ ಹೊಗಳುವ ಇಂತಹ ಪದ್ಯಗಳಲ್ಲಿ ಕೊನೆಯಲ್ಲಿ ಹೆಸರನ್ನು ಬದಲಾಯಿಸಿದರೆ ಅದು ಯಾವುದೇ ರಾಜನಿಗಾಗಲಿ, ರಾಣಿಗಾಗಲೀ ಅನ್ವಯವಾಗುತ್ತವೆ. ಅನೇಕ ವಂಶಗಳ ಶಾಸನಗಳಲ್ಲಿ ಚಾರಿತ್ರಿಕ ವಿಷಯಗಳನ್ನು ಹೇಳುವ ಪದ್ಯಗಳು ಹಾಗೆ ಹಾಗೆಯೇ ಬಂದಿರುತ್ತವೆ. ಈಚಿನ ಶಾಸನಗಳು ಹಿಂದಿನ ಶಾಸನಗಳಿಂದ ಆ ಪದ್ಯಗಳನ್ನು ತೆಗೆದುಕೊಂಡಿರಬೇಕು. ಇಲ್ಲಿವೆ ಈ ಎಲ್ಲಾ ಶಾಸನಗಳಿಗೆ ಆಕರವಾದ ರಾಜಾವಳಿಯಾಗಲಿ, ಸಾಹಿತ್ಯಕೃತಿಯಾಗಲಿ ಇರಬಹುದು. "ಕೊಂಕಣಿಗರಿದನ ಖಡ್ಗದ ಕಂಕಣವದೆಮ್ಮ ನೆಲವೊ....." ಎಂಬ ವಿನಯಾದಿತ್ಯನನ್ನು ಕುರಿತ ಪದ್ಯವಾಗಲಿ, "ದೋರಸಮುದ್ರದಲಿ ಜಗದೇವನ ಸೇನೆಯನಿಕ್ಕೆ ತಮ್ಮ ತೋಳ್ ವೀರಸಮುದ್ರಮಾಗೆ......" ಎಂಬ ಬಲ್ಲಾಳ ವಿಷ್ಣುವರ್ಧನರ ಪರಾಕ್ರಮವನ್ನು ಹೇಳುವ ಪದ್ಯವಾಗಲಿ "ಮೊದಲೊಳ್ ಪೊಯ್ಸಳ ರಾಜ್ಯಲಕ್ಷ್ಮಿಯೊದವಂ ತೋಳ್ಬಲ್ಪಿನಿಂ ತಾಳ್ದಿ....." ಎಂಬ ಈ

ಪದ್ಯಗಳು ಹೊಯ್ಸಳರ ಅನೇಕ ಶಾಸನಗಳಲ್ಲಿ ಬರುತ್ತವೆ. ಬಹುಶಃ ಇವುಗಳಿಗೆ ಮೂಲ ಆಕರವಾದ ರಾಜಾವಳಿ ಅಥವಾ ಸಾಹಿತ್ಯಕೃತಿಯೊಂದಿರಬೇಕು. "ಕಮಠಂಗಿನ್ನೇಕೆ ಸರ್ವೋರ್ವಿಯಪೊರೆ....." ಜವನುಂ ತನ್ನಯ ಗಂಡಲಚ್ಚಣಮೆನಿಪ್ಪಾ ಮೀಸೆಯಂತಿರ್ದಲಂಜುವಿನಂ....." "ಸ್ಥಿರನೇ ಕೈಯೊಳೆ ಧಾತ್ರಿಯಂ ನಿಲಿಸಿದಂ ತೇಜಸ್ವಿಯೇ ವಹ್ನಿಯಂ ಕೊರಗಿಪ್ಪ" ಎಂದು ವಿಷ್ಣುವರ್ಧನನನ್ನು ಹೊಗಳುವ ಪದ್ಯಗಳನ್ನು ಯಾವ ರಾಜನಿಗೆ ಬೇಕಾದರೂ ಅನ್ವಯಿಸ ಹೇಳಬಹುದು.

"ಒಟ್ಟಿನಲ್ಲಿ ಸಾಹಿತ್ಯವೇ ಶಾಸನ ಕವಿಗಳಿಗೆ ಉದ್ದಕ್ಕೂ ಆದರ್ಶವಾಗಿದ್ದುದರಿಂದ ಅನೇಕ ಪ್ರೌಢಸಾಹಿತ್ಯ ಕೃತಿಗಳ ಪ್ರಭಾವವನ್ನು ಶಾಸನಗಳಲ್ಲಿ ಗುರುತಿಸಬಹುದು. ಹಾಗೆಯೇ ಸಾಹಿತ್ಯ ಚರಿತ್ರೆಯಲ್ಲಿನ ಏಳುಬೀಳುಗಳೂ ಶಾಸನಗಳ ಮೇಲೆ ಪರಿಣಾಮವನ್ನುಂಟು ಮಾಡಿವೆ"[೨೦] ಎನ್ನಬಹುದು. ಪ್ರಸಿದ್ಧ ಕವಿಗಳ ಸಾಹಿತ್ಯದ ಪ್ರಭಾವಕ್ಕೆ ಒಳಗಾಗಿದ್ದರೂ ಸಹ ಸ್ವೀಕರಣ, ಅನುಕರಣ, ಪುನರುಕ್ತಿಗಳಿದ್ದರೂ ಸ್ವತಂತ್ರ ಕಾವ್ಯದಂತೆ ಶೋಭಿಸುವ ಶಾಸನಗಳಿಗೆ ಕೊರತೆಯಿಲ್ಲ. ಮಾವನೂರು, ಬಳ್ಳಿಗಾವೆ, ಹುಮ್ಮಚ, ಶ್ರವಣಬೆಳಗೊಳ, ಹರಿಹರ, ಶಾಂತಿಗ್ರಾಮ ಮೊದಲಾದ ಕಡೆಗಳಲ್ಲಿನ ಹಲವಾರು ಶಾಸನಗಳು ಪುಟ್ಟ ಕಾವ್ಯಗಳಂತೆ ಪರಿಶೋಭಿಸುತ್ತವೆ ಎಂಬುದನ್ನು ಗಮನಿಸಿದಾಗ ಶಾಸನಕವಿಗಳೂ ಶಾಸನ ಸಾಹಿತ್ಯ ರಚನೆಯಲ್ಲಿ ಶಿಷ್ಟ ಕವಿಗಳಿಗೆ ಕೆಲಮಟ್ಟಿಗೆ ಸರಿಸಮನಾಗಿದ್ದರು ಎನ್ನಲು ಅವಕಾಶವಿದೆ.

## ಅಡಿ ಟಿಪ್ಪಣಿಗಳು

೧. (ಸಂ).ಎಂ.ವಿ.ಸೀತಾರಾಮಯ್ಯ : ಕವಿರಾಜಮಾರ್ಗಂ, ಡಿ.ವಿ.ಕೆ.ಮೂರ್ತಿ ಪ್ರಕಾಶಕರು, ಮೈಸೂರು. ೧೯೭೫, ಪುಟ-೬, ಪ್ರಥಮ ಪರಿಚ್ಛೇದ ೨೯ನೇ ಪದ್ಯ

೨. ಪೂರ್ವೋಕ್ತ : ಪುಟ-೭, ಪ್ರಥಮ ಪರಿಚ್ಛೇದ, ೩೨ನೇ ಪದ್ಯ

೩. E.C.(R) ಶ್ರವಣಬೆಳಗೊಳ ೯೮(೮೮) ಚಿಕ್ಕಬೆಟ್ಟ

ಸುರಚಾಪಂಬೋಲೆ.......... ದೇವಲೋಕಕ್ಕೆ ಸಂದಾನ್

೪. ಡಾ.ಜಿ.ಎಸ್.ಶಿವರುದ್ರಪ್ಪ : ಶ್ರವಣಬೆಳಗೊಳ : ಒಂದು ಸಮೀಕ್ಷೆ, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೨೦೦೪, ಪುಟ-೧೦೮, ೧೦೯

೫. ಪೂರ್ವೋಕ್ತ : ಪುಟ-೧೦೯

೬. ರಂ.ಶ್ರೀ.ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ, ಉಷಾ ಸಾಹಿತ್ಯ ಮಾಲೆ, ಮೈಸೂರು. ೧೯೮೪, ಪುಟ-೫೧

೭. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು. ೧೯೮೮, ಪುಟ-೩೫ರಿಂದ ೩೮ರವರೆಗೆ

'ಶೂದ್ರಕ' ಕೃತಿಯ ಸಮುದ್ರವರ್ಣನೆಯ ಪದ್ಯವಿರುವ ಇತರ ಶಾಸನಗಳು :

ಅ) ಚನ್ನರಾಯಪಟ್ಟಣ ತಾಲ್ಲೂಕು. ಶಿವರಗ್ರಾಮದ ಶಾಸನ. ಕ್ರಿ.ಶ.೧೨೨೩,

ಆ) ಬಳ್ಳಾರಿ ಜಿಲ್ಲೆ. ಮಾಗಳ(ಮಂಗಲ) ಶಾಸನ – ಕ್ರಿ.ಶ.೧೨೧೪

ಇ) ಬಳ್ಳಾರಿ ಜಿಲ್ಲೆ. ಕೂಡ್ಲಿಗಿ ತಾಲ್ಲೂಕು. ಬೆಣ್ಣೆಕಲ್ಲು – ಕ್ರಿ.ಶ.೧೨೨೬

ಈ) ಹಡಗಲಿ ತಾಲ್ಲೂಕು ಸೋಗಿ ಶಾಸನ

೮. E.C. (R) X ಚನ್ನರಾಯಪಟ್ಟಣ ೮೩ (V ಚಪ ೧೯೭) ಸಂತೆಶಿವರ.ಕ್ರಿ.ಶ.೧೨೨೩

೯. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು. ೧೯೮೮ ಪುಟ-೩೮

೧೦. E.C. VIII ಸೊರಬ ೧೦ ಮಾವಳಿ. ಕ್ರಿ.ಶ.ಸುಮಾರು.೮೦೦

೧೧. ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ : ಶಾಸ್ತ್ರೀಯ -೩, ಸಪ್ನ ಬುಕ್ ಹೌಸ್, ಬೆಂಗಳೂರು. ೧೯೯೯, ಪುಟ-೪೯೬

೧೨. (ಸಂ).ಡಾ.ಎಲ್.ಬಸವರಾಜು : ಪಂಪನ ಆದಿಪುರಾಣ, ಗೀತಾ ಬುಕ್ ಹೌಸ್, ಮೈಸೂರು. ೧೯೭೬. ಪ್ರಥಮ ಆಶ್ವಾಸ –೧೪ನೇ ಪದ್ಯ

೧೩. E.C. (R) IX ಬೇಲೂರು ೪೦೩ (XVಬೇ ೩೩೫) ಬಸ್ತಿಹಳ್ಳಿ. ಕ್ರಿ.ಶ.೧೧೩೮

೧೪. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ–ಸಂಪುಟ–೨, ನರೇಶ್ ಅಂಡ್ ಕಂಪನಿ, ಬೆಂಗಳೂರು. ೧೯೮೮, ಪುಟ–೩೯ರಿಂದ ೪೧

೧೫. (ಸಂ) ಹಂಪನಾಗರಾಜಯ್ಯ : ರನ್ನ ಸಂಪುಟ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ೨–೨೪, ಪುಟ–೧೯೯

೧೬. ಡಾ.ಎಂ.ಚಿದಾನಂದಮೂರ್ತಿ : ಸಂಶೋಧನ ತರಂಗ–೧, ಸರಸ ಸಾಹಿತ್ಯ ಪ್ರಕಾಶನ, ಮೈಸೂರು. ೧೯೬೬, ಪುಟ–೪

೧೭. ಪೂರ್ವೋಕ್ತ : ಪುಟ–೧೪

೧೮. (ಸಂ) ಡಾ.ಕೆ.ವಿ.ಪುಟ್ಟಪ್ಪ : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೦, ಚತುರ್ದಶಾಶ್ವಾಸ–೬೪ನೇ ಪದ್ಯ, ಪುಟ–೪೦೬

೧೯. E.C.(R) VII ನಾಗಮಂಗಲ ೮೦(IV ನಾಮಂ.೪೭) ಬೆಳ್ಳೂರು ಕ್ರಿ.ಶ.೧೧೯೧

೨೦. E.C. VIII ಸಾಗರ ೧೦೩. ಬೇಸೂರು

೨೧. (ಸಂ) ಡಾ.ಕೆ.ವಿ.ಪುಟ್ಟಪ್ಪ : ಪಂಪಭಾರತಂ ಎಂಬ ವಿಕ್ರಮಾರ್ಜುನವಿಜಯಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೦, ಪುಟ ೩೬೧, ದ್ವಾದಶಾಶ್ವಾಸಂ. ಪದ್ಯ–೨೧೭

೨೨. E.C. XII ಗೂಳೂರು ೯ ಕೈದಾಳ

೨೩. E.C. XII ಚಿಕ್ಕನಾಯಕನಹಳ್ಳಿ ೧೩ ಕೈನಡು

೨೪. E.C. (R) X ಅರಸೀಕೆರೆ ೨೪೧(Vಅಕೆ೧೪೧) ಕರುಗುಂದ ಕ್ರಿಸ.೧೧೫೮

೨೫. E.C. (R) XII ಕಡೂರು ೪೩ (VIಕ ೬೯) ಕಬ್ಬಳ್ಳಿ ಕ್ರಿ.ಶ.೧೧೫೫

೨೬. (ಸಂ) ಡಾ.ಕೆ.ವಿ.ಪುಟ್ಟಪ್ಪ : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೦ ಏಕಾದಶಾಶ್ವಾಸ – ೪೬, ೪೭ನೇ ಪದ್ಯ, ಪುಟ–೨೯೦

೨೭. ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ : ಸಂಪುಟ-೩, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೬ ಪುಟ-೬೪೪ (M.A.R.No.66 A.D.1194)

೨೮. E.C. VIIಷಿಕಾರಿಪುರ ೧೦೨ ಬಳ್ಳಿಗಾವೆ. ಕ್ರಿ.ಶ.೧೧೬೨

೨೯. (ಸಂ) ಡಾ.ಕೆ.ವಿ.ಪುಟ್ಟಪ್ಪ : ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು. ೧೯೯೦ ನವಮಾಶ್ವಾಸ – ೫೭ನೇ ಪದ್ಯ, ಪುಟ-೨೩೫

ಸುರಿವ ಸರಲ್ ನರಲ್ವ ಭಟರೆತ್ತಮುರುಳ್ವದಟಿಂ ಪೊರಳ್ವಸಿಂ
ಧುರಘಟೆ ಬರ್ಪನೆತ್ತರ ಕಡಲ್ ಕುಣಿವಟ್ಟೆಗಳಾಜಿಯೊಳ್ ಭಯಂ
ಕರತರಮಪ್ಪಿನಂ ಪಗೆವರೊಕ್ಕಲೊಳೋವೆನಲೊರ್ವರಿಲ್ಲದಂ
ತಿರೆತವೆಕೊಲ್ಗುಮಂತುಮರಿಕೇಸರಿಗಾಂತು ಬರ್ದುಂಕಲಕ್ಕುಮೇ ॥

೩೦. (೧)ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು, ೧೯೮೮ ಲೇಖನ :ಶ್ರವಣಬೆಳ್ಗೊಳ ಶಾಸನದ ಮೇಲೆ ರನ್ನನ ಪ್ರಭಾವ, ಪುಟ-೭೬ರಿಂದ ೭೯

(೨) ಕನ್ನಡ ನುಡಿ ಪತ್ರಿಕೆ: ಅಕ್ಟೋಬರ್ ೧೯೬೯ ಸಂ.೩೨, ಸಂ.೧೦ ಪುಟ-೧೯ಮತ್ತು೨೦

೩೧. E.C.(R)II ಶ್ರವಣಬೆಳಗೊಳ: ೪೩(೪೦) ಮತ್ತು ೨೨೭ (೪೪೯) ಚಿಕ್ಕಬೆಟ್ಟ ಕ್ರಿ.ಶ.೧೦ನೆಯ ಶತಮಾನ

೩೨. E.C.(R)II ಶ್ರವಣಬೆಳಗೊಳ : ೧೭೨ (೧೩೯) ಚಿಕ್ಕಬೆಟ್ಟ ಕ್ರಿ.ಶ.೧೦ನೆಯ ಶತಮಾನ

೩೩. ಡಾ.ಡಿ.ವಿ.ಪರಮಶಿವಮೂರ್ತಿ : ಕನ್ನಡ ಶಾಸನ ಶಿಲ್ಪ : ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೧೯೯೯, ಪುಟ-೨೦೩

೩೪. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂ. ಬೆಂಗಳೂರು. ೧೯೮೮, ಪುಟ-೭೯ ಮತ್ತು ೮೦

೩೫. (೧)E.C.(R)II ಶ್ರವಣಬೆಳಗೊಳ : ೧೩೬(೧೧೮) ಚಿಕ್ಕಬೆಟ್ಟ ಕ್ರಿ.ಶ.೧೧೨೦

(೨) E.C. (R) X ಅರಸೀಕೆರೆ ೩೧೭(Vಅಕೆ೧೦೮) ಹಿರಿಯೂರು ಕ್ರಿ.ಶ.೧೨೫೪

೩೬. (ಸಂ).ಪ್ರೊ.ಹಂಪನಾಗರಾಜಯ್ಯ ; ರನ್ನಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ಪ್ರಥಮಾಶ್ವಾಸಂ – ಪದ್ಯ -೫೧, ಪುಟ-೧೧

೩೭. E.C. VII ಹೊನ್ನಾಳಿ ೧೪೦ ಉದ್ರಿಗ್ರಾಮ. ಕ್ರಿ.ಶ.೧೧೯೭

೩೮. E.C. (R) X ಅರಸೀಕೆರೆ ೨೪೧(ಅಕೆ೧೪೧) ಕರುಗುಂದ. ಕ್ರಿ.ಶ.೧೧೫೮

೩೯. ಅರ್.ನರಸಿಂಹಾಚಾರ್ಯ : ಶಾಸನ ಪದ್ಯಮಂಜರಿ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫. ಪುಟಸಂಖ್ಯೆ-೨೩

೪೦. (ಸಂ) ಪ್ರೊ.ಹಂಪನಾಗರಾಜಯ್ಯ : ರನ್ನಸಂಪುಟ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೬, ಪಂಚಮಾಶ್ವಾಸಂ-ಪದ್ಯ ೩೫, ಪುಟ-೨೩೬

೪೧. (೧) ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು. ೧೯೮೮, ಪುಟ-೭೯, ೮೦

(೨) ಡಾ.ಎಸ್.ಎಂ.ಹಿರೇಮಠ : ಶಾಸನಾಧ್ಯಯನ, ವಿದ್ಯಾನಿಧಿ ಪ್ರಕಾಶನ, ಗದಗ. ೧೯೯೮, ಪುಟ-೮೫

೪೨. (ಸಂ) ಡಾ.ದೇವರಕೊಂಡಾರೆಡ್ಡಿ ಮತ್ತು ಡಾ.ಜಯಪ್ರಕಾಶ್ ಮಾವಿನಕುಳಿ : ತುಳುನಾಡಿನ ಜೈನಶಾಸನಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ೨೦೦೪, ಪುಟ-೧೧೦

೪೩. E.C. (R) XII ಕಡೂರು ೧೬ ಆಸಂದಿ ಕ್ರಿ.ಶ.೧೧೯೧

೪೪. (ಸಂ)ಡಾ.ಎಂ.ಎಂ.ಕಲಬುರ್ಗಿ : ಬಸವಣ್ಣನವರ ವಚನಸಂಪುಟ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು. ೧೯೯೩, ವಚನ-೪೯೯, ಪುಟ-೧೨೦

೪೫. E.C. (R)VIII ಹೊಳೆನರಸಿಪುರ ೯೫(XVಹೊನ೧೧೨) ಮಾವನೂರು. ಕ್ರಿ.ಶ.೧೨೮೨

೪೬. ಡಾ.ಎಂ.ಎಂ.ಕಲಬುರ್ಗಿ : ಶಾಸನಗಳಲ್ಲಿ ಶಿವಶರಣರು. ಶ್ರೀಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ, ೧೯೭೮, ಪುಟ-೧೩೫, ೧೩೬

೪೭. (ಸಂ)ಎನ್.ಅನಂತರಂಗಾಚಾರ್ : ಸೂಕ್ತಿಸುಧಾರ್ಣವಂ : ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೨, ಪೀಠಿಕಾ ಪ್ರಕರಣಂ, ಪುಟ-೧ರಿಂದ ೪

೪೮. E.C. (R)VIII ಹಾಸನ ೧೫೮(ರಿ.೧೯೪೦-೧) ಶಾಂತಿಗ್ರಾಮ

೪೯. ಡಾ.ಎಂ.ಎಂ.ಕಲಬುರ್ಗಿ : ಮಾರ್ಗ-ಸಂಪುಟ-೨, ನರೇಶ್ ಅಂಡ್ ಕಂಪನಿ, ಬೆಂಗಳೂರು ೧೯೮೮, ಪುಟ-೧೬೯

೫೦. ಹು.ಕಾ.ಜಯದೇವ್ : ಶಾಸನ ಮತ್ತು ಗದ್ಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. ೧೯೭೫, ಪುಟ-೧೦೧

# ಅಧ್ಯಾಯ – ೮

## ಸಮಾರೋಪ

ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಕನ್ನಡ ಶಾಸನಗಳನ್ನು "ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ" ಎಂಬ ಶೀರ್ಷಿಕೆಯಲ್ಲಿ ಅಧ್ಯಯನವನ್ನು ನಡೆಸಿ ಅದರಿಂದ ಹೊರಹೊಮ್ಮಿದ ಮುಖ್ಯಾಂಶಗಳು ಮತ್ತು ಫಲಿತಗಳನ್ನು ಈ ಅಧ್ಯಾಯದಲ್ಲಿ ಗಮನಿಸಲಾಗಿದೆ.

ಕನ್ನಡ ಶಾಸನ ಪ್ರಪಂಚವು ವಿಸ್ತಾರವಾದ ಹರಹನ್ನು ಹೊಂದಿದೆ. ಸಮರ್ಪಕವಾದ ಅಧ್ಯಯನದ ಉದ್ದೇಶದಿಂದ ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ಅವಧಿಯಲ್ಲಿ 'ದಕ್ಷಿಣ ಕರ್ನಾಟಕ' ಪ್ರದೇಶದಲ್ಲಿ ದೊರತಿರುವ ಕನ್ನಡದ ಸುಮಾರು ೭೦೦೦ ಶಾಸನಗಳನ್ನು ಗಮನಿಸಲಾಯಿತು. ಶಾಸನಗಳಲ್ಲಿನ ಸಾಹಿತ್ಯವನ್ನು ಗುರುತಿಸುವಲ್ಲಿ ಈವರೆಗೆ ಪ್ರಯತ್ನ ನಡೆಯದಿರುವುದನ್ನು ಗಮನಿಸಿ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಶಾಸನಗಳಲ್ಲಿನ ಸಾಹಿತ್ಯವನ್ನು ಗುರುತಿಸಿ ವಿಶ್ಲೇಷಿಸುವುದಷ್ಟೇ ಈ ಅಧ್ಯಯನದ ಉದ್ದೇಶವಾಗಿದೆ.

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಎಂಬ ಮೊದಲನೆಯ ಅಧ್ಯಾಯದಲ್ಲಿ ಕರ್ನಾಟಕದಲ್ಲಿ ಶಾಸನಗಳ ಅಧ್ಯಯನವು ನಡೆದುಬಂದ ರೀತಿ, ಶಾಸನಗಳನ್ನು ಆಧರಿಸಿ ನಡೆದಿರುವ ವಿವಿಧ ವಿಷಯಕವಾದ ಅಧ್ಯಯನಗಳ ಸ್ವರೂಪ, ವಿಶೇಷವಾಗಿ ಶಾಸನ ಸಾಹಿತ್ಯವನ್ನು ಕುರಿತಂತೆ ನಡೆದಿರುವ ಪ್ರಯತ್ನಗಳನ್ನು ಗಮನಿಸಲಾಗಿದೆ. ಹಾಗೆಯೇ 'ಶಾಸನ ಸಾಹಿತ್ಯ'ವನ್ನು ಕುರಿತು ವ್ಯವಸ್ಥಿತವಾದ ಅಧ್ಯಯನದ ಅಗತ್ಯತೆಯನ್ನು ಪ್ರತಿಪಾದಿಸಲಾಗಿದೆ. ಹಾಗೂ ಈ ರೀತಿಯಾದ ಅಧ್ಯಯನದಲ್ಲಿ ಇದು ಮೊದಲನೆಯ ಪ್ರಯತ್ನವೆಂಬುದನ್ನು ಮನವರಿಕೆ ಮಾಡಿಕೊಡಲಾಗಿದೆ. ವಿವರಣಾತ್ಮಕವಾದ, ವಿಶ್ಲೇಷಣಾತ್ಮಕವಾದ ಅಧ್ಯಯನದ ಅಗತ್ಯತೆಯನ್ನು ಪ್ರತಿಪಾದಿಸಲಾಗಿದೆ.

ಎರಡನೆಯ ಅಧ್ಯಾಯವು ರಾಜಕೀಯ ಇತಿಹಾಸವನ್ನು ನಿರೂಪಿಸುತ್ತದೆ. ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರವರೆಗಿನ ಅವಧಿಯಲ್ಲಿ ಕರ್ನಾಟಕವನ್ನು ಆಳಿದ ರಾಜಮನೆತನಗಳ ಚರಿತ್ರೆಯನ್ನು ಸ್ಥೂಲವಾಗಿ ನಿರೂಪಿಸಿರುವುದರ ಜೊತೆ ಜೊತೆಗೆ ಆಯಾ ರಾಜವಂಶಗಳ ಆಳ್ವಿಕೆಯ ಸಂದರ್ಭದಲ್ಲಿ ಕನ್ನಡ ಶಾಸನ ಸಾಹಿತ್ಯವು ಬೆಳೆದು ಬಂದ ಬಗೆಯನ್ನು ಗಮನಿಸಲಾಗಿದೆ. ಆಳ್ವಿಕೆ ನಡೆಸಿದ ರಾಜವಂಶಗಳ ಭಾಷಿಕ ಒಲವು, ಅಂದಿನ ರಾಜಕೀಯ ಪರಿಸ್ಥಿತಿಯೂ ಸಹ ಶಾಸನಗಳ ರಚನೆಯ ಮೇಲೆ ತನ್ನದೇ ಆದ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ಗಮನಿಸಿದೆ.

ಮೂರನೆಯ ಅಧ್ಯಾಯದಲ್ಲಿ ಕನ್ನಡ ಭಾಷೆಯ ಶಾಸನ ಸಾಹಿತ್ಯವು ಆರಂಭದ ಕಾಲದಿಂದ ಕ್ರಿ.ಶ.೧೬೦೦ರವರೆಗೆ ಬೆಳೆದು ಬಂದ ಬಗೆಯನ್ನು ಗಮನಿಸಲಾಗಿದೆ. ಆರಂಭದಲ್ಲಿ ಸಂಸ್ಕೃತ ಭಾಷೆಯ ದಟ್ಟ ಪ್ರಭಾವಕ್ಕೆ ಒಳಗಾಗಿದ್ದು, ಆ ನಂತರದಲ್ಲಿ ೯–೧೦ನೆಯ ಶತಮಾನದ

ನಂತರದಲ್ಲಿ ಕನ್ನಡದತ್ತ ಹೊರಳಿದುದನ್ನು ಸೂಕ್ತ ಉದಾಹರಣೆಗಳೊಂದಿಗೆ ನಿರೂಪಿಸಿದೆ. ಕಲ್ಯಾಣದ ಚಾಲುಕ್ಯರು, ಹೊಯ್ಸಳರ ಕಾಲವು ಕನ್ನಡ ಶಾಸನ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಪ್ರಮುಖವಾದದ್ದು. ಹೊಯ್ಸಳರ ಕಾಲದ ನಂತರದಲ್ಲಿ 'ಶಾಸನ ಸಾಹಿತ್ಯ'ವು ಇಳಿಮುಖವಾಯಿತೆನ್ನುವುದನ್ನು ಗಮನಿಸಿದೆ. ಅಂತೆಯೇ 'ದಕ್ಷಿಣ ಕರ್ನಾಟಕ'ದ ಪ್ರದೇಶದಲ್ಲಿ ಶಾಸನಗಳ ರಚನೆಯಲ್ಲಿ ತೊಡಗಿಸಿಕೊಂಡ ಶಾಸನಕವಿಗಳ ಪರಿಚಯವನ್ನು ಅನುಕ್ರಮವಾಗಿ ನೀಡಲಾಗಿದ್ದು, ಕೇವಲ ಶಿಷ್ಟಕವಿಗಳನ್ನು ಕುರಿತ ಸಾಹಿತ್ಯ ಚರಿತ್ರೆಗಳೇ ಹೆಚ್ಚಾಗಿ ಬಂದಿರುವಾಗ ಶಾಸನಕವಿಗಳ ಚರಿತ್ರೆಯೂ ಅಷ್ಟೇ ಅಗತ್ಯವಾದದ್ದು ಎಂಬುದನ್ನು ಗಮನಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ವರ್ಣನೆಗಳನ್ನು ಒಳಗೊಂಡ ಭಾಗವಾಗಿದೆ. ಶಾಸನಗಳು ಕೇವಲ ಐತಿಹಾಸಿಕ ದಾಖಲೆಗಳಷ್ಟೇ ಅಲ್ಲ. ಅವುಗಳಲ್ಲಿಯೂ ಸಹ ಮನಮುಟ್ಟುವಂತಹ ಸಾಹಿತ್ಯವನ್ನು ಕಾಣಬಹುದೆಂಬುದನ್ನು ಹಲವಾರು ಸೂಕ್ತ ನಿದರ್ಶನಗಳೊಂದಿಗೆ ನಿರೂಪಿಸಲಾಗಿದೆ. ವಿವಿಧ ವರ್ಗಗಳನ್ನು ಪ್ರತಿನಿಧಿಸುವ ಜನತೆ, ಪ್ರಕೃತಿ, ಸುಂದರವಾದ ದೇವಾಲಯಗಳು, ಬಸದಿಗಳು ಮೊದಲಾದವುಗಳು ಕವಿಗಳ ವರ್ಣನೆಯ ವಸ್ತುಗಳಾಗಿದ್ದವು. ಪರಿಮಿತವಾದ ಅವಕಾಶದಲ್ಲೇ ಶಾಸನಕವಿಗಳು ಸೊಗಸಾದ ಬಣ್ಣನೆಯನ್ನು ತಂದಿದ್ದಾರೆ ಹಾಗೂ ಹೆಚ್ಚು ವಾಸ್ತವತೆಯ ಕಡೆಗೆ ಗಮನ ನೀಡಿದ್ದಾರೆ. ಸೋಪಜ್ಞತೆಗೆ ಅವಕಾಶವಿದ್ದಂತೆ, ಏಕನಾತನೆಯೂ ಕಂಡು ಬಂದಿತೆಂಬುದನ್ನು ಪ್ರತಿಪಾದಿಸಲಾಗಿದೆ.

ಅಧ್ಯಾಯ ಐದು ಶಾಸನಗಳಲ್ಲಿನ ಅಲಂಕಾರ ಮತ್ತು ಛಂದಸ್ಸನ್ನು ಕುರಿತದ್ದು. ಶಾಸನಗಳಲ್ಲಿ ಬಳಕೆಯಾಗಿರುವ ಶಬ್ದಾಲಂಕಾರ, ಅರ್ಥಾಲಂಕಾರಗಳನ್ನು ಸೂಕ್ತ ಉದಾಹರಣೆಗಳೊಂದಿಗೆ ಗಮನಿಸಿರುವುದರ ಜೊತೆಗೆ ಏಕಾವಳಿ, ಸಾರ ಎಂಬ ಅಪರೂಪದ ಅಲಂಕಾರಗಳನ್ನು ಶಾಸನ ಕವಿಗಳು ಬಳಸಿದ್ದಾರೆ ಎಂಬುದನ್ನು ಗುರುತಿಸಿದೆ. ಛಂದೋವೈವಿಧ್ಯಗಳಲ್ಲಿ ವರ್ಣವೃತ್ತ, ಮಾತ್ರಾಛಂದಸ್ಸು ಮತ್ತು ಅಂಶ ಛಂದಸ್ಸಿನ ಪ್ರಕಾರಗಳು ಬಳಕೆಯಾಗಿರುವುದು ವಿಶೇಷವಾಗಿ ನಿಯಮಪಾಲನೆ, ನಿಯಮೋಲ್ಲಂಘನೆಯಲ್ಲಿ ಶಾಸನಕವಿಗಳ ಮನೋಭಾವವನ್ನು ವಿಶ್ಲೇಷಿಸಿದೆ.

ಶಾಸನಗಳಲ್ಲಿನ ಭಾಷೆ ಮತ್ತು ಶೈಲಿಯನ್ನು ಕುರಿತದ್ದು ಆರನೆಯ ಅಧ್ಯಾಯ. ಶಾಸನಗಳಲ್ಲಿ ಕಂಡು ಬಂದಿರುವ ಪೂರ್ವದ ಹಳಗನ್ನಡ, ಹಳಗನ್ನಡ ಮತ್ತು ನಡುಗನ್ನಡ ಹಾಗೂ ವಿಜಯನಗರದ ಕಾಲದ ಭಾಷಾಸ್ವರೂಪವನ್ನು ಸೂಕ್ತ ಉದಾಹರಣೆಗಳೊಂದಿಗೆ ನಿರೂಪಿಸಿದೆ. ಶಾಸನಗಳ ಪದ್ಯ ಮತ್ತು ಗದ್ಯ ಶೈಲಿಯಲ್ಲಿ ಶಾಸನಕವಿಗಳು ಮೆರೆದಿರುವ ವಿಶಿಷ್ಟತೆಯನ್ನು ಗಮನಿಸಿದೆ.

ಪ್ರಶಸ್ತಿ ಗದ್ಯವನ್ನು ವಿವಿಧ ರೀತಿಯಲ್ಲಿ ಬೆಳೆಸಿದ ಕೀರ್ತಿ ಶಾಸನಕಾರರಿಗೆ ಸಲ್ಲುತ್ತದೆ. ಕನ್ನಡ ಗದ್ಯದ ಬೆಳವಣಿಗೆಯಲ್ಲಿ ಶಾಸನಕಾರರ ಪಾತ್ರವನ್ನು ಗಮನಿಸಿದೆ.

ಕನ್ನಡದ ಆರಂಭಿಕ ಶಾಸನಗಳು ಸಾಹಿತ್ಯ ಕೃತಿಗಳ ಮೇಲೆ ಬೀರಿರಬಹುದಾದ ಪ್ರಭಾವವನ್ನು ನಿರೂಪಿಸುವುದರ ಜೊತೆಗೆ ಪಂಪ, ರನ್ನ ಮೊದಲಾದ ಪ್ರಮುಖ ಕವಿಗಳ ಪ್ರಭಾವವು ಶಾಸನ ಸಾಹಿತ್ಯ ಪರಂಪರೆಯ ಮೇಲೆ ಉಂಟಾಗಿರುವುದನ್ನು ಅಧ್ಯಾಯ ಏಳರಲ್ಲಿ ನಿರೂಪಿಸಲಾಗಿದೆ.

ಈವರೆಗಿನ ಅಧ್ಯಯನದಿಂದ ಹೊರಹೊಮ್ಮಿದ ಫಲಿತಗಳನ್ನು ಈ ಕೆಳಗಿನಂತೆ ಗುರುತಿಸಬಹುದು.

೧. ಶಾಸನಗಳಲ್ಲಿನ ವಿವಿಧ ವಿಷಯಕ್ಕೆ ಸಂಬಂಧಿಸಿದ ಅಧ್ಯಯನಗಳು ವ್ಯಾಪಕವಾಗಿ ನಡೆದಿವೆ. ಸಾಹಿತ್ಯವನ್ನು ಕುರಿತ ಅಧ್ಯಯನವು ವ್ಯವಸ್ಥಿತವಾಗಿ ಈವರೆಗೆ ನಡೆಯದಿರುವ ಕಾರಣದಿಂದ **"ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯ"(ಕ್ರಿ.ಶ.೪೫೦ರಿಂದ ಕ್ರಿ.ಶ.೧೬೦೦ರ ವರೆಗೆ)** ಎಂಬುದು ಪಿಎಚ್.ಡಿ. ಸಂಶೋಧನಾ ವಿಧಿವಿಧಾನಗಳನ್ನು ಅನುಸರಿಸಿ ನಡೆಸಿದ ಮೊದಲನೆಯ ಪ್ರಯತ್ನವಾಗಿದೆ.

೨. ಕನ್ನಡ ಶಾಸನಗಳಲ್ಲಿನ ವೈವಿಧ್ಯಮಯವಾದ ವರ್ಣನೆಗಳನ್ನು ಮೊದಲ ಬಾರಿಗೆ ವ್ಯವಸ್ಥಿತವಾಗಿ ಒಂದು ಕಡೆ ನೀಡಲಾಗಿದೆ. ತಮಗಿರುವ ಇತಿಮಿತಿಯಲ್ಲೇ ಶಾಸನಕವಿಗಳು ವರ್ಣನೆಯಲ್ಲಿ ಹೊಸತನವನ್ನು ಮೆರೆದಿದ್ದಾರೆ ಎನ್ನಬಹುದಾಗಿದೆ. ವ್ಯಕ್ತಿಚಿತ್ರಣಗಳೇ ಶಾಸನಗಳ ತುಂಬಾ ಹರಡಿದ್ದರೂ ಕಲ್ಪನೆಗಿಂತ ವಾಸ್ತವಿಕತೆಗೆ ಸಮೀಪವಾಗಿದೆ.

೩. ದಕ್ಷಿಣ ಕರ್ನಾಟಕದ ಕನ್ನಡ ಶಾಸನಗಳಲ್ಲಿನ ಅಲಂಕಾರಗಳನ್ನು ಗುರುತಿಸಿ ಸೂಕ್ತ ಉದಾಹರಣೆಗಳೊಂದಿಗೆ ನಿರೂಪಿಸಿರುವ ಮೊದಲನೆಯ ಪ್ರಯತ್ನವು ಇದಾಗಿರುತ್ತದೆ. ಪ್ರಸಿದ್ಧ ಕವಿಗಳ ಕಾವ್ಯಗಳಲ್ಲಿ ಬಳಕೆಯಾಗಿರುವ ಸುಂದರವಾದ, ಉಪಮೆ, ರೂಪಕಗಳಿಗೆ ಸರಿಸಮನಾದ ಉಪಮೆ, ರೂಪಕಗಳು ಶಾಸನಗಳಲ್ಲಿ ಕಂಡುಬಂದಿರುವುದು ಗಮನಾರ್ಹವಾಗಿದೆ.

೪. ಸಾಹಿತ್ಯ ಕೃತಿಗಳು ಮತ್ತು ಶಾಸನಗಳ ಪರಸ್ಪರ ಪ್ರಭಾವವನ್ನು ಗಮನಿಸಿದಾಗ ಉತ್ತಮ ಅಂಶಗಳನ್ನು ಸ್ವೀಕರಿಸುವುದರಲ್ಲಿ ಶಿಷ್ಟಕವಿಗಳು ಮತ್ತು ಶಾಸನಕವಿಗಳು ಯಾವ ನಿರ್ಬಂಧಕ್ಕೂ ಒಳಗಾಗಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಪ್ರಸಿದ್ಧ ಕವಿಗಳ ಪ್ರಭಾವವು ಶಾಸನ ರಚನಕಾರರ ಮೇಲೆ ಉಂಟಾಗಿದ್ದರೂ ಸಹ ಅದರ ಪ್ರಮಾಣವು ಕಡಿಮೆಯೆಂಬುದು ವೇದ್ಯವಾಗುತ್ತದೆ. ದೇಕಬ್ಬೆಯ ಶಾಸನವನ್ನು ರಚಿಸಿದ ಕವಿಮಲ್ಲನು ಯಾರ ಪ್ರಭಾವಕ್ಕೂ ಒಳಗಾಗದೆ ನೇರವಾಗಿ ಸೊಗಸಾಗಿ ವಿಷಯ ನಿರೂಪಿಸಿರುವುದು

ಗಮನ ಸೆಳೆಯುತ್ತದೆ. ಬೊಪ್ಪಣ ಪಂಡಿತ, ಜನ್ನ ಶಾಸನಕವಿಗಳಾಗಿ ಯಶಸ್ಸನ್ನು ಸಾಧಿಸಿರುವುದನ್ನು ಅವರುಗಳು ರಚಿಸಿದ ಶಾಸನಗಳೇ ಸಾರುತ್ತಿವೆ. ರನ್ನಕವಿಯ ಪ್ರಭಾವ ಮುದ್ರೆಯಿರುವ ಪೋಚಿಕಬ್ಬೆ ಮತ್ತು ಕುಂಜಸೆಟ್ಟಿಯ ಪ್ರಸ್ತಾಪವಿರುವ ಪದ್ಯಗಳನ್ನು ಗುರುತಿಸಲಾಗಿದೆ.

೫. ಭಾಷೆ ಮತ್ತು ಛಂದಸ್ಸಿನ ದೃಷ್ಟಿಯಿಂದ ಶಾಸನಕವಿಗಳು ಪ್ರಯೋಗಶೀಲರಾಗಿದ್ದರು ಎಂಬುದನ್ನು ಗುರುತಿಸಲಾಗಿದೆ. ಅವರ ಪ್ರಯೋಗಶೀಲತೆಯಿಂದಾಗಿ ಒಮ್ಮೊಮ್ಮೆ ನಿಯಮಕ್ಕೆ ಭಂಗಬಂದಿದ್ದರೂ "ಹೇಳಬೇಕಾದ ವಿಷಯವಷ್ಟೇ ಮುಖ್ಯ, ಹೇಳಿದ ವಿಧಾನವಲ್ಲ" ಎಂಬ ತತ್ವವನ್ನು ಪ್ರತಿಪಾದಿಸಿದ್ದಾರೆ.

ಶಾಸನಗಳಲ್ಲಿನ ಸಾಹಿತ್ಯದ ದೃಷ್ಟಿಯಿಂದ ಗಮನಿಸಿದಾಗ ಅಲ್ಲಿ ಕೇವಲ ವ್ಯಕ್ತಿಚಿತ್ರಣ, ಏಕತಾನತೆ, ಚರ್ವಿತಚರ್ವಣವೇ ಕಂಡುಬಂದಿದೆ ಎನಿಸಬಹುದು. ಆದರೆ ಕಾವ್ಯಸತ್ವವುಳ್ಳ ಪ್ರತಿಯೊಂದು ಶಾಸನವನ್ನು ಪ್ರತ್ಯೇಕವಾಗಿ ಗಮನಿಸಿದಾಗ ಆ ಶಾಸನಕವಿಯ ಕವಿತ್ವ, ಪ್ರತಿಭೆ, ಪಾಂಡಿತ್ಯವು ಮನಸೆಳೆಯುತ್ತದೆ. ಶ್ರವಣಬೆಳಗೊಳದ ಹಲವಾರು ಶಾಸನಗಳು, ದೇಕಬ್ಬೆಯ ಶಾಸನ, ಗೊಮ್ಮಟಸ್ತುತಿ, ಜನ್ನಕವಿಯ ಶಾಸನಗಳು, ಬೇಲೂರಿನ ಚನ್ನಕೇಶವ ದೇವಾಲಯದ ಶಾಸನ, ಒಂದೇ ಎರಡೇ ಹಲವಾರು ಶಾಸನಗಳು ತಮ್ಮ ಭಾವಬಂಧ ಒಟ್ಟಂದದಲ್ಲಿ ಮನಸೆಳೆಯುವಲ್ಲಿ ಯಶಸ್ವಿಯಾಗಿವೆ.

ಕಾವ್ಯಸತ್ವವನ್ನು ಪ್ರತಿಪಾದಿಸುವಾಗ ಸಹಜವಾಗಿ ಪ್ರಮುಖ ಕವಿಗಳ ಕೃತಿಗಳನ್ನು ಹೆಸರಿಸುವುದು ಗಮನಿಸುವುದು ಸಹಜವಾದ ಪರಿಪಾಠವಾಗಿದೆ. ಹಾಗಾದರೆ ಶಿಷ್ಟ ಸಾಹಿತ್ಯ ಪರಂಪರೆ ಆರಂಭವಾಗುವ ಮೊದಲೇ ಇದ್ದ ಜಾನಪದ ಸಾಹಿತ್ಯ, ಶಾಸನ ಸಾಹಿತ್ಯಗಳ ಅಧ್ಯಯನವಾಗುವುದು ಅವಶ್ಯಕವಲ್ಲವೇ? ಜಾನಪದ ಸಾಹಿತ್ಯವನ್ನು ಕುರಿತ ಸಂಶೋಧನೆ, ಅಧ್ಯಯನಗಳು ಸಾಕಷ್ಟು ನಡೆದಿದೆ ಎನ್ನಬಹುದು. ಆದರೆ 'ಶಾಸನಸಾಹಿತ್ಯ'ದಲ್ಲಿ ಆ ರೀತಿಯಾದ ಅಧ್ಯಯನಗಳು ನಡೆದಿರುವುದು ವಿರಳವಾಗಿದೆ. ಆದ್ದರಿಂದ ಅಲಕ್ಷಿತವಾದ ಶಾಸನಗಳ ಕಾವ್ಯಸತ್ವವನ್ನು ಗುರುತಿಸುವುದು ಅವಶ್ಯಕವೆಂಬುದು ಈ ಪ್ರಯತ್ನದಿಂದ ವೇದ್ಯವಾಗುತ್ತದೆ. ಸಾಹಿತ್ಯ ಚರಿತ್ರೆಯನ್ನು ಅರಿಯುವಾಗ ಶಾಸನಸಾಹಿತ್ಯ ಚರಿತ್ರೆಯ ತಿಳುವಳಿಕೆಯಿರುವುದೂ ಅನಿವಾರ್ಯವೆಂಬುದನ್ನು ಮನಗಾಣಬೇಕಾಗುತ್ತದೆ. ಶಾಸನಗಳಲ್ಲಿನ ವರ್ಣನೆಗಳು, ಭಾಷೆ, ಅಲಂಕಾರ, ಛಂದಸ್ಸು, ಕಾವ್ಯಸತ್ವ ಮೊದಲಾದ ವಿಷಯಗಳನ್ನು ಪ್ರಾದೇಶಿಕ ಮಟ್ಟದಲ್ಲಿ ತಾಲ್ಲೂಕು, ಜಿಲ್ಲೆಗಳ ಮಟ್ಟದಲ್ಲಿ ಅಧ್ಯಯನ ನಡೆಸಲು ಅವಕಾಶವಿದೆ ಎಂಬುದನ್ನು ಈ ರೀತಿಯಾದ ಪ್ರಯತ್ನಗಳು ಮನವರಿಕೆ ಮಾಡಿಕೊಡುತ್ತವೆ.

ಈ ಅಧ್ಯಯನದಲ್ಲಿ ಬಳಸಿಕೊಂಡಿರುವ ಶಾಸನಪದ್ಯಗಳನ್ನು ಕುರಿತು ಒಂದು ಮಾತನ್ನು ಹೇಳಬೇಕಾಗುತ್ತದೆ. ಶಾಸನ ಪದ್ಯಮಂಜರಿ, ಶಾಸನ ಸಾಹಿತ್ಯ ಸಂಚಯ, ಶಾಸನ ಸೂಕ್ತಿಸುಧಾರ್ಣವ

ಕೃತಿಗಳಲ್ಲಿ ಬಂದಿರುವ ಪದ್ಯಗಳನ್ನು ಹೊರತುಪಡಿಸಿ ಆದಷ್ಟು ಹೊಸ ಪದ್ಯಗಳನ್ನು ಆಯ್ಕೆ ಮಾಡಿಕೊಂಡು ನಿರೂಪಿಸಲಾಗಿದೆ. ಆ ಮೂಲಕ ಶಾಸನಗಳಲ್ಲಿ ಅಡಗಿರುವ ಹಲವಾರು ಹೊಸ ಪದ್ಯಗಳು ಬೆಳಕಿಗೆ ಬಂದಿವೆ. ಹಾಗೆಯೇ ಸಂಸ್ಕೃತ ಭೂಯಿಷ್ಠವಾದ ಪದ್ಯಗಳಿಗಿಂತ ದೇಸೀಯ ಸೊಗಡನ್ನು ಹೊಂದಿರುವ ಪದ್ಯಗಳನ್ನೇ ವಿಶೇಷವಾಗಿ ಬಳಸಲಾಗಿದೆ. ಕೆಲವೊಂದು ಪದ್ಯಗಳು ಹಲವಾರು ಕಡೆಗಳಲ್ಲಿ ಪುನರಾವರ್ತನೆಗೊಂಡಿರುವುದು ಸಹಜ. ಆದರೆ ಆ ಪದ್ಯಗಳು ಕಾವ್ಯಸತ್ವ, ಭಾಷೆ, ಅಲಂಕಾರ ಹೀಗೆ ಹಲವಾರು ದೃಷ್ಟಿಗಳಿಂದ ಗಮನಾರ್ಹವಾದಾಗ ಅಂತಹವುಗಳನ್ನು ಅನಿವಾರ್ಯವಾಗಿ ಹಲವಾರು ಕಡೆ ಬಳಸಬೇಕಾಗಿದೆಯೆನ್ನಬಹುದು.

ಅಂತಿಮವಾಗಿ ಸಾಹಿತ್ಯ ಕೃತಿಯನ್ನು ಸಾಹಿತ್ಯದಂತೆ ಅಭ್ಯಾಸ ಮಾಡುತ್ತಲೇ ಅದರಲ್ಲಿರುವ ಇತಿಹಾಸವನ್ನು ಹುಡುಕುವಂತೆ ಐತಿಹಾಸಿಕ ಸಂಗತಿಗಳನ್ನು ಪ್ರತಿಪಾದಿಸಿರುವ ಶಾಸನಗಳಲ್ಲಿನ ಸಾಹಿತ್ಯವನ್ನು ಗಮನಿಸುವುದು ಅನಿವಾರ್ಯವೂ ಅಗತ್ಯವೂ ಆಗಿದೆ. ಅಂತಹ ಅನಿವಾರ್ಯತೆ ಮತ್ತು ಅಗತ್ಯತೆಯನ್ನು ಈ ಅಧ್ಯಯನವು ಪ್ರತಿಪಾದಿಸಿದೆ.

## ಆಕರ ಗ್ರಂಥಗಳು


೧. ಎಪಿಗ್ರಾಫಿಯ ಕರ್ನಾಟಿಕ (ಪರಿಷ್ಕೃತ) : ಕೊಡಗು ಜಿಲ್ಲೆ ೧೯೭೨

೨. ———"——— : ಶ್ರವಣಬೆಳಗೊಳ ೧೯೭೩

೩. ———"——— : ಮೈಸೂರು ಜಿಲ್ಲೆ ೧೯೭೪

೪. ———"——— : ಮೈಸೂರು ಜಿಲ್ಲೆ ೧೯೭೫

೫. ———"——— : ಮೈಸೂರು ಜಿಲ್ಲೆ ೧೯೭೬

೬. ———"——— : ಮಂಡ್ಯ ಜಿಲ್ಲೆ ೧೯೭೭

೭. ———"——— : ಮಂಡ್ಯ ಜಿಲ್ಲೆ ೧೯೭೯

೮. ———"——— : ಹಾಸನ ಜಿಲ್ಲೆ ೧೯೮೯

೯. ———"——— : ಹಾಸನ ಜಿಲ್ಲೆ ೧೯೯೦

೧೦. ———"——— : ಹಾಸನ ಜಿಲ್ಲೆ ೧೯೯೭

೧೧. ———"——— : ಚಿಕ್ಕಮಗಳೂರು ಜಿಲ್ಲೆ ೧೯೯೮

೧೨. ———"——— : ಚಿಕ್ಕಮಗಳೂರು ಜಿಲ್ಲೆ ೨೦೦೩

೧೩. ———"——— : ಶಿವಮೊಗ್ಗ ಜಿಲ್ಲೆ ೨೦೦೬

(ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು)

## ಎಪಿಗ್ರಾಫಿಯ ಕರ್ನಾಟಿಕ (ಬಿ.ಎಲ್.ರೈಸ್ ಆವೃತ್ತಿಗಳು)

೧. ಎಪಿಗ್ರಾಫಿಯ ಕರ್ನಾಟಿಕ : VII ಶಿವಮೊಗ್ಗ ಜಿಲ್ಲೆ

೨. ________"________ : VIII ಶಿವಮೊಗ್ಗ ಜಿಲ್ಲೆ

೩. ________"________ : IX ಬೆಂಗಳೂರು ಜಿಲ್ಲೆ

೪. ________"________ : X ಕೋಲಾರ ಜಿಲ್ಲೆ

೫. ________"________ : XI ಚಿತ್ರದುರ್ಗ ಜಿಲ್ಲೆ

೬. ________"________ : XII ತುಮಕೂರು ಜಿಲ್ಲೆ

೭. ________"________ : XVII ಕೋಲಾರ ಜಿಲ್ಲೆ

(Supplementory inscriptions in the Kolar Dist. Mysore Archaeological Survey)

೮. South Indian Inscriptions VII, IX Part II

೯. ಶ್ರವಣಬೆಳಗೊಳದ ಶಾಸನಗಳು – ಜಿ.ಬ್ರಹ್ಮಪ್ಪ, ಚಂದ್ರಗುಪ್ತ ಗ್ರಂಥಮಾಲೆ, ಶ್ರವಣಬೆಳಗೊಳ, ೧೯೮೮

೧೦. ತುಳುನಾಡಿನ ಶಾಸನಗಳು – ಸಂಪುಟ–೧ ಡಾ.ಕೆ.ವಿ.ರಮೇಶ್ ಮತ್ತು ಜಯರಾಮಶರ್ಮ ಗೀತಾ ಬುಕ್ ಹೌಸ್, ಮೈಸೂರು. ಪ್ರಥಮ ಮುದ್ರಣ ೧೯೭೮

## ಪರಾಮರ್ಶನ ಗ್ರಂಥಗಳು


೧. ಡಾ.ಎಂ.ಎಂ.ಕಲಬುರ್ಗಿ — **ಕವಿರಾಜಮಾರ್ಗ ಪರಿಸರದ ಕನ್ನಡ**
ಸಾಹಿತ್ಯ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ, ೧೯೭೩

**ಮಾರ್ಗ-೨**
ನರೇಶ್ ಅಂಡ್ ಕಂಪನಿ
ಬೆಂಗಳೂರು, ೧೯೮೮

**ಶಾಸನ ವ್ಯಾಸಂಗ-೧**
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯೭೪

**ಶಾಸನಗಳಲ್ಲಿ ಶಿವಶರಣರು**
ವೀರಶೈವ ಅಧ್ಯಯನ ಸಂಸ್ಥೆ
ಶ್ರೀಜಗದ್ಗುರು ತೋಂಟದಾರ್ಯ
ಸಂಸ್ಥಾನಮಠ, ಡಂಬಳ,
ಗದಗ, ೧೯೭೮

**ಶಾಸನ ಸೂಕ್ತಿಸುಧಾರ್ಣವ**
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು, ೧೯೯೭

೨. ಕೆ.ಕುಶಾಲಪ್ಪ ಗೌಡ — **ಕನ್ನಡ, ತಿರುಳಗನ್ನಡ ಮತ್ತು ಸಮಾಜ**
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು-೫೬, ೧೯೯೧

೩. ಡಾ.ಕೆ.ಕೆಂಪೇಗೌಡ — **ಕನ್ನಡ ಭಾಷಾ ಸ್ವರೂಪ**
ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ, ಮೈಸೂರು
೧೯೯೭

೪. ಡಾ.ಸಿ.ಪಿ.ಕೃಷ್ಣಕುಮಾರ್ — **ಜನ್ನ**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ,
೧೯೮೦

೫. ಡಾ.ನಾ.ಗೀತಾಚಾರ್ಯ — **ಕನ್ನಡ ಶಾಸನಗಳ ಭಾಷೆ: ಒಂದು ಅಧ್ಯಯನ**
ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ನಿಬಂಧ, ೨೦೦೨ (ಅಪ್ರಕಟಿತ)

೬. ಡಾ.ಬಾ.ರಾ.ಗೋಪಾಲ — **ಕನ್ನಡ ಶಾಸನಗಳು**
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು
೨೦೦೪

೭. ಡಾ.ಎಂ.ಚಿದಾನಂದಮೂರ್ತಿ — **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು. ೧೯೭೯
**ಸಂಶೋಧನ ತರಂಗ –೧**
ಸರಸ ಸಾಹಿತ್ಯ ಪ್ರಕಾಶನ
ಮೈಸೂರು. ೧೯೬೬
**ಸಂಶೋಧನ ತರಂಗ–೨**
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು–೧೯೭೦

೮. ಹು.ಕಾ.ಜಯದೇವ್ — **ಶಾಸನ ಮತ್ತು ಗದ್ಯ**
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು. ೧೯೭೫

೯. ಡಾ.ದೇವರಕೊಂಡಾರೆಡ್ಡಿ — **ಲಿಪಿಯ ಹುಟ್ಟು ಮತ್ತು ಬೆಳವಣಿಗೆ**
ಕನ್ನಡ ಪುಸ್ತಕ ಪ್ರಾಧಿಕಾರ
ಪಂಪಮಹಾಕವಿ ರಸ್ತೆ,
ಚಾಮರಾಜಪೇಟೆ, ಬೆಂಗಳೂರು
೨೦೦೨

೧೦. ರಾ.ಯ.ಧಾರವಾಡಕರ — **ಕನ್ನಡ ಭಾಷಾಶಾಸ್ತ್ರ**
ಗೀತಾ ಬುಕ್ ಹೌಸ್
ಮೈಸೂರು. ೧೯೯೮

೧೧. ಆರ್.ನರಸಿಂಹಾಚಾರ್ಯ — **ಶಾಸನ ಪದ್ಯ ಮಂಜರಿ**
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು. ೧೯೭೫
**ಕರ್ನಾಟಕ ಕವಿಚರಿತ್ರೆ–ಸಂ–೧, ೨, ೩**
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು..೨೦೦೫

೧೨. ಡಾ.ಎಂ.ಬಿ.ನೇಗಿನಹಾಳ — **ಪೂರ್ವದ ಹಳಗನ್ನಡ ಶಾಸನಗಳ ಸಾಹಿತ್ಯಕ ಅಧ್ಯಯನ,** ವಿದ್ಯಾನಿಧಿ ಪ್ರಕಾಶನ
ಗದಗ. ೧೯೯೮

೧೩. ಡಾ.ಡಿ.ವಿ.ಪರಮಶಿವಮೂರ್ತಿ — **ಕನ್ನಡ ಶಾಸನ ಶಿಲ್ಪ**
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೧೯೯೯

೧೪. ಡಾ.ಭೋಜರಾಜ.ಬ.ಪಾಟೀಲ — **ನಾಗರಖಂಡ–೭೦**
ಮಲೆನಾಡು ವೀರಶೈವ ಅಧ್ಯಯನ ಸಂಸ್ಥೆ
ಆನಂದಪುರಂ. ೧೯೯೫

೧೫. ಡಾ.ರಂ.ಶ್ರೀ.ಮುಗಳಿ — **ಕನ್ನಡ ಸಾಹಿತ್ಯ ಚರಿತ್ರೆ**
ಉಷಾ ಸಾಹಿತ್ಯ ಮಾಲೆ
ಮೈಸೂರು. ೧೯೮೪

೧೬. ಡಾ.ಕೆ.ವಿ.ರಮೇಶ್ — **ಕರ್ನಾಟಕ ಶಾಸನ ಸಮೀಕ್ಷೆ**
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು. ೧೯೭೧

೧೭. ಡಾ.ಟಿ.ವಿ.ವೆಂಕಟಾಚಲಶಾಸ್ತ್ರಿ

**ಕನ್ನಡ ಛಂದಃ ಸ್ವರೂಪ**
ಡಿ.ವಿ.ಕೆ.ಮೂರ್ತಿ ಪ್ರಕಾಶನ
ಮೈಸೂರು. ೧೯೭೮

**ಕನ್ನಡ ಛಂದಸ್ಸು**
ಡಿ.ವಿ.ಕೆ.ಮೂರ್ತಿ ಪ್ರಕಾಶನ
ಮೈಸೂರು. ೧೯೭೦

**ಶಾಸ್ತ್ರೀಯ ಸಂಪುಟ-೨**
ಸಪ್ನಾ ಬುಕ್ ಹೌಸ್
ಬೆಂಗಳೂರು-೧೯೯೦

೧೮.ಡಾ.ಆರ್.ಶೇಷಶಾಸ್ತ್ರಿ

**ಶಾಸನ ಪರಿಚಯ**
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು. ೧೯೮೨

**ಕರ್ನಾಟಕದ ವೀರಗಲ್ಲುಗಳು**
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು-೧೯೮೨

೧೯. ತೀ.ನಂ.ಶ್ರೀಕಂಠಯ್ಯ

**ಭಾರತೀಯ ಕಾವ್ಯಮೀಮಾಂಸೆ**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು. ೧೯೯೦

೨೦. ಎಚ್.ಎಂ.ಶಂಕರನಾರಾಯಣರಾವ್

**ಶ್ರೀಹರಿಹರ ದೇವಾಲಯ**
ಶಾರದಾ ಮಂದಿರ
ಮೈಸೂರು. ೧೯೮೨

೨೧. ಡಿ.ಎನ್.ಶಂಕರಭಟ್

ಕನ್ನಡ ಭಾಷೆಯ ಕಲ್ಪಿತ ಚರಿತ್ರೆ
ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ
ಹಂಪಿ, ೧೯೯೫

೨೨. ಡಾ.ಯು.ಸೂರ್ಯನಾಥ ಕಾಮತ್ — **ಗೊಮ್ಮಟ**
ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು. ೧೯೯೯

೨೩. ಡಾ.ಎಸ್.ಎಂ.ಹಿರೇಮಠ — **ಶಾಸನಾಧ್ಯಯನ**
ವಿದ್ಯಾನಿಧಿ ಪ್ರಕಾಶನ
ಗದಗ, ೧೯೯೮

English

1. Dr. K.V.Ramesh — **Inscription of the Western Gangas**
Indian Council for Historical Research, New Delhi. 1984

**ಸಂಪಾದಿತ ಕೃತಿಗಳು**

೧. ಅವಲೋಕನ
ಕರ್ನಾಟಕ ಪರಂಪರೆಯ ಸಮೀಕ್ಷೆ — (ಸಂ) ಎಚ್ಚೆಸ್ಕೆ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು. ೧೯೮೫

೨. ಕವಿರಾಜಮಾರ್ಗಂ — (ಸಂ) ಎಂ.ವಿ.ಸೀತಾರಾಮಯ್ಯ
ಡಿ.ವಿ.ಕೆ.ಮೂರ್ತಿ, ಮೈಸೂರು. ೧೯೭೫

೩. ಕನ್ನಡ ಕೈಪಿಡಿ
ಸಂಪುಟ–೧ — **ಡಾ.ಕೆ.ವಿ.ಪುಟ್ಟಪ್ಪ**
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ
ಮೈಸೂರು ೧೯೮೮

೪. ಕನ್ನಡ ಶಾಸನ ಸಂಪುಟ — (ಸಂ) ಡಾ.ಆರ್.ಸಿ.ಹಿರೇಮಠ
ಡಾ.ಎಂ.ಎಂ.ಕಲಬುರ್ಗಿ
ಕರ್ನಾಟಕ ವಿಶ್ವವಿದ್ಯಾಲಯ,
ಧಾರವಾಡ, ೧೯೭೪

| | |
|---|---|
| ೫. ಗಿರಿಜಾ ಕಲ್ಯಾಣ | **(ಸಂ) ಡಾ.ಎಂ.ಎಸ್.ಸುಂಕಾಪುರ**<br>ಕರ್ನಾಟಕ ವಿಶ್ವವಿದ್ಯಾಲಯ<br>ಧಾರವಾಡ, ೧೯೭೭ |
| ೬. ತುಳುನಾಡಿನ ಜೈನಶಾಸನಗಳು | **(ಸಂ) ಡಾ.ದೇವರಕೊಂಡಾರೆಡ್ಡಿ**<br>**ಡಾ.ಜಯಪ್ರಕಾಶ ಮಾವಿನಕುಳಿ**<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೪ |
| ೭. ಪಂಪಭಾರತಂ ಎಂಬ ವಿಕ್ರಮಾರ್ಜುನ ವಿಜಯಂ | **(ಸಂ) ಡಾ.ಕೆ.ವಿ.ಪುಟ್ಟಪ್ಪ**<br>ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ<br>ಬೆಂಗಳೂರು. ೧೯೯೦ |
| ೮. ಪಂಪನ ಆದಿಪುರಾಣ | **(ಸಂ)ಡಾ.ಎಲ್.ಬಸವರಾಜು**<br>ಗೀತಾ ಬುಕ್ ಹೌಸ್, ಮೈಸೂರು<br>೧೯೭೬ |
| ೯. ಬಸವಣ್ಣನವರ ವಚನ ಸಂಪುಟ | **(ಸಂ)ಡಾ.ಎಂ.ಎಂ.ಕಲಬುರ್ಗಿ**<br>ಕನ್ನಡ ಮತ್ತು ಸಂಸ್ಕೃತಿ ಇಲಾಖೆ,<br>ಬೆಂಗಳೂರು. ೧೯೯೩ |
| ೧೦. ರನ್ನ ಸಂಪುಟ | **(ಸಂ) ಪ್ರೊ.ಹಂ.ಪ.ನಾಗರಾಜಯ್ಯ**<br>ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,<br>ಹಂಪಿ, ೨೦೦೬ |
| ೧೧. ಶ್ರವಣಬೆಳಗೊಳ ಒಂದು ಸಮೀಕ್ಷೆ | **(ಸಂ) ಡಾ.ಜಿ.ಎಸ್.ಶಿವರುದ್ರಪ್ಪ**<br>ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ<br>ಬೆಂಗಳೂರು. ೨೦೦೪ |
| ೧೨. ಶಾಸನ ಸಂಗ್ರಹ | **(ಸಂ) ಎ.ಎಂ.ಅಣ್ಣಿಗೇರಿ**<br>**ಆರ್.ಶೇಷಶಾಸ್ತ್ರಿ**<br>ಕನ್ನಡ ಸಾಹಿತ್ಯ ಪರಿಷತ್ತು,<br>ಬೆಂಗಳೂರು-೧೯೮೨ |

೧೩. ಶಾಸನ ಸಾಹಿತ್ಯ ಸಂಚಯ — (ಸಂ) ಎ.ಎಂ.ಅಣ್ಣಿಗೇರಿ
ಮೇವುಂಡಿ ಮಲ್ಲಾರಿ
ಕನ್ನಡ ಸಂಶೋಧನಾ ಸಂಸ್ಥೆ
ಧಾರವಾಡ, ೧೯೬೧

೧೪. ಸೂಕ್ತಿ ಸುಧಾರ್ಣವಂ — (ಸಂ)ಎನ್.ಅನಂತರಂಗಾಚಾರ್
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ,
ಮೈಸೂರು. ೧೯೭೨

೧೫. ಹೊಯ್ಸಳ ಸಂಪದ — (ಸಂ) ಡಾ.ಮಳಲಿ ವಸಂತಕುಮಾರ್
ಸ್ವಾಗತ ಸಮಿತಿ, ಅಖಿಲ ಭಾರತ ೬೫ನೆಯ
ಕನ್ನಡ ಸಾಹಿತ್ಯ ಸಮ್ಮೇಳನ, ಹಾಸನ, ೧೯೯೬

## ಸಾಹಿತ್ಯ ಚರಿತ್ರೆಯ ಸಂಪುಟಗಳು

| | |
|---|---|
| **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ :** | ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು |
| | ಪ್ರಕಟಣೆಯ ವರ್ಷ |
| ಸಂಪುಟ–೧ | ೧೯೭೪ |
| ಸಂಪುಟ–೨ | ೧೯೭೫ |
| ಸಂಪುಟ–೩ | ೧೯೭೬ |
| ಸಂಪುಟ–೪ | ೧೯೭೭ |
| ಸಂಪುಟ–೫ | ೧೯೮೨ |

| | |
|---|---|
| **ಕನ್ನಡ ಸಾಹಿತ್ಯ ಚರಿತ್ರೆ** | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು |
| | ಪ್ರಕಟಣೆಯ ವರ್ಷ |
| ಸಂಪುಟ–೧ | ೧೯೭೪ |
| ಸಂಪುಟ–೨ | ೧೯೭೫ |
| ಸಂಪುಟ–೩ | ೧೯೭೬ |
| ಸಂಪುಟ–೪ | ೧೯೭೭ |
| ಸಂಪುಟ–೫ | ೧೯೮೧ |

